# ಸಂಶೋಧಕ ಬಿ.ಆರ್.ಹಿರೇಮಠ : ಸಮಗ್ರ ಅಧ್ಯಯನ

ಕನ್ನಡ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸುತ್ತಿರುವ ಮಹಾಪ್ರಬಂಧ


*ಸಂಶೋಧಕರು* :

ಶ್ರೀಮತಿ ನೇತ್ರಾವತಿ ದೊಡ್ಡಮನಿ

ಕನ್ನಡ ವಿಭಾಗ,

ಶ್ರೀಮತಿ ಅ. ಅ. ಪಾಟೀಲ ಕಲಾ ಮತ್ತು

ವಾಣಿಜ್ಯ ಮಹಿಳಾ ಮಹಾವಿದ್ಯಾಲಯ

ಚಿಕ್ಕೋಡಿ, ಜಿ. ಬೆಳಗಾವಿ

*ಮಾರ್ಗದರ್ಶಕರು*

ಡಾ. ಅಶೋಕ ನರೋಡೆ

ಕನ್ನಡ ವಿಭಾಗ, ಕೆ.ಎಲ್. ಇ. ಸಂಸ್ಥೆಯ ಪದವಿ

ಮಹಾವಿದ್ಯಾಲಯ ಮಹಾಲಿಂಗಪುರ, ಜಿ. ಬಾಗಲಕೋಟ







ಶ್ರೀ ಬಿ. ಆರ್ ದರೂರ ಸಂಶೋಧನಾ ಕೇಂದ್ರ ಹಾರೂಗೇರಿ, ಜಿ.ಬೆಳಗಾವಿ

ಮಾನ್ಯತೆ ಕನ್ನಡ ವಿಶ್ವವಿದ್ಯಾಲಯ ಹಂಪಿ

೨೦೧೨

# ಸಂಶೋಧಕ ಬಿ. ಆರ್. ಹಿರೇಮಠ : ಸಮಗ್ರ ಅಧ್ಯಯನ

ಕನ್ನಡ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸುತ್ತಿರುವ ಮಹಾಪ್ರಬಂಧ


*ಸಂಶೋಧಕರು :*

**ಶ್ರೀಮತಿ ನೇತ್ರಾವತಿ ದೊಡ್ಡಮನಿ**

ಕನ್ನಡ ವಿಭಾಗ,

ಶ್ರೀಮತಿ ಅ. ಅ. ಪಾಟೀಲ ಕಲಾ ಮತ್ತು

ವಾಣಿಜ್ಯ ಮಹಿಳಾ ಮಹಾವಿದ್ಯಾಲಯ

ಚಿಕ್ಕೋಡಿ, ಜಿ. ಬೆಳಗಾವಿ

*ಮಾರ್ಗದರ್ಶಕರು :*

**ಡಾ. ಅಶೋಕ ನರೋಡೆ**

ಕನ್ನಡ ವಿಭಾಗ, ಕೆ.ಎಲ್. ಇ. ಸಂಸ್ಥೆಯ ಪದವಿ

ಮಹಾವಿದ್ಯಾಲಯ ಮಹಾಲಿಂಗಪುರ, ಜಿ. ಬಾಗಲಕೋಟ





೨೦೧೨

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿ, ಜಿ. ಬೆಳಗಾವಿ

ಮಾನ್ಯತೆ ಕನ್ನಡ ವಿಶ್ವವಿದ್ಯಾಲಯ ಹಂಪಿ



## ಅಧ್ಯಯನಾಂಗ
## ಕನ್ನಡ ವಿಶ್ವವಿದ್ಯಾಲಯ ಹಂಪಿ


ಸಂಶೋಧಕರು,
ಶ್ರೀಮತಿ ನೇತ್ರಾವತಿ ದೊಡ್ಡಮನಿ
ಮೊ. ೯೪೪೯೬೫೦೫೭೮

ಕನ್ನಡ ಉಪನ್ಯಾಸಕರು-
ಶ್ರೀಮತಿ ಅ. ಅ. ಪಾಟೀಲ
ಕಲಾ ಮತ್ತು ವಾಣಿಜ್ಯ ಮಹಿಳಾ
ಮಹಾವಿದ್ಯಾಲಯ, ಚಿಕ್ಕೋಡಿ.


# ಅಭ್ಯರ್ಥಿಯ ಪ್ರಮಾಣ ಪತ್ರ

**ಸಂಶೋಧಕ ಬಿ. ಆರ್. ಹಿರೇಮಠ : ಸಮಗ್ರ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಅಶೋಕ ನರೋಡೆ ಸಹ ಪ್ರಾಧ್ಯಾಪಕರು, ಕೆ.ಎಲ್.ಇ. ಸಂಸ್ಥೆಯ ಪದವಿ ಮಹಾವಿದ್ಯಾಲಯ, ಮಹಾಲಿಂಗಪುರ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಶೋಧನಾ ಮಹಾಪ್ರಬಂಧದ ಯಾವುದೇ ವಿಷಯವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪ್ರಕಟಣೆಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೦೯-೨-೨೦೧೯.

**(ಶ್ರೀಮತಿ ನೇತ್ರಾವತಿ ದೊಡ್ಡಮನಿ)**
ಕನ್ನಡ ಉಪನ್ಯಾಸಕರು
ಶ್ರಿಮತಿ ಅ.ಅ. ಪಾಟೀಲ
ಕಲಾ ಮತ್ತು ವಾಣಿಜ್ಯ ಮಹಿಳಾ
ಮಹಾವಿದ್ಯಾಲಯ, ಚಿಕ್ಕೋಡಿ



**ಅಧ್ಯಯನಾಂಗ**
**ಕನ್ನಡ ವಿಶ್ವವಿದ್ಯಾಲಯ ಹಂಪಿ**


ಡಾ. ಅಶೋಕ ನರೋಡೆ
ಸಹ ಪ್ರಾಧ್ಯಾಪಕರು,
ಕೆ.ಎಲ್.ಇ. ಪದವಿ ಮಹಾವಿದ್ಯಾಲಯ
ಮಹಾಲಿಂಗಪುರ ೫೮೭೩೧೨ (ಬಾಗಲಕೋಟ)
ಮೊ. ೮೨೭೭೭೦೪೯೭೩೫

ಸಂಶೋಧನ ಕೇಂದ್ರ
ಶ್ರೀ ಬಿ.ಆರ್.ದರೂರ ಸಂಶೋಧನ ಸಂಸ್ಥೆ
ಶ್ರೀ ವೃಷಭೇದ್ರ ಪದವಿ ಕಾಲೇಜು
ಹಾರೂಗೇರಿ. (ರಾಯಬಾಗ)


# ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀಮತಿ ನೇತ್ರಾವತಿ ದೊಡ್ಡಮನಿ ಅವರು ಸಂಶೋಧಕ ಬಿ. ಆರ್. ಹಿರೇಮಠ : ಸಮಗ್ರ ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ. ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೇಲೆ ರೂಪುಗೊಂಡಿದೆ. ಈ ಮಹಾಪ್ರಬಂಧದ ಯಾವುದೇ ವಿಷಯವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪದವಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಅಶೋಕ ನರೋಡೆ)

ಸ್ಥಳ : ಹಾರೂಗೇರಿ
ದಿನಾಂಕ : ೧೭/೦೨/೨೦೧೭

# ನಿವೇದನೆ

ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಪಡೆದ ನಂತರ ಪಿಎಚ್.ಡಿ. ಮಾಡಬೇಕೆಂಬ ಮಹದಾಸೆಯಿತ್ತು. ಅದಕ್ಕಾಗಿ ತಂದೆಯವರೊಂದಿಗೆ ನನ್ನ ನೆಚ್ಚಿನ ಗುರುಗಳಾದ ಡಾ. ಎಂ.ಎಂ. ಕಲಬುರ್ಗಿಯವರನ್ನು ಭೇಟಿಯಾದೆ. ಅವರು "ನಿಮ್ಮ ಮಗಳ ಮದುವೆ ಮಾಡಿರಿ" ಎಂಬ ಸಲಹೆಯನ್ನು ತಂದೆಯವರಿಗೆ ನೀಡಿದಾಗ, ಪಿಎಚ್.ಡಿ ಮಾಡುವ ಆಸೆ ಗಗನಕುಸುಮವಾಯಿತು.

ಮುಂದೆ ಚಿಕ್ಕೋಡಿ ಮಹಿಳಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕಿಯಾಗಿ ವೃತ್ತಿ ಆರಂಭಿಸಿದೆ. ಅನುದಾನರಹಿತ ಅವಧಿಯಲ್ಲಿ ಕರ್ತವ್ಯ ನಿರ್ವಹಿಸಬೇಕಾದಾಗ ಪಿಎಚ್.ಡಿ. ಪದವಿ ಗಾಳಿಗೋಪುರವಾಯಿತು. ಉಪನ್ಯಾಸಕ ಹುದ್ದೆಯನ್ನು ಖಾಯಂಗೊಳಿಸಲು ಮತ್ತು ಅನುದಾನ ಪಡೆಯುವುದಕ್ಕಾಗಿ ಮಾಡಬೇಕಾದ ಹೋರಾಟಗಳ ನಡುವೆ ಪಿಎಚ್.ಡಿ. ಮರೀಚಿಕೆಯಾಗಿ ಉಳಿಯಿತು. ಇದೆಲ್ಲ ಮುಗಿದ ಬಳಿಕ ಪದವಿಯ ನಿರೀಕ್ಷೆ ಇದ್ದರೂ ; ಸಂಸಾರದ ನೊಗವನ್ನು ಹೊತ್ತುಕೊಳ್ಳಬೇಕಾಯಿತು.

ಅನಂತರ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಎರಡು ಬಾರಿ ಪಿಎಚ್.ಡಿ. ಮಾಡಲು ಇಚ್ಛಿಸಿ ಹೋಗಿಬಂದೆ. ಸದಾವಕಾಶದ ಬಾಗಿಲು ತೆರೆದುಕೊಳ್ಳಲಿಲ್ಲ. ಧಾರವಾಡದ ಬೇಂದ್ರೆ ಟ್ರಸ್ಟ್, ಗದುಗಿನ ಸಂಶೋಧನ ಕೇಂದ್ರಗಳಿಗೂ ಪ್ರಯತ್ನಿಸಿದೆ. ಅವಕಾಶ ದೊರೆಯಲಿಲ್ಲ. ಮುಂದೆ ಹಾರೂಗೇರಿಯ ಶ್ರೀ ವೃಷಭೇಂದ್ರ ಶಿಕ್ಷಣ ಸಂಸ್ಥೆಯಲ್ಲಿ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ ಆರಂಭವಾದಾಗ, ಪಿಎಚ್.ಡಿ. ಮಾಡಬೇಕೆಂಬ ಆಸೆ ಮತ್ತೆ ಚಿಗುರೊಡೆಯಿತು. ನಿಯಮಗಳನ್ವಯ ಪಿಎಚ್.ಡಿ.ಗೆ ಪ್ರವೇಶ ಪಡೆದೆ. ಉಪನ್ಯಾಸಕ ವೃತ್ತಿಯಲ್ಲಿದ್ದುಕೊಂಡು ಪಿಎಚ್.ಡಿ ಅಧ್ಯಯನ ಮಾಡುವುದು ಸುಲಭವಲ್ಲ. ನನ್ನ ತಂದೆ ಶ್ರೀ ವೆಂಕಟಪತಿ ತೀರ್ಥಪತಿ ದೊಡ್ಡಮನಿ. ತಾಯಿ ಶ್ರೀಮತಿ ಮಾಲತಿದೇವಿ, ಪತಿ ಶ್ರೀ ಅಶೋಕ ಇವರೆಲ್ಲರೂ ಕಷ್ಟವನ್ನು ಸುಲಭಗೊಳಿಸಿ ಆಶೀರ್ವದಿಸಿದರು.

ಪೂಜ್ಯ ಗುರುವರ್ಯರಾದ ಡಾ. ಬಿ.ಆರ್. ಹಿರೇಮಠ ಅವರ ನಿಧನ ಶಿಷ್ಯ ವೃಂದದವರನ್ನು ಘಾಸಿಗೊಳಿಸಿತ್ತು. ಅವರ ಕುರಿತಾಗಿ ಪಿಎಚ್.ಡಿ. ಆಗಬೇಕೆಂಬ ಚರ್ಚೆ ನಡೆದಿತ್ತು. ಆ ಭಾಗ್ಯ ನನ್ನದಾಯಿತು. ಈ ಮೂಲಕ ಗುರುಋಣವನ್ನು ಸ್ವಲ್ಪಮಟ್ಟಿಗಾದರೂ ತೀರಿಸುವ ಭ್ರಮೆ ನನ್ನಲ್ಲಿ ಮೂಡಿತು.

ಹಾರೂಗೇರಿಯ ಶ್ರೀ ಬಿ.ಆರ್. ಸಂಶೋಧನ ಕೇಂದ್ರದ ಸಂಯೋಜಕರಾದ ಡಾ. ವ್ಹಿ.ಎಸ್. ಮಾಳಿ ಅವರ ಸೂಚನೆಯ ಮೇರೆಗೆ ಈ ವಿಷಯ ತೆಗೆದುಕೊಂಡೆ. ಸಂಶೋಧನೆ ಕೈಕೊಳ್ಳಲು ಸದವಕಾಶ ಕಲ್ಪಿಸಿದ ಡಾ. ವ್ಹಿ.ಎಸ್. ಮಾಳಿ ಹಾಗೂ ಅಂದಿನ ಪ್ರಾಚಾರ್ಯ ಆಯ್. ಆರ್. ಕೊಕಟನೂರ ಅವರಿಗೆ ಕೃತಜ್ಞತೆಗಳು.

ಮಹಾಲಿಂಗಪುರದ ಕೆ.ಎಲ್.ಇ. ಸಂಸ್ಥೆಯ ಪದವಿ ಮಹಾವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ. ಅಶೋಕ ನರೋಡೆ ಅವರನ್ನು ಸಂಪರ್ಕಿಸಿದಾಗ ಡಾ. ಬಿ.ಆರ್. ಹಿರೇಮಠ ಸರ್ ಕುರಿತಾಗಿ ಅಪಾರ ಗೌರವವನ್ನಿಟ್ಟುಕೊಂಡ ಶ್ರೀಯುತರು ಮಾರ್ಗದರ್ಶನ ನೀಡಲು ಸಮ್ಮತಿಸಿದರು. ಅವರ ಸಮರ್ಥ ಮಾರ್ಗದರ್ಶನದಲ್ಲಿ ನನ್ನ ಅಧ್ಯಯನ ಸಂಪನ್ನವಾಯಿತು. ಅವರಿಗೆ ಹೃತ್ಪೂರ್ವಕ ವಂದನೆಗಳು.

ಸಂಶೋಧನ ಕಾರ್ಯಕ್ಕೆ ಚಾಲನೆ ನೀಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೂ ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರಕ್ಕೂ ಆಭಾರಿಯಾಗಿರುವೆ.

ಸಂಶೋಧನೆಯ ಸಂದರ್ಭದಲ್ಲಿ ಡಾ. ಎಂ.ಎಂ. ಕಲಬುರ್ಗಿ, ಡಾ. ಬಿ.ವ್ಹಿ. ಮಲ್ಲಾಪುರ, ಡಾ. ಎಸ್.ಎಂ. ವೃಷಬೇಂದ್ರಸ್ವಾಮಿ, ಡಾ. ಎಸ್.ವಿದ್ಯಾಶಂಕರ, ಡಾ. ಎ. ಮುರಿಗೆಪ್ಪ, ಡಾ. ಎಚ್. ಎಂ. ಮಹೇಶ್ವರಯ್ಯ, ಡಾ. ಎಂ. ಚಿದಾನಂದಮೂರ್ತಿ, ಡಾ. ಬಿ.ಕೆ. ಹಿರೇಮಠ, ಡಾ. ಪಂಚಾಕ್ಷರಿ ಹಿರೇಮಠ, ಪ್ರೊ. ಬಿ.ವ್ಹಿ. ಗುಂಜೆಟ್ಟಿ, ಡಾ. ಶಿವಾನಂದ ಗಾಳಿ, ಡಾ. ವೀರಣ್ಣ ರಾಜೂರ, ಡಾ. ಬಿ.ವ್ಹಿ. ಶಿರೂರ, ಡಾ. ಜಿ. ಎಮ್. ಹೆಗಡೆ ಮುಂತಾದವರನ್ನು ಭೆಟ್ಟಿಯಾದೆ. ಅವರೊಂದಿಗೆ ನಡೆಸಿದ ಮಾತುಕತೆಯು ಮೌಲಿಕವಾಗಿದ್ದು, ಸಂಶೋಧನೆಗೆ ದಾರಿ ತೋರಿತು. ಇವರಿಗೆಲ್ಲ ನಮನಗಳು.

ಡಾ. ಬಿ.ಆರ್. ಹಿರೇಮಠ ಅವರ ಸಾಹಿತ್ಯ ಸಾಮಗ್ರಿ ಒದಗಿಸಿಕೊಟ್ಟ ವೀರಶೈವ ಅಧ್ಯಯನ ಅಕಾಡಮಿ ಶ್ರೀ ನಾಗನೂರು ರುದ್ರಾಕ್ಷಿಮಠ ಬೆಳಗಾವಿ ಗ್ರಂಥಾಲಯ, ಶ್ರೀ ಜಗದ್ಗುರು ತೋಂಟದಾರ್ಯ ವೀರಶೈವ ಅಧ್ಯಯನ ಸಂಸ್ಥೆ ಗದಗ, ಪೂಜ್ಯದ್ವಯರಿಗೆ ಪ್ರಣಾಮಗಳು. ಗ್ರಂಥಾಲಯದ ಅಧಿಕಾರಿಗಳಾದ ಶ್ರೀ ಹೊಸಮನಿ, ಶ್ರೀ ಪ್ರಕಾಶ ಗಿರಿಮಲ್ಲನವರ ಅವರಿಗೆ ನಮನಗಳು.

ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ ಅಧಿಕಾರಿಗಳಾದ ಶ್ರೀ ಪಾಟೀಲ ಅವರಿಗೆ, ಡಾ. ಮಲ್ಲಿಕಾರ್ಜುನ ಕೆ., ಡಾ. ಬಿ.ಎಸ್. ಬಿರಾದಾರ ಮತ್ತು ಡಾ. ಬಿ.ಆರ್. ಹಿರೇಮಠ ಅವರ ಸಹೋದರರಾದ ಶ್ರೀ ಶಿವಪೂಜಯ್ಯ ಹಿರೇಮಠ, ಪತ್ನಿ ಶ್ರೀಮತಿ ದಾನಮ್ಮ ಹಿರೇಮಠ, ಮಕ್ಕಳಾದ ಶ್ರೀ ಶಿವಯೋಗಿ ಹಿರೇಮಠ ಮತ್ತು ಶ್ರೀ ಮೃತ್ಯುಂಜಯ ಹಿರೇಮಠ, ಮಳಲಿಯ ಅವರ ಬಂಧು ಬಾಂಧವರಿಗೂ, ಅವರ ಗುರುವೃಂದದವರಿಗೂ ವಂದನೆಗಳೊಂದಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ ಬಿಜಾಪುರದ ಕುಲಪತಿಗಳಿಗೆ, ಕನ್ನಡ ವಿಭಾಗದ ಡಾ. ಮಹೇಶ ಚಿಂತಾಮಣಿ, ಡಾ. ವಿಜಯಾ ಸಬರದ, ಡಾ. ವಿಜಯಾದೇವಿ, ಡಾ. ಸುನಂದಮ್ಮ ಅವರಿಗೆ ವಂದನೆಗಳು. ಪ್ರಬಂಧ ರಚಿಸಲು ಮಾರ್ಗದರ್ಶನ ಮತ್ತು ಸಹಕಾರ ನೀಡಿದ ವಿದ್ವಾಂಸರಾದ ಡಾ. ಬಸಲಿಂಗಯ್ಯ ಸೊಪ್ಪಿಮಠ, ಡಾ. ಈಶ್ವರಯ್ಯಮಠ, ಡಾ. ಶಾಂತಾಮಠ, ಶ್ರೀಮತಿ ಉಷಾ ಕೋಹಳ್ಳಿ ಅವರಿಗೆಲ್ಲ ಕೃತಜ್ಞತೆಗಳು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ. ವೀರೇಶ ಬಡಿಗೇರ, ಡಾ. ಎಸ್.ಎಸ್. ಅಂಗಡಿ, ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಪಾಂಡುರಂಗಬಾಬು, ಡಾ. ರಹಮತ ತರೀಕೆರೆ, ಡಾ. ಕೆ. ರವೀಂದ್ರನಾಥ, ಡಾ. ವಿಠ್ಠಲರಾವ ಗಾಯಕವಾಡ, ಡಾ. ಮೊಗಳ್ಳಿ ಗಣೇಶ, ಡಾ. ಕರಿಗೌಡ ಬೀಚನಳ್ಳಿ, ಡಾ. ಎಚ್.ಎಸ್. ಶ್ರೀಮತಿ, ಡಾ. ಶೈಲಜಾ ಹಿರೇಮಠ ಮುಂತಾದ ವಿದ್ವಾಂಸರಿಗೆಲ್ಲ ವಂದನೆಗಳು.

ಸಂಶೋಧನ ಸಂಸ್ಥೆಯ ಸಂಯೋಜಕರಾದ ಡಾ. ವ್ಹಿ.ಎಸ್. ಮಾಳಿ ಅವರು ನನ್ನ ಅಧ್ಯಯನಕ್ಕೆ ಪ್ರೇರಕ ಶಕ್ತಿಯಾಗಿದ್ದಾರೆ. ಕಾಲಕಾಲಕ್ಕೆ ಸಲಹೆ ಸೂಚನೆ ನೀಡುತ್ತ ನೆರವಾಗಿದ್ದಾರೆ. ಪ್ರಾಚಾರ್ಯರಾದ ಟೊಣಗೆ ಅವರಿಗೂ ಡಾ. ರುದ್ರಣ್ಣ ಚಿಲಮಿ, ಡಾ. ಚಂದ್ರಶೇಖರ ಗುಡಸಿ, ಶ್ರೀ ಗಟನಟ್ಟಿ ಮತ್ತು ಪಿಎಚ್.ಡಿ. ಎಂ.ಫಿಲ್ ಅಧ್ಯಯನ ಬಳಗಕ್ಕೂ ವಂದನೆಗಳು.

ಮಾತೃ ಸಂಸ್ಥೆ ಸಿ.ಟಿ.ಇ. ಸಂಸ್ಥೆಯ ಶ್ರೀಮತಿ ಅಹಲ್ಯಾಬಾಯಿ ಅಪ್ಪಣಗೌಡಾ ಪಾಟೀಲ ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯದ ಆಡಳಿತ ಮಂಡಳಿಯ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು, ಪ್ರಾಂಶುಪಾಲರು, ಸಹೋದ್ಯೋಗಿಮಿತ್ರರು, ವಿದ್ಯಾರ್ಥಿ ಸಮುದಾಯವನ್ನು ಸ್ಮರಿಸಿಕೊಳ್ಳುವದು ಸಂತಸದ ಸಂಗತಿಯಾಗಿದೆ.

ಪಿಎಚ್.ಡಿ ಅಧ್ಯಯನಕ್ಕೆ ನೆರವಾದ ಅತ್ತೆ ಶ್ರೀಮತಿ ಕಮಲಾಬಾಯಿ, ಚಿಕ್ಕಮ್ಮರಾದ ಶ್ರೀಮತಿ ರತ್ನಕ್ಕ, ಶ್ರೀಮತಿ ಚಿನ್ನಕ್ಕ, ಪತಿ ಶ್ರೀ ಅಶೋಕ ಕುಲಕರ್ಣಿ, ತಮ್ಮ ಶ್ರೀ ಸುನೀಲ ದೊಡ್ಡಮನಿ, ಶ್ರೀಮತಿ ಸ್ನೇಹಾ, ತಂಗಿ ಶ್ರೀಮತಿ ವಸುಮತಿ, ಶ್ರೀ ಜಿ. ಸಂತೋಷ, ಶ್ರೀ ಆರ್.ಜೆ. ಪಾಟೀಲ ದಂಪತಿಗಳು, ನಾದಿನಿಯರಾದ ಶ್ರೀಮತಿ ಗೀತಾ, ಶ್ರೀಮತಿ ಸುವರ್ಣಾ, ಅಣ್ಣಂದಿರಾದ ಶ್ರೀ ವಿಶ್ವನಾಥ, ಶ್ರೀ ಹನುಮಂತ, ಅಕ್ಕಂದಿರಾದ ಶ್ರೀಮತಿ ಉಷಾ, ಶ್ರೀಮತಿ ಶೈಲಾ, ಸ್ನೇಹಿತೆಯರಾದ ಶ್ರೀಮತಿ ಕಾವ್ಯಾ ನರೋಡೆ, ಶ್ರೀಮತಿ ಹಮೀದಾ ಅಫರಾಜ್, ಶ್ರೀ ಸರದಾರ ಅಫರಾಜ್, ಡಾ. ವೀಣಾ ಹೂಗಾರ ಇವರೆಲ್ಲರಿಗೂ ನನ್ನ ನೆನಕೆ ಸಲ್ಲುತ್ತದೆ. ಮುದ್ದು ಮಕ್ಕಳಾದ ಕು. ವಿಶಾಲ, ಕು. ಸ್ಫೂರ್ತಿ, ಕು.ಅಪೂರ್ವ, ಕು. ಸಂಸ್ಕೃತಿ, ಕು. ಮೇಘಾ, ಕುಮಾರ ಸುದೀಪ, ಕು. ರೋಹನ್, ಕು. ಪವನ, ಕು. ನವೀನ, ಪಾಪು ಸುಧನ್ವ ಇವರನ್ನು ನೆನೆಯದೇ ಇರಲಾರೆ.

ಸಕಾಲದಲ್ಲಿ ಡಿ.ಟಿ.ಪಿ. ಮಾಡಿಕೊಟ್ಟ ಧಾರವಾಡದ ವಚನ ಗ್ರಾಫಿಕ್ಸ್ ಶ್ರೀಮತಿ ಅಕ್ಕಮಹಾದೇವಿ ಬ. ಅಂಗಡಿ ಮೇಡಂ, ಮಾಲೀಕರಾದ ಶ್ರೀ ದೇವರಾಜ ನಾಡಿಗ್ ಇವರಿಗೆ ಅನಂತ ಧನ್ಯವಾದಗಳು.

- ಶ್ರೀಮತಿ ನೇತ್ರಾವತಿ ದೊಡ್ಡಮನಿ

# ಪರಿವಿಡಿ

# ಅಧ್ಯಾಯ - ೧ :
# ಅಧ್ಯಯನದ ಆಶಯ, ಸ್ವರೂಪ ಮತ್ತು ವಿಧಾನ

**೧. ಪ್ರವೇಶ :**

'ಸಂಶೋಧನೆ' ಎನ್ನುವ ಪದ ಇಂಗ್ಲೀಷಿನ 'ರಿಸರ್ಚ್' ಪದದ ಸಂವಾದಿ ರೂಪವಾಗಿದೆ. ೧೯ನೆಯ ಶತಮಾನದಲ್ಲಿ ಈ ಸಂಶೋಧನೆಯ ಪರಿಕಲ್ಪನೆ ಭಾರತ ಹಾಗೆ ಕರ್ನಾಟಕಕ್ಕೂ ಪಸರಿಸಿತು. ೨೦ನೆಯ ಶತಮಾನದಲ್ಲಿ ಸಂಶೋಧನೆ ಎಂಬುದು ಹೊಸ ಶೈಕ್ಷಣಿಕ ಶಿಸ್ತಾಗಿ ಬೆಳೆದು ಬಂದಿದೆ. "ಸಂಶೋಧನೆ ಎಂಬುದು ಆಂಗ್ಲ ವಿದ್ವಾಂಸರು ನಮಗೆ ತೋರಿಸಿಕೊಟ್ಟ ಹೊಸ ಅಂಶ, ಪ್ರಾರಂಭದಲ್ಲಿ 'ಓರಿಯಂಟೆಲ್ ಸ್ಟಡೀಸ್' ಅಂದರೆ ಪ್ರಾಚ್ಯ ಸಂಶೋಧನೆ ಹೆಸರಿನಲ್ಲಿ ಪ್ರಾರಂಭವಾದ ಈ ಕ್ರಿಯೆಯು ಆಕರಗಳ ಶೋಧ, ಆಕರಗಳ ವಿಶ್ಲೇಷಣೆಯ ಶೋಧ, ಕೊನೆಗೆ ಆಕರಗಳ ವ್ಯಾಖ್ಯಾನಾತ್ಮಕ ಶೋಧಗಳೆಂಬ ಘಟ್ಟಗಳಲ್ಲಿ ಬೆಳೆದು ಬಂದಿದೆ."[೧] ಸಂಶೋಧನೆಯಲ್ಲಿ ಹತ್ತು ಹಲವು ವಿಧಗಳಿದ್ದರೂ ಅದರ ಗುರಿ ಮಾತ್ರ ಒಂದೇ ಆಗಿದೆ. ಮೊದಲು ಸಂಶೋಧನೆ ಎಂದರೆ ಸತ್ಯದ ಅನ್ವೇಷಣೆ ಎಂಬ ಪರಿಕಲ್ಪನೆ ಇತ್ತು. ಆದರೆ ಇಂದು ಸತ್ಯವೆಂಬುದು ಒಂದೇ ಆಗಿಲ್ಲ. ಅದಕ್ಕೆ ಹಲವಾರು ಮುಖಗಳಿವೆ ಎಂಬ ತಿಳುವಳಿಕೆ ಬೆಳೆದಿದೆ. ಸಾಮಗ್ರಿಮುಖಿ ಸಂಶೋಧನೆ, ವ್ಯಾಖ್ಯಾನಮುಖಿ ಸಂಶೋಧನೆ, ವಿವರಣಾತ್ಮಕ ಸಂಶೋಧನೆ, ವಿಶ್ಲೇಷಣಾಮುಖಿ ಸಂಶೋಧನೆ, ತೌಲನಿಕ ಸಂಶೋಧನೆ, ಅಂತರ್‌ಶಿಸ್ತೀಯ ಸಂಶೋಧನೆ, ಬಹುಶಿಸ್ತೀಯ ಸಂಶೋಧನೆ ಮತ್ತು ಸಾಂಸ್ಕೃತಿಕ ಸಂಶೋಧನೆ ಮುಂತಾದ ವಿಭಿನ್ನ ಮಾದರಿಗಳಿಂದು ಚಾಲ್ತಿಯಲ್ಲಿವೆ. ಕಾಲ ಕಳೆದಂತೆ ಹೊಸ ಮಾದರಿಗಳು ಬರುತ್ತಿವೆ. ಹೊಸಪರಿಕಲ್ಪನೆಗಳು ಸಂಶೋಧನಾ ಕ್ಷೇತ್ರ ಪ್ರವೇಶ ಮಾಡಿರುವುದರಿಂದ ಸಂಶೋಧನೆಯ ಸ್ವರೂಪ ವಿಸ್ತರಣೆಗೊಳ್ಳುತ್ತದೆ. "ಒಟ್ಟಾರೆ - ಸಂಶೋಧನೆ ಎನ್ನುವುದು ಒಂದು ಜನಾಂಗದ ಬದುಕಿನ ಗತಕಾಲದ ಗುಣದೋಷಗಳನ್ನು ಆ ಜನಾಂಗದ ಕಣ್ಮುಂದೆ ನಿಲ್ಲಿಸಿ ಅವರ ಕಣ್ಣು ತೆರೆಯಿಸುವುದಾಗಿದೆ. ದೋಷಗಳು ಪುನರಾವರ್ತನೆಗೊಳ್ಳದಂತೆ ಮಾಡುವ, ಗುಣಗಳು ಮಾದರಿಯಾಗುವಂತೆ ಮಾಡುವ ಬಹಳ ದೊಡ್ಡ ಹೊಣೆ ಯಾವುದೇ ದೇಶದ ಸಂಶೋಧಕನ ಹೆಗಲ ಮೇಲಿರುತ್ತದೆ. ಈ ಅರ್ಥದಲ್ಲಿ ಗತಕಾಲದ ಸಂಶೋಧನೆ ಎನ್ನುವುದು ವರ್ತಮಾನವನ್ನು ತಿದ್ದುವ ಒಂದು ಪ್ರಯತ್ನವೆನಿಸಿದೆ. ಜನತೆಯಲ್ಲಿ ಪರಂಪರೆಯ ಜಾಗೃತಿ

ಮೂಡಿಸುವುದಾಗಿದೆ."[3] ಎಂಬ ಮಾತು ಸಂಶೋಧನೆಗೆ ಬರೆದ ವ್ಯಾಖ್ಯಾನವಾಗಿದೆ. ಈ ಅಂಶವನ್ನು ಕಣ್ಣಮುಂದಿರಿಸಿಕೊಂಡು ಪ್ರಸ್ತುತ ಪ್ರಬಂಧವನ್ನು ರೂಪಿಸಲು ಪ್ರಯತ್ನಿಸಿದೆ.

**೧.೧ ಅಧ್ಯಯನದ ಆಶಯ :**

ಕನ್ನಡ ಸಾಹಿತ್ಯ ಕ್ಷೇತ್ರದ ವಿಭಿನ್ನ ಆಯಾಮಗಳಲ್ಲಿ ಸಂಶೋಧನಾ ಕ್ಷೇತ್ರವು ಒಂದಾಗಿದೆ. ಸಂಶೋಧನೆಯು ಜನಪ್ರಿಯವಲ್ಲದ ಹೆಚ್ಚು ಶ್ರದ್ಧೆ, ದುಡಿಮೆಯನ್ನು ಬಯಸುವ ಕ್ಷೇತ್ರವಾಗಿದೆ. ಹೀಗಿದ್ದರೂ ಈ ಕ್ಷೇತ್ರದಲ್ಲಿ ಹಲವಾರು ಮಹನೀಯರು ಪರಿಶ್ರಮಿಸಿದ್ದಾರೆ. ಡಾ. ಮಂಜೇಶ್ವರ ಗೋವಿಂದ ಪೈ, ಡಾ. ಡಿ. ಎಲ್. ನರಸಿಂಹಾಚಾರ್ಯ, ಡಾ. ಅ. ನೆ. ಉಪಾಧ್ಯೆ, ಪಂಜೆ ಮಂಗೇಶರಾಯ, ಡಾ. ಫ. ಗು. ಹಳಕಟ್ಟಿ, ಡಾ. ಶಂ. ಭಾ. ಜೋಶಿ, ಕೆ. ಜಿ. ಕುಂದಣಗಾರ, ಡಾ. ಸೇಡಿಯಾಪು ಕೃಷ್ಣಭಟ್ಟ ಮುಂತಾದ ಮಹನೀಯರು ಆರಂಭಿಕ ಹಂತದಲ್ಲಿ ಸಂಶೋಧನಾ ಪಥವನ್ನು ಪ್ರವೇಶಿಸಿ, ಅಮೂಲ್ಯ ಮಾಹಿತಿಯನ್ನು ಕನ್ನಡಿಗರಿಗೆ ದೊರಕಿಸಿಕೊಟ್ಟಿದ್ದಾರೆ.

ಎರಡನೆಯ ಹಂತದಲ್ಲಿ ಸಮಕಾಲೀನ ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ, ಡಾ. ಟಿ.ವ್ಹಿ. ವೆಂಕಟಾಚಲಶಾಸ್ತ್ರಿ ಮೂವರ ಕೊಡುಗೆ ಅಪಾರವಾಗಿದೆ. ಇವರನ್ನು ಸಾರಸ್ವತ ಲೋಕದಲ್ಲಿ ಸಂಶೋಧನಾ ಕ್ಷೇತ್ರದ ರತ್ನತ್ರಯರೆಂದು ಕರೆಯುತ್ತಿರುವುದು ಯಥೋಚಿತವಾಗಿದೆ. ಇವರ ಕಾಲದಲ್ಲಿಯೇ ಸಂಶೋಧನೆಯಲ್ಲಿ ತೊಡಗಿಸಿಕೊಂಡಿರುವವರು ಹಲವಾರು ಜನರು. ಮುಖ್ಯವಾಗಿ ಡಾ. ವೆಂಕಟಸುಬ್ಬಯ್ಯ, ಡಾ. ಎಲ್. ಬಸವರಾಜು, ಡಾ. ಹಂಪನಾ, ಡಾ. ದೇ.ಜ.ಗೌ, ಡಾ. ಎಸ್. ವಿದ್ಯಾಶಂಕರ, ಡಾ. ಎಂ. ಜಿ. ಬಿರಾದಾರ, ಡಾ. ಸಂಗಮೇಶ ಸೌದತ್ತಿಮಠ, ಡಾ. ವಿವೇಕ ರೈ ಮುಂತಾದವರ ಸಾಧನೆಯು ಅನನ್ಯವಾಗಿದೆ.

ಮೂರನೆಯ ಹಂತದಲ್ಲಿ ಸಂಶೋಧನಾ ಕ್ಷೇತ್ರ ಪ್ರವೇಶಿಸಿದವರು ಡಾ. ಬಿ. ಆರ್. ಹಿರೇಮಠ, ಡಾ. ಎಸ್. ಶಿವಣ್ಣ, ಡಾ. ಎಚ್. ದೇವಿರಪ್ಪ, ಡಾ. ಬಿ. ವ್ಹಿ. ಶಿರೂರ, ಡಾ. ವೀರಣ್ಣ ರಾಜೂರ, ಡಾ. ಎನ್. ಎಸ್. ತಾರಾನಾಥ, ಡಾ. ಎಂ. ಬಿ. ನೇಗಿನಾಳ, ಡಾ. ಹನುಮಾಕ್ಷಿ ಗೋಗಿ, ಡಾ. ಚೆನ್ನಕ್ಕ ಎಲಿಗಾರ ಮುಂತಾದವರು ತಮ್ಮದೇ ಆದ ರೀತಿಯಲ್ಲಿ ಸಂಶೋಧನಾ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಇವರಲ್ಲಿ ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಯು ಗಮನಾರ್ಹವಾಗಿದೆ.

ಡಾ. ಬಿ. ಆರ್. ಹಿರೇಮಠ ಅವರು ಹಿರಿಯ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿಯವರ ಗರಡಿಯಲ್ಲಿ ಪಳಗಿದವರು. ಸಂಶೋಧನ ಕ್ಷೇತ್ರಕ್ಕೆ ತಮ್ಮನ್ನು ಮುಡಿಪಾಗಿಟ್ಟವರು. ಸಂಶೋಧನೆಯು ಹೆಚ್ಚು ದುಡಿಮೆಯನ್ನು ಬಯಸುವಂತಹದು. ಒಬ್ಬ ಚಿಕಿತ್ಸಕ ಮತ್ತು ಕ್ರಿಯಾಶೀಲ ವ್ಯಕ್ತಿ ಮಾತ್ರ ಈ ಕ್ಷೇತ್ರದಲ್ಲಿ ಇಡಿಯಾಗಿ ತೊಡಗಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಧ್ಯಾಪನದೊಂದಿಗೆ ಸಂಶೋಧನೆ

ಹಾಗೂ ಸಂಪಾದನೆಗಳನ್ನು ಅತ್ಯಂತ ಪರಿಶ್ರಮ, ಅತೀವ ಶ್ರದ್ಧೆ ಹಾಗೂ ಅಖಂಡ ನಿಷ್ಠೆಯಿಂದ ಮುಂದುವರೆಸಿದವರು ತೀರ ವಿರಳ. ಇಂತಹ ವಿರಳರಲ್ಲಿ ಡಾ. ಬಿ. ಆರ್. ಹಿರೇಮಠ ಅವರು ಒಬ್ಬರಾಗಿದ್ದಾರೆ.

ಡಾ. ಬಿ. ಆರ್. ಹಿರೇಮಠ ಅವರು ಪ್ರಚಾರ ಪ್ರಿಯರಲ್ಲ. ಕಾಯಕಶ್ರದ್ಧೆ, ಶಿಸ್ತುಬದ್ಧ ಸಂಶೋಧನೆಯಲ್ಲಿ ತೊಡಗಿದ ಮಣಿಹ ಅವರದಾಗಿತ್ತು. ಸಂಶೋಧಕನ ಬದುಕು ಸಂಶೋಧನಾ ಕ್ಷೇತ್ರದಷ್ಟೇ ಪರಮ ಪವಿತ್ರವಾದದ್ದು. ಸಂಶೋಧನೆಗೆ ಹೇಳಿ ಮಾಡಿಸಿದಂತಹ ವ್ಯಕ್ತಿತ್ವ ಅವರದಾಗಿತ್ತು. ಡಾ. ಬಿ. ಆರ್. ಹಿರೇಮಠ ಅವರ ಸಮಗ್ರ ಸಾಹಿತ್ಯದ ಅಧ್ಯಯನ ಕೈಗೊಳ್ಳುವುದು, ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಪರಿಚಯಿಸುವುದು, ಅವರ ಸಾಹಿತ್ಯವನ್ನು ವಿವೇಚಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಸೃಜನಶೀಲ ಸಾಹಿತಿಯಾಗಿ ಮಾಡಿದ ಕಾರ್ಯ ಬೆಳಕಿಗೆ ಬಂದಿರಲಿಲ್ಲ. ಅವರ ಕಾವ್ಯ, ಕಥೆ, ನಾಟಕಗಳನ್ನು ಪರಿಚಯಿಸುವುದು ಶಾಸನ, ಹಸ್ತಪ್ರತಿ, ವಚನ ಸಾಹಿತ್ಯ, ಶರಣಸಾಹಿತ್ಯ, ಸಂಕೀರ್ಣ ಸಾಹಿತ್ಯ, ಜನಪದ ಸಾಹಿತ್ಯ ಮೊದಲಾದವುಗಳನ್ನು ವಿವರಿಸಿ ವಿಶ್ಲೇಷಿಸುವುದು, ಈ ಅಧ್ಯಯನದ ಆಶಯವಾಗಿದೆ.

**೧.೨ ಅಧ್ಯಯನದ ಸ್ವರೂಪ :**

ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಾಯಗಳಲ್ಲಿ ವಿಭಜಿಸಲಾಗಿದೆ.

**ಅಧ್ಯಾಯ -೧** : ಇದರಲ್ಲಿ ಅಧ್ಯಯನದ ಆಶಯ, ಸ್ವರೂಪ ಮತ್ತು ವಿಧಾನವನ್ನು ಪರಿಚಯಿಸಲಾಗಿದೆ. ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಗಳ ವೈಜ್ಞಾನಿಕ ನೆಲೆಗಳನ್ನು ಶೋಧಿಸಿ ದಾಖಲಿಸಲಾಗಿದೆ.

**ಅಧ್ಯಾಯ -೨** : ಪರಿಸರ ಮತ್ತು ಪ್ರೇರಣೆ. ಈ ಅಧ್ಯಾಯದಲ್ಲಿ ಡಾ. ಬಿ. ಆರ್. ಹಿರೇಮಠರ ಪರಿಸರ ಮತ್ತು ಪ್ರೇರಣೆಗಳ ಕುರಿತು ಚರ್ಚಿಸಲಾಗಿದೆ. ಸಾಧಕನ ಬದುಕು ಮತ್ತು ಸಾಧನೆಗಳು ಎರಡೂ ಪರಸ್ಪರ ಸಂಬಂಧ ಹೊಂದಿರುವುದರಿಂದ ಇಲ್ಲಿ ಸ್ಥೂಲವಾಗಿ ಬದುಕಿನ ಕ್ರಮವನ್ನು ಪರಿಚಯಿಸಲಾಗುವುದು. ಮನೆತನ, ಜನನ, ಶಿಕ್ಷಣ, ಮದುವೆ, ವೃತ್ತಿಗಳ ಜೊತೆಗೆ ಅವರು ನಿರ್ವಹಿಸಿದ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷತೆ, ಸ್ನಾತಕೋತ್ತರ ಕೇಂದ್ರದ ಆಡಳಿತ, ಕರ್ನಾಟಕ ವಿಶ್ವವಿದ್ಯಾಲಯದ ಮುದ್ರಣಾಲಯದ ಅಧ್ಯಕ್ಷತೆ, ದೂರ ಶಿಕ್ಷಣದ ಸಂಯೋಜಕತ್ವ, ಪಠ್ಯಪುಸ್ತಕ ನಿರ್ದೇಶನಾಲಯದ ಅಧ್ಯಕ್ಷತೆ, ಕಲಾ ನಿಕಾಯದ ಡೀನ್, ಪುನಃಶ್ಚೇತನ ಶಿಬಿರದ ಸಂಚಾಲಕತ್ವ ಮುಂತಾದ ವಿವಿಧ ಆಡಳಿತಾತ್ಮಕ ಕೆಲಸಗಳ ಕುರಿತು ವಿಶ್ಲೇಷಣೆ ಮಾಡಲಾಗುತ್ತದೆ. ಜೊತೆಗೆ, ಅವರ ವ್ಯಕ್ತಿ ವಿಶಿಷ್ಟ ಸಾಧನೆ, ವ್ಯಕ್ತಿತ್ವದ ಮಹತ್ವ ಮೊದಲಾದ ವಿಭಿನ್ನ ಅಂಶಗಳು ಈ ಅಧ್ಯಾಯ ಒಳಗೊಳ್ಳುತ್ತದೆ.

**ಅಧ್ಯಾಯ -೩** : "ಸಂಶೋಧನೆ", ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದ ಕ್ಷೇತ್ರವನ್ನು ಕನ್ನಡಿಗರಿಗೆ ಮೊಟ್ಟಮೊದಲ ಬಾರಿಗೆ ಪರಿಚಯಿಸಿದ ಶ್ರೇಯಸ್ಸು ಡಾ. ಎಂ. ಚಿದಾನಂದಮೂರ್ತಿಯವರಿಗೆ

ಸಲ್ಲುತ್ತದೆ. ಅದರ ಮುಂದುವರಿಕೆಯೆಂಬಂತೆ ಡಾ. ಬಿ.ಆರ್. ಹಿರೇಮಠರು 'ಕರ್ನಾಟಕದ ಶಾಸನಗಳಲ್ಲಿ ವರ್ತಕರು' ಎಂಬ ಅಮೂಲ್ಯ ಸಂಶೋಧನಾ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದರು. ವಿಶ್ವವಿದ್ಯಾಲಯವು ಮಹಾಪ್ರಬಂಧವನ್ನು ಮನ್ನಿಸಿ ಬಿ. ಆರ್. ಹಿರೇಮಠರಿಗೆ ಡಾಕ್ಟರೇಟ್ ಪ್ರದಾನ ಮಾಡಿತು. ಈ ಮಹಾಪ್ರಬಂಧದ ಸಾರವನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗುವುದು. ಶಾಸನಗಳನ್ನೇ ಮುಖ್ಯವಾಗಿರಿಸಿಕೊಂಡು ಸಂಶೋಧನೆ ಕೈಗೊಂಡ ಬೇರೆ ವಿದ್ವಾಂಸರ ಏಳು ಪಿಎಚ್.ಡಿ. ಮಹಾಪ್ರಬಂಧಗಳನ್ನು ಡಾ. ಬಿ. ಆರ್. ಹಿರೇಮಠರ ಮಹಾಪ್ರಬಂಧದ ಜೊತೆಗೆ ಪರಸ್ಪರ ಹೋಲಿಸಿ ತೌಲನಿಕವಾಗಿ ಅಧ್ಯಯನ ಮಾಡುವುದು ಈ ಅಧ್ಯಾಯದ ಮಹತ್ತರ ಅಂಶವಾಗಿದೆ. ಇದು ಅಲ್ಲದೆ, ಹಸ್ತಪ್ರತಿ ಕ್ಷೇತ್ರಗಳಲ್ಲಿ ಡಾ. ಬಿ. ಆರ್. ಹಿರೇಮಠರು ಕೈಗೊಂಡ ಇನ್ನಿತರ ಸಂಶೋಧನೆಗಳನ್ನು ಇದೇ ಅಧ್ಯಾಯದಲ್ಲಿ ಪರಿಚಯಿಸುವ ಹಾಗೂ ಪರಿಶೀಲಿಸುವ ಮತ್ತು ವಿಶ್ಲೇಷಣೆಗೊಳಪಡಿಸಲಾಗಿದೆ.

**ಅಧ್ಯಾಯ -೪** : ಸಂಪಾದನೆ: ಇದರಲ್ಲಿ ಡಾ. ಬಿ. ಆರ್. ಹಿರೇಮಠರು ಕೈಗೊಂಡ ಸಂಪಾದನೆಗಳ ಕುರಿತು ಚರ್ಚಿಸಲಾಗುವುದು. ಸ್ವತಂತ್ರ ಸಂಪಾದನೆ, ಇತರರೊಂದಿಗೆ ಸಂಪಾದನೆ, ಪತ್ರಿಕಾ ಸಂಪಾದನೆಯೆಂದು ಮುಖ್ಯವಾಗಿ ಮೂರು ಭಾಗಗಳನ್ನಾಗಿ ಮರು ವಿಂಗಡಿಸಿಕೊಳ್ಳಲಾಗಿದೆ. ಸ್ವತಂತ್ರ ಸಂಪಾದನೆಯಲ್ಲಿ - ವಚನಸಾಹಿತ್ಯ, ಶರಣಸಾಹಿತ್ಯ, ಸಂಕೀರ್ಣಸಾಹಿತ್ಯವೆಂದು ಮತ್ತೆ ವಿಭಜಿಸಿಕೊಂಡು ಅಧ್ಯಯನಿಸಲಾಗುವುದು. ಇತರರೊಂದಿಗೆ ಸಂಪಾದನೆಯಲ್ಲಿ - ಶಾಸನ ಸಾಹಿತ್ಯ, ಹಸ್ತಪ್ರತಿ ಸಾಹಿತ್ಯವೆಂದು ಸೂಕ್ಷ್ಮವಾಗಿ ವಿಭಜಿಸಿಕೊಂಡು ಅಧ್ಯಯನಕ್ಕೆ ಅಳವಡಿಸಲಾಗುವುದು. ಕೊನೆಯ ಭಾಗದಲ್ಲಿ ಡಾ. ಬಿ.ಆರ್. ಹಿರೇಮಠರು ಸಂಪಾದಿಸಿದ ವಿದ್ಯಾರ್ಥಿ ಭಾರತಿ, ಕರ್ನಾಟಕ ಭಾರತಿ ಮತ್ತು ಸುಕುಮಾರ ಮತ್ತು ಸದ್ಧರ್ಮವಾಹಿನಿ ಪತ್ರಿಕೆಗಳ ಕುರಿತು ವಿವೇಚಿಸಲಾಗುತ್ತದೆ.

**ಅಧ್ಯಾಯ -೫** : ಡಾ. ಬಿ. ಆರ್. ಹಿರೇಮಠ ಅವರು ರಚಿಸಿದ ಬಿಡಿ ಲೇಖನಗಳಲ್ಲಿ ವಿಭಿನ್ನ ನೆಲೆಗಳ ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಡಾ. ಬಿ. ಆರ್. ಹಿರೇಮಠರು ಸೃಜನ ಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯ ಎರಡರಲ್ಲೂ ಗಮನಾರ್ಹ ಕೊಡುಗೆ ನೀಡಿದ್ದಾರೆ. ಸೃಜನ ಸಾಹಿತ್ಯದಲ್ಲಿ - ಕಾವ್ಯ, ಕಥೆ, ನಾಟಕಗಳ ಕುರಿತು ಸೃಜನೇತರ ಸಾಹಿತ್ಯದಲ್ಲಿ ಚರಿತ್ರೆ, ಅರಸುಮನೆತನಗಳು, ಶಾಸನ ಮತ್ತು ನಾಮವಿಜ್ಞಾನ, (ನಿಷ್ಪತ್ತಿ ಸಾಹಿತ್ಯ) ವಿಮರ್ಶೆ, ವ್ಯಕ್ತಿಚಿತ್ರಗಳು ಮತ್ತು ಜನಪದ ಸಾಹಿತ್ಯ ಹೀಗೆ ವಿವಿಧ ಕ್ಷೇತ್ರಗಳನ್ನು ಗುರುತಿಸಿಕೊಳ್ಳಲಾಗಿದೆ. ಓರ್ವ ವ್ಯಕ್ತಿ ಹಲವು ಕ್ಷೇತ್ರಗಳಿಗೆ ಹೇಗೆ ಸ್ಪಂದಿಸುತ್ತಾನೆ. ತನ್ನ ಅಸ್ಮಿತೆ ಮತ್ತು ಅನನ್ಯತೆಗಳನ್ನು ಯಾವ ರೀತಿ ಧಾರೆ ಎರೆಯುತ್ತಾನೆಂಬುದು ಮಹತ್ವದ ಅಂಶವಾಗಿದೆ. ಡಾ. ಬಿ.ಆರ್.ಅವರ ವ್ಯಕ್ತಿತ್ವದ ಮತ್ತು ಸಾಹಿತ್ಯದ ವಿವಿಧ ಮಗ್ಗುಲಗಳನ್ನು ಪರಿಚಯಿಸುವ ಮತ್ತು ಪರಸ್ಪರ ಮುಖಾಮುಖಿಯಾಗಿಸುವ ಕಾರ್ಯ ಈ ಅಧ್ಯಾಯದಲ್ಲಿದೆ.

**ಅಧ್ಯಾಯ -೬ :** ಮಾರ್ಗದರ್ಶನ : ಪಿಎಚ್.ಡಿ. ಮಾರ್ಗದರ್ಶನ ಕುರಿತು ವಿವರಗಳನ್ನೊಳಗೊಂಡಿದೆ. ಡಾ. ಬಿ. ಆರ್. ಹಿರೇಮಠ ಅವರು ವಿದ್ಯಾರ್ಥಿಗಳ ಪಾಲಿಗೆ ಅಚ್ಚುಮೆಚ್ಚಿನ ಪ್ರಾಧ್ಯಾಪಕರಾಗಿದ್ದರು. ವಿದ್ಯಾರ್ಥಿಗಳನ್ನು ತುಂಬಾ ಪ್ರೀತಿ ಹಾಗೂ ವಿಶ್ವಾಸದಿಂದ ಕಾಣುತ್ತಿದ್ದರು. ಸೌಮ್ಯ ಸ್ವಭಾವದ, ಮಾತೃಹೃದಯದ, ಮಾನವೀಯ ಕಾಳಜಿಯುಳ್ಳ ಅವರ ಬೋಧನೆ ಎಂಥವರಿಗೂ ಅಪ್ಯಾಯಮಾನವಾಗಿತ್ತು. ಅಧ್ಯಯನ ಅಧ್ಯಾಪನದ ಜೊತೆಗೆ ಮಾರ್ಗದರ್ಶನ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿದ್ದಾರೆ. ಅದರ ಫಲವಾಗಿ ಎಂಟು ಎಂ. ಫಿಲ್ ಪದವಿಗಳು, ಹದಿನೇಳು ಪಿಎಚ್.ಡಿ. ಪದವಿಗಳು ಅವರ ಮಾರ್ಗದರ್ಶನದಲ್ಲಿ ಸಂಪನ್ನಗೊಂಡಿವೆ. ಅವುಗಳ ಪರಿಶೀಲನೆ ಈ ಅಧ್ಯಾಯದ ಆಶಯವಾಗಿದೆ. ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನ ವಿಧಾನ, ಮಾರ್ಗದರ್ಶನದ ಮಹತ್ವ, ಮಹಾಪ್ರಬಂಧಗಳ ವಿಶೇಷ ಅಂಶಗಳನ್ನು ಇದರಲ್ಲಿ ವಿವೇಚಿಸಲಾಗಿದೆ.

**ಅಧ್ಯಾಯ -೭ :** ಈ ಅಧ್ಯಾಯವು ಈ ವರೆಗಿನ ಒಟ್ಟು ಅಧ್ಯಯನದ ಫಲಶ್ರುತಿಯಾಗಿದೆ. ಈ ಅಧ್ಯಯನದ ಮೂಲಕ ಕಂಡುಕೊಂಡಿರುವ ಹೊಸ ಅಂಶಗಳನ್ನು ಇದರಲ್ಲಿ ದಾಖಲಿಸಲಾಗುವುದು.

**೧:೩ ಅಧ್ಯಯನದ ವಿಧಾನ :**

ಸಂಶೋಧನೆಯ ವಿಧಾನವನ್ನು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವಿಭಿನ್ನವಾಗಿ ಮಂಡಿಸಿದ್ದಾರೆ. 'ಸಂಶೋಧನೆ ಎನ್ನುವುದು ಶಿಸ್ತುಬದ್ಧವಾಗಿ ಕರ್ನಾಟಕ ಇತಿಹಾಸದಲ್ಲಿ ಕಳೆದುಹೋದ ಅನೇಕ ವಿಚಾರಗಳನ್ನು ಹುಡುಕಿ ತೆಗೆಯುವ ಹೊಸ ಶಿಕ್ಷಣದ ಮಾದರಿಯಾಗಿದೆ' ಎಂಬ ಅಭಿಪ್ರಾಯವನ್ನು ಗಮನದಲ್ಲಿರಿಸಿಕೊಂಡು ಡಾ. ಬಿ.ಆರ್. ಹಿರೇಮಠ ಅವರ ಸಂಶೋಧನಾ ವಿಧಾನವನ್ನು ಪರಿಚಯಿಸಲಾಗಿದೆ.

ಡಾ. ಬಿ.ಆರ್. ಹಿರೇಮಠ ಅವರ ಸಂಶೋಧನಾ ವೈಧಾನಿಕತೆ, ಅವರು ಕೈಗೊಂಡ ವಿವಿಧ ಕ್ಷೇತ್ರಗಳ ಸಂಶೋಧನೆಗಳು ಅವುಗಳ ವಿಶೇಷತೆಯನ್ನು ವಿವರಿಸುವುದು ಇಲ್ಲಿನ ಮುಖ್ಯ ಗುರಿಯಾಗಿದೆ.

ಡಾ. ಬಿ.ಆರ್. ಹಿರೇಮಠ ಅವರ ಸಂಶೋಧನೆಯ ಮುಖ್ಯ ನೆಲೆಗಳನ್ನು ಮೂರು ರೀತಿಯಲ್ಲಿ ವಿಂಗಡಿಸಲಾಗಿದೆ. ಒಂದು ಶಿವಶರಣರ ಕುರಿತು ಶಾಸನಗಳ ಪರಿಚಯ, ಎರಡು ಶಾಸನಗಳ ಕುರಿತಾದ ಗ್ರಂಥಗಳ ಅಧ್ಯಯನ, ಮೂರು ವಚನಸಾಹಿತ್ಯ ಮತ್ತು ಇತರ ಸಂಶೋಧನೆಗಳ ಅಧ್ಯಯನ ಈ ಮೂರು ಪ್ರಕಾರಗಳಲ್ಲಿ ಡಾ. ಬಿ. ಆರ್. ಹಿರೇಮಠ ಅವರು ಕೈಗೊಂಡ ಸಂಶೋಧನೆಗಳನ್ನು ವಿವರಿಸಲಾಗಿದೆ.

ಕನ್ನಡ ಸಂಶೋಧನ ಕ್ಷೇತ್ರಕ್ಕೆ ಸುಮಾರು ೨೦೦ ವರ್ಷಗಳ ಇತಿಹಾಸವಿದೆ. ಆರಂಭದಲ್ಲಿ ಸಾಮಗ್ರಿ ಸಂಶೋಧನೆ, ಆಕರ ಶೋಧನೆ ಮುಖ್ಯವಾಗಿತ್ತು. ಮುಂದೆ ಸಂಶೋಧನೆಯು ಚಾರಿತ್ರಿಕ, ವಿವರಣಾತ್ಮಕ, ವಿಶ್ಲೇಷಣಾತ್ಮಕ ಎಂದು ಕವಲೊಡೆಯಿತು. ವಸ್ತು, ಕೃತಿ, ಪಾತ್ರ ಕೇಂದ್ರಿತ ಅಧ್ಯಯನವೆಂಬ ಹೊಸ ಶಾಖೆಗಳು ಸೇರಿಕೊಂಡವು. ಇವುಗಳಲ್ಲಿ ಸಾಂಸ್ಕೃತಿಕ ಸಂಶೋಧನೆ ಮುಖ್ಯವಾದುದು. 'ಸಾಂಸ್ಕೃತಿಕ

ಸಂಶೋಧನೆ' ಕ್ಷೇತ್ರದಲ್ಲಿ ಡಾ. ಬಿ. ಆರ್. ಹಿರೇಮಠ ಅವರ ಕೊಡುಗೆ ವಿಶಿಷ್ಟವಾದುದಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ 'ತೌಲನಿಕ ಅಧ್ಯಯನ' ವಿಧಾನವನ್ನು ಅನುಸರಿಸಲಾಗಿದೆ. ಡಾ ಬಿ.ಆರ್. ಹಿರೇಮಠ ಅವರ ಬಿಡಿ ಲೇಖನಗಳನ್ನು ಒಗ್ಗೂಡಿಸಿ ವಿಷಯವಾರು ವಿಂಗಡಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಬಿಡಿ ಲೇಖನಗಳನ್ನು ವಿವೇಚಿಸಿ ಅದರ ಫಲಿತಗಳನ್ನು ನೀಡಲಾಗಿದೆ.

ಹಸ್ತಪ್ರತಿ ಹಾಗೂ ಗ್ರಂಥ ಸಂಪಾದನೆ ಡಾ. ಬಿ. ಆರ್. ಹಿರೇಮಠ ಅವರ ಮತ್ತೊಂದು ವಿಶಿಷ್ಟ ಕ್ಷೇತ್ರ. ಈ ನೆಲೆಯನ್ನು ಕುರಿತು ಕೈಗೊಂಡ ಸಂಶೋಧನೆಗಳನ್ನು ಪರಿಚಯಿಸುವುದು, ವಿಶೇಷತೆಗಳನ್ನು ಚರ್ಚಿಸುವುದು ಇಲ್ಲಿನ ಮುಖ್ಯ ಉದ್ದೇಶ. ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದಂತೆ ಡಾ. ಬಿ.ಆರ್. ಹಿರೇಮಠ ಅವರ ಸಾಧನೆ ಅಮೂಲ್ಯವಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ಗ್ರಂಥ ಸಂಪಾದನ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಶ್ರೀಯುತರು ಸಂಪಾದಿಸಿದ ಗ್ರಂಥಗಳ ಅಧ್ಯಯನದಿಂದ ಅವರ ಗ್ರಂಥ ಸಂಪಾದನ ನೆಲೆಬೆಲೆಗಳನ್ನು ಗುರುತಿಸಲಾಗುವುದು. ಅವರು ನಿರ್ವಹಿಸಿದ ಸ್ವತಂತ್ರ ಸಂಪಾದನೆ, ಇತರರೊಂದಿಗೆ ಸಂಪಾದನೆ ಮತ್ತು ಪತ್ರಿಕಾ ಸಂಪಾದನೆಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಜೊತೆಗೆ ಸಂಶೋಧನ ಮಾರ್ಗದರ್ಶಕರಾಗಿ ಡಾ. ಬಿ. ಆರ್. ಹಿರೇಮಠ ಅವರು ಮಾಡಿದ ಕಾರ್ಯವನ್ನು ವಿವರಿಸಲಾಗುವುದು.

ಶಾಸನ, ಹಸ್ತಪ್ರತಿ, ಚರಿತ್ರೆ, ಇತಿಹಾಸ, ಸಂಸ್ಕೃತಿಕ ಅಧ್ಯಯನ ಕ್ಷೇತ್ರಗಳಲ್ಲಿ ಈಗಾಗಲೇ ಅಧ್ಯಯನ ಮಾಡಿರುವ ಡಾ. ಎಂ. ಎಂ. ಕಲಬುರ್ಗಿ, ಡಾ. ಎಂ. ಚಿದಾನಂದಮೂರ್ತಿ, ಡಾ. ಟಿ.ವಿ.ವೆಂಕಟಾಚಲ ಶಾಸ್ತ್ರೀ ಮುಂತಾದವರ ವಿದ್ವತ್ ಪರಂಪರೆಗೆ ಡಾ. ಬಿ.ಆರ್. ಹಿರೇಮಠ ಅವರು ಸೇರುತ್ತಾರೆ. ಇವರ ಕೊಡುಗೆ ಅನನ್ಯವಾಗಿದೆ. ಸಂಶೋಧನ ಕ್ಷೇತ್ರವನ್ನಿದು ವಿಸ್ತರಿಸಿದೆ. ಇವೆಲ್ಲ ಸಂಗತಿಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ವಿವರಿಸಲಾಗುವುದು.

ಸಂಶೋಧಕನ ಬದುಕಿಗೊಂದು ಅರ್ಥವಿದೆ. 'ಮನುಷ್ಯನ ಬದುಕಿನಿಂದಲೇ ಸಾಧನೆ' ಎಂಬುದು ಸುಳ್ಳಲ್ಲ. ಜನನ, ಬಾಲ್ಯ, ವಿದ್ಯಾಭ್ಯಾಸ ಅರ್ಹತೆಗಳು ಸಾಧಕನ ಸಾಧನೆಯ ಮೆಟ್ಟಿಲುಗಳಾಗಿವೆ. ಅವನ ಬದುಕಿನ ಆಯಾಮಗಳು ಬರೀ ದಾಖಲೆಗಳಾಗದೆ ಸಂಶೋಧಕನ ಸಂಶೋಧನೆಗೆ ಮುನ್ನುಡಿಯಾಗಿದೆ ಎನ್ನುವುದನ್ನು ನಿರೂಪಿಸಲಾಗುವುದು. ಡಾ. ಬಿ.ಆರ್. ಹಿರೇಮಠ ಅವರ ಬದುಕಿನ ಘಟನೆಗಳ ಅನ್ವೇಷಣೆಗಳನ್ನು ಸಂಶೋಧನ ಕ್ಷೇತ್ರಗಳನ್ನು ಚರ್ಚಿಸಲಾಗುವುದು. ಇದು ಪ್ರಸ್ತುತ ಮಹಾಪ್ರಬಂಧದ ಆಶಯ, ಸ್ವರೂಪ ಮತ್ತು ವೈಧಾನಿಕತೆಯಾಗಿದೆ.



**ಕೊನೆ ಟಿಪ್ಪಣಿಗಳು :**

೧. ಡಾ. ಎಂ.ಎಂ. ಕಲಬುರ್ಗಿ :ಸಂಶೋಧನೆಯ ಸ್ವರೂಪ, ಮಹಾಮಾರ್ಗ ಪುಟ - ೫

೨. ಡಾ. ಎಂ.ಎಂ. ಕಲಬುರ್ಗಿ: ಸಂಶೋಧನೆಯ ಸ್ವರೂಪ, ಮಹಾಮಾರ್ಗ ಪುಟ - ೬

# ಅಧ್ಯಾಯ - ೨ :
# ಡಾ. ಹಿರೇಮಠರ ಅಧ್ಯಯನದ ನೆಲೆಗಳು

**೨.೦ : ಪ್ರವೇಶ :**

ಓರ್ವ ವ್ಯಕ್ತಿಯ ಸಾಧನೆಗೆ ; ಅವರ ಬದುಕಿನ ರೀತಿ, ಬೆಳೆದು ಬಂದ ಪರಿಸರ ಪ್ರಮುಖ ಕಾರಣವಾಗಿರುತ್ತದೆ. ಮನೆತನದ ಹಿನ್ನೆಲೆ, ಪ್ರಾದೇಶಿಕ ವೈಶಿಷ್ಟ್ಯಗಳೂ ಕೂಡ ವ್ಯಕ್ತಿಯ ಬೆಳವಣಿಗೆಯಲ್ಲಿ ಪ್ರಭಾವ ಬೀರುತ್ತವೆ. ಆದ್ದರಿಂದ ಒಬ್ಬ ವ್ಯಕ್ತಿಯ ಸಾಹಿತ್ಯ ಸಾಧನೆಯನ್ನು ಅವಲೋಕಿಸುವಾಗ ಆತನ ಪರಿಸರ ಮತ್ತು ಪ್ರಭಾವಗಳೊಂದಿಗೆ ಬದುಕನ್ನು ಪರಿಗಣಿಸುವುದು ಅವಶ್ಯಕವಾಗುತ್ತದೆ. ಡಾ. ಬಿ.ಆರ್. ಹಿರೇಮಠರ ಬದುಕನ್ನು ಚಿತ್ರಿಸುವಾಗ ಅವರು ಬೆಳೆದು ಬಂದ ಪರಿಸರ ಹಾಗೂ ಅವರಿಗೆ ದೊರೆತ ಪ್ರೇರಣೆಯನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗುವುದು.

**೨.೧ : ಪರಿಸರ :**

ಡಾ. ಬಿ. ಆರ್. ಹಿರೇಮಠರ ಪೂರ್ವಜರು ಬಾಗಲಕೋಟ ಜಿಲ್ಲೆಯ ಬೀಳಗಿ ತಾಲೂಕಿನ 'ಹೆರಕಲ್ಲ' ಗ್ರಾಮದವರು. ಡಾ. ಬಿ. ಆರ್. ಹಿರೇಮಠ ಅವರ ಅಜ್ಜನಾದ ಮಹಾದೇವಯ್ಯ ಬಸಲಿಂಗಯ್ಯ ಹಿರೇಮಠರು 'ಹೆರಕಲ್ಲ' ಗ್ರಾಮದ ನಿವಾಸಿಗಳಾಗಿದ್ದರು. ಇವರು ಉಜ್ಜಯಿನಿ ಪೀಠದ 'ಮಳಿಬಗಿ' ಪರಂಪರೆಯ ಜಂಗಮರು. 'ಅಯ್ಯಾಚಾರವೇ' ಇವರ ಮೂಲ ವೃತ್ತಿ. ಕಿತ್ತು ತಿನ್ನುವ ಬಡತನದಲ್ಲಿ ಬದುಕನ್ನು ಸಾಗಿಸಬೇಕಿತ್ತು. ಮಹಾದೇವಯ್ಯನವರ ಮಗ ರೇವಣಯ್ಯನವರು. ಅವರ ಧರ್ಮಪತ್ನಿ ಸೌ. ಅನ್ನಪೂರ್ಣಮ್ಮ. ಈ ಪುಣ್ಯ ದಂಪತಿಗಳ ಉದರದಿಂದ ಡಾ. ಬಿ.ಆರ್. ಹಿರೇಮಠ ಅವರು ಮೂಡಿ ಬಂದರು.

ತಾಯಿ ಅನ್ನಪೂರ್ಣಮ್ಮನವರ ತಂದೆ ರುದ್ರಯ್ಯನವರು ಪ್ರಕಾಂಡ ಪಂಡಿತರು. ವೇದಮೂರ್ತಿಗಳೆಂದೇ ಖ್ಯಾತನಾಮರಾದವರು. ಇವರು ಕಾಶಿ ವಿದ್ಯಾಪೀಠದಲ್ಲಿ ಸಂಸ್ಕೃತವನ್ನು ಗುರುಮುಖೇನ ಅಧ್ಯಯನ ಮಾಡಿದವರು. 'ವೇದಮೂರ್ತಿ ರುದ್ರಯ್ಯ ಸ್ವಾಮಿ'ಗಳೆಂದರೆ ಜನರಿಗೆಲ್ಲ ಪೂಜ್ಯಭಾವನೆ ಇತ್ತು. ಸಮಾಜದಲ್ಲಿ ಅಪಾರ ಗೌರವವಿತ್ತು. ರುದ್ರಯ್ಯನವರ ತಂದೆ ( ಅಂದರೆ ಬಿ. ಆರ್. ಹಿರೇಮಠ ಅವರ ಮುತ್ತಜ್ಜನವರು) 'ಯಡಹಳ್ಳಿ'ಯ ದೇಸಗತಿಗೆ ರಾಜ ಗುರುಗಳಾಗಿದ್ದವರು.

ಹೀಗಾಗಿ ತುಂಬಾ ಗೌರವದ ಕುಟುಂಬವಾಗಿತ್ತು. ಈ ಎರಡು ಕುಟುಂಬಗಳ ಬಾಂಧವ್ಯ ಅತ್ಯಂತ ಅಪ್ಯಾಯಮಾನವಾಗಿತ್ತು. ಅನ್ನಪೂರ್ಣಮ್ಮ (ಬಿ. ಆರ್. ಹಿರೇಮಠ ಅವರ ತಾಯಿ)ನವರಿಗೆ ನಾಲ್ಕು ಜನ ಸಹೋದರರು. ಶ್ರೀ ಕಲ್ಲಯ್ಯ, ಶ್ರೀ ಶೇಖರಯ್ಯ, ಅಣ್ಣಂದಿರಾದರೆ ಶ್ರೀ ಬಸಯ್ಯ, ಶ್ರೀ ಸದಾಶಿವಯ್ಯ ತಮ್ಮಂದಿರು. ಅಣ್ಣ ತಮ್ಮಂದಿರ ವಾತ್ಸಲ್ಯಕ್ಕೆ ಪಾತ್ರರಾದವರು ಸೌ. ಅನ್ನಪೂರ್ಣಮ್ಮನವರು. ಹೀಗಾಗಿ ರೇವಣಯ್ಯ ಅವರನ್ನು 'ಯಡಹಳ್ಳಿ'ಗೆ ಕರೆಯಿಸಿಕೊಂಡರು. ಅನ್ನಪೂರ್ಣಮ್ಮ ದಂಪತಿಗಳಿಗೆ ಯಡಹಳ್ಳಿಯಲ್ಲಿ ಪ್ರತ್ಯೇಕ ವಾಸ್ತವ್ಯದ ವ್ಯವಸ್ಥೆಯನ್ನು ನಿರ್ಮಿಸುವ ಭರವಸೆಯಿತ್ತರು. ಅವರ ಪ್ರೀತಿ ವಾತ್ಸಲ್ಯಕ್ಕೆ ಮಣಿದು ರೇವಣಯ್ಯ ಹಾಗೂ ಅನ್ನಪೂರ್ಣ ದಂಪತಿಗಳು 'ಹೆರಕಲ್ಲಿ'ನಿಂದ ಯಡಹಳ್ಳಿಗೆ ವಲಸೆ ಬಂದರು. ರೇವಣಯ್ಯನವರು ಜಂಗಮ ವೃತ್ತಿಯ ಅಯ್ಯಾಚಾರದೊಂದಿಗೆ 'ಟೇಲರಿಂಗ್' ವೃತ್ತಿಯನ್ನು ಮಾಡುತ್ತಿದ್ದರು. ಬಡತನದಲ್ಲಿಯೂ ಸ್ವಾಭಿಮಾನಿಯಾಗಿ, ಕಾಯಕ ಜೀವಿಯಾಗಿ ರೇವಣಯ್ಯ ಮತ್ತು ಅನ್ನಪೂರ್ಣಮ್ಮ ದಂಪತಿಗಳು ಬದುಕಿದರು. ಇವರಿಗೆ ಶ್ರೀ ಬಸಲಿಂಗಯ್ಯ (ಬಿ. ಆರ್.) ಶ್ರೀ ಶಿವಪೂಜಯ್ಯ, ಶ್ರೀಮತಿ ಮಲ್ಲಮ್ಮ ಮತ್ತು ಶ್ರೀಮತಿ ಗಂಗಮ್ಮ ನಾಲ್ಕು ಜನ ಮಕ್ಕಳು ಹುಟ್ಟಿದರು.

**• ಜನನ :**

ಶ್ರೀ ಬಸಲಿಂಗಯ್ಯ ರೇವಣಯ್ಯ ಹಿರೇಮಠ ಅವರು ೧೦-೦೪-೧೯೪೪ರಂದು 'ಯಡಹಳ್ಳಿ' ಗ್ರಾಮದಲ್ಲಿ ಜನಿಸಿದರು. ಅಜ್ಜ ಬಸಲಿಂಗಯ್ಯನವರ ಹೆಸರನ್ನು ಈ ಮಗುವಿಗೆ ನಾಮಕರಣ ಮಾಡಲಾಯಿತು. ಬಾಲ್ಯ ಕಳೆದದ್ದು ಯಡಹಳ್ಳಿಯಲ್ಲಿಯೇ ಅಜ್ಜ ದೇವಮೂರ್ತಿ ರುದ್ರಯ್ಯನವರ ಪಾಂಡಿತ್ಯ, ತಂದೆ-ತಾಯಿಗಳ ಸ್ವಾಭಿಮಾನ, ಕಾಯಕ ತತ್ವದ ಜೀವನ ಪ್ರಭಾವದಿಂದ ಬಸಲಿಂಗಯ್ಯ ಬೆಳೆದರು. ಮಗು ಎಲ್ಲರಂತಿರದೆ ವಿಚಕ್ಷಣ ಮತಿಯಾಗಿದ್ದು, ಓರಗೆಯವರಲ್ಲಿ ಎದ್ದು ಕಾಣುವ ವ್ಯಕ್ತಿತ್ವ ಪಡೆದುಕೊಂಡಿತ್ತು. ತಂದೆ-ತಾಯಿಗಳ ಕಣ್ಮಣಿಯಾಗಿ ಅಜ್ಜಿ ಮುರಗೆವ್ವನವರ ನೆಚ್ಚಿನ 'ಮೊಮ್ಮಗ'ನಾಗಿ ಬಸಲಿಂಗಯ್ಯ ಬೆಳೆದರು. ಈ ಮಗುವಿಗೆ ಸರಿಯಾಗಿ ಶಿಕ್ಷಣ ಒದಗಿಸಬೇಕೆಂಬುದು ಅಜ್ಜಿ ಮುರಗೆವ್ವಳ ಸಂಕಲ್ಪವಾಗಿತ್ತು. ಕಾಶಿ ಪಂಡಿತ ವೇದಮೂರ್ತಿ ರುದ್ರಯ್ಯನವರ ವಿದ್ವತ್ತು, ಜನಮನ್ನಣೆ, ಸಮಾಜ ಗೌರವ ಅಜ್ಜಿ ಮುರಗೆವ್ವನವರ ಈ ಸಂಕಲ್ಪಕ್ಕೆ ನೇರ ಕಾರಣವಾಗಿತ್ತು.

**• ಮದುವೆ :**

ಸೌ. ಉಮಾದೇವಿಯವರು ಬಿಜಾಪುರದ ಸುವಿಖ್ಯಾತ ನ್ಯಾಯಾಧೀಶರಾಗಿದ್ದ ಶ್ರೀ ಗುರಯ್ಯ ಹಿರೇಮಠ ಅವರ ಸುಪುತ್ರಿ. ಸೌ. ಉಮಾದೇವಿಯವರಿಗೆ ಶ್ರೀ ಮಲ್ಲಿಕಾರ್ಜುನಯ್ಯ, ಶ್ರೀ ಚಾಮರಸ ಮತ್ತು ಶ್ರೀ ಗಂಗಾಧರ ಎಂಬ ಮೂರು ಜನ ಸಹೋದರರು.

ಶ್ರೀ ಮಲ್ಲಿಕಾರ್ಜುನ ಹಿರೇಮಠರು ಬಿಜಾಪುರದಲ್ಲಿ ನ್ಯಾಯವಾದಿಗಳಾಗಿ, ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸಿ ಅಕಾಲಿಕ ಮೃತ್ಯುವಿಗೆ ಈಡಾದರು. ಶ್ರೀ ಚಾಮರಸ ಹಿರೇಮಠ ಅವರು ಮುಂಬಯಿಯಲ್ಲಿ ಪ್ರೌಢಶಾಲೆಯ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಶ್ರೀ ಗಂಗಾಧರ ಹಿರೇಮಠ ಅವರು ಬಿಜಾಪುರದ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಗಣಿತಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅವರ ಪ್ರೀತಿಯ ಸಹೋದರಿ ಉಮಾದೇವಿಯವರು ಜನಿಸಿದ್ದು ೧ ಜೂನ್ ೧೯೫೩. ಪ್ರಾಥಮಿಕ ಶಿಕ್ಷಣದಿಂದ ಮೊದಲುಗೊಂಡು ಪದವಿ ಶಿಕ್ಷಣದ ವರೆಗೆ ಬಿಜಾಪುರದಲ್ಲಿ ಕಲಿತರು.

ಸೌ. ಉಮಾದೇವಿಯವರು ಡಾ. ಬಿ.ಆರ್. ಹಿರೇಮಠ ಅವರೊಂದಿಗೆ ಮೇ. ೧೯, ೧೯೭೭ರಲ್ಲಿ ಗೃಹಸ್ಥಾಶ್ರಮ ಪ್ರವೇಶಿಸಿದರು. ಅಪರೂಪ ಮತ್ತು ಅನುರೂಪದ ದಾಂಪತ್ಯ ಅವರದಾಗಿತ್ತು. ಸಂಪ್ರದಾಯಸ್ಥ ಕುಟುಂಬದ ಉಮಾದೇವಿಯವರು ಡಾ. ಬಿ.ಆರ್. ಹಿರೇಮಠ ಅವರ ಸಹಧರ್ಮಿಣಿಯಾಗಿ ನಡೆದುಕೊಂಡರು. ಇವರಿಗೆ ಶಿವಯೋಗಿ (ದೀಪು), ಮೃತ್ಯುಂಜಯ(ಮುತ್ತು) ಎಂಬ ಇಬ್ಬರು ಮಕ್ಕಳು. ಶ್ರೀ ಶಿವಯೋಗಿಯವರು ಬಿ. ಇ. (ಈ ಆ್ಯಂಡ ಸಿ) ಪದವಿಯನ್ನು ಪಡೆದು ಬೆಂಗಳೂರಿನ ಕಂಪನಿಯಲ್ಲಿ ಕೆಲವು ಕಾಲ ಸೇವೆ ಸಲ್ಲಿಸಿ, ಇದೀಗ ಕರ್ನಾಟಕ ವಿಶ್ವವಿದ್ಯಾಲಯದ ಮೌಲ್ಯಮಾಪನ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರಿಗೆ ಅವರ ಸೋದರಮಾವ ಗಂಗಾಧರಯ್ಯ ಹಿರೇಮಠ ಅವರ ಮಗಳು ಸೌ. ಶೃತಿ ಧರ್ಮಪತ್ನಿಯಾಗಿದ್ದಾರೆ.

ಮೃತ್ಯುಂಜಯ ಪ್ರತಿಭಾವಂತ ವಿದ್ಯಾರ್ಥಿ. ಧಾರವಾಡದಲ್ಲಿಯೇ ಪಿ.ಯು.ಸಿ. ವಿಜ್ಞಾನದ ವರೆಗೆ ವ್ಯಾಸಂಗ ಪೂರೈಸಿ, ಬೆಳಗಾವಿಯ ಕೆ. ಎಲ್.ಇ. ಸಂಸ್ಥೆಯ ಜವಾಹರಲಾಲ ಮೆಡಿಕಲ್ ಮಹಾವಿದ್ಯಾಲಯದಿಂದ ಎಂ. ಬಿ.ಬಿ.ಎಸ್. ಪದವಿ ಸಂಪಾದಿಸಿಕೊಂಡರು. ಲಂಡನ್‌ನಲ್ಲಿ ಉನ್ನತ ಅಧ್ಯಯನ ಕೈಕೊಂಡು ಎಂ. ಡಿ. ಮುಗಿಸಿ ಸಧ್ಯ ಲಂಡನ್‌ನಲ್ಲಿ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಧರ್ಮಪತ್ನಿ ಡಾ. ಪಲ್ಲವಿ ಎಂ.ಬಿ.ಬಿ.ಎಸ್. ಎಂ.ಡಿ. ಪದವೀಧರರು. ಅವರೂ ಸಹ ತಮ್ಮ ಪತಿಯೊಂದಿಗೆ ಲಂಡನ್ನಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀ ಶಿವಪೂಜಯ್ಯ ಹಿರೇಮಠ ಅವರು ಡಾ. ಬಿ.ಆರ್. ಅವರ ಸಹೋದರರು. ಅವರ ಧರ್ಮಪತ್ನಿ ಸೌ. ದಾನಮ್ಮ. ಇವರಿಗೆ ಇಬ್ಬರು ಮಕ್ಕಳು. ಕು. ಅಭಿಷೇಕ ಮತ್ತು ಕು. ಅನ್ನಪೂರ್ಣ. ಶ್ರೀ ಶಿವಪೂಜಯ್ಯ ಹಿರೇಮಠ ಅವರು ಧಾರವಾಡದಲ್ಲಿ ನೆಲೆಸಿದ್ದಾರೆ. ರಾಜ್ಯಶಾಸ್ತ್ರದಲ್ಲಿ ಎಂ.ಎ. ಪದವಿಯನ್ನು ಪಡೆದು ಕೆಲವು ದಿನಗಳ ಕಾಲ ಹಾರೂಗೇರಿಯಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಈಗ ಜೀವವಿಮಾ ನಿಗಮದ ಪ್ರತಿನಿಧಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮನೆತನದ ಹೊಣೆಗಾರಿಕೆ ಮತ್ತು ಮಳಲಿಯ ಹೊಲದ ಉಸ್ತುವಾರಿ ನಿರ್ವಹಣೆ ಇವರದಾಗಿದೆ.

ಇಂಥ ತುಂಬು ಕುಟುಂಬವನ್ನು ಸೌ. ಉಮಾದೇವಿಯವರು ೨-೧೧-೨೦೦೦ದಂದು ಅಗಲಿದರು. ಈ ಆಘಾತ ಕುಟುಂಬದ ಎಲ್ಲ ಸದಸ್ಯರ ಮೇಲೆ ಗಾಢವಾಗಿ ಪರಿಣಮಿಸಿತು.

**೨.೨ :ಅಧ್ಯಯನ :**

ಡಾ. ಬಿ.ಆರ್. ಹಿರೇಮಠ ಅವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಯಡಹಳ್ಳಿಯ ಸರಕಾರಿ ಗಂಡುಮಕ್ಕಳ ಶಾಲೆಯಲ್ಲಿ ಆರಂಭಿಸಿದರು. ಆಗ ಅವರ ಮೇಲೆ ಗಾಢ ಪ್ರಭಾವ ಬೀರಿದವರೆಂದರೆ ಶ್ರೀ ಜಾನಮಟ್ಟಿ ಮತ್ತು ಶ್ರೀ ಗಿರಿಸಾಗರ ಗುರುಗಳು. ಬಾಲಕ ಬಸಲಿಂಗಯ್ಯನ ಪ್ರತಿಭೆಯನ್ನು ಪ್ರಾಥಮಿಕ ಹಂತದಲ್ಲೇ ಗುರುತಿಸಿ ಮಗುವಿಗೆ ಮುಂದಿನ ಶಿಕ್ಷಣ ನೀಡುವಂತೆ ಪಾಲಕರನ್ನು ಪ್ರೇರೇಪಿಸಿದರು. ಅಜ್ಜಿಯ ಆಸೆಗೆ, ತಾಯಿಯ ಒತ್ತಾಸೆಗೆ ಇದು ಪೂರಕವಾಗಿತ್ತು. ೫ನೆಯ ತರಗತಿಯಿಂದ ೧೧ನೆಯ ತರಗತಿಯ ವರೆಗೆ 'ಗಲಗಲಿ'ಯಲ್ಲಿ ಶಿಕ್ಷಣ ಪೂರೈಸಿದರು. ಶ್ರೀ ಜಾನಮಟ್ಟಿ ಹಾಗೂ ಶ್ರೀ ಗಿರಿಸಾಗರ ಗುರುಗಳ ಮಾರ್ಗದರ್ಶನದಂತೆ ಮುಧೋಳಕ್ಕೆ ಬಂದು ಅಲ್ಲಿಯ ಪದವಿಪೂರ್ವ ಮಹಾವಿದ್ಯಾಲಯದಲ್ಲಿ ಪಿ.ಯು.ಸಿ. ಶಿಕ್ಷಣವನ್ನು ಪಡೆದರು.

ಮನೆಯಲ್ಲಿ ಕಿತ್ತು ತಿನ್ನುವ ಬಡತನ, ಮುಂದೆ ಓದುವುದು ದುಸ್ತರವಾದ ಸಂದರ್ಭದಲ್ಲಿ ತಾಯಿಯ ತಾಯಿ (ಮುರಗೆವ್ವನವರು) ಮತ್ತು ಸೋದರ ಮಾವನವರಾದ ಬಸಲಿಂಗಯ್ಯನವರು ಸಹಾಯ ಹಸ್ತ ನೀಡಿ ಶಿಕ್ಷಣದ ಖರ್ಚು ವೆಚ್ಚವನ್ನು ಭರಿಸಲು ಮುಂದಾದರು. ದೂರದ ಬಾಗಲಕೋಟೆಯ ಶ್ರೀ ಬಸವೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಬಿ.ಎ. ಪದವಿಗೆ ಪ್ರವೇಶ ಪಡೆದರು. ಆಗಿನ ಕಾಲದಲ್ಲಿ ಸಾಮಾನ್ಯ ಕೌಟುಂಬಿಕ ಹಿನ್ನೆಲೆ ಉಳ್ಳವರಿಗೆ ಪದವಿ ಶಿಕ್ಷಣ ಸುಲಭವಾಗಿರಲಿಲ್ಲ. ಡಾ. ಬಿ.ಆರ್. ಅವರ ಕಲಿಕೆಯ ಆಸಕ್ತಿ, ಗುರುಗಳ ಪ್ರೇರಣೆಯ ಶಕ್ತಿ, ಅಜ್ಜಿಯ ಒತ್ತಾಸೆ, ಸೋದರ ಮಾವಂದಿರ ಬೆಂಬಲದಿಂದಾಗಿ 'ಕನ್ನಡ' ಪ್ರಧಾನ ವಿಷಯವನ್ನು ಆಯ್ದುಕೊಂಡು '೧೯೭೧' ರಲ್ಲಿ ಬಿ. ಎ. ಪದವಿಯನ್ನು ಪ್ರಥಮ ವರ್ಗದಲ್ಲಿ ಉತ್ತೀರ್ಣರಾದರು. ಪದವಿ ಹಂತದಲ್ಲಿ ಇವರ ಶಿಕ್ಷಣದ ಮೇಲೆ ಗಾಢ ಪ್ರಭಾವ ಬೀರಿದವರೆಂದರೆ ಡಾ. ಬಿ. ಕೆ. ಹಿರೇಮಠ ಗುರುಗಳು. ಅವರ ಸಮರ್ಥ ಮಾರ್ಗದರ್ಶನ ಡಾ. ಬಿ. ಆರ್. ಅವರಲ್ಲಿ ವ್ಯವಸ್ಥಿತವಾಗಿ 'ಕನ್ನಡ' ಅಧ್ಯಯನವನ್ನು ಕೈಕೊಳ್ಳುವಂತೆ ಮಾಡಿತು.

ಬಿ.ಎ. ಮುಗಿಸಿದ ಇವರಿಗೆ ಉನ್ನತ ಶಿಕ್ಷಣದ ಆಸಕ್ತಿಯಿತ್ತು. ಆದರೆ ಬಡತನದಿಂದಾಗಿ ಚಡಪಡಿಸುವಂತಾಯ್ತು. ಡಾ. ಗುರುಲಿಂಗ ಕಾಪಸೆಯವರ ಪ್ರೇರಣೆಯಿಂದ ಎಂ.ಎ. ಪದವಿ ಪೂರೈಸುವ ಅದಮ್ಯ ಹಂಬಲವಿದ್ದರೂ, ಆರ್ಥಿಕ ಪರಿಸ್ಥಿತಿ ಅವಕಾಶ ಕೊಡದಾದಾಗ ಚಿಂತಾಕ್ರಾಂತರಾದರು. ರುದ್ರಯ್ಯನವರಿಂದ ವಿಷಯ ತಿಳಿದ 'ಜೈನಾಪುರದ ರಮಾಕಾಂತ ದೇಸಾಯಿ'ಯವರು ಡಾ. ಬಿ. ಆರ್.

ಅವರನ್ನು ಉನ್ನತ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಕಳಿಸಲು ಬೆಂಗಾವಲಾಗಿ ನಿಂತರು. ನೆರಹೊರೆಯವರು ಏನೇನೋ ಮಾತನಾಡಿದಾಗ "ಬಸಲಿಂಗಯ್ಯ ಭಾಳ ಶ್ಯಾಣ್ಯಾ ಅದಾನ. ಅಂಥಾ ಹುಷಾರ ಹುಡುಗರು ನಮ್ಮ ಹಳ್ಳ್ಯಾಗ ಇಲ್ಲ. ಅವ ನನಗ ಹಿರೇ ಮಗ ಇದ್ದಾಂಗ. ಅವನ ಸಾಲಿ ರೊಕ್ಕಾ ನಾ ಕೊಡತೇನಿ ಹುಡುಗಗ ಧಾರವಾಡಕ್ಕ ಕಳಿಸೋ ವ್ಯವಸ್ಥಾ ಮಾಡ್ರಿ" ಎಂದು ಹೇಳಿ, ಹುಣಸೇ ತೋಪನ್ನು ಬಾಗವಾನರಿಗೆ ಒಪ್ಪಿಸಿ, ಅದರಿಂದ ಬಂದ ಹಣವನ್ನು ಎಂ.ಎ. ಫೀ ತುಂಬಲು ನೀಡಿದರು. ಇದು ಅಂದಿನ ಕಾಲದ ಜನರ ಹೃದಯವಂತಿಕೆ, ಪ್ರತಿಭೆಗೆ ಪುರಸ್ಕಾರ, ಕಲಿಸುವ ಹಂಬಲವನ್ನು ಸೂಚಿಸುತ್ತದೆ. 'ಫೀ' ಯನ್ನು ಜೈನಾಪುರ ದೇಸಾಯಿಯವರು ನೋಡಿಕೊಂಡರೆ ಇನ್ನುಳಿದ ಖರ್ಚನ್ನು ಮಳಲಿಯ ಸೋದರ ಮಾವಂದಿರಾದ ಶ್ರೀ ಬಸಯ್ಯ ಹಾಗೂ ಶ್ರೀ ಸದಾಶಿವಯ್ಯನವರು ಭರಿಸಿದರು. ಇದರ ಫಲಶೃತಿಯಂತೆ ೧೯೭೩ರಲ್ಲಿ ಬಿ. ಆರ್. ಅವರು ಎಂ.ಎ. ಪದವಿಯನ್ನು ಪ್ರಥಮ ದರ್ಜೆಯಲ್ಲಿ ಯಶಸ್ವಿಯಾಗಿ ಪೂರೈಸಿದರು.

ಎಂ.ಎ. ವ್ಯಾಸಂಗವನ್ನು ಮಾಡುತ್ತಿರುವಾಗ ಬಿ.ಆರ್. ಹಿರೇಮಠ ಅವರು ಖ್ಯಾತ ವಿದ್ವಾಂಸರು ಹಾಗೂ ಗುರುಗಳಾದ ಡಾ. ಆರ್.ಸಿ. ಹಿರೇಮಠ ಅವರ ಗರುಡ ದೃಷ್ಟಿಗೆ ಬಿದ್ದರು. ಡಾ. ಬಿ. ಆರ್. ಹಿರೇಮಠರ ಅಧ್ಯಯನಶೀಲತೆ ಇದಕ್ಕೆ ಕಾರಣವಾಗಿರಬಹುದು. ಡಾ. ಆರ್.ಸಿ. ಹಿರೇಮಠ ಅವರು ಒಮ್ಮೆ ಕಾರ್ಯಕ್ರಮದ ನಿಮಿತ್ಯವಾಗಿ ಯಡಹಳ್ಳಿಗೆ ಆಗಮಿಸಿದಾಗ ಯಡಹಳ್ಳಿಯ ಅಮ್ಮನವರು ತಮ್ಮ ಮಗನಂತಿರುವ ಬಸಲಿಂಗಯ್ಯನವರ ಬಗೆಗೆ ಡಾ. ಆರ್.ಸಿ. ಹಿರೇಮಠ ಅವರೊಂದಿಗೆ ಪ್ರಸ್ತಾಪಿಸಿದರು. ಈ ಸಂದರ್ಭ ಬಿ.ಆರ್. ಹಿರೇಮಠ ಅವರಿಗೆ ವರವಾಗಿ ಪರಿಣಮಿಸಿ, ವೃತ್ತಿಜೀವನಕ್ಕೆ ನಾಂದಿ ಹಾಡಿತು. ಮುಂದೆ ಬಿ. ಆರ್. ಹಿರೇಮಠ ಅವರನ್ನು 'ಸಹಾಯಕ ಸಂಶೋಧಕರಾಗಿ' ಕಾರ್ಯ ನಿರ್ವಹಿಸುವಂತೆ ಡಾ. ಆರ್.ಸಿ. ಹಿರೇಮಠ ಅವರು ನಿರ್ದೇಶಿಸಿದರು. ೧೯೭೩ರಿಂದ ಡಾ. ಬಿ. ಆರ್. ಹಿರೇಮಠ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಸಹಾಯಕ ಸಂಶೋಧಕರಾಗಿ ಕಾರ್ಯ ನಿರ್ವಹಿಸತೊಡಗಿದರು. ಈ ಪ್ರಸಂಗದಲ್ಲಿ "ಶತಮಾನದ ಸಂಶೋಧಕರಾದ, ಡಾ. ಎಂ.ಎಂ. ಕಲಬುರ್ಗಿಯವರ ನಿಕಟ ಸಂಪರ್ಕ ಒದಗಿ ಬಂದಿತು. ಮೂಲತಃ ಸೃಜನಶೀಲ ಸಾಹಿತಿಯಾದ ಬಿ.ಆರ್. ಹಿರೇಮಠ ಅವರು ಡಾ. ಕಲಬುರ್ಗಿಯವರ ಪ್ರಭಾವಲಯದಿಂದ ಶಾಸನ, ಹಸ್ತಪ್ರತಿ, ವಚನ ಸಾಹಿತ್ಯದ ಚಿಂತಕರಾಗಿ ರೂಪಾಂತರಗೊಂಡರು. ಡಾ. ಎಂ.ಎಂ. ಕಲಬುರ್ಗಿಯವರ ಅಂತರಂಗದ ಶಿಷ್ಯರಾದರು. "ಡಾ. ಎಂ.ಎಂ. ಕಲಬುಗಿರ್ಯವರು ಹಾಗೂ ಡಾ. ಬಿ. ಆರ್. ಹಿರೇಮಠ ಅವರ ಹೊಂದಾಣಿಕೆ ಅರ್ಥಪೂರ್ಣವಾಗಿತ್ತು. ಡಾ. ಬಿ.ಆರ್. ಅವರು ಡಾ. ಕಲಬುರ್ಗಿಯವರಿಗೆ ಅನಿವಾರ್ಯವಾಗಿದ್ದರು. ಅಷ್ಟೊಂದು ಅಪಾರ ನಂಬಿಕೆಯನ್ನು ಇಟ್ಟಿದ್ದರು"[೧] ಎಂಬ ಡಾ. ಎ. ಮುರಗೆಪ್ಪ ಅವರ ಮಾತುಗಳು

ಡಾ. ಬಿ.ಆರ್. ಅವರ ಸಹಾಯಕ ಸಂಶೋಧನ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ಧಾರವಾಡದ ಮುರಘಾಮಠ, ಗದುಗಿನ ತೋಂಟದಾರ್ಯ ಮಠ, ಬೆಳಗಾವಿ ನಾಗನೂರ ಮಠ ಮುಂತಾದ ಸಾಹಿತ್ಯ ಸಾಂಸ್ಕೃತಿಕ ಕೇಂದ್ರಗಳಿಗೆ ಡಾ. ಕಲಬುರ್ಗಿಯವರು ಮಾರ್ಗದರ್ಶನ ಮಾಡಿರುವಲ್ಲಿ ಡಾ. ಬಿ. ಆರ್. ಹಿರೇಮಠ ಅವರ ಶ್ರಮ ಇದ್ದೇ ಇರುತ್ತಿತ್ತು.

"ಸಂಶೋಧನ ವಿದ್ಯಾರ್ಥಿಯಾಗಿ ಹಿರಿಯ ಪ್ರಾಧ್ಯಾಪಕರಾಗಿದ್ದ ಡಾ.ಎಂ.ಎಂ. ಕಲಬುರ್ಗಿಯವರ ಕೊಠಡಿಯಲ್ಲಿ ಅವರ ಮಾರ್ಗದರ್ಶನದಲ್ಲಿ, ಸಂಶೋಧನೆಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಇತರರಿಗೆ ಮಾದರಿ ಎಂಬಂತೆ ಕಾರ್ಯ ನಿರ್ವಹಿಸುತ್ತಿದ್ದುದನ್ನು ಬಲ್ಲೆ. 'ಈಶ್ವರನ ಗುಡಿಯಲ್ಲಿ ಲಿಂಗದ ಮುಂದೆ ಬಸವಣ್ಣ ಇರುವಂತೆ, ಡಾ. ಕಲಬುರ್ಗಿಯವರ ಕೊಠಡಿಯಲ್ಲಿ ನೀನಿರುತ್ತಿ' ಎಂದು ಎಷ್ಟೋ ಸಲ ಅವರಿಗೆ ನಾನು ನಗೆಯಾಡಿದ್ದು ಉಂಟು"[೨] ಎಂಬ ಪ್ರೊ. ಬಿ.ವಿ. ಗುಂಜೆಟ್ಟಿಯವರ ಮಾತುಗಳು ಸಂಶೋಧನಾ ಕಾರ್ಯಕ್ಕೆ ಡಾ. ಬಿ.ಆರ್. ಅವರು ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡಿರುವುದಕ್ಕೆ ನಿದರ್ಶನಗಳಾಗಿವೆ.

ಡಾ. ಬಿ. ಆರ್. ಹಿರೇಮಠ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಎಂಬ ವಿಷಯವನ್ನು ಆಯ್ದುಕೊಂಡು ೧೯೮೨ರಲ್ಲಿ ಪಿಎಚ್.ಡಿ ಪದವಿಯನ್ನು ಪೂರೈಸಿದರು.

**೨.೩.ಅಧ್ಯಾಪನ :**

ಡಾ. ಬಿ. ಆರ್. ಹಿರೇಮಠ ಅವರು ೧೯೭೩ರಿಂದ ೧೯೭೫ರ ವರೆಗೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಸಹಾಯಕ ಸಂಶೋಧಕರಾಗಿ ಸೇವೆ ಸಲ್ಲಿಸಿದರು. ೧೯೭೬ರಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ೧೯೮೮ರಲ್ಲಿ ಪ್ರವಾಚಕರಾಗಿ ೧೯೯೮ರಲ್ಲಿ ಪ್ರಾಧ್ಯಾಪಕರಾಗಿ ಬಡ್ತಿ ಹೊಂದಿದರು. ಡಾ. ಬಿ.ಆರ್. ಹಿರೇಮಠ ಅವರು ಅಧ್ಯಾಪಕರಾಗಿ ಅಪಾರ ಶಿಷ್ಯವರ್ಗವನ್ನು ಹೊಂದಿದ್ದರು. ಶಿಷ್ಯರಿಗೆ ಅಚ್ಚುಮೆಚ್ಚಿನ ಗುರುಗಳಾಗಿದ್ದರು. ಅವರ ಅಧ್ಯಾಪನ, ಅಧ್ಯಯನ ಶಿಸ್ತು, ಪರಿಶ್ರಮ, ಪ್ರಾಮಾಣಿಕತೆ, ನಿಷ್ಠೆ, ಆಸಕ್ತಿ, ಸಂಯಮ ಗುಣಗಳು ಶಿಷ್ಯರ ಮೇಲೆ ಗಾಢ ಪ್ರಭಾವ ಬೀರುತ್ತಿದ್ದವು. ತಾವೂ ದುಡಿದು ಶಿಷ್ಯರನ್ನು ದುಡಿಸಿ ಶಿಷ್ಯರ ವ್ಯಕ್ತಿತ್ವವನ್ನು ರೂಪಿಸುತ್ತಿದ್ದರು.

**• ಆಡಳಿತ :**

ಡಾ. ಬಿ. ಆರ್.ಹಿರೇಮಠ ಅವರು ಪ್ರಾಧ್ಯಾಪಕರಾಗಿ ಎಷ್ಟು ಸಮರ್ಥವಾಗಿ ಸೇವೆ ಸಲ್ಲಿಸಿದರೋ ಅಷ್ಟೇ ಸಮರ್ಥವಾಗಿ ಆಡಳಿತಗಾರರೂ ಆಗಿದ್ದರು. ಬೆಳಗಾವಿಯ ಸ್ನಾತಕೋತ್ತರ ಕೇಂದ್ರಕ್ಕೆ

ಆಡಳಿತಾಧಿಕಾರಿಗಳಾಗಿ ಇವರು ಗೈದ ಸೇವೆಯೇ ಇದಕ್ಕೆ ಆಧಾರ. "ಸಮಸ್ಯೆಗಳ ಗೂಡಾಗಿದ್ದ ಈ ಕೇಂದ್ರದಲ್ಲಿ ತಮ್ಮ ಅಧಿಕಾರದ ಅವಧಿಯಲ್ಲಿ ಎಲ್ಲ ಸಮಸ್ಯೆಗಳನ್ನು ಪರಿಹರಿಸಿ ಸಮಸ್ತ ಸಿಬ್ಬಂದಿಯ ಪ್ರೀತಿಗೆ ಪಾತ್ರರಾಗಿದ್ದರು"[೩] ಎಂಬ ಡಾ. ಜೆ.ಎಂ. ನಾಗಯ್ಯ ಅವರ ಮಾತುಗಳು ಡಾ. ಬಿ. ಆರ್. ಹಿರೇಮಠ ಅವರ ದಕ್ಷ ಆಡಳಿತಕ್ಕೆ ಕನ್ನಡಿ ಹಿಡಿದಂತಿವೆ.

೧. ೧೯೯೬-೯೭ರ ಶೈಕ್ಷಣಿಕ ವರ್ಷದಲ್ಲಿ ಬೆಳಗಾವಿಯ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು.

೨. ಮುಂದೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾಗಿ ಮೊದಲ ಅವಧಿಗೆ ೧೯೯೭ರಿಂದ ೧೯೯೯ರ ವರೆಗೆ ಕಾರ್ಯನಿರ್ವಹಿಸಿದರು.

೨. ಎರಡನೆಯ ಅವಧಿಗೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರಾಗಿ (೨೦೦೭ರಿಂದ ೨೦೦೮ರ ವರೆಗೆ) ಸೇವೆ ಸಲ್ಲಿಸಿದರು.

೩. ಕನ್ನಡ ಅಭ್ಯಾಸ ಮಂಡಳಿಯ ಅಧ್ಯಕ್ಷರಾಗಿ ೨೦೦೦ದಿಂದ ೨೦೦೨ರ ವರೆಗೆ ಕಾರ್ಯನಿರ್ವಹಿಸಿದರು.

೪. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮುದ್ರಣಾಲಯದ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಮತ್ತು ಅಧ್ಯಕ್ಷರಾಗಿ ೨೦೦೨ರಿಂದ ೨೦೦೫ ರ ವರೆಗೆ ಕಾರ್ಯನಿರ್ವಹಿಸಿದರು.

೫. ಕಲಾನಿಕಾಯದ ಡೀನರಾಗಿ ಎರಡು ಅವಧಿಗೆ ನೇಮಕಗೊಂಡು ೨೦೦೪ರಿಂದ ೨೦೦೬ರ ವರೆಗೆ ಮತ್ತು ೨೦೦೬ ರಿಂದ ೨೦೦೮ ರ ವರೆಗೆ ಕಾರ್ಯ ಕೈಕೊಂಡರು.

೬. ೨೦೦೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯದ ಸಂಯೋಜಕರಾಗಿ ನೇಮಕಗೊಂಡರು.

೭. ೨೦೦೪-೦೫, ೨೦೦೫-೦೬ ರ ಅವಧಿಗೆ ಕನ್ನಡ ವಿಭಾಗದ ದೂರ ಶಿಕ್ಷಣ ಸಂಯೋಜಕರಾಗಿ ಕಾರ್ಯನಿರ್ವಹಿಸಿದರು.

೮. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಪಠ್ಯಪುಸ್ತಕ ಮಂಡಳಿಯ ನಿರ್ದೇಶಕರಾಗಿ ಮತ್ತು ಅಧ್ಯಕ್ಷರಾಗಿ ೨೦೦೦-೨೦೦೫ ಹಾಗೂ ೨೦೦೫ರಿಂದ ೨೦೦೭ ವರೆಗೆ ಎರಡು ಅವಧಿಗೆ ಕಾರ್ಯ ನಿರ್ವಹಿಸಿದರು.

೯. ಪರೀಕ್ಷಾ ವಿಭಾಗದ ವಿಶೇಷಾಧಿಕಾರಿಗಳಾಗಿ ೨೦೦೮ರಲ್ಲಿ ಸೇವೆ ಸಲ್ಲಿಸಿದರು. ಡಾ. ಬಿ. ಆರ್. ಹಿರೇಮಠರು ಪ್ರಸಿದ್ಧ ಸಂಶೋಧಕರಾಗಿ ಬೆಳೆದು, ಆಡಳಿತಾಧಿಕಾರಿಯಾಗಿ ನಿರ್ವಹಿಸಿದ ಬಹುಮುಖಿ ಕಾರ್ಯ ಮಹತ್ವಪೂರ್ಣವಾಗಿದೆ. ಒಡನಾಡಿಗಳ ಸ್ನೇಹ, ಪ್ರೀತಿಗೆ ಪಾತ್ರರಾಗಿದ್ದರು. ಅಪಾರ ಶ್ರದ್ಧೆ, ದಣಿವರಿಯದ ದುಡಿಮೆ, ಸಹೋದ್ಯೋಗಿಗಳಿಗೆ ಮಾದರಿಯಾಗಿತ್ತು.

ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿ, ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ, ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟು ಪರಿಷ್ಕರಣ ಸಮಿತಿಯ, ಗ್ರಂಥ ಪ್ರಕಟಣಾ ಸಮಿತಿಯ ಸದಸ್ಯರಾಗಿ ವಿಶೇಷ ಕಾರ್ಯಗಳನ್ನು ಮಾಡಿದ್ದಾರೆ.

ಬಸವ ಪಥ ಮಾಸಿಕ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರಾಗಿ, ಬೆಳಗಾವಿಯ ವೀರಶೈವ ವಿಶ್ವಕೋಶದ ಸಲಹಾ ಸಮಿತಿಯ ಸದಸ್ಯರಾಗಿ, ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಯೋಜನೆಯ ಸಂಪಾದಕರಾಗಿ, ಸುಕುಮಾರ ತ್ರೈಮಾಸಿಕ ಪತ್ರಿಕೆಯ ಸಂಪಾದಕರಾಗಿ, ಸದ್ಧರ್ಮವಾಹಿನಿ ಪತ್ರಿಕೆಯ ಸಂಪಾದಕರಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಭಾರತಿ, ವಿದ್ಯಾರ್ಥಿ ಭಾರತಿ ಪತ್ರಿಕೆಗಳ ಸಂಪಾದಕರಾಗಿಯೂ ಸಮರ್ಥವಾಗಿ ಕಾರ್ಯ ನಿರ್ವಹಿಸಿದ್ದಾರೆ.

ಡಾ. ಬಿ.ಆರ್. ಹಿರೇಮಠ ಅವರ ಸಂಘಟನಾ ಶಕ್ತಿ ಅದ್ಭುತವಾಗಿತ್ತು. ಹತ್ತಾರು ಸಮ್ಮೇಳನಗಳನ್ನು ಯಶಸ್ವಿಯಾಗಿ ಸಂಘಟಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಬೆಳಗಾವಿಯಲ್ಲಿ ೧೯೭೭ರಲ್ಲಿ 'ಪಂಪ /ಹರಿಹರ' ಕುರಿತು ವಿಶೇಷ ಉಪನ್ಯಾಸವನ್ನು 'ಸಾಂಸ್ಕೃತಿಕ ಸಪ್ತಾಹ'ವನ್ನು ಸಂಘಟಿಸಿದರು. ಧಾರವಾಡದಲ್ಲಿ ೧೯೭೮ರಲ್ಲಿ ಸಾಹಿತ್ಯ ರಸಗ್ರಹಣ ಶಿಬಿರವನ್ನು ಏರ್ಪಡಿಸಿದ್ದರು. ಮೂರು ವಿಚಾರ ಸಂಕಿರಣಗಳು ೧) ಬಾದಾಮಿಯಲ್ಲಿ 'ದಶಕದ ಕನ್ನಡ ಸಾಹಿತ್ಯ (೧೯೭೫) ೨) ಧಾರವಾಡ ಮತ್ತು ಮಂಗಳೂರುಗಳಲ್ಲಿ ಕ್ರಮವಾಗಿ ಕಿಟೆಲ್ ದತ್ತಿ ವಿಚಾರ ಸಂಕಿರಣವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. (೧೯೮೮-೮೯) ೩) ಧಾರವಾಡದಲ್ಲಿ ಸಂಕಿರಣವನ್ನು ಸಂಘಟಿಸಿದರು. (೧೯೮೯) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಅಂತರರಾಷ್ಟ್ರೀಯ ಕಿಟೆಲ್ ಸಮ್ಮೇಳನದ ಸಂದರ್ಭದಲ್ಲಿ ಕೋಶಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದರು.(೧೯೯೪), ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ -ವಾಸ್ತವ ; ಸಮ್ಮೇಳನವನ್ನು (೧೯೯೪), ಅಖಿಲ ಕರ್ನಾಟಕ ೨೨ನೆಯ ಜಾನಪದ ಸಮ್ಮೇಳನವನ್ನು (೧೯೯೪), ಶ್ರವಣಬೆಳಗೊಳ ಮತ್ತು ಧಾರವಾಡದಲ್ಲಿ ಸಂಸ್ಕೃತಿ ಸಮ್ಮೇಳನ(೨-೩)ವನ್ನು (೧೯೯೮-೧೯೯೯), ಬೆಳಗಾವಿಯಲ್ಲಿ 'ದಲಿತ ಕಥಾ ಕಮ್ಮಟ' (೧೯೯೬), ಧಾರವಾಡದಲ್ಲಿ 'ಸಾಹಿತ್ಯ ವಿಮರ್ಶೆ' ಕಮ್ಮಟವನ್ನು (೧೯೯೯), ಆರ್.ಸಿ. ಹಿರೇಮಠ ವ್ಯಾಖ್ಯಾನ ಮಾಲೆ, ಶ್ರೀ ಮೃತ್ಯುಂಜಯ ವ್ಯಾಖ್ಯಾನ ಮಾಲೆಯನ್ನು ೧೯೯೮-೯೯ರಲ್ಲಿ ಸಂಘಟಿಸಿದ್ದಾರೆ.

ಡಾ. ಬಿ. ಆರ್. ಹಿರೇಮಠರು ಅನೇಕ ಸಂಘ ಸಂಸ್ಥೆಗಳಿಗೆ ಸದಸ್ಯರಾಗಿ, ಅಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿದ್ದು ತಿಳಿದುಬರುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿದ್ಯಾರ್ಥಿಕೂಟದ ಅಧ್ಯಕ್ಷರಾಗಿ, ಸ್ನಾತಕೋತ್ತರ ಶಿಕ್ಷಕರ ಸಂಘದ ಕಾರ್ಯದರ್ಶಿಗಳಾಗಿ, ಕರ್ನಾಟಕ ವಿಶ್ವವಿದ್ಯಾಲಯದ ವಿದ್ಯಾಪರಿಷತ್ತಿನ ಸದಸ್ಯರಾಗಿದ್ದರು. ಅವರು ಭಾಗವಹಿಸಿದ ವಿಚಾರ ಸಂಕಿರಣಗಳು ಅಸಂಖ್ಯ, ನೀಡಿದ ಉಪನ್ಯಾಸಗಳೂ ಅನಂತವಾಗಿವೆ. 'ಆಕರ ಸಾಮಗ್ರಿಯಾಗಿ

ಹಾಡುಗಬ್ಬಗಳು, ನಾಗಚಂದ್ರನ ರಾಮಚಂದ್ರ ಚರಿತ ಪುರಾಣ, ಬಹುಶಿಸ್ತೀಯ ಅಧ್ಯಯನದ ಅವಶ್ಯಕತೆ, ಶಿಕ್ಷಣ ವ್ಯವಸ್ಥೆಯಲ್ಲಿ ಶಿಕ್ಷಕರ ಪಾತ್ರ, ಕವಿ ಕುಮಾರವ್ಯಾಸ, ಸಂಸ್ಕೃತಿ ಅಧ್ಯಯನದ ಆಯಾಮಗಳು ಮುಂತಾದ ಒಟ್ಟು ೩೦ ಉಪನ್ಯಾಸಗಳನ್ನು ಧಾರವಾಡ, ಬೆಳಗಾವಿ, ಕೋಳಿವಾಡ, ಸವದತ್ತಿ, ಬೆಂಗಳೂರು, ಮೈಸೂರು, ಗುಲಬರ್ಗಾ ಮುಂತಾದ ನಾಡಿನ ವಿವಿಧ ಪ್ರದೇಶಗಳಲ್ಲಿ ನೀಡಿದ್ದಾರೆ. ಇಂಗ್ಲೀಷ ಭಾಷೆಯ ಕಮ್ಮಟಗಳಿಗೂ, ವಿಚಾರ ಸಂಕಿರಣಗಳಲ್ಲಿ ಸಮ್ಮೇಳನಗಳಲ್ಲಿ ಭಾಗವಹಿಸಿದ್ದು ತಿಳಿದುಬರುತ್ತದೆ.

- **ಗೌರವ -ಪ್ರಶಸ್ತಿಗಳು :**

೧) ಮುಧೋಳ ತಾಲೂಕ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ವಾಧ್ಯಕ್ಷತೆಯ ಗೌರವ. (೧೯೯೮)

೨) ಬೀಳಗಿಯಲ್ಲಿ ಜರುಗಿದ ಬಾಗಲಕೋಟ ಜಿಲ್ಲಾ ಪ್ರಥಮ ಶರಣ ಸಾಹಿತ್ಯ ಸಮ್ಮೇಳನ ಸರ್ವಾಧ್ಯಕ್ಷತೆಯ ಗೌರವ (೨೦೦೦)

೩) ಮೈಸೂರಿನ ಶಿವರಾತ್ರೀಶ್ವರ ಧಾರ್ಮಿಕ ದತ್ತಿ ಪ್ರಶಸ್ತಿಯ ಗೌರವ. (೧೯೯೭)

ಡಾ. ಬಿ. ಆರ್. ಹಿರೇಮಠ ಅವರು ಈ ಎಲ್ಲ ಕಾರ್ಯಗಳನ್ನು ನಿರ್ವಹಿಸಿ ದಿನಾಂಕ ೧೨-೦೮-೨೦೦೭ರಂದು ಹೃದಯಾಘಾತದಿಂದ ಸಾರಸ್ವತ ಲೋಕವನ್ನು ತ್ಯಜಿಸಿದರು. ಅನಂತರ ಅವರ ಕುರಿತಾಗಿ ಅನೇಕ ಗೆಳೆಯರು, ಹಿತೈಷಿಗಳು, ಗುರುಗಳು, ನುಡಿನಮನಗಳನ್ನು ಶ್ರದ್ಧಾಂಜಲಿಯನ್ನು ಅರ್ಪಿಸಿದ್ದಾರೆ.

"ಜೀವನದಲ್ಲಿ ಯಶಸ್ಸಿನ ಎತ್ತರಕ್ಕೇರಲು ಕಾರಣ ಪರಿಶ್ರಮ, ಸತತ ದುಡಿಮೆ, ಶ್ರದ್ಧೆ, ಕಾರ್ಯಕ್ಷಮತೆ, ಸಕಾರಾತ್ಮಕ ಮನೋಭಾವ, ಪ್ರತಿಭೆ- ಬುದ್ಧಿವಂತಿಕೆಯ ಸದ್ಬಳಕೆ, ಅವಕಾಶಗಳ ಸದುಪಯೋಗದಿಂದ ಒಂದೊಂದೇ ಮೆಟ್ಟಿಲುಗಳನ್ನು ಏರುತ್ತಾ ಜೀವನದಲ್ಲಿ ಸಿದ್ಧಿಯನ್ನು ಸಾಧಿಸಿದವರು. ಕೆಲವನ್ನು ತಿಳಿದುಕೊಂಡು ನಡೆ, ಕೆಲವೊಂದು ನಂಬಿಕೊಂಡು ನಡೆ, ಎಲ್ಲರೊಡನೆಯೂ ಪ್ರೇಮದಿಂದ ನಡೆ ಎನ್ನುವುದನ್ನು ಮೈಗೂಡಿಸಿಕೊಂಡವರು. ಸತ್‌ಕ್ರಿಯೆ ಸತ್ ಸಂಕಲ್ಪಗಳ ಸಂಗಮವೇ ಕಾಯಕ ಎನ್ನುವ ಶರಣವಾಣಿಯನ್ನು ಆಚರಣೆಯಲ್ಲಿ ತಂದವರು. ಏರಿದ ಎತ್ತರ ಸಾಧಿಸಿದ ಸಾಧನೆಯ ಯಶೋಗಾಥೆ ಸ್ಪೂರ್ತಿಯಾಗುವಂತದ್ದು."[೩] ಎಂಬ ಶಶಿಕಲಾ ಎಸ್. ದಂಡಗಿಮಠ ಅವರ ಮಾತುಗಳು ಸ್ಮರಣೀಯವಾಗಿವೆ.

ಡಾ. ಬಿ. ಆರ್. ಹಿರೇಮಠ ಅವರದು ಅಪರೂಪದ ಜೀವನವಾಗಿತ್ತು. ಜೀವನವೇ ಸಾಹಿತ್ಯ ಸಾಧನೆ. ಸಾಧನೆಯೇ ಜೀವನ ಎಂಬಂತೆ ಸಾರ್ಥಕ ಬದುಕನ್ನು ನಿರ್ವಹಿಸಿದರು. ತಾಯಿಯ ನಿಧನ, ಸೋದರ ಮಾವನ ನಿಧನ, ಧರ್ಮಪತ್ನಿಯ ಅಗಲಿಕೆ, ಡಾ. ಬಿ. ಆರ್. ಅವರನ್ನು ಜರ್ಜರಿತಗೊಳಿಸಿದ್ದವು. 'ತೆರೆದ ಹೃದಯದ ಚಿಕಿತ್ಸೆ'ಯಾದಾಗಲೂ ಅವರ ಅಧ್ಯ ಯನ, ಅಧ್ಯಾಪನ

ನಿಂತಿರಲಿಲ್ಲ. ಸಂಶೋಧನೆಯನ್ನು ಒಂದು ವೃತದಂತೆ ಪೂರೈಸಿದ್ದರು. ಮೋಹದ ಮಡದಿಯ ಅಕಾಲಿಕ ನಿಧನ ಅವರನ್ನು ಘಾಸಿಗೊಳಿಸಿತು. ಅದರಿಂದ ಚೇತರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರಾಗಿರುವಾಗಲೇ ವಿಧಿವಶರಾದರು.

ಈ ರೀತಿಯಾಗಿ ಬಿ. ಆರ್. ಅವರು ಬೆಳೆದು ಬಂದ ಪರಿಸರ ಪೂರಕವಾಗಿರದಿದ್ದರೂ; ಪ್ರಯತ್ನದಿಂದಾಗಿ ವಿದ್ಯೆಯನ್ನು ಪಡೆದರು. ವೃತ್ತಿಯಲ್ಲಿ ಗುರುಗಳ ಪ್ರೇರಣೆ ಲಭಿಸಿದ್ದು, ಒಡನಾಡಿಗಳ ಪ್ರೋತ್ಸಾಹ ಅವರು ಸಂಶೋಧಕರಾಗಿ ಬೆಳೆದು ನಿಲ್ಲಲು ಕಾರಣವಾಯ್ತು. ಬಡತನದ ಬೇಗೆಯಲ್ಲಿ ಬೆಂದರೂ ಕಲಿಕೆಗಾಗಿ ಹಂಬಲಿಸಿದ್ದು ಇಂದಿನ ಜನಾಂಗಕ್ಕೆ ದಾರಿದೀಪವಾಗಿದೆ. ವೃತ್ತಿ ಜೀವನದ ಶಿಸ್ತು, ಅಧ್ಯಯನ, ಅಧ್ಯಾಪನಗಳು, ಸಂಶೋಧನೆಗಳು ಅವರು ನಡೆದು ಬಂದ ದಾರಿಗೆ ಕೈಗನ್ನಡಿ ಹಿಡಿಯುತ್ತವೆ. ಸಂಶೋಧಕನ ಬದುಕಿನ ಆಯಾಮಗಳು ಬರೀ ದಾಖಲೆಗಳಲ್ಲ ಸಂಶೋಧನೆಗೆ ಮುನ್ನುಡಿ. ಡಾ. ಬಿ. ಆರ್. ಹಿರೇಮಠ ಅವರು ಕವಿಯಾಗಿ, ಕಥೆಗಾರರಾಗಿ, ನಾಟಕಕಾರರಾಗಿ, ಇತಿಹಾಸಕಾರರಾಗಿ, ಶಾಸನ ತಜ್ಞರಾಗಿ, ಹಸ್ತಪ್ರತಿ ಪರಿಣತರಾಗಿ, ಗ್ರಂಥ ಸಂಪಾದಕರಾಗಿ, ನಾಮವಿಜ್ಞಾನಕಾರರಾಗಿ, ವಿಮರ್ಶಕರಾಗಿ, ಸಾಹಿತ್ಯದ ವಿಭಿನ್ನ ನೆಲೆಗಳಲ್ಲಿ ಗುರುತರವಾದ ಕೃಷಿಗೈದಿದ್ದಾರೆ. ಇವೆಲ್ಲವುಗಳಿಗಿಂತ ಸಂಶೋಧಕರಾಗಿ ಮಾಡಿರುವ ಸಾಧನೆ ಗಮನಾರ್ಹವಾಗಿದೆ.



**ಕೊನೆಟಿಪ್ಪಣಿಗಳು :**

೧. ಡಾ. ಎ. ಮುರಗೆಪ್ಪ : ಗೆಳೆಯ ಡಾ. ಬಿ.ಆರ್. ಹಿರೇಮಠ, ಸದ್ಧರ್ಮ ವಾಹಿನಿ ಸಂ.- ೨. ಸಂ -೨ ಪುಟ - ೪೨

೨. ಪ್ರೊ. ಬಿ.ವ್ಹಿ. ಗುಂಜೆಟ್ಟಿ: ಅಮರತೇಜ:ಪುಂಜ ಡಾ. ಬಿ.ಆರ್. ಹಿರೇಮಠ, ಸದ್ಧರ್ಮ ವಾಹಿನಿ ಸಂ.- ೨. ಸಂ -೨, ಪುಟ - ೪೫-೪೬

೩. ಡಾ. ಶಶಿಕಲಾ ಎಸ್. ದಂಡಗಿಮಠ : ಡಾ. ಆರ್.ಸಿ.ಹಿರೇಮಠ ಅವರ ಜೀವನ ಹಾಗೂ ಸಾಧನೆ - 'ಲೇಖಕರ ಮಾತು'

# ಅಧ್ಯಾಯ - ೩:
# ಸಂಶೋಧನೆ

## ೩.೦. ಪ್ರವೇಶ :

ಈ ಅಧ್ಯಾಯ ತುಂಬ ಮಹತ್ವದ್ದು. ಇದರಲ್ಲಿ ಡಾ. ಬಿ. ಆರ್. ಹಿರೇಮಠರ ಸಂಶೋಧನಾ ಕೃತಿಯಾದ "ಶಾಸನಗಳಲ್ಲಿ ಕರ್ನಾಟಕದ ವರ್ತಕರು" ಪಿಎಚ್.ಡಿ ಮಹಾಪ್ರಬಂಧವನ್ನು ಸ್ಥೂಲವಾಗಿ ಪರಿಚಯಿಸಲಾಗುವುದು. ಎಲ್ಲ ಮಗ್ಗಲುಗಳನ್ನು ಇದರಲ್ಲಿ ಚರ್ಚಿಸಲಾಗುವುದು. ಸಂಶೋಧನೆಯ ವಿಶೇಷತೆಗಳನ್ನು ವಿವರಿಸಲಾಗುವುದು. ಹೊಸ ಅಂಶಗಳನ್ನು ದಾಖಲಿಸಲಾಗುವುದು. ಹಾಗೇ ಶಾಸನಗಳನ್ನೇ ಮುಖ್ಯವಾಗಿರಿಸಿಕೊಂಡು ಸಂಶೋಧನೆ ಕೈಗೊಂಡಿರುವ ಕನ್ನಡದ ಮಹತ್ವದ್ದೆನಿಸುವ ಪಿಎಚ್.ಡಿ ಪ್ರಬಂಧಗಳನ್ನು ಸ್ಥೂಲವಾಗಿ ಅವಲೋಕಿಸಲಾಗುವುದು. ಡಾ. ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಡಾ. ಎಂ. ಬಿ. ನೇಗಿನಾಳವರ 'ಪ್ರಾಚೀನ ಕನ್ನಡಗಳಲ್ಲಿ ಭಾಷಿಕ ಅಧ್ಯಯನ, ಡಾ. ಬಿ. ವ್ಹಿ. ಶಿರೂರ ಅವರ 'ಶ್ರವಣ ಬೆಳ್ಗೊಳದ ಸಾಂಸ್ಕೃತಿಕ ಅಧ್ಯಯನ', ಡಾ. ಚನ್ನಕ್ಕ ಎಲಿಗಾರ ಅವರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ', ಡಾ. ಬಿ.ಎಸ್. ಶೇಠೆಯವರ 'ಕರ್ನಾಟಕದಲ್ಲಿ ಸತಿ ಪದ್ಧತಿ', ಡಾ. ಜೆ.ಎಂ. ನಾಗಯ್ಯ ಅವರ 'ಆರನೆಯ ವಿಕ್ರಮಾದಿತ್ಯನ ಶಾಸನಗಳು'ಇವುಗಳನ್ನು ಪ್ರಾತಿನಿಧಿಕವೆಂದು ಪರಿಭಾವಿಸಿ ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಯೊಂದಿಗೆ ಪರಸ್ಪರ ತೌಲನಿಕವಾಗಿ ಅಧ್ಯಯನಿಸಲಾಗುವುದು.

ಪ್ರಸ್ತುತ ಅಧ್ಯಾಯದಲ್ಲಿ ಗ್ರಂಥಸ್ಥರೂಪವಾಗಿ ಹೊರಬಂದಿರುವ ಡಾ. ಬಿ. ಆರ್. ಹಿರೇಮಠ ಅವರ ಶಾಸನ ಸಾಹಿತ್ಯ, ಹಸ್ತಪ್ರತಿ ಸಾಹಿತ್ಯ, ವಚನ ಸಾಹಿತ್ಯ, ಶರಣ ಸಾಹಿತ್ಯ ಮತ್ತು ಸಂಕೀರ್ಣ ಸಾಹಿತ್ಯ ಎಂಬ ಉಪ ಶೀರ್ಷಿಕೆಗಳ ಅಡಿಯಲ್ಲಿ ಸಂಶೋಧನಾ ಕೃತಿಗಳನ್ನು ವಿವೇಚಿಸಿ ವಿಶ್ಲೇಷಿಸಲಾಗುವುದು. ಆಯಾ ಕೃತಿಗಳ ವೈಶಿಷ್ಟ್ಯತೆ ಮತ್ತು ಅವು ಕಟ್ಟಿಕೊಟ್ಟಿರುವ ಹೊಸ ಅಂಶಗಳನ್ನು ದಾಖಲಿಸಲಾಗುವುದು.

**ಅ. ಪಿಎಚ್.ಡಿ ಮಹಾಪ್ರಬಂಧ :**

**೩:೧:೦ : ಡಾ. ಬಿ.ಆರ್. ಹಿರೇಮಠರ ಪಿಎಚ್.ಡಿ ಮಹಾಪ್ರಬಂಧ**

**ಶಾಸನಗಳಲ್ಲಿ ಕರ್ನಾಟಕದ ವರ್ತಕರು :**

ಡಾ. ಬಿ. ಆರ್. ಹಿರೇಮಠ ಅವರ ಪಿಎಚ್.ಡಿ ಮಹಾಪ್ರಬಂಧಕ್ಕೆ ಕನ್ನಡ ಸುವಿಖ್ಯಾತ ವಿದ್ವಾಂಸರಾದ ಡಾ. ಎಂ. ಎಂ. ಕಲಬುರ್ಗಿಯವರು ಮಾರ್ಗದರ್ಶಕರಾಗಿದ್ದಾರೆ. "ಶಾಸನಗಳಲ್ಲಿ ಕರ್ನಾಟಕದ ವರ್ತಕರು ಮಹಾಪ್ರಬಂಧ"ದಲ್ಲಿ ಮುಖ್ಯವಾಗಿ ಆರು ಅಧ್ಯಾಯಗಳಿವೆ ಮತ್ತು ಮೂರು ಅನುಬಂಧಗಳಿವೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗವು ಈ ಪುಸ್ತಕವನ್ನು ಪ್ರಕಟಿಸಿದೆ.

ಅಧ್ಯಾಯ ಒಂದು ಪೀಠಿಕೆಯಾಗಿದೆ. ಇದರಲ್ಲಿ ಅಧ್ಯಯನದ ಮಹತ್ವ, ಸ್ವರೂಪ, ವೃತ್ತಿ ಹಾಗೂ ವೃತ್ತಿ ಪ್ರಕಾರಗಳು ಉತ್ಪಾದಕ ವೃತ್ತಿ, ವಿನಿಮಯ ವೃತ್ತಿ, ಉತ್ಪಾದಕ ವಿನಿಮಯ ವೃತ್ತಿ ಹಾಗೂ ಇತರ ವೃತ್ತಿಗಳು ಎಂಬ ವಿವಿಧ ಉಪ ಶೀರ್ಷಿಕೆಗಳಡಿಯಲ್ಲಿ ಈ ಅಧ್ಯಾಯ ರಚಿಸಲಾಗಿದೆ. ಶಾಸನಗಳಲ್ಲಿ ಉಲ್ಲೇಖಿತಗೊಂಡ ವೃತ್ತಿಗಳನ್ನು ಆಧರಿಸಿ ಇಲ್ಲಿ ವಿಭಾಗ ಮಾಡಿಕೊಳ್ಳಲಾಗಿದೆ. "ಉತ್ಪಾದಕ, ವಿನಿಮಯ, ಉತ್ಪಾದಕ - ವಿನಿಮಯ ಮತ್ತು ಇತರ ವೃತ್ತಿಗಳು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಜನರಲ್ಲಿ ಶರೀರ ಶ್ರಮ, ಉತ್ಪಾದನಾಧಿಕ್ಯ, ಶ್ರಮಸಹಿಷ್ಣುತೆ, ವ್ಯವಹಾರ ಕುಶಲತೆಗಳನ್ನು ಬಿತ್ತಲು ಸಹಾಯಕವಾದವು. ಇವು ನಾಡಿನ ಮಟ್ಟವನ್ನು ರೂಪಿಸುವ, ರಕ್ಷಿಸುವ ಮೂಲಭೂತ ಅಂಶಗಳು. ಇಂಥ ವೃತ್ತಿಗಳ ಅಧ್ಯಯನದಿಂದ ನಾಡಿನ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜೀವನದ ಪರಿಚಯವಾಗುವುದು"[೧] ಎಂದು ವ್ಯಾಖ್ಯಾನಿಲಾಗಿದೆ. ಈ ಅಧ್ಯಾಯದಲ್ಲಿ ಮಾನವ ಜನಾಂಗ, ಆರ್ಯರ ವ್ಯಾಪಾರ ಪದ್ಧತಿ, ಜೈನಸಾಹಿತ್ಯ ಮುಂತಾದ ವ್ಯಾಪಾರಿ ಚಟುವಟಿಕೆಗಳನ್ನು ಆರಂಭದಲ್ಲಿ ಪ್ರಸ್ತಾಪಿಸಿದ್ದಾರೆ. ಶಾಸನಗಳಲ್ಲಿ ಉಲ್ಲೇಖಿತವಾದ ವೈದಿಕ, ಜೈನ, ಶೈವ ಮತದ ವರ್ತಕರನ್ನು, ವರ್ತಕ ಸಂಘಗಳನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ವರ್ತಕರ ಜೀವನದ ವಿವಿಧ ಮುಖಗಳ ಪರಿಚಯ ವರ್ತಕರ ಸಾಮಾಜಿಕ, ಧಾರ್ಮಿಕ, ವೀರ ಜೀವನ, ಅವರ ಕೌಟುಂಬಿಕ ಸಂಬಂಧ, ಹೊಂದಿದ್ದ ವಿಶಿಷ್ಟ ಅಧಿಕಾರ ಕರ್ತವ್ಯಗಳನ್ನು ವಿವರಿಸಿದ್ದಾರೆ. ವರ್ತಕರ ಮಧ್ಯದಲ್ಲಿ ಸಂಭವಿಸುತ್ತಿದ್ದ ಜಗಳ, ಅಧಿಕ ತೆರಿಗೆ ವಿರುದ್ಧ ಪ್ರತಿಭಟನೆ ಇತ್ಯಾದಿಗಳನ್ನು ದಾಖಲಿಸಿದ್ದಾರೆ.

ಅಧ್ಯಾಯ ಎರಡು ವರ್ತಕರು ಮತ್ತು ವರ್ತಕ ಪ್ರಕಾರಗಳು. ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡ ವರ್ತಕರು ಭಾರತದಲ್ಲಿ ವೈದಿಕ ಸಾಹಿತ್ಯ ಮೊದಲು ಮಾಡಿಕೊಂಡು ಇತಿಹಾಸದುದ್ದಕ್ಕೂ ಉಲ್ಲೇಖಿತರಾಗಿದ್ದಾರೆ. ಶಾಸನಗಳಲ್ಲಿಯೂ ೭-ಅನೇ ಶತಮಾನದಿಂದ ಇವರ ಪ್ರಸ್ತಾಪವಿದೆ. ಭಾರತೀಯ ವ್ಯಾಪಾರಿಗಳಂತೆ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವ್ಯಾಪಾರಿಗಳಲ್ಲಿಯೇ ಹಲವು ಪ್ರಕಾರಗಳಿದ್ದವು. ಅವುಗಳನ್ನು ಡಾ. ಬಿ. ಆರ್. ಹಿರೇಮಠ ಅವರು

ವಿನಿಮಯ ವರ್ತಕರು ಮತ್ತು ಉತ್ಪಾದಕ ವಿನಿಮಯ ವರ್ತಕರು ಎಂದು ಎರಡು ವಿಭಾಗಗಳಲ್ಲಿ ಅಧ್ಯಯನವನ್ನು ಕೈಗೊಂಡಿದ್ದಾರೆ. ಕೇವಲ "ವ್ಯಾಪಾರ ವೃತ್ತಿಯನ್ನು ಮಾಡುವವರು ಶುದ್ಧವರ್ತಕರು"[೨] ಇವರನ್ನು ವಿನಿಮಯ ವರ್ತಕರೆಂದು ಡಾ. ಬಿ. ಆರ್. ಹಿರೇಮಠರು ವ್ಯಾಖ್ಯಾನಿಸಿದ್ದಾರೆ. ಶೆಟ್ಟಿಬಣಜಿಗ ಪದಗಳ ನಿಷ್ಪತ್ತಿ ಕುರಿತಾಗಿ ವಿವೇಚಿಸಿದ್ದಾರೆ. ಶೆಟ್ಟಿಯರಲ್ಲಿ ವಿವಿಧ ಧರ್ಮಿಯರಿದ್ದರೂ ವಂಶ ಪಾರಂಪರ್ಯವಾಗಿ ನಡೆದುಬಂದ ಮಹಾಪ್ರಭು, ನಾಡಪ್ರಭು, ದಂಡನಾಯಕರು, ಸರ್ವಾಧಿಕಾರಿಗಳು, ಸಾಮಂತರಾಗಿ ರಾಜ್ಯಭಾರ ನಡೆಸಿರುವವರನ್ನು ಶಾಸನೋಕ್ತ ದಾಖಲೆಗಳ ಮುಖಾಂತರ ವಿವರಿಸಿದ್ದಾರೆ. "ಒಟ್ಟಿನಲ್ಲಿ ಮತ, ಮನೆತನ, ಅಧಿಕಾರಿಗಳೆಂಬ ವೈವಿಧ್ಯಮಯ ಹಾಗೂ ವರ್ಣಮಯ ಬದುಕು ನಡೆಸಿದ ಶೆಟ್ಟಿಯರು ವ್ಯಾಪಾರಿ ರಂಗದ ಸಮರ್ಥ ವಾರಸುದಾರಿಕೆ ವಹಿಸಿದ್ದರು."[೩] ಎಂದು ವಿಶ್ಲೇಷಿಸಿರುವುದು ಡಾ. ಬಿ.ಆರ್. ಹಿರೇಮಠ ಅವರ ಆಳವಾದ ಅಧ್ಯಯನಕ್ಕೆ ಕನ್ನಡಿ ಹಿಡಿಯುತ್ತದೆ. ಅದೇ ರೀತಿ ಶೆಟ್ಟಿಗುತ್ತ, ವಿಚೀಶೆಟ್ಟಿ, ಹೋಲಿಶೆಟ್ಟಿ, ಮಿಟ್ಟಿಮಾಚಿ ಶೆಟ್ಟಿ ಮೊದಲಾದವರು ಮಧ್ಯಕಾಲೀನ ಕರ್ನಾಟಕದ ಪ್ರಧಾನ ಸೆಟ್ಟಿಗುತ್ತರಾಗಿ ಕಂಡುಬರುತ್ತಾರೆ. ಸಂಕರಸೆಟ್ಟಿ, ರವಿಶೆಟ್ಟಿ, ರಾಮಿಶೆಟ್ಟಿ, ರುದ್ರಿಸೆಟ್ಟಿ, ಬೆನಕಿಸೆಟ್ಟಿ, ಚಂದಿಸೆಟ್ಟಿ ಮುಂತಾದವರು ಪ್ರಮುಖ ಸೆಟ್ಟಿಗುತ್ತರೆನಿಸಿಕೊಳ್ಳುತ್ತಾರೆ. ಇವರು ಆಯಾ ಗ್ರಾಮ, ಪಟ್ಟಣಗಳ ಸೆಟ್ಟಿ ಸಮಾಜವನ್ನು ಪ್ರತಿನಿಧಿಸುತ್ತಾರೆಂಬುದನ್ನು ದಾಖಲೆ ಸಹಿತ ವಿವರಿಸಿದ್ದಾರೆ.

**ನಕರ :**

ನಕರ ಪ್ರಾಚೀನ ಕನ್ನಡ ನಾಡಿನ ಮತ್ತೊಂದು ಪ್ರಕಾರ. ಇವರನ್ನು ಅಂಗಡಿ ಶೆಟ್ಟಿ ಎಂದು ಕರೆಯುತ್ತಿದ್ದರು. ನಕರರು ಜೈನ ಮತ್ತು ಶೈವ ಇವೆರಡು ಮತಗಳಲ್ಲಿ ಕಾಣಸಿಗುತ್ತಾರೆ. "ನಕರರು ಪಟ್ಟಣ ಪ್ರದೇಶದಲ್ಲಿದ್ದುಕೊಂಡು ಸತತ ಪರಿಶ್ರಮ, ಪ್ರಯತ್ನಗಳ ಮೂಲಕ ವ್ಯವಹಾರ ಕಾರ್ಯಗಳಿಗೆ ಜೀವ ತುಂಬಿದವರು. ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ಪಟ್ಟಣಗಳ ಸಮಗ್ರ ಆರ್ಥಿಕಾಭಿವೃದ್ಧಿಯಲ್ಲಿ ನಕರರ ಪಾತ್ರ ಗಮನಾರ್ಹವಾಗಿದ್ದಿತು. ಅಲ್ಲದೆ ಪಟ್ಟಣ ಜೀವನದ ಪ್ರಾಣ ಸ್ವರೂಪರಾಗಿ ಅವರು ಬಾಳಿದರು"[೪] ಎಂದು ಹೇಳಿರುವಲ್ಲಿ ನಕರರ ಜೀವನ ಕ್ರಮ ಹಾಗೂ ಪಟ್ಟಣ ಬದುಕಿನ ಕ್ರಮವನ್ನು ಮಾರ್ಮಿಕವಾಗಿ ವಿವೇಚಿಸಿದ್ದಾರೆ. ಅಲ್ಲದೆ ಸ್ತ್ರೀ ನಕರ ಸಮೂಹವನ್ನು ಗುರುತಿಸುವ ಒಂದು ಶಾಸನದ ಉಲ್ಲೇಖವಿದೆ. ಉಡುಪಿ ಜಿಲ್ಲೆಯ ಕೋಟಕೇರಿ ತಾಲೂಕಿನಲ್ಲಿ ದೊರೆತ ಶಾಸನ (ಕಾಲ ಕ್ರಿ.ಶ. ೧೧೫೫) "ಆ ಊರನಾಳ್ವ ಪಾಂಡ್ಯದೇವಿಯ ನಕರ ಸಮೂಹ"[೫] ಎಂಬ ಅಪರೂಪದ ಉಲ್ಲೇಖವಿದೆ. ಸಂಶೋಧಕರ ಸೂಕ್ಷ್ಮ ನಿರೀಕ್ಷಣೆಗಿದು ಸಾಕ್ಷಿಯಾಗಿದೆ.

**ಮುಮ್ಮುರಿದಂಡ :**

ಮುಮ್ಮುರಿದಂಡ ಮಧ್ಯಕಾಲೀನ ಕರ್ನಾಟಕದ ಪ್ರಮುಖ ವರ್ತಕ ಪ್ರಕಾರವಿದು. ಮುಮ್ಮುರಿದಂಡರು ವ್ಯಾಪಾರಿ ಧರ್ಮಕ್ಕೆ ಬದ್ಧರಾದುದರಿಂದ ಇವರನ್ನು ಸಮಯ ಮುಮ್ಮುರಿದಂಡ

ಎಂದು ಶಾಸನಗಳು ಉಲ್ಲೇಖಿಸಿರುವುದನ್ನು ದಾಖಲಿಸಿದ್ದಾರೆ. "ನಾಡಿನುದ್ದಗಲಕ್ಕೂ ಸಂಚರಿಸಿ ವ್ಯಾಪಾರ ನಡೆಸಿದವರು ಮುಮ್ಮುರಿದಂಡರು ಕನ್ನಡಿಗರ ವ್ಯಾಪಾರ ಪ್ರವೃತ್ತಿಯನ್ನು ಹಸಿರಾಗಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ" ಎಂಬುದು ಗಮನಾರ್ಹವಾಗಿದೆ.

**ವಡ್ಡ ವ್ಯವಹಾರಿ :**

ವಡ್ಡವ್ಯವಹಾರಿ ಎಂದರೆ ಹಿರಿಯ ವ್ಯಾಪಾರಿ ಎಂದರ್ಥ. ವಡ್ಡವ್ಯವಹಾರಿಗಳನ್ನು ಚಕ್ರವರ್ತಿ ನೇಮಿಸುತ್ತಿದ್ದನು. ಅನುವಂಶಿಕವಾಗಿ ಇದು ನಡೆದುಕೊಂಡು ಬರುತ್ತಿತ್ತು. ಗೋತ್ರಗಳನ್ನು ಹಚ್ಚಿಕೊಳ್ಳುತ್ತಿದ್ದರು. ಅರಸನ, ಸಾಮಂತ, ದಂಡನಾಯಕರಾಗಿರುತ್ತಿದ್ದರು. ರಾಜಶ್ರೇಷ್ಠಿಗಳಾಗಿ, ಮುದ್ರಾಪಣ ಕಮ್ಮಟದ ಒಡೆತನವುಳ್ಳವರಾಗಿದ್ದರು. ಚಕ್ರವರ್ತಿಗಳು ಮತ್ತು ಸಾಮಂತರ ಭಂಡಾರದ ಸಂಪತ್ತನ್ನು ಹೆಚ್ಚಿಸುವುದು ಇವರ ಆದ್ಯ ಕರ್ತವ್ಯವಾಗಿತ್ತು. ವಡ್ಡ ವ್ಯವಹಾರಿಗಳ ಕುರಿತಾಗಿ ೧೯ ಮುಖ್ಯ ವಿಚಾರಗಳನ್ನು ಇದರಲ್ಲಿ ವಿವರಿಸಿದ್ದಾರೆ. ಅದೂ ಅಲ್ಲದೆ ವಡ್ಡವ್ಯವಹಾರಿಗಳು ಸೆಟ್ಟಿ, ಸೆಟ್ಟಿಗುತ್ತರು, ನಕರ, ಮುಮ್ಮುರಿದಂಡರು ಒಬ್ಬರಿಂದ ಮತ್ತೊಬ್ಬರು ಪರಸ್ಪರ ಹೇಗೆ ಭಿನ್ನ ವಿಭಿನ್ನವಾಗಿದ್ದಾರೆಂಬ ಸೂಕ್ಷ್ಮ ಸಂಗತಿಗಳನ್ನು ಶ್ರೀಯುತರು ಸ್ಪಷ್ಟವಾಗಿ ಕಾಣಿಸಿದ್ದಾರೆ. ಇದು ಅವರ - ಆಳವಾದ ಅಧ್ಯಯನದ ಶಿಸ್ತನ್ನು ತಿಳಿಸುತ್ತದೆ. ಹಾಗೆಯೇ ವಾಹನಗಳ ಮೇಲೆ ತಮ್ಮ ವ್ಯಾಪಾರಿ ಸರಕನ್ನು ಹೇರಿ ಒಂದೂರಿನಿಂದ ಮತ್ತೊಂದೂರಿಗೆ ಸಾಗಿಸಿ ವ್ಯಾಪಾರ ಕೈಗೊಳ್ಳುವವರ ವಿವರಗಳನ್ನು ನೀಡಿದ್ದಾರೆ. ಉದಾ :ಗವರೆ

**ಗವರೆ :**

ಗವರೆ ಎಂದರೆ ಕತ್ತೆ ಮೊದಲಾದ ಪ್ರಾಣಿಗಳ ಮೇಲೆ ವೀಳೆದೆಲೆ ಹೇರಿಕೊಂಡ ಊರಿಂದೂರಿಗೆ ಅಲೆಯುತ್ತ ವ್ಯಾಪಾರ ಮಾಡುವ ವರ್ತಕ ಪ್ರಕಾರವಿದು. ಹೀಗೆ ಗವರೆ, ಗಾತ್ರಿಗ, ಗಾತ್ರಿಗವರೆ, ತಂಬುಲಿಗ ಸಾಸಿರ್ವರು ಮುಂತಾದ ವರ್ತಕರನ್ನು ಪರಿಚಯಿಸಿದ್ದಾರೆ.

ಅದೇ ರೀತಿ ಹಲರು, ಯಳಮೆ, ಸಾಲಿಕೆ, ಬಲ್ಲಾಳು ಹೊರಗಿನವರು, ನಾನಾದೇಶಿ, ಉಭಯದೇಶಿ ಮೊದಲಾದ ವ್ಯಾಪಾರಿ ಸಂಘಗಳನ್ನು ಉಲ್ಲೇಖಿಸಿದ್ದಾರೆ. ತುಂಬ ಸುದೀರ್ಘವಾದ ಅಧ್ಯಯನವಿದು. ಪ್ರಸ್ತುತ ವಿನಿಮಯ ವರ್ತಕರು ಅತ್ಯಂತ ಮಹತ್ವದ ಭಾಗವಾಗಿದ್ದು ೨೦ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದರಲ್ಲಿ ೮೧೧ ಶಾಸನಗಳನ್ನು ಉಲ್ಲೇಖಿಸಿದ್ದಾರೆ. ಇದು ಸಂಶೋಧಕರ ವಿಸ್ತೃತವಾದ ಅಧ್ಯಯನ, ದಣಿವರಿಯದ ದುಡಿಮೆ ಸತತ ಚಿಂತನೆಗೆ ಶ್ರೇಷ್ಠ ನಿದರ್ಶನವಾಗಿದೆ. ಇದೇ ಅಧ್ಯಾಯದ ೨ನೇ ಭಾಗದಲ್ಲಿ ವರ್ತಕ, ವಿನಿಮಯ-ವರ್ತಕರ ಕುರಿತಾಗಿ ವಿವರಿಸಿದ್ದಾರೆ. ತಾವು ತಯಾರಿಸಿದ ಉತ್ಪನ್ನಗಳನ್ನು ತಾವೇ ಮಾರಾಟ ಮಾಡುವವರಿಗೆ ಉತ್ಪಾದಕ -ವಿನಿಮಯ ವರ್ತಕರೆಂದು

ವ್ಯಾಖ್ಯಾನಿಸಿದ್ದಾರೆ. ಮುಖ್ಯವಾಗಿ ಗುಡಿಕೈಗಾರಿಕೆಗಳನ್ನು ಲಕ್ಷದಲ್ಲಿರಿಸಿಕೊಂಡು ಮಾಡಿದ ವ್ಯಾಖ್ಯಾನವಿದು. ಕಂಬಾರ, ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಮೇದಾರ, ಕೃಷಿಕರು ಮೊದಲಾದವರು ಈ ಭಾಗದಲ್ಲಿ ಸೇರುತ್ತಾರೆ, ಉತ್ಪಾದಕ ವಿನಿಮಯ ವರ್ತಕರು ಹೆಚ್ಚಾಗಿ ಕಿರುಕುಳ ವ್ಯಾಪಾರ ಮಾಡುತ್ತಿದ್ದರು. ಆದ್ದರಿಂದ ಅವರು ಅಷ್ಟೊಂದು ಪ್ರಭಾವಶಾಲಿಗಳೂ ಆಗಿರಲಿಲ್ಲ. ಪ್ರಮುಖರೂ ಆಗಿರಲಿಲ್ಲ. ಸಮಾಜದಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತಿರಲಿಲ್ಲವೆಂಬುದನ್ನು ಇದರಲ್ಲಿ ನಿರೂಪಿಸಿದ್ದಾರೆ.

ಅಧ್ಯಾಯ ಮೂರು - ವರ್ತಕ ಸಂಘಗಳು : ವೃತ್ತಿಗಳು ಹುಟ್ಟಿಬೆಳೆದ ತರುವಾಯ ಸಂಘಗಳು ರೂಪುಗೊಂಡಿರಬಹುದೆಂದು ವಿಶ್ಲೇಷಿಸುತ್ತ ಕರ್ನಾಟಕದಲ್ಲಿ ಎಲ್ಲ ವೃತ್ತಿ ಸಂಘಗಳು ಸಂಘಗಳಾಗಿ ರೂಪುಗೊಳ್ಳಲಿಲ್ಲ. ಕೆಲವೊಂದು ಪ್ರಮುಖ ವೃತ್ತಿಗಳು ಮಾತ್ರ ಸಂಘಗಳನ್ನು ಸಂಯೋಜಿಸಿಕೊಂಡವು. "ಸಮಾನ ವೃತ್ತಿಯವರು ತಮ್ಮ ಸಮಾಜ ಅಥವಾ ಸಮುದಾಯದ ಜನರೊಂದಿಗೆ ಸೇರಿಕೊಂಡು ಕಟ್ಟಿದ ಶ್ರೇಣಿಗಳೇ ಸಂಘಗಳು."[2] ಸಾಮಾಜಿಕ ವ್ಯವಸ್ಥೆಯಲ್ಲಿ ಸಹಕಾರಕ್ಕಿರುವ ಮಹತ್ವವನ್ನು ಮನಗಂಡು ಅಂದಿನ ಸಮಾಜ, ಸಂಘ ಮತ್ತು ಸಂಘಟನೆಯನ್ನು ಹುಟ್ಟುಹಾಕಿದರು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಸಂಘಗಳಿಗೆ ಶ್ರೇಣಿ, ಗಣ, ಪುಂಗ, ವ್ರಾತ ಮುಂತಾದ ಪರ್ಯಾಯ ಪದಗಳನ್ನು ಬಳಸಿದ್ದಾರೆ, ಎಂಬುದನ್ನು ವಿವರಿಸಿ; ಮನು, ಯಾಜ್ಞವಲ್ಕ, ನಾರದ, ಪಾಣಿನಿ, ಕೌಟಿಲ್ಯರ ಕೃತಿಗಳು, ರಾಮಾಯಣ, ಮಹಾಭಾರತ, ಮಹಾವಂಶ, ಹರ್ಷಚರಿತೆ ಮೊದಲಾದ ಗ್ರಂಥಗಳಲ್ಲಿ ಸಂಘ ಪದವನ್ನು ಬಳಸಿರುವುದನ್ನು ಪ್ರಸ್ತಾಪಿಸಿದ್ದಾರೆ. ಕನ್ನಡ ಸಾಹಿತ್ಯ ಹಾಗೂ ಶಾಸನಗಳಲ್ಲಿ ಸಂಘ ಶಬ್ದವು ಶ್ರೇಣಿ ಎಂದೇ ಹೆಚ್ಚಾಗಿ ಪ್ರಯೋಗಗೊಂಡಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಶಾಸನಗಳಲ್ಲಿ ಸಂಘಕ್ಕೆ ಪರ್ಯಾಯವಾಗಿ ಕೊತ್ತಳಿ, ಒಕ್ಕಲು, ಹಿಟ್ಟು, ಸಮಯ, ಸೇಣಿ, ಸಂಖ್ಯೆ ಮುಂತಾದ ಪದಗಳೇ ಹೆಚ್ಚಾಗಿ ಬಳಕೆಯಾಗಿವೆ ಎಂಬುದನ್ನು ಸ್ಪಷ್ಟಗೊಳಿಸಿದ್ದಾರೆ. ಸಂಘಗಳ ರಚನಾ ಸ್ವರೂಪ, ಕಾರ್ಯ ನಿರ್ವಹಣೆ, ವಾಣಿಜ್ಯ ಲಾಭ, ಸಾಮಾಜಿಕ ಗೌರವ ಇತ್ಯಾದಿಗಳನ್ನು ಶಾಸನದ ನೆರವಿನಿಂದ ವಿವರಿಸಿದ್ದಾರೆ. ಶಾಸನದಲ್ಲಿ ಕಂಡುಬರುವ ಸಂಘಗಳನ್ನು ಉತ್ಪಾದಕ ಸಂಘ, ವಿನಿಮಯ ಸಂಘ, ಉತ್ಪಾದಕ ವಿನಿಮಯ ಸಂಘ ಇತರ ಸಂಘಗಳೆಂದು ವರ್ಗೀಕರಿಸಿದ್ದಾರೆ. ಅದು ಉತ್ಪಾದಕ ವೃತ್ತಿಯವರು ರಚಿಸಿಕೊಂಡ ಅರವತ್ತೊಕ್ಕಲು, ಗಳೆ ಮೂನೂರ್ವರು, ಮೇಳಿ ಸಾಸಿರ್ವರು, ಐನೂರು-ನಾಲ್ವರು, ಎಲೆಯ ಬೋಜಂಗರು, ಉಗುರು ಮೂನೂರ್ವರು ಅಥವಾ ಉಳಿಯ ಮೂನೂರ್ವರು, ಕಲ್ಕುಟ್ಟಿಗಗೊತ್ತಳಿ ಎಂಬ ಉತ್ಪಾದಕ ಸಂಘಗಳನ್ನು ಇದರಲ್ಲಿ ವಿವರಿಸಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ವಿನಿಮಯ ಸಂಘ ಮತ್ತು ಉತ್ಪಾದಕ ವಿನಿಮಯ ಸಂಘಗಳ ಕುರಿತಾಗಿಯೂ ವಿಸ್ತೃತವಾಗಿ ಚರ್ಚಿಸಿದ್ದಾರೆ. ವಿನಿಮಯ ಸಂಘದಲ್ಲಿ ಅಯ್ಯಾವೊಳೆ ಐನೂರ್ವರು, ಪದ ನಿಷ್ಪತ್ತಿ, ಕಾಲ, ಪ್ರದೇಶ, ದೈವ-ಧರ್ಮ, ಶಾಸ್ತ್ರ-

ಚಿನ್ನೆಗಳು, ಪ್ರಶಸ್ತಿ ಮೊದಲಾದವುಗಳನ್ನು ವಿಶ್ಲೇಷಿಸಿದ್ದಾರೆ. ಗವರೆಗಳು, ತಂಬುಲಿಗ, ಸಾಸಿರ್ವರು, ಹಂಜಮಾನ ಮುಂತಾದ ವರ್ತಕ ಸಂಘಗಳ ಕುರಿತಾಗಿ ನಿಖರವಾದ ಮಾಹಿತಿ ಒದಗಿಸಿದ್ದಾರೆ.

ಉತ್ಪಾದಕ ವಿನಿಮಯ ಸಂಘದಲ್ಲಿ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಲವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆಸಾಸಿರ್ವರು, ಚಿಪ್ಪಿಗಗೊತ್ತಳಿ, ಕುರುಬಸೆಣಿ, ಕಂಚಗಾರಗೊತ್ತಲಿಗಳು ಈ ಉತ್ಪಾದಕ ವಿನಿಮಯ ಗುಂಪಿನಲ್ಲಿ ಸೇರಿಸಿ ಆ ಗುಂಪುಗಳ ಕುರಿತಾಗಿ ಒಂದೊಂದಾಗಿ ಪರಿಶೀಲಿಸಿದ್ದಾರೆ. ಉತ್ಪಾದಕ ವಿನಿಮಯ ಸಂಘಗಳ ಕಾರ್ಯ ಚಟುವಟಿಕೆಗಳು, ಜವಾಬ್ದಾರಿ, ಸಮಾಜದಲ್ಲಿ ಅವರಿಗಿರುವ ಸ್ಥಾನಮಾನ ಮುಂತಾದವುಗಳನ್ನು ವಿವೇಚಿಸಿದ್ದಾರೆ. ಪ್ರಸ್ತುತ ಮೂರನೆಯ ಅಧ್ಯಾಯವನ್ನು ೫೭೮ ಶಾಸನಗಳನ್ನು ಬಳಸಿಕೊಂಡು ಕಟ್ಟಿಕೊಟ್ಟಿದ್ದಾರೆ. ಇದು ವಿಸ್ತೃತ ಕ್ಷೇತ್ರಕಾರ್ಯ ಆಳವಾದ ಶಾಸನಗಳ ಪರಿವೀಕ್ಷಣೆಗಳಿಗೆ ಉತ್ತಮ ಉದಾಹರಣೆಯಾಗಿದೆ.

ಅಧ್ಯಾಯ ನಾಲ್ಕು- ವರ್ತಕರ ವ್ಯಾಪಾರ ಸ್ವರೂಪ-ಅಧಿಕಾರ ಸ್ವರೂಪ : ಪ್ರಸ್ತುತ ಅಧ್ಯಾಯದಲ್ಲಿ ಮುಖ್ಯವಾಗಿ ಎರಡು ವಿಭಾಗಗಳಿವೆ. ಅಧ್ಯಯನದ ಅನುಕೂಲಕ್ಕಾಗಿ ಮಾಡಿಕೊಂಡ ವಿಭಾಗಗಳಿವು. ವರ್ತಕರ ವ್ಯಾಪಾರ ಸ್ವರೂಪದ ಅಧ್ಯಯನಕ್ಕಾಗಿ ಸಂತೆ, ಅಂಗಡಿ, ಪೇಟೆ, ಪಟ್ಟಣ, ವ್ಯಾಪಾರ ಎಂದು ಐದು ವಿಭಾಗಗಳನ್ನು ಮಾಡಿಕೊಂಡು ಪ್ರತಿಯೊಂದು ವಿಭಾಗದ ವಿಶೇಷತೆಯನ್ನು ಸಾಧಾರಣವಾಗಿ ನಿರೂಪಿಸಲಾಗಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಮುಖ್ಯ ವ್ಯಾಪಾರ ವೇದಿಕೆ ಸಂತೆಯಾಗಿತ್ತು. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಔದ್ಯೋಗಿಕ ಪ್ರಗತಿ ಸಾಧಿಸುವಲ್ಲಿ ಸಂತೆ ಮಹತ್ವದ ಪಾತ್ರವನ್ನು ವಹಿಸಿತ್ತು. ಸಂತೆ, ಸಂತೆ ನಡೆಯುವ ದಿನ, ಸ್ಥಳ, ಸಂತೆ ನಡೆಯುವ ಪ್ರಮುಖ ವಾರಗಳು ಮುಂತಾದವುಗಳನ್ನು ಪ್ರಸ್ತಾಪಿಸಿ; 'ಧರ್ಮ ಸಂತೆ' ಎಂಬುದನ್ನು ವಿಶೇಷವಾಗಿ ವಿವೇಚಿಸಿದ್ದಾರೆ. ಹೊಸದಾಗಿ ಪ್ರಾರಂಭವಾದ ಸಂತೆಗೆ ವ್ಯಾಪಾರಿಗಳನ್ನು ಆಕರ್ಷಿಸಲು ಸರಕುಗಳಿಗೆ ಸುಂಕದ ರಿಯಾಯತಿ ನೀಡುತ್ತಿರುವುದನ್ನು ಇದರಲ್ಲಿ ದಾಖಲಿಸಿದ್ದಾರೆ. ಸಂತೆಯಲ್ಲಿ ವಸ್ತುಗಳಿಗೆ ವಿಧಿಸುತ್ತಿದ್ದ ಸುಂಕ, ಅದರ ವಿಧಾನಗಳು, ಸರಕುಗಳ ತೂಕ, ತುಂಬಿದ ವಸ್ತುವಿನ ಗಾತ್ರ, ಸಾಗಿಸುವ ವಾಹನ, ಸರಕಿನ ಬೆಲೆ, ಅಳತೆ ಪ್ರಮಾಣ ಹಾಗೂ ರಾಶಿಗಳ ಮೇಲಿಂದ ಸುಂಕವನ್ನು ನಿಗದಿಪಡಿಸುತ್ತಿದ್ದರು. ವರ್ತಕರು ಸಂತೆಯ ಸುಂಕದೊಂದಿಗೆ ಮಾರಾಟ ಸುಂಕವನ್ನು ಸಲ್ಲಿಸಬೇಕಾಗುತ್ತಿತ್ತು. ವಸ್ತುವಿನ ಮಾರಾಟದ ಪ್ರಮಾಣದ ಮೇಲೆ ಸುಂಕ ನಿರ್ಣಯವಾಗುತ್ತಿರುವುದನ್ನು ಶಾಸನಗಳ ಆಧಾರದಿಂದ ಸ್ಪಷ್ಟಪಡಿಸಿದ್ದಾರೆ.

ಸಂತೆ ಜರುಗುವ ಪ್ರಧಾನ ವ್ಯಾಪಾರಿ ಕೇಂದ್ರಗಳನ್ನು ಶಾಸನಗಳನ್ನು ಆಧರಿಸಿ ದಾಖಲಿಸಿದ್ದಾರೆ.* ಇದು ಸಂಶೋಧಕರ ತಲಸ್ಪರ್ಶಿ ಅಧ್ಯಯನ ಮತ್ತು ಸೂಕ್ಷ್ಮ ಪರಿವೀಕ್ಷಣೆಗೆ ಉತ್ತಮ ನಿದರ್ಶನವಾಗಿದೆ. ಇದೂ ಅಲ್ಲದೆ ಸರಕು, ಸರಕಿನ ವಿವರಗಳು ಅಳತೆ, ತೂಕ, ಮಾಪನಗಳು, ಎಣಿಕೆ, ನಾಣ್ಯ, ವಿನಿಮಯ ವಸ್ತುಗಳು ಮೊದಲಾದವುಗಳನ್ನು ವಿವರಿಸಿದ್ದಾರೆ. ಮುಖ್ಯವಾಗಿ ಪ್ರಾಚೀನ ಕರ್ನಾಟಕದ ಅಳತೆಗಳಾದ

ಗಿದ್ದ, ಸೊಲಗೆ, ಮಾನ, ಬಳ್ಳ, ಕೊಳಗ, ಖಂಡುಗ ಮುಂತಾದ ಅಳತೆಗಳನ್ನು ಕಟ್ಟಿಕೊಟ್ಟಿದ್ದಾರೆ. ಸಮಕಾಲೀನ ಸಂದರ್ಭದಲ್ಲಿ ಈ ಅಳತೆಗಳು ಬಳಕೆಯಲ್ಲಿಲ್ಲ. ಸಾಂಸ್ಕೃತಿಕ ಸಂದರ್ಭದಲ್ಲಿ ಇದು ಅತ್ಯಂತ ಮಹತ್ವದ ಅಂಶವಾಗಿದೆ. ಹಣ್ಣು-ಹಂಪಲ, ತೆಂಗಿನಕಾಯಿ, ಕಬ್ಬು, ಅಡಕೆ, ಬೆಲ್ಲದಚ್ಚು ಮುಂತಾದವುಗಳು ಎಣಿಸಿಕೊಡುವ ವಸ್ತುಗಳು. ವೀಳ್ಯೆದೆಲೆ, ಕಾಯಿಪಲ್ಲೆ, ಈರುಳ್ಳಿ, ಹುಲ್ಲು ಮುಂತಾದವುಗಳು ಸೂಡುಗಳಲ್ಲಿ ಮಾರುವ ವಸ್ತುಗಳಾಗಿದ್ದವು ಎಂಬುದನ್ನು ವಿವರಿಸುತ್ತಾರೆ. ಇಲ್ಲಿ ಖಚಿತತೆ ಎದ್ದು ಕಾಣುತ್ತದೆ.

ತೂಕದಲ್ಲಿ ಕೂಡಾ ಭಾರ, ಮೊಳವೆ, ಪೊಲ ಬಿಸಿಗೆ, ಕೊಡಿಗೆ, ಬೆಲ್ಲಳಿಗೆ ಮುಂತಾದ ತೂಕದ ವಿಶೇಷ ಪಾರಿಭಾಷಿಕ ಪದಗಳಿವೆ. ತೂಕದ ಸಂದರ್ಭದಲ್ಲಿ ಸುವರ್ಣ, ಕರ್ಷ, ಪಲ, ಬಿಸಿಗೆ, ತೊಲೆ, ಭಾರ ಇವು ತೂಕದ ಮಾನ ದಂಡಗಳಾಗಿದ್ದವು. ಹಾಗೆ ವ್ಯಾಪಾರದಲ್ಲಿ ಚಲಾವಣೆಗೊಳ್ಳುತ್ತಿದ್ದ ನಾಣ್ಯಗಳನ್ನು ಹೊನ್ನ, ಗದ್ಯಾಣ, ಹಾಗ, ಪಣ, ವೀಸ, ಬೇಳೆ, ಅಡ್ಡ ಕಾಣಿ, ಕಾಗಿಣಿ, ತಾರ, ದ್ರಮ್ಮ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ನಾಣ್ಯಗಳಿಗೆ ಸಂಬಂಧಿಸಿದ ಕೋಷ್ಟಕವು ಇಲ್ಲಿದೆ.

೪ ಕಾಣಿ - ೧ ವೀಸ

೫ ವೀಸ - ೧ ಹಾಗ

೪ ಹಾಗ - ೧ ಪಣ

೧೦ ಪಣ - ೧ ಗದ್ಯಾಣ

ಈ ನಾಣ್ಯಗಳ ಪರಸ್ಪರ ಸಂಬಂಧವನ್ನು ವಿವರಿಸುವ ಮತ್ತೊಂದು ಕೋಷ್ಟಕವು ಇಲ್ಲಿದೆ.

೧ ಗದ್ಯಾಣ - ೧೦ ಪಣ

೧ ಪಣ - ೨೦ ವೀಸ

೧ ಪಣ - ೪ ಹಾಗ

೧ ಹಾಗ - ೨ ಬೇಳೆ

೧ ಪಣ - ೬೪ ಕಾಣಿ

೧ ೧/೨ ತಾರ - ೧ ಕಾಣಿ

ಹೀಗೆ ಅಂದಿನ ಕಾಲದಲ್ಲಿ ಚಲಾವಣೆಯಲ್ಲಿರುವ ವಿವಿಧ ನಾಣ್ಯಗಳು ಹಾಗೂ ಅವುಗಳ ಮುಖ ಬೆಲೆಯನ್ನು ದಾಖಲಿಸಿದ್ದು ಅತ್ಯಂತ ಪ್ರಯೋಜನಕಾರಿಯಾಗಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಾಂಸ್ಕೃತಿಕ ಜೀವನವನ್ನು ಪರಿಚಯಿಸಿಕೊಳ್ಳಲು ಈ ಅಧ್ಯಾಯ ಪ್ರಮಾಣಭೂತವಾಗಿ ನಿಲ್ಲುತ್ತದೆ. ಹೀಗಾಗಿ ಇದಕ್ಕೆ ಸಾಂಸ್ಕೃತಿಕ ಮಹತ್ವವಿದೆ.

ಅಧ್ಯಾಯದ ೪ನೆಯ ಭಾಗ ವರ್ತಕರ ಅಧಿಕಾರ ಸ್ವರೂಪ : ಪ್ರಾಚೀನ ಕರ್ನಾಟಕದಲ್ಲಿ ಪಟ್ಟಣದ ಆಡಳಿತವನ್ನು ನಿರ್ವಹಿಸಲು ಕೆಲವು ಪ್ರಮುಖ ವ್ಯಕ್ತಿಗಳಿರುತ್ತಿದ್ದರು. ಪಟ್ಟಣ ಸ್ವಾಮಿ, ಮಂಡಳ ಸ್ವಾಮಿ, ನಾಡ ಸ್ವಾಮಿಗಳೆಂದು ಅವರ ವಿವರವನ್ನು ಶಾಸನಗಳು ಒದಗಿಸಿವೆ. ಪಟ್ಟಣದ ಆಡಳಿತ ಪ್ರಮುಖವಾಗಿ ಪಟ್ಟಣಸ್ವಾಮಿ, ಮಂಡಳಸ್ವಾಮಿ, ನಾಡಸ್ವಾಮಿ ಇವರೇ ಹೆಚ್ಚಾಗಿ ನಿರ್ವಹಿಸುತ್ತಿದ್ದರು. ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಪಟ್ಟಣಸ್ವಾಮಿ ಎಂಬುದು ಒಂದು ಹುದ್ದೆ. ಆಯಾ ಪ್ರದೇಶ ಸಾಮಂತರು ಗೌಡ, ಪ್ರಭು ವರ್ತಕರೊಂದಿಗೆ ಕೂಡಿ ಪಟ್ಟಣ ಸ್ವಾಮಿಯನ್ನು ನೇಮಿಸುತ್ತಿದ್ದರು.

ಮಂಡಳಸ್ವಾಮಿ, ಪಟ್ಟಣಸ್ವಾಮಿ ಸ್ಥಾನಕ್ಕಿಂತ ಮಂಡಳಸ್ವಾಮಿ ಸ್ಥಾನ ಉನ್ನತವಾಗಿದ್ದಿತು. ಪಟ್ಟಣಸ್ವಾಮಿ, ಮಂಡಲಸ್ವಾಮಿ ಇಬ್ಬರಿಗಿಂತ ಹಿರಿದಾದ ಸ್ಥಾನ ನಾಡಸ್ವಾಮಿಗಿತ್ತು. ಸಮರ್ಥ ನಾಡಿನಲ್ಲಿ ಪಟ್ಟಣ ಕಟ್ಟಿಸುವ ಸಂತೆ ಕೂಡಿಸುವ ಜವಾಬ್ದಾರಿ ಇವರದಾಗಿತ್ತು. ಈ ಮೂರು ಸ್ಥಾನಗಳು ನಾಡಿನ ಆರ್ಥಿಕ ಚಟುವಟಿಕೆಗಳನ್ನು ನಿಯಂತ್ರಿಸುವ ಮತ್ತು ಅಧಿಕಾರ ವಿಕೇಂದ್ರೀಕರಣವನ್ನು ನಿರ್ದೇಶಿಸುತ್ತವೆ. ಈ ಮೂವರು ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ರಾಜಾ-ಪ್ರಜೆ- ವರ್ತಕರ ಮಧ್ಯದ ಮಹತ್ವದ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರೆಂದು ವಿಶ್ಲೇಷಿಸಿದ್ದಾರೆ. ಪ್ರಸ್ತುತ ಈ ಅಧ್ಯಾಯ ವರ್ತಕರ ವ್ಯಾಪಾರ ಸ್ವರೂಪ ಮತ್ತು ಅಧಿಕಾರ ಸ್ವರೂಪ ಕಟ್ಟಿಕೊಡುವಲ್ಲಿ ೭೪೦ ಶಾಸನಗಳನ್ನು ಡಾ. ಬಿ. ಆರ್. ಹಿರೇಮಠ ಅವರು ಬಳಸಿಕೊಂಡಿದ್ದಾರೆ.

ಅಧ್ಯಾಯ ಐದು ವರ್ತಕರ ಸಾಮಾಜಿಕ -ಧಾರ್ಮಿಕ - ವೀರಜೀವನ : ಪ್ರಸ್ತುತ ಅಧ್ಯಾಯದಲ್ಲಿ ಮುಖ್ಯವಾಗಿ ಮೂರು ಉಪ ಅಧ್ಯಾಯಗಳಿವೆ. ವರ್ತಕರ ಸಾಮಾಜಿಕ ಜೀವನದಲ್ಲಿ ಶಾಸನಗಳಲ್ಲಿ ಲಭಿಸುವ ಸಂಗತಿಗಳನ್ನು ಸಂಗ್ರಹಿಸಿ ದಾಖಲಿಸಿದ್ದಾರೆ. ಮುಖ್ಯವಾಗಿ ಮದುವೆ, ದತ್ತಕ, ಸೇನಭವ ನೇಮಕ, ಸಾಲಾ ಬಡ್ಡಿ, ಗೌರವ - ಮರ್ಯಾದೆ, ಹಬ್ಬ - ಪ್ರಯಾಣ, ಮುಡಿಪು- ನಿಯಮ-ಬಿಟ್ಟಿ, ಅಪುತ್ರಕ ಧನ, ಮರಣ, ಅಧಿಕಾರ, ಕರ್ತವ್ಯ ಅಥವಾ ಹೊಣೆಗಾರಿಕೆ, ಅಂತಃಕಲಹ, ಸಮಯ, ಸಂಕೇತ, ನಿಷೇಧ -ದಾಳಿ, ದಾನ-ಅಪಹರಣ, ಅಧಿಕ ತೆರಿಗೆ -ಪ್ರತಿಭಟನೆ ಎಂದು ವ್ಯವಸ್ಥಿತವಾಗಿ ವಿಭಾಗಿಸಿಕೊಂಡು ಪ್ರಾಚೀನ ಮಧ್ಯಕಾಲೀನ ಕರ್ನಾಟಕದ ಜನಜೀವನ ವಿಧಾನವನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ವರ್ತಕರ ಸಾಮಾಜಿಕ ಜೀವನದ ಬಗ್ಗೆ ಕಾವ್ಯಗಳು, ಶಾಸನಗಳು ವಿಪುಲ ಮಾಹಿತಿಯನ್ನು ನೀಡಿಲ್ಲ. ಆದರೂ ಡಾ. ಬಿ.ಆರ್. ಹಿರೇಮಠ ಅವರು ಉಪಲಬ್ಧವಿದ್ದ ಸಾಮಗ್ರಿಯ ಮೇಲೆ ವರ್ತಕರ ಸಾಮಾಜಿಕ ಜೀವನವನ್ನು ಈ ಅಧ್ಯಾಯದಲ್ಲಿ ಕಟ್ಟಿಕೊಟ್ಟಿದ್ದಾರೆ. ಪ್ರತಿಯೊಂದು ಸಂಗತಿಯ ವಿವರ ಅರ್ಥವ್ಯಾಪ್ತಿ ಮತ್ತು ಅಂದಂದಿನ ಕಾಲದ ನಂಬಿಕೆಗಳ ಹಿನ್ನೆಲೆ ಆಚರಣೆಗಳನ್ನು ವಿವರಿಸಿದ್ದಾರೆ. ಈ ಎಲ್ಲ ವಿವರಗಳಿಗೆ ಶಾಸನಗಳಿಂದ ಆಧಾರ ಒದಗಿಸಿದ್ದಾರೆ.

ವರ್ತಕರು ತಮ್ಮ ವ್ಯಾಪಾರದಿಂದ ಸಂಗ್ರಹಿಸಿದ ಸಂಪತ್ತನ್ನು ಧಾರ್ಮಿಕ ಚಟುವಟಿಕೆಗಳಿಗೂ ಉಪಯೋಗಿಸುತ್ತಿದ್ದರು. ಭೌತಿಕ ಜೀವನದ ಜೊತೆಗೆ ಧಾರ್ಮಿಕ ಜೀವನವು ಶ್ರೇಷ್ಠವೆಂದು ನಂಬಿದವರು.

ತಾವು ಕೈಕೊಂಡ ಧಾರ್ಮಿಕ ಕಾರ್ಯಗಳಿಗೆ ಅಂದಂದಿನ ಯುಗದ ಪರಿಸರವು ಪ್ರೇರಣೆಯಾಗಿತ್ತು. ಆ ಕಾಲಕ್ಕೆ ಗೌಡ, ದಂಡನಾಯಕ, ಮಹಾಮಂಡಳೇಶ್ವರ, ಮಹಾಪ್ರಧಾನ ಹಾಗೂ ಸಾಮಂತರು ಧಾರ್ಮಿಕ ಕಾರ್ಯಗಳ ಪ್ರೋತ್ಸಾಹಕ್ಕಾಗಿ ಹಲವು ರೀತಿಯ ದತ್ತಿಗಳನ್ನು ನೀಡಿದ್ದಾರೆ. ಅವುಗಳಲ್ಲಿ ಜೈನ, ಶೈವ, ವೈಷ್ಣವ ಮುಂತಾದ ವರ್ತಕರು ನಿರ್ವಹಿಸಿದ ಧಾರ್ಮಿಕ ಚಟುವಟಿಕೆಗಳನ್ನು ಈ ಉಪ ಅಧ್ಯಾಯದಲ್ಲಿ ಸಂಶೋಧಕರು ವಿವೇಚಿಸಿದ್ದಾರೆ. ವರ್ತಕ ಧಾರ್ಮಿಕ ಜೀವನದಲ್ಲಿ ನಿರ್ಮಾಣ, ಪ್ರತಿಷ್ಠಾಪನೆ ಮತ್ತು ದಾನ ಎಂದು ಮೂರು ವಿಧಾನ ಮಾಡಿಕೊಂಡು ಇವುಗಳ ಕುರಿತಾಗಿ ಸ್ಥೂಲವಾಗಿ ವಿವರಿಸಿರುವುದನ್ನು ಕಾಣಬಹುದು.

ನಿರ್ಮಾಣದಲ್ಲಿ ದೇವಾಲಯ, ದೀಪಮಾಲೆಕಂಬ, ಮಂಟಪ-ಸುಕನಾಸಿ ಅನ್ನಛತ್ರ-ಮಠ, ಕೆರೆ-ಜೀರ್ಣೋದ್ಧಾರ ಇತ್ಯಾದಿ ಮತ್ತೆ ಕೆಲವು ಉಪ ವಿಭಾಗಮಾಡಿಕೊಂಡು ಆಯಾ ವಿಷಯಗಳನ್ನು ಶಾಸನಗಳ ಆಧಾರದಿಂದ ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

ಪ್ರತಿಷ್ಠಾಪನ ವಿಭಾಗದಲ್ಲಿ ವಿಗ್ರಹ, ಲಿಂಗ ಮೊದಲಾದವುಗಳಿಗೆ ಸಂಬಂಧಿಸಿದ ಅಂಶಗಳನ್ನು ದಾಖಲಿಸಿದ್ದಾರೆ. ದಾನದಲ್ಲಿ ವೈಯಕ್ತಿಕ ಹಾಗೂ ಸಾಮೂಹಿಕ ದಾನವೆಂದು ಮತ್ತೆ ಈ ಎರಡು ಪ್ರಕಾರವನ್ನಾಗಿ ವಿಷಯ ವಿಂಗಡಿಸಿಕೊಂಡು ವಿವರಿಸಿದ್ದಾರೆ.

**ವೀರ ಜೀವನ :**

ವರ್ತಕರು ಸೈನ್ಯಪಡೆಯನ್ನು ಹೊಂದಿರುತ್ತಿದ್ದರು. ಬೆಲೆಯುಳ್ಳ ಸರಕು ಸಾಮಗ್ರಿಗಳನ್ನು ಒಂದೂರಿನಿಂದ ಇನ್ನೊಂದೂರಿಗೆ ಹೋಗುವಾಗ ಅಥವಾ ಮಾರಿದ ಸರಕಿನಿಂದ ಬಂದ ಹಣವನ್ನು ತರುವಾಗ ದಾರಿಗಳ್ಳರ ದಾಳಿಗೆ ತುತ್ತಾಗುವ ಸಂಭವವಿತ್ತು. ದಾರಿಗಳ್ಳರ ದಾಳಿಯಿಂದ ಹಣ, ಪ್ರಾಣ, ಸರಕು ಸರಂಜಾಮುಗಳ ಸಂರಕ್ಷಣೆಗಾಗಿ ವರ್ತಕರು ತಮ್ಮದೇ ಆದ ವೀರ ಪಡೆಯನ್ನು ಹೊಂದಿರುತ್ತಿದ್ದರು.

"ವೀರ ಜೀವನ: ಕರ್ನಾಟಕದ ವರ್ತಕರು ಬಿಲ್ಲ ಮೂನ್ನೂರ್ವರ ಸಹಾಯ ಪಡೆಯುವುದರ ಜೊತೆಗೆ ತಾವೂ ಸಾಹಸ, ಪರಾಕ್ರಮಗಳನ್ನು ತೋರಿರುವುದುಂಟು. ಇದಕ್ಕೆ ಅಂದಿನ ವೀರ ಯುಗಧರ್ಮವೇ ಕಾರಣವಾಗಿರಬೇಕು. ಈ ಯುಗ ಪರಿಸರಕ್ಕೆ ಸ್ಪಂದಿಸುತ್ತ ವರ್ತಕರು ಯೋಧರಾಗಿ ಹೋರಾಡಿದ್ದಾರೆ. ಲೆಂಕರಾಗಿ ಆತ್ಮಬಲಿದಾನ ಮಾಡಿದ್ದಾರೆ. ಪ್ರಾಚೀನ ಕಾಲದಲ್ಲಿ ಅರಸನ ಶಾಶ್ವತ ಸೈನಿಕರಾಗಲಿ, ಸಂದರ್ಭೋಚಿತವಾಗಿ ಅರಸನಿಗೆ ನೆರವಾಗುವ ಕಾಯ್ದಿಟ್ಟ ಸೈನಿಕರಾಗಲಿ ಅಥವಾ ಸ್ವತಂತ್ರ ವ್ಯಕ್ತಿಯಾಗಲಿ ತುರುಗೋಳ್, ಬೆಣ್ಬುಯ್ಯಲ್, ಊರಳಿವು, ಎಱಿವೆಸ, ನೆಂಟಜೆಡರು ಹಾಗೂ ಇತರ ಪ್ರಸಂಗಗಳಲ್ಲಿ ಯುದ್ಧ ವೀರರಾಗಿ ಹೋರಾಡುವುದು ಜೀವನ ಮೌಲ್ಯವಾಗಿದ್ದಿತು. ಇಂಥ ಮೌಲ್ಯಗಳನ್ನು ಮೆರೆದು ಅನೇಕ ವ್ಯಾಪಾರಿಗಳು ವೀರಮರಣ ಹೊಂದಿದ್ದಾರೆ. ಜಯಶಾಲಿಗಳಾಗಿ ಬಂದಿದ್ದಾರೆ."[೮]

ಪ್ರಾಚೀನ ಕಾವ್ಯದಲ್ಲಿ ಬರುವ ತುಱುಗೊಳ್, ಪೆಣ್ಣುಬುಯ್ಯಲ್, ಊರಳಿವು, ಎಱುವೆಸ ಮುಂತಾದ ಸಂದರ್ಭಗಳಲ್ಲಿಯೂ ಈ ವೀರ ಯೋಧರು ಕಲಿತನದಿಂದ ಹೋರಾಡುತ್ತಿದ್ದರು. ಈ ವೀರ ಯೋಧರಿಗೆ ವರ್ತಕರು ದಾನರೂಪದಲ್ಲಿ ಭೂಮಿಯನ್ನು, ಸಂಭಾವನೆ ರೂಪದಲ್ಲಿ ಹಣ ವಸ್ತುಗಳನ್ನು ಪ್ರತಿಫಲವಾಗಿ ಸಂದಾಯ ಮಾಡುತ್ತಿದ್ದರು. ಇವೇ ಮೊದಲಾದ ಅಂಶಗಳನ್ನು ಈ ಅಧ್ಯಾಯ ಅರ್ಥಪೂರ್ಣವಾಗಿ ವಿವರಿಸಿದೆ. "ವರ್ತಕರ ಸೈನ್ಯಪಡೆ, ವೀರ ಜೀವನದ ವಿವರಗಳನ್ನು ತಿಳಿದುಕೊಳ್ಳುವಲ್ಲಿ ಶಾಸನಗಳು ಒದಗಿಸಿರುವ ಮಾಹಿತಿಯು ಅತ್ಯಂತ ಮಹತ್ವದ್ದಾಗಿದೆ"[೯] ಎಂಬ ಮಾತು ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.

ಅಧ್ಯಾಯ ಆರು - ಸಮಾರೋಪ : ಇಲ್ಲಿಯವರೆಗಿನ ಅಧ್ಯಯನದ ಫಲಶ್ರುತಿಯೇ ಸಮಾರೋಪವಾಗಿದೆ. ಇದರಲ್ಲಿ ಮಾನವಜೀವನದ ಮಾನವ ಜನಾಂಗಿಕ ಜೀವನದ ಐತಿಹಾಸಿಕ ಹೆಜ್ಜೆಗಳು ದಾಖಲುಗೊಂಡಿವೆ. "ಮಧ್ಯಕಾಲೀನ ಕರ್ನಾಟಕದ ಈ ವರ್ತಕ ಪ್ರಕಾರದವರ ವ್ಯಾಪಾರಕ್ಕೆ ಸಂಬಂಧಿಸಿದ ಸಂತೆ -ಪೇಟೆ-ಪಟ್ಟಣ-ಅಂಗಡಿಗಳ ವಿಷಯ ಕುತೂಹಲಕಾರಿಯೆನಿಸಿದೆ. ಗೌಡ-ಮಹಾಪ್ರಭು-ವರ್ತಕ ಮೊದಲಾದವರು ಪಟ್ಟಣದ ಹೊರವಲಯದಲ್ಲಿ ಸಂತೆ ಕಟ್ಟಿಸಿ ಸಂತೆ ಮಾಡಿಸುತ್ತಿದ್ದರು. ಇಲ್ಲಿರುವ ಅಂಗಡಿಗಳಲ್ಲಿ ಕಟ್ಟಿದ ಅಂಗಡಿ, ಬಯಲು ಅಂಗಡಿ, ಧರ್ಮದ ಅಂಗಡಿ, ದೇವರಂಗಡಿ, ಮಾನ್ಯದ ಅಂಗಡಿಗಳೆಂಬ ಪ್ರಭೇದ ಕಂಡುಬರುತ್ತವೆ. ಸಂತೆಯ ದಿನ ಮಾತ್ರ ಹೊರಪೇಟೆಯಲ್ಲಿಯೂ ಮಿಕ್ಕ ದಿನಗಳಲ್ಲಿ ಒಳಪೇಟೆ (ಪಟ್ಟಣ) ಯಲ್ಲಿಯೇ ವ್ಯಾಪಾರ ನಡೆಯುತ್ತಿದ್ದಿತು. ವಾಣಿಜ್ಯೋದ್ಯಮದ ಬೆಳವಣಿಗೆ, ಉದ್ಯೋಗಾವಕಾಶಗಳಿಗಾಗಿ ಗೌಡ-ಪ್ರಭುಗಳು ಪಟ್ಟಣ ನಿರ್ಮಾಣಕಾರ್ಯ ಕೈಕೊಂಡಿದ್ದಾರೆ"[೧೦] ಎಂಬುದು ಹೊಸ ಶೋಧವಾಗಿದೆ. ಇಂದಿನ ವ್ಯಾಪಾರ ವಾಣಿಜ್ಯದ ಭರಾಟೆಯಲ್ಲಿ ಅಂದಿನ ಕಾಲದ ಸ್ಥಿತಿಗತಿಗಳನ್ನು ಪರಿಚಯಿಸಿಕೊಡಲು ನೆರವಾಗುತ್ತದೆ.

'ವರ್ತಕರು ಪಾದಮಾರ್ಗ ಜಲಮಾರ್ಗಗಳ ಮೂಲಕ ವ್ಯಾಪಾರಕ್ಕೆ ಹೋಗುತ್ತಿದ್ದರು. ಇದಕ್ಕಾಗಿ ಅವರು ಬಳಸುತ್ತಿದ್ದ ಸರಕು, ತುಂಬುವ ಸಲಕರಣೆ, ಸಾಗಾಣಿಕೆಯ ಸಾಧನ ವಿವರಣೆ ಅರ್ಥಪೂರ್ಣ ಎನಿಸಿದೆ. ಈ ಅಂಶ ಕೂಡ ಹೊಚ್ಚ ಹೊಸದಾಗಿದೆ. ದವಸ, ಧಾನ್ಯಗಳನ್ನು ಅಳೆಯುವ ಕೊಳಗ, ಒಳ್ಳ, ಮಾನ, ಸೊಲಗೆ, ಸಟ್ಟುಗ, ಪಡಿ, ಅದ್ದನ, ಗಿದ್ದನ, ಪಳಿಗೆ, ದಳ, ಹಾಗೆ, ಸೆಡೆ, ಮಾಪುಗಳನ್ನು, ಇಂಗು ಹತ್ತಿ ಮೊದಲಾದ ವಸ್ತುಗಳನ್ನು ತೂಗಲು ಭಾರ, ಮೊಳವೆ, ಪಲ, ಬಿಸಿಗೆ, ಕೊಡಿಗೆ, ಬೆಲ್ಲಳಿಗೆ ತೂಕ ವಿಶೇಷಗಳನ್ನು ಬಳಸುತ್ತಿದ್ದರೆಂಬ ಅಂಶಗಳತ್ತ ಶಾಸನಗಳು ನಮ್ಮ ಗಮನ ಸೆಳೆಯುತ್ತವೆ."[೧೧] ಅಂದಿನ ಕಾಲದ ಅಳತೆ ಮಾಪನಗಳನ್ನು, ತೂಕದ ವಿಶೇಷಗಳನ್ನು ದಾಖಲಿಸಿರುವುದು ಮಹತ್ವದ ಅಂಶವಾಗಿದೆ. "ವರ್ತಕರ ಪ್ರಶಾಂತ ಜೀವನದ ವಿರುದ್ಧ ಮುಖ ಅಂತಃಕಲಹ ವ್ಯವಹಾರ ಹಾಗೂ ವಾಸ ಮಾಡುವ ಕೇರಿಗಳ ಸೀಮಾ ತಂಟೆಗಾಗಿ ಅವರು ತಮ್ಮ ತಮ್ಮಲ್ಲಿ ಜಗಳವಾಡಿದ್ದಾರೆ. ವೈಯಕ್ತಿಕ

ದ್ವೇಷಗಳಿಂದ ಒಬ್ಬರನ್ನೊಬ್ಬರು ಕೊಂದಿದ್ದಾರೆ, ಕೊಲ್ಲಿಸಿದ್ದಾರೆ. ಇದಲ್ಲದೆ ತಮಗೆ ಬೇಡವಾದ ವರ್ತಕರ ಮೇಲೆ ದಾಳಿ ಮಾಡುವ, ಅವರ ಸಮಯ ಸಂಕೇತಗಳನ್ನು ರದ್ದುಗೊಳಿಸುವ ಅಧಿಕಾರಿಗಳ ದಬ್ಬಾಳಿಕೆಗೆ ತುತ್ತಾಗಿದ್ದಾರೆ. ಸರಕುಗಳ ಮೇಲೆ ಹೇರಿದ ಅಧಿಕ ತೆರಿಗೆ ವಿರುದ್ಧ ಇವರು ಪ್ರತಿಭಟನೆ ವ್ಯಕ್ತಪಡಿಸಿದ್ದಾರೆ. ಹೀಗೆ ವರ್ತಕರ ಸಾಮಾಜಿಕ ಜೀವನದ ಮೇಲೆ ಶಾಸನಗಳು ಹೊಸ ಬೆಳಕು ಚೆಲ್ಲುತ್ತಿರುವುದೊಂದು ವಿಶೇಷ ಸಂಗತಿ."[೧೨] ಇದೂ ಕೂಡಾ ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಯ ಮಹತ್ವದ ಅಂಶವಾಗಿದೆ. ವರ್ತಕರ ಸಾಮಾಜಿಕ ಧಾರ್ಮಿಕ ಜೀವನದ ಜೊತೆಗೆ ವೀರ ಮೌಲ್ಯಗಳನ್ನು ಕಟ್ಟಿಕೊಟ್ಟಿರುವುದು ಈ ಪ್ರಬಂಧದ ಹೆಗ್ಗಳಿಕೆಯಾಗಿದೆ. ಈ ರೀತಿಯಾಗಿ ಕರ್ನಾಟಕದ ಶಾಸನಗಳು (ಕ್ರಿ.ಶ. ೪೫೦ರಿಂದ ೧೫೭೫ರ ವರೆಗಿನ) ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕರ ಮತ್ತು ವರ್ತಕ ಸಂಘಗಳ ಸ್ಥೂಲ ಚಿತ್ರವನ್ನು ಬಿಡಿಸಿತೋರಿಸುತ್ತವೆ. ಶಾಸನಗಳಲ್ಲಿ ಅನಿಯಮಿತವಾಗಿ, ಅನಿಯಂತ್ರಿತವಾಗಿ ತೂರಿಬರುವ ಹಲವಾರು ಸಮಸ್ಯೆಗಳನ್ನು ಬಿಡಿಸಿಕೊಂಡು ಖಚಿತವಾದ ಅಭಿಪ್ರಾಯ ತಾಳಿ, ವಾಣಿಜ್ಯ ಶಾಸ್ತ್ರಕ್ಕೆ ಅಚ್ಚುಕಟ್ಟಾಗಿ ವಿಷಯ ಮಂಡಿಸಿರುವುದು ಅಪೂರ್ವವೆನಿಸುತ್ತದೆ. ಹೀಗಾಗಿ ಈ ಮಹಾಪ್ರಬಂಧವು. ಒಂದು ಅನುಪಮ ಕೊಡುಗೆಯಾಗಿದ್ದು ಮುಂದಿನ ವಾಣಿಜ್ಯಶಾಸ್ತ್ರ ಅಧ್ಯಯನ ಕಾರ್ಯಕ್ಕೆ ಮಾರ್ಗದರ್ಶಿಯಾಗಿದೆ. ಶಾಸನಗಳಲ್ಲಿ ಚದುರಿ ಹೋಗಿರುವ ಹಲವಾರು ಸಂಗತಿಗಳನ್ನು ಸಂಗ್ರಹಿಸುವಲ್ಲಿ ಸಹನಶೀಲತೆ ಬೇಕಾಗುತ್ತದೆ. ಅಪಾರ ಪರಿಶ್ರಮದಿಂದ ಸಂಗ್ರಹಿಸಿದ ವಿಷಯಗಳನ್ನು ಅಚ್ಚುಕಟ್ಟಾಗಿ ಹೊಂದಿಸುವಲ್ಲಿ ಸಂಯೋಜಕ ಪ್ರತಿಭೆ ಅವಶ್ಯಕವಾಗಿರುತ್ತದೆ. ಸಂಕಲಿಸಿದ ಮಾಹಿತಿಯನ್ನು ಪರಿಣಾಮಕಾರಿಯಾಗಿ ನಿರೂಪಿಸುವಲ್ಲಿ ಖಚಿತತೆ ಗುಣ ವಿಶೇಷಗಳು ಅವಶ್ಯಕ ಸಾಮಗ್ರಿಗಳಾಗುತ್ತವೆ. ಈ ಎಲ್ಲಾ ವಿಶೇಷಗಳು ಡಾ. ಬಿ. ಆರ್. ಹಿರೇಮಠ ಅವರಲ್ಲಿ ಇರುವುದರಿಂದ ಪ್ರಸ್ತುತ ಮಹಾಪ್ರಬಂಧವು ಅತ್ಯಂತ ಮೌಲಿಕ ಸಂಶೋಧನೆಯಾಗಿ ಪರಿಣಮಿಸಿದೆ.

ಇದು ಮಹಾಪ್ರಬಂಧದ ಹಂದರವಾಗಿದ್ದರೂ ಪ್ರತಿಯೊಂದು ಅಧ್ಯಾಯದ ಒಳಗೆ ಅನೇಕ ವಿಷಯಗಳ, ಉಪವಿಷಯಗಳ ವಿವೇಚನೆ ವಿಪುಲವಾಗಿ ನಡೆದಿದೆ. ಇದರಿಂದಾಗಿ ಈ ವರೆಗೆ ನಮಗೆ ಗೊತ್ತಿಲ್ಲದ ಅನೇಕ ಅಂಶಗಳು ಪ್ರಪ್ರಥಮ ಸಲ ಬೆಳಕಿಗೆ ಬಂದಿವೆ. ಕೆಲವೊಮ್ಮೆ ಈ ಮೊದಲಿನ ಶೋಧಗಳು ಪರಿಷ್ಕರಣಗೊಂಡಿವೆ. ಸಮಾರೋಪ ಅಧ್ಯಾಯವನ್ನಲ್ಲದೆ ಶ್ರಮವಹಿಸಿದ ಜೋಡಿಸಿದ ಉಪಯುಕ್ತ ಅನುಬಂಧಗಳು ಈ ಮಹಾಪ್ರಬಂಧದ ಮೌಲಿಕತೆಯನ್ನು ಇನ್ನೂ ಹೆಚ್ಚಿಸಿವೆ. ಈ ಎಲ್ಲ ಅಂಶಗಳಿಂದಾಗಿ ಈ ಮಹಾ ಪ್ರಬಂಧಕ್ಕೆ "ಪ್ರಾಚೀನ ವಾಣಿಜ್ಯ ಕೋಶ"ದ ಮಹತ್ವ ಪ್ರಾಪ್ತವಾಗಿದೆ.

"ಇಲ್ಲಿಯ ಪ್ರತಿಯೊಂದು ಅಧ್ಯಾಯದ ಮುಖ್ಯ ಲಕ್ಷಣವೆಂದರೆ ಅಪಾರ ವಿಷಯ ಸಂಗ್ರಹ. ಅದರ ವ್ಯವಸ್ಥಿತ ವರ್ಗೀಕರಣ ಸಾಮಗ್ರಿ ಸಂಗ್ರಹ ತುಸು ಹೆಚ್ಚಾಯಿತೆನ್ನುವಷ್ಟು ವಿಪುಲವಾಗಿದೆ. ಆಧಾರಗಳ ಕೊರತೆಯಿಂದಾಗಿ ಕೆಲವೊಂದು ಅಂತಿಮ ನಿರ್ಣಯ ಸಾಧ್ಯವಾಗಿಲ್ಲವೆನಿಸುತ್ತದೆ. ಈ ಮಹಾ

ಪ್ರಬಂಧದ ಮಾರ್ಗದರ್ಶಕನಾದ ನಾನೂ ಇದಕ್ಕೆ ಹೊಣೆಯೆಂದು ಒಪ್ಪಿಕೊಳ್ಳುತ್ತಾ ಸಂಶೋಧನೆಯೆಂಬುದು ಅಲ್ಪವಿರಾಮ, ಅರ್ಧವಿರಾಮಗಳಿಂದ, ಪೂರ್ಣವಿರಾಮದತ್ತ ಸಾಗುವ ಒಂದು ವಿದ್ಯುತ್ ಕ್ರಿಯೆಯಾಗಿರುವುದರಿಂದ ಇಂಥ ಕೊರತೆ ಸಂಶೋಧನೆಯ ಒಂದು ಅನಿವಾರ್ಯ ಭಾಗವೆಂದೇ ಹೇಳಬಯಸುತ್ತೇನೆ"[೧೩] ಎಂದು ಡಾ. ಎಂ.ಎಂ. ಕಲಬುರ್ಗಿಯವರು ಹೇಳಿರುವುದು ಈ ಪ್ರಬಂಧದ ಮಹತ್ವವನ್ನು ಎತ್ತಿ ತೋರಿಸುತ್ತದೆ.

ಪ್ರಸ್ತುತ ಮಹಾಪ್ರಬಂಧ, ಶಾಸನಗಳಲ್ಲಿ ಕರ್ನಾಟಕದ ವರ್ತಕರು ಕ್ರಿ. ಶ. ೪೫೦ ರಿಂದ ೧೫೬೫ ರವರೆಗಿನ ಕಾಲಮಾನದ ಶಾಸನಗಳನ್ನು ಆಧರಿಸಿ ರಚಿಸಿದ ಮಹಾಪ್ರಬಂಧವಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಕನ್ನಡ ನಾಡಿನಲ್ಲಿ ದೊರೆಯುವ ಕನ್ನಡ ಮತ್ತು ಸಂಸ್ಕೃತ ಶಾಸನಗಳನ್ನು ಹಾಗೆ ನಾಡಿನ ಹೊರಗಡೆ ಲಭ್ಯವಾಗಿರುವ ಕನ್ನಡ ಶಾಸನಗಳನ್ನು ಇದರಲ್ಲಿ ಬಳಸಿಕೊಳ್ಳಲಾಗಿದೆ. ಸಾಂದರ್ಭಿಕವಾಗಿ ಹಳಗನ್ನಡ ಕಾವ್ಯಗಳು ಹಾಗೂ ವಚನ ಸಾಹಿತ್ಯವನ್ನು ಪೂರಕ ಸಾಮಗ್ರಿಯಾಗಿ ಅಳವಡಿಸಿಕೊಂಡಿರುವುದು ವಿಶೇಷವಾಗಿದೆ. ಶಾಸನಗಳ ಅಧ್ಯಯನಕ್ಕೆ ಮಹತ್ತರವಾದ ಕೊಡುಗೆಯಾಗಿದೆ.

**೩:೧:೧ ಮಹಾಪ್ರಬಂಧಗಳ ತೌಲನಿಕ ಅಧ್ಯಯನ :**

ಡಾ. ಎಂ. ಚಿದಾನಂದಮೂರ್ತಿಯವರ ಶಾಸನಗಳ ಸಾಂಸ್ಕೃತಿಕ ಅಧ್ಯಯನವು ಮಹತ್ವದ ಕೃತಿ. ಶಾಸನಗಳನ್ನು ಮುಖ್ಯವಾಗಿರಿಸಿಕೊಂಡು ಕರ್ನಾಟಕದ ಇತಿಹಾಸ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರೂಪಿಸಿದ್ದಾರೆ. ಹೊಸ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಜನಾಂಗದ ಜೀವನ ವಿಧಾನವನ್ನು ಗಮನಿಸಬೇಕಾಗಿರುವುದರಿಂದ ವಿಸ್ತಾರವಾದ ಅಧ್ಯಯನವಾಗಿರುವುದರಿಂದ ಒಂದೇ ವಿಷಯದತ್ತ ಗಮನವನ್ನು ಕೇಂದ್ರೀಕರಿಸಲು ಸಾಧ್ಯವಾಗಿಲ್ಲ. ಹಾಗೆಯೇ ಕ್ರಿ.ಶ. ೪೫೦ರಿಂದ ೧೧೫೦ರ ಕಾಲಮಾನದ ಗಡುವು ಈ ಸಂಶೋಧನೆಯ ಕೃತಿಗಿದೆ. ಡಾ. ಬಿ. ಆರ್. ಹಿರೇಮಠ ಅವರದು. ಶಾಸನಗಳನ್ನು ಆಧರಿಸಿ ರಚನೆಗೊಂಡಿರುವ - 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ತುಂಬ ಮಹತ್ವದ ಸಂಶೋಧನೆಯಾಗಿದೆ. ಡಾ. ಚಿದಾನಂದ ಮೂರ್ತಿಯವರದು ಆದಿ ಪ್ರಯತ್ನವಾಗಿದ್ದರೆ; ಡಾ. ಬಿ. ಆರ್. ಅವರದು ಅಭಿನವ ಪ್ರಯತ್ನವಾಗಿದೆ. ಶಾಸನಗಳಲ್ಲಿ ವರ್ತಕರನ್ನು ಕುರಿತಾಗಿ ಅಧ್ಯಯನಿಸಿರುವುದರಿಂದ ತುಂಬ ವ್ಯಾಪಕವಾದ ಚರ್ಚೆಯಿದೆ. ವ್ಯಾಪಾರ, ವ್ಯಾಪಾರಿ ಸಂಘಗಳು, ಮಾರುಕಟ್ಟೆ, ಸುಂಕ. ತೆರಿಗೆ ಇತ್ಯಾದಿ ಹತ್ತು ಹಲವು ಸೂಕ್ಷ್ಮ ವಿಷಯಗಳನ್ನು ಗಮನಹರಿಸಲು ಸಾಧ್ಯವಾಗಿದೆ. ಡಾ. ಚಿದಾನಂದ ಮೂರ್ತಿಯವರದು ವಿಸ್ತಾರ ಹಾಗೂ ವಿಶಾಲವಾದ ದೃಷ್ಟಿಕೋನವಾಗಿದ್ದರೆ; ಡಾ. ಬಿ. ಆರ್. ಹಿರೇಮಠರದು ವಸ್ತುವಿನಲ್ಲಿ ಖಚಿತತೆಯಿದೆ. ವಿಷಯದಲ್ಲಿ ನಿರ್ದಿಷ್ಟತೆಯಿದೆ. ಹಾಗೆಯೆ ಆಳವಾದ ಅಧ್ಯಯನದಿಂದ ಸೂಕ್ಷ್ಮ ಸ್ತರಗಳು, ಒಳನೋಟಗಳು ಲಭ್ಯವಾಗಿವೆ. ಡಾ.ಚಿದಾನಂದಮೂರ್ತಿಯವರ ಸಂಶೋಧನೆ ೧೧೫೦ಕ್ಕೆ ಸೀಮಿತವಾಗಿದ್ದರೆ ಡಾ.

ಹಿರೇಮಠ ಅವರದು ೧೫೬೫ ರ ವರೆಗೂ ವ್ಯಾಪಿಸಿದೆ. ಸುಮಾರು ನಾಲ್ಕು ಶತಮಾನಗಳ ವ್ಯಾಪ್ತಿ ಡಾ. ಹಿರೇಮಠರ ಮಹಾಪ್ರಬಂಧಕ್ಕಿರುವುದು ಗಮನಾರ್ಹ ಅಂಶವಾಗಿದೆ.

ಡಾ. ಎಂ. ಬಿ. ನೇಗಿನಾಳ ಅವರ 'ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ' ಒಂದು ಮಹತ್ವದ ಸಂಶೋಧನೆಯಾಗಿದೆ. ಇದರಲ್ಲಿ ಭಾಷೆ ಭಾಷೆಯ ಉಗಮ, ವಿಕಾಸ ವಿವಿಧ ಹಂತಗಳ ಚರ್ಚೆಯಿದೆ. ಭಾಷಾಶಾಸ್ತ್ರದ ದೃಷ್ಟಿಯಿಂದ ಡಾ. ನೇಗಿನಾಳ ಪ್ರಬಂಧ ಮುಖ್ಯವೆನಿಸುತ್ತದೆ. ಆದರೆ ಡಾ. ಬಿ. ಆರ್. ಹಿರೇಮಠ ಅವರದು ಕರ್ನಾಟಕ ವರ್ತಕರ ಸಮಗ್ರ ಅಧ್ಯಯನ ಕೈಗೊಂಡಿರುವುದರಿಂದ: ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಜನಜೀವನ ಚಿತ್ರಣವಿದೆ. ಭಾಷೆ ಮತ್ತು ಸಾಹಿತ್ಯ ಪರಸ್ಪರ ಪೂರಕ ಅಂಶಗಳಾಗಿವೆ. ಆದರೆ ಸಾಹಿತ್ಯ ಮತ್ತು ವಾಣಿಜ್ಯಶಾಸ್ತ್ರ ಎರಡೂ ವಿಭಿನ್ನ ಅಧ್ಯಯನದ ಶಾಖೆಗಳು. ಎರಡು ಶಿಸ್ತುಗಳನ್ನು ಒಗ್ಗೂಡಿಸಿ ಅಧ್ಯಯನಕ್ಕೊಳಪಡಿಸಿರುವುದು ಹೊಸತನವೆನಿಸುತ್ತದೆ. ಅಂತರ್ ಶಿಸ್ತೀಯ ಅಧ್ಯಯನಕ್ಕೆ ಡಾ. ಬಿ. ಆರ್. ಹಿರೇಮಠರ ಪಿಎಚ್.ಡಿ. ಮಹಾಪ್ರಬಂಧ ಶ್ರೇಷ್ಠ ನಿದರ್ಶನವಾಗಿದೆ.

ಶ್ರವಣಬೆಳಗೊಳ (ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಮಹತ್ವ) ಡಾ. ಬಿ. ವ್ಹಿ. ಶಿರೂರ ಅವರ ಪಿಎಚ್.ಡಿ ಮಹಾಪ್ರಬಂಧವಾಗಿದೆ. ಇದರಲ್ಲಿ ಶ್ರವಣಬೆಳಗೊಳ ಕ್ಷೇತ್ರವನ್ನು ಇತಿಹಾಸದ ಸಾಮಗ್ರಿಗಳಿಂದ ಸಾಹಿತ್ಯಿಕ ಕೃತಿಗಳಿಂದ ಸಾಮಗ್ರಿಯನ್ನು ಸಂಕಲಿಸಿ ಸಾಂಸ್ಕೃತಿಕ ಬದುಕನ್ನು ನಿರೂಪಿಸಲಾಗಿದೆ. ಶ್ರವಣಬೆಳಗೊಳದ ಶಾಸನ ಸಾಹಿತ್ಯವು ಮೂರನೆಯ ಅಧ್ಯಾಯದ ಒಂದು ಉಪ-ವಿಭಾಗವಾಗಿದೆ. ಇದರಲ್ಲಿ ಶ್ರವಣಬೆಳಗೊಳದ ಶಾಸನೋಕ್ತ ಕವಿಗಳನ್ನು ಮತ್ತವರ ಸಾಹಿತ್ಯವನ್ನು ಪರಿಚಯಿಸಲಾಗಿದೆ. ಇದು ಮಹಾಪ್ರಬಂಧದ ಹೆಚ್ಚುಗಾರಿಕೆಯೂ ಹೌದು. ಅದೇ ಕಾಲಕ್ಕೆ ಅದರ ಮಿತಿಯಾಗಿಯೂ ಪರಿಣಮಿಸಿದೆ. ಡಾ. ಶಿರೂರ ಅವರ ಸಂಶೋಧನೆ ಒಂದು ಕ್ಷೇತ್ರವನ್ನು ಆಧರಿಸಿದ್ದರೆ; ಡಾ. ಹಿರೇಮಠ ಅವರದು ಹತ್ತು ಹಲವು ಕ್ಷೇತ್ರಗಳನ್ನು ಅನುಲಕ್ಷಿಸಿ ಅಧ್ಯಯನಿಸಲಾಗಿದೆ. ಪ್ರಾಚೀನ ಕರ್ನಾಟಕದ ಪ್ರಮುಖ ಮಾರುಕಟ್ಟೆಗಳು, ಮಧ್ಯಕರ್ನಾಟಕದ ಪ್ರಮುಖ ಸಂತೆಗಳನ್ನು ವಿಸ್ತೃತವಾಗಿ ಅಧ್ಯಯನಕ್ಕೆತ್ತಿಕೊಳ್ಳಲಾಗಿದೆ. ಡಾ.ಶಿರೂರ ಅವರ ಸಂಶೋಧನೆಯಲ್ಲಿ ಜೈನಧರ್ಮದ ಅಧ್ಯಯನವಿದ್ದರೆ; ಡಾ. ಹಿರೇಮಠ ಅವರಲ್ಲಿ ವೈದಿಕ, ಜೈನ, ಶೈವ, ಮತ್ತು ವೀರಶೈವ ಮತದವರ ವ್ಯಾಪಾರ, ವ್ಯವಹಾರ, ಆರ್ಥಿಕ ರೀತಿ ನೀತಿಗಳು, ಧಾರ್ಮಿಕ ಚಟುವಟಿಕೆಗಳು ದಾಖಲುಗೊಂಡಿವೆ. ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವರ್ತಕರು ಮತ್ತು ವರ್ತಕ ಸಂಘಗಳು ಮುಖ್ಯವಾಗಿವೆ. ವೈಯಕ್ತಿಕ ನೆಲೆಯಲ್ಲಿ ಮತ್ತು ಸಾಮೂಹಿಕ ನೆಲೆಯಲ್ಲಿ ಈ ವರ್ತಕರು ಕೈಕೊಂಡ ವ್ಯಾಪಾರಿ ವೃತ್ತಿಯಿಂದ ಸಮಾಜದ ಜೀವನಸ್ಥಿತಿ ನಾಡಿನ ಆರ್ಥಿಕ ಪರಿಸ್ಥಿತಿಗಳು ನಿರ್ಧಿಷ್ಟ ಸ್ವರೂಪವನ್ನು ಪಡೆಯುತ್ತವೆ. ಇದೆಲ್ಲದರ ಅಧ್ಯಯನ ಡಾ. ಬಿ.ಆರ್. ಹಿರೇಮಠ ಅವರ ಮಹಾ ಪ್ರಬಂಧದಲ್ಲಿದೆ.

ಡಾ. ಚೆನ್ನಕ್ಕ ಎಲಿಗಾರ ಅವರ ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜವು ಒಂದು ಮೌಲಿಕ ಮಹಾಪ್ರಬಂಧವಾಗಿದೆ. ಶಾಸನಗಳನ್ನು ಆಧರಿಸಿ ಸ್ತ್ರೀ ಸಮಾಜವನ್ನು ಕಟ್ಟಿಕೊಟ್ಟಿರುವುದು ಆ ಪ್ರಬಂಧದ ಹೆಚ್ಚುಗಾರಿಕೆಯಾಗಿದೆ. ಮಹಿಳೆಯು ತಾಯಿಯಾಗಿ, ಹೆಂಡತಿಯಾಗಿ, ಮಹಿಳೆಯಾಗಿ ಕುಟುಂಬದ ಒಳಗೆ ಮತ್ತು ಹೊರಗೆ ನಿರ್ವಹಿಸಿದ ಪಾತ್ರವನ್ನು ಡಾ. ಚೆನ್ನಕ್ಕ ಎಲಿಗಾರ ಅವರು ಸೊಗಸಾಗಿ ಚಿತ್ರಿಸಿದ್ದಾರೆ. ತಮ್ಮ ಅಧ್ಯಯನಕ್ಕೆ ಇತಿಹಾಸ ಮತ್ತು ಸಾಹಿತ್ಯವನ್ನು ಪೂರಕವಾಗಿ ಬಳಸಿಕೊಂಡಿದ್ದಾರೆ. ಡಾ. ಬಿ.ಆರ್. ಹಿರೇಮಠ ಅವರು ಇತಿಹಾಸ ಸಾಹಿತ್ಯ ಮತ್ತು ವಾಣಿಜ್ಯ ಶಾಸ್ತ್ರ ಮೂರನ್ನೂ ತಮ್ಮ ಮಹಾಪ್ರಬಂಧ ರಚನೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಚೆನ್ನಕ್ಕ ಎಲಿಗಾರ ಅವರು ಮಹಿಳೆಯರ ಕುರಿತಾಗಿ ಮಾತ್ರ ದಾಖಲಿಸಿದ್ದರೆ. ಡಾ. ಬಿ.ಆರ್. ಹಿರೇಮಠ ಅವರು ಸಮಾಜದ ಪ್ರಮುಖ ಅಂಗಗಳಾದ ಸ್ತ್ರೀ ಮತ್ತು ಪುರುಷರೀರ್ವರ ಚಟುವಟಿಕೆಗಳನ್ನು ದಾಖಲುಗೊಳಿಸಿದ್ದಾರೆ. "ಪ್ರಾಚೀನ ಕರ್ನಾಟಕದ ಮಹಿಳೆಯ ಇತಿಹಾಸವನ್ನು ವಿವೇಚನೆ ಮಾಡುವಾಗ ಇಂದಿನ ಕರ್ನಾಟಕವನ್ನು ಮಾತ್ರ ಗಮನದಲ್ಲಿರಿಸಿಕೊಂಡು ವಿಷಯ ಸಂಗ್ರಹಣೆ ಮಾಡಲಾಗಿದೆ ಎಂದು ಡಾ. ಚೆನ್ನಕ್ಕ ಎಲಿಗಾರ ಅವರು ತಮ್ಮ ಪ್ರಬಂಧದ ಕುರಿತಾಗಿ ಹೇಳಿದ್ದಾರೆ. ಆದರೆ ಡಾ. ಬಿ. ಆರ್. ಹಿರೇಮಠ ಅವರು ಪ್ರಾಚೀನ ಕರ್ನಾಟಕ, ಮಧ್ಯ ಕರ್ನಾಟಕ ಮತ್ತು ಇಂದಿನ ಕರ್ನಾಟಕವನ್ನು ಕೂಡಿಸಿ ಗಮನದಲ್ಲಿರಿಸಿಕೊಂಡು ವಿಷಯ ಸಂಗ್ರಹಿಸಿ ವಸ್ತುವಿನ ವಿಶ್ಲೇಷಣೆ ಮಾಡಿದ್ದಾರೆ. ಮಹಿಳೆಯ ಧಾರ್ಮಿಕ ದತ್ತಿ ಬಿಡುವುದು, ದಾನ ಕೊಡುವುದು, ಮೂರ್ತಿ ಪ್ರತಿಷ್ಠಾಪನೆ ಮಾಡುವುದು ಮುಂತಾದ ವಿವಿಧ ಆಯಾಮಗಳನ್ನು ಹಾಗೂ ಮಹಿಳೆಯರ ಇನ್ನಿತರ ಚಟುವಟಿಕೆಗಳನ್ನು ಪ್ರಸ್ತುತ ಮಹಾ ಪ್ರಬಂಧದಲ್ಲಿ ದಾಖಲಿಸಿದ್ದಾರೆ. "ಪುರುಷ ಮತ್ತು ಸ್ತ್ರೀ ಸಮಾಜದ ಅವಶ್ಯ ಮತ್ತು ಅನಿವಾರ್ಯ ಘಟಕಗಳು, ನಾಣ್ಯದ ಎರಡು ಮುಖಗಳಂತೆ ವಿರುದ್ಧವೆಂದರೂ ಅವು ಪರಸ್ಪರ ಪೂರಕವಾದವುಗಳು" ಎಂದು ಡಾ. ಚನ್ನಕ್ಕ ಎಲಿಗಾರ ಅವರೇ ಹೇಳಿದಂತೆ ಸ್ತ್ರೀ ಸಮಾಜಕ್ಕೆ ಸಂಬಂಧಿಸಿದ ವ್ಯಾಪ್ತಿಗಷ್ಟೇ ತಮ್ಮ ಅಧ್ಯಯನವನ್ನು ಸೀಮಿತಗೊಳಿಸಿದ್ದಾರೆ. ಆದರೆ ಡಾ. ಬಿ. ಆರ್. ಹಿರೇಮಠ ಅವರು ಒಂದು ಸಮಾಜದ ಅವಿಭಾಜ್ಯ ಅಂಗವಾಗಿರುವ ಸ್ತ್ರೀ ಪುರುಷರಿಬ್ಬರನ್ನೂ ದೃಷ್ಟಿಯಲ್ಲಿರಿಸಿ ಅಧ್ಯಯನ ಕೈಕೊಂಡಿದ್ದಾರೆ. ಬಿ. ಆರ್. ಹಿರೇಮಠ ಅವರು ಪ್ರಾಚೀನ ಮತ್ತು ಮಧ್ಯಕಾಲೀನ ಸಮಾಜದಲ್ಲಿ ಮಹಿಳೆಯರು ಕೂಡಾ ವ್ಯಾಪಾರಿ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದನ್ನು ಶಾಸನಗಳ ಮೂಲಕ ದಾಖಲಿಸಿದ್ದಾರೆ.

ಕರ್ನಾಟಕದಲ್ಲಿ ಸತಿ ಪದ್ಧತಿ ಡಾ. ಬಿ.ಎಸ್.ಶೇರಿ ಯವರ ಮಹಾಪ್ರಬಂಧವಾಗಿದೆ. ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಸತಿಪದ್ಧತಿಯ ಉಗಮ ಮತ್ತು ವಿಕಾಸ ಮತ್ತು ಅದರ ವಿವಿಧ ಘಟ್ಟಗಳನ್ನು ಸಾಧಾರಗಳೊಂದಿಗೆ ವಿಶಿಷ್ಟವಾಗಿ ನಿರೂಪಿಸಿದ್ದಾರೆ. ಇದೊಂದು ಮೌಲಿಕ ಪ್ರಬಂಧವಾಗಿದೆ. ಮುಖ್ಯವಾಗಿ ಸತಿ ಪದ್ಧತಿಯು ಒಂದು ಜೀವವಿರೋಧಿ ನಿಲುವಾಗಿದೆ. ಒಂದು ಕಾಲಕ್ಕೆ ತೀವ್ರತರವಾಗಿ ಅಸ್ತಿತ್ವದಲ್ಲಿದ್ದು

ಇಂದು ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ಸಮಾಜ ಸುಧಾರಕರ ತೀವ್ರ ಪ್ರಯತ್ನ, ಆದುನಿಕ ಶಿಕ್ಷಣದಿಂದಾಗಿ ಪ್ರಗತಿಪರ ನಿಲುವು, ವೈಜ್ಞಾನಿಕ, ವೈಚಾರಿಕ ನಿಲುವುಗಳಿಂದಾಗಿ ಸತಿ ಪದ್ಧತಿ ಇಂದು ಇಲ್ಲವಾಗಿದೆ. ಇದೊಂದು ಅನಿಷ್ಟ ಪದ್ಧತಿಯಾಗಿತ್ತೆಂಬುದು ಸರ್ವವಿದಿತ. ಆದರೆ ಡಾ. ಬಿ. ಆರ್. ಹಿರೇಮಠ ಅವರು ಮಂಡಿಸಿದ ಮಹಾಪ್ರಬಂಧದ ವಿಷಯವು ಪ್ರಾಚೀನ ಕಾಲ, ಮಧ್ಯಕಾಲ, ಆಧುನಿಕ ಕಾಲದಲ್ಲಿಯೂ ಪ್ರಸ್ತುತವಾಗಿದೆ. ಸಮಕಾಲೀನದಲ್ಲಿ ಅಂತೂ ಜಾಗತೀಕರಣ ಉದಾರೀಕರಣ, ಖಾಸಗೀಕರಣ ದಿಂದಾಗಿ ಎಲ್ಲವೂ ವಾಣಿಜ್ಯೀಕರಣಗೊಳ್ಳುತ್ತಿದೆ. ಇಂದು ಪ್ರತಿಯೊಂದನ್ನು ವ್ಯಾಪಾರಿ ಮನೋಭಾವದಿಂದ ತೂಗಿ ನೋಡುವ ಕಾಲವಾಗಿರುವುದರಿಂದ ಡಾ. ಬಿ. ಆರ್.ಹಿರೇಮಠ ಅವರ ಕರ್ನಾಟಕದ ವರ್ತಕರು ಮಹಾ ಪ್ರಬಂಧವು ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದೆ. ಆಧುನಿಕ ಸಮಾಜವಿಂದು ಆರ್ಥಿಕ ನೆಲೆಗಟ್ಟಿನ ಮೇಲೆ ನಿಂತಿದೆ. ಒಂದು ದೇಶದ ಜೀವನಾಡಿ ಆರ್ಥಿಕ ವ್ಯವಸ್ಥೆಯಾಗಿದೆ. ಆರ್ಥಿಕ ಸುಭದ್ರತೆ, ದೇಶದ ಸುಭದ್ರತೆ ಎನಿಸುವ ಕಾಲವಿದು. ವ್ಯಾಪಾರೀಕರಣದ ಭರಾಟೆಯಲ್ಲಿ ಸಮಾಜ ಮಾನವೀಯ ಸಂಬಂಧಗಳನ್ನು ಕಳಚಿಕೊಂಡಿದೆ. ಆದರೆ ಡಾ. ಬಿ. ಆರ್. ಹಿರೇಮಠ ಅವರು ಕಟ್ಟಿಕೊಟ್ಟಿರುವ ಮಹಾ ಪ್ರಬಂಧದಲ್ಲಿ ವ್ಯಾಪಾರಿಗಳ ಧಾರ್ಮಿಕ ಚಟುವಟಿಕೆಗಳು ದತ್ತಿ ದಾನಗಳು ತುಂಬಾ ಮಾನವೀಯ ಸ್ಪರ್ಶವನ್ನು ಒಳಗೊಂಡಿದ್ದು ಅಂದಿನ ವ್ಯಾಪಾರಿಗಳ ಮಾನವೀಯ ಅಂತಃಕರಣವು ಇಂದಿನವರೆಗೆ ಮಾರ್ಗದರ್ಶನ ನೀಡುವಷ್ಟು ಸಶಕ್ತವಾಗಿದೆ.

ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಡಾ.ಜೆ. ಎಂ. ನಾಗಯ್ಯ ಅವರ ಮಹಾಪ್ರಬಂಧವಾಗಿದೆ. ಅಖಂಡ ೫೦ ವರ್ಷ ಕರ್ನಾಟಕವನ್ನಾಳಿದ ಮಹಾನ್ ಸಾಮ್ರಾಟ ೬ನೇ ವಿಕ್ರಮಾದಿತ್ಯ ಹೊರಡಿಸಿದ ಒಂದು ಸಾವಿರ ಶಾಸನಗಳ ಅಧ್ಯಯನವನ್ನಿದು ಒಳಗೊಂಡಿದೆ. ಈ ಶಾಸನದ ಕಾಲ ಮಿತಿ ೫೦ ವರ್ಷಗಳು. ಆದರೆ ಡಾ. ಬಿ. ಆರ್. ಹಿರೇಮಠ ಅವರ ಮಹಾಪ್ರಬಂಧದ ಕಾಲಾವಧಿ ಕ್ರಿ.ಶ. ೪೫೦ರಿಂದ ಕ್ರಿ.ಶ. ೧೫೬೫ರ ವರೆಗಿನ ವ್ಯಾಪ್ತಿಯುಳ್ಳದ್ದು. ಡಾ. ನಾಗಯ್ಯ ಅವರು ತಮ್ಮ ಅಧ್ಯಯನವನ್ನು ಒಂದು ಸಾವಿರ ಶಾಸನಗಳನ್ನು ಮಾತ್ರ ಅಳವಡಿಸಿಕೊಂಡಿದ್ದಾರೆ. ಡಾ. ಹಿರೇಮಠ ಅವರ ಒಂದೊಂದು ಅಧ್ಯಾಯಕ್ಕೆ ಸಾವಿರ ಸಾವಿರ ಶಾಸನಗಳನ್ನು ಬಳಸಿಕೊಂಡಿದ್ದಾರೆ. ನಾಗಯ್ಯ ಅವರದು ಇತಿಹಾಸವನ್ನು ಪುನರ್‌ರಚಿಸುವ ಚಾರಿತ್ರಿಕ ಅಧ್ಯಯನವಾಗಿದೆ. ಡಾ. ಹಿರೇಮಠ ಅವರದು ಒಂದು ಸಮಾಜವನ್ನು ಕಟ್ಟಿಕೊಡುವ ಆರ್ಥಿಕ ಚಟುವಟಿಕೆಗಳ ಸಮಗ್ರ ಅಧ್ಯಯವಾಗಿದೆ. ನಾಗಯ್ಯ ಅವರು ಒಬ್ಬ ಅರಸನ ಕಾಲಾವಧಿ, ಆಡಳಿತ ಪದ್ಧತಿ, ಆಡಳಿತ ಸುಧಾರಣೆಗಳು ಸಾಮ್ರಾಜ್ಯದ ವಿವಿಧ ಭಾಗಗಳು, ಆಡಳಿತ, ಆಡಳಿತದ ಕೇಂದ್ರಗಳು, ಅರಸರ ಪ್ರಶಸ್ತಿ ಬಿರುದುಗಳನ್ನು ಅಧ್ಯಯನಿಸಿದ್ದಾರೆ. ಆದರೆ ಡಾ. ಬಿ. ಆರ್. ಹಿರೇಮಠ ಅವರು ಪ್ರಾಚೀನ ಹಾಗೂ ಮಧ್ಯ ಕರ್ನಾಟಕದ ವರ್ತಕರು ಮತ್ತು ವರ್ತಕ ಪ್ರಕಾರಗಳು, ವರ್ತಕ ಸಂಘಗಳು, ವರ್ತಕರ ವ್ಯಾಪಾರ ಸ್ವರೂಪ ಮತ್ತು ಅಧಿಕಾರ ಸ್ವರೂಪ,

ವರ್ತಕರ ದಾನಕಾರ್ಯ, ಆಯ್ಯಾ ಹೊಳೆಯ ಐನೂರ್ವರ್ ಪ್ರಶಸ್ತಿ ಮುಂತಾದವುಗಳನ್ನು ವ್ಯಾಪಕವಾಗಿ ಅಧ್ಯಯನಿಸಿ ತಮ್ಮ ಮಹಾ ಪ್ರಬಂಧದಲ್ಲಿ ದಾಖಲುಗೊಳಿಸಿದ್ದಾರೆ. ಸುಮಾರು ೧೧೦೦ ವರ್ಷಗಳ ಕರ್ನಾಟಕದ ಜನಾಂಗದ ಜೀವನವಿಧಾನವನ್ನು ಶಾಸನಗಳ ಆಧಾರದಿಂದ ಸಮರ್ಪಕವಾಗಿ ನಿರೂಪಿಸಿದ್ದಾರೆ.

"ಜೀವನಾವಶ್ಯಕ ವಸ್ತು ಮತ್ತು ಕ್ರಿಯೆಗಳಿಗೆ ಮಾತ್ರ ಸೀಮಿತವಾಗಿದ್ದ ಮಾನವನ ಆರಂಭದ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ಕಾಲಕ್ರಮೇಣ ನಿಸರ್ಗ ಜೀವಿಯಾದ ಮಾನವ ಸಮಾಜ ಜೀವಿಯಾದಂತೆ ಈ ನೈಸರ್ಗಿಕ ವೃತ್ತಿಗಳೊಂದಿಗೆ ಅನೇಕ ಸಾಮಾಜಿಕ ವೃತ್ತಿಗಳು ಹುಟ್ಟಿಕೊಂಡವು. ಆನುವಂಶಿಕವಾದ ಈ ವೃತ್ತಿಗಳಿಂದ ಹಲವಾರು ಉಪವೃತ್ತಿ ಒಳ ವೃತ್ತಿಗಳು ಕವಲೊಡೆದವು ಮೊದಮೊದಲು ವೃತ್ತಿಯಾಗಿದ್ದ ಈ ವೃತ್ತಿಗಳು, ಜಾತಿವಾಚಿ, ಜನಾಂಗವಾಚಿ, ಪ್ರದೇಶವಾಚಿ ಮತ್ತು ವರ್ಗವಾಚಿ ವೃತ್ತಿಗಳಾಗಿ ನಿಂತವು. ಮಾನವನ ಜೀವನದ ಇತಿಹಾಸದಲ್ಲಿ ಸಮುದಾಯ ಜೀವನ ಅತ್ಯಂತ ಮಹತ್ವದ ಘಟ್ಟವೆನಿಸಿದೆ. ಸಹಕಾರ ತತ್ವ, ಸಂಘಟನಾ ಶಕ್ತಿ, ಸಹಬಾಳ್ವೆಗಳು ಹಸಿ ಹಸಿಯಾಗಿ ಕಾಣಿಸಿಕೊಂಡವು. ಮುಂದೆ ಸಂಘಗಳ ರಚನೆಗೆ ಇವೇ ಪ್ರೇರಕ ಅಂಶಗಳಾಗಿ ಪರಿಣಿಸಿದವು. ಸಂಘಗಳ ಲಿಖಿತ ರೂಪ ಇತಿಹಾಸಯುಗದಿಂದ ಆರಂಭವಾಗುತ್ತದೆ. ನಂತರ ಈ ಸಂಘಗಳು ಪ್ರದೇಶ ನಿಷ್ಠವಾಗಿಯೂ, ಜನಾಂಗ ನಿಷ್ಠವಾಗಿಯೂ, ಬೆಳೆದು ಬಂದವು."[೧೪] ಡಾ. ಬಿ. ಆರ್. ಹಿರೇಮಠ ಅವರು ಪ್ರತಿಪಾದಿಸಿರುವ ಈ ಮಾತುಗಳು ಮಾನವ ಜನಾಂಗಿಕ ಶಾಸ್ತ್ರಕ್ಕೆ ಸಂಬಂಧಿಸಿದವುಗಳಾಗಿವೆ.

ಡಾ. ಬಿ.ಆರ್. ಹಿರೇಮಠ ಅವರ ಮಹಾಪ್ರಬಂಧವು ಶಾಸನಕ್ಕೆ ಶಾಸನವಾಗಿ, ಇತಿಹಾಸಕ್ಕೆ ಇತಿಹಾಸವಾಗಿ, ಸಾಹಿತ್ಯಕ್ಕೆ ಸಾಹಿತ್ಯವಾಗಿ, ವಿಮರ್ಶೆಗೆ ವಿಮರ್ಶೆಯಾಗಿ, ವಾಣಿಜ್ಯ ಶಾಸ್ತ್ರಕ್ಕೆ ವಾಣಿಜ್ಯ ಶಾಸ್ತ್ರವಾಗಿ, ಮಾನವ ಜನಾಂಗ ಶಾಸ್ತ್ರಕ್ಕೆ ಮಾನವ ಜನಾಂಗ ಶಾಸ್ತ್ರವಾಗಿ ನಿಂತುಕೊಳ್ಳುತ್ತದೆ. ಅಂತರ್‌ಶಿಸ್ತೀಯ ಅಧ್ಯಯನ ಮತ್ತು ಬಹುಶಿಸ್ತೀಯ ಅಧ್ಯಯನಕ್ಕೆ ಈ ಪ್ರಬಂಧ ಒಂದು ಅತ್ಯುತ್ತಮ ಉದಾಹರಣೆಯಾಗಿದೆ.

"ಶಾಸನಗಳಲ್ಲಿ ಕರ್ನಾಟಕದ ವರ್ತಕರು ಮಹಾಪ್ರಬಂಧ ಎರಡು ದೃಷ್ಟಿಯಿಂದ ಗಮನಾರ್ಹವಾಗಿದೆ. ಒಂದು ಸಾಹಿತ್ಯವನ್ನು ಬಿಟ್ಟು ಶಾಸನಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಂಡದ್ದು. ಎರಡು ಶಾಸನಗಳನ್ನು, ಸಾಹಿತ್ಯಿಕ ಅಧ್ಯಯನವನ್ನು ಬಿಟ್ಟು ಅವು ತಿಳಿಸುವ ಪ್ರಾಚೀನ ವಾಣಿಜ್ಯ ಚಲನವಲನಗಳನ್ನು ಅಭ್ಯಸಿಸಿರುವುದು. ಇದರಿಂದಾಗಿ ಕರ್ನಾಟಕದ ಸಂಶೋಧನ ಕ್ಷೇತ್ರಕ್ಕೆ ಇದೊಂದು ಕೊಡುಗೆಯಾಗಿದೆ."

ಪ್ರಸ್ತುತ ಮಹಾ ಪ್ರಬಂಧದಲ್ಲಿ "ಈವರೆಗೆ ನಮಗೆ ಗೊತ್ತಿಲ್ಲದ ಅನೇಕ ಅಂಶಗಳು ಪ್ರಪ್ರಥಮ ಸಲ ಬೆಳಕಿಗೆ ಬಂದಿವೆ. ಕೆಲವೊಮ್ಮೆ ಈ ಮೊದಲಿನ ಶೋಧನೆಗಳು ಪರಿಷ್ಕರಣಗೊಂಡಿವೆ. ಸಮಾರೋಪ ಅಧ್ಯಯನವಲ್ಲದೆ ಶ್ರಮವಹಿಸಿ ಜೋಡಿಸಿದ ಉಪಯುಕ್ತ ಅನುಬಂಧಗಳು ಈ ಮಹಾ ಪ್ರಬಂಧದ ಮೌಲಿಕತೆಯನ್ನು ಹೆಚ್ಚಿಸಿವೆ. ಈ ಎಲ್ಲ ಅಂಶಗಳಿಂದಾಗಿ ಈ ಮಹಾ ಪ್ರಬಂಧಕ್ಕೆ ಪ್ರಾಚೀನ 'ವಾಣಿಜ್ಯ ಕೋಶ'ದ ಮಹತ್ವ ಪ್ರಾಪ್ತವಾಗಿದೆ"[೧೫] ಎಂಬ ಕೀರ್ತಿಗೆ ಭಾಜನವಾಗಿದೆ.

**೩.೨.೦. ಶಾಸನ ಅಧ್ಯಯನ :**

ಶಾಸನ ಸಾಹಿತ್ಯದ ಅಧ್ಯಯನವು ಶ್ರಮ, ಸಮಯ, ಸಂಯಮಗಳನ್ನು ಬಯಸುವಂತಹದು. ಡಾ. ಬಿ. ಆರ್. ಅವರಲ್ಲಿ ಆರಂಭದಿಂದಲೂ ಸಂಶೋಧನೆಯ ಶಿಸ್ತು ಮನೆಮಾಡಿತ್ತು. ಈ ಭಾಗದಲ್ಲಿ ಪಿಎಚ್.ಡಿ. ಮಹಾಪ್ರಬಂಧವನ್ನು ಹೊರತುಪಡಿಸಿ ಇನ್ನುಳಿದ ಶಾಸನಗಳ ಅಧ್ಯಯನವನ್ನು ಪರಿಶೀಲಿಸುವುದಾಗಿದೆ. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಕೃತಿಯ ಯಶಸ್ಸು ಶಾಸನಗಳ ಪರಿವೀಕ್ಷಣೆ, ಶೋಧ, ಅಧ್ಯಯನ ಪ್ರಕಟಣೆಗಳಿಗೆ ಸ್ಫೂರ್ತಿಯಾಯಿತು. ಡಾ. ಹಿರೇಮಠರು ಯಲಿವಾಳ, ಯಾವಗಲ್ಲ, ಹೆರೂರು, ಶಿರೋಳ, ಮುದನೂರು, ಯಡ್ರಾಮಿ, ಮಜ್ಜಿಗುಡ್ಡ, ಬೀಳಗಿ, ಕವಿಳಾಸಪುರ, ಮುತ್ತಗಿ ಮೊದಲಾದ ಹೊಸ ಶಾಸನಗಳನ್ನು ಶೋಧಿಸಿ ಪ್ರಕಟಿಸಿದರು. ಮುದನೂರು ಕೊಡೆಕಲ್ಲ, ಬೈಚವಾಳ, ಕೆಂಭಾವಿ, ಬಸವಕಲ್ಯಾಣದ ಶಾಸನದ ಪರಿವೀಕ್ಷಣೆ ಕೈಗೊಂಡರು. ಧಾರವಾಡ, ಬಿಜಾಪೂರ, ಬಾಗಲಕೋಟೆ ಜಿಲ್ಲೆಗಳ ಶಾಸನಗಳನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಿದರು. ಹುಕ್ಕೇರಿ, ಚಿಕ್ಕೋಡಿ ವಿಭಾಗದಲ್ಲಿ ಕ್ಷೇತ್ರಕಾರ್ಯ ಕೈಕೊಂಡು ಬಸವಣ್ಣನವರ ವಂಶಜರ ಕವಿಳಾಸಪುರ ಶಾಸನವನ್ನು ಪದೇ ಪದೇ ಪರಿಶೀಲಿಸಿ ಹೊಸದನ್ನು ದಾಖಲಿಸಿದರು.

ವೀರಗಲ್ಲುಗಳು, ಬಿಜಾಪುರ ಜಿಲ್ಲೆಯ ಶಾಸನಗಳು, ಐಹೊಳೆ ನಿಷ್ಪತ್ತಿ ಹಾಗೂ ಪ್ರಾಚೀನತೆ, ಶಾಸನದಲ್ಲಿ ಗದಾಯುದ್ಧದ ಕಂದಪದ್ಯ, ಆರನೇ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮೀ ಮಹಾದೇವಿ, ತರ್ದವಾಡಿ ನಾಡು ಬಾಗೇವಾಡಿ, ಹದಿನೆಂಟು ಸಂತತಿ, ಹೆರೂರು ನಿಷಧಿ ಶಾಸನಗಳು ಮುಂತಾದವು ಪ್ರಮುಖವಾಗಿವೆ.

**೩.೨.೧. : ವೀರಗಲ್ಲುಗಳು :**

ಇದು ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗದ ಉಪನ್ಯಾಸ ಗ್ರಂಥಮಾಲೆಯಲ್ಲಿ ೧೯೭೬ರಲ್ಲಿ ಪ್ರಕಟವಾಗಿರುವ ಕಿರು ಹೊತ್ತಿಗೆಯಾಗಿದೆ. ಇದರಲ್ಲಿ ಕರ್ನಾಟಕದ ಶಾಸನಗಳು, ಸ್ಮಾರಕ ಶಾಸನಗಳು, ವೀರಗಲ್ಲುಗಳ ಸಾಹಿತ್ಯ ಹಾಗೂ ಉಪಸಂಹಾರ ಎಂಬ ಏಳು ಉಪ ಅಧ್ಯಾಯಗಳಿವೆ. ವೀರಗಲ್ಲುಗಳು ಪ್ರಾಚೀನ ಕನ್ನಡಿಗರು ತಮ್ಮ ಬದುಕಿನ ಪಥದಲ್ಲಿ ಇರಿಸಿಕೊಂಡ ಆದರ್ಶ, ನಂಬಿದ ಮೌಲ್ಯ, ತೋರಿದ

ಶೌರ್ಯ, ತ್ಯಾಗ, ಬಲಿದಾನಗಳ ಕಥೆಯನ್ನು ತಿಳಿಸಿ ಹೇಳುವ ಕಥಾಕೋಶಗಳಾಗಿವೆ. ಕನ್ನಡಿಗರು ತಮ್ಮ ಬದುಕಿನಲ್ಲಿ ರೂಢಿಸಿಕೊಂಡಿದ್ದು ಅನೇಕ ಮೌಲ್ಯಗಳಲ್ಲಿ ಚಾಗ ಮತ್ತು ಬೀರಕ್ಕೆ ಅಗ್ರ ತಾಂಬೂಲವಿದೆ. ೮-೯-೧೦-೧೧ನೇ ಶತಮಾನಗಳು ತ್ಯಾಗ ಮತ್ತು ವೀರಕ್ಕೆ ಹೆಸರುವಾಸಿಗಳಾಗಿದ್ದುವು. ಕರ್ನಾಟಕದಲ್ಲಿ ವೀರ ಪರಂಪರೆಗೆ ಸುದೀರ್ಘವಾದ ಇತಿಹಾಸವಿದೆ. ಪಂಪ ಮತ್ತು ರನ್ನರ ಕಾವ್ಯಗಳು ಇದಕ್ಕೆ ಅತ್ಯುತ್ತಮ ಉದಾಹರಣೆಗಳಾಗಿವೆ ಎಂಬುದನ್ನು ಈ ಕೃತಿಯಲ್ಲಿ ಅರ್ಥವತ್ತಾಗಿ ನಿರೂಪಿಸಿದ್ದಾರೆ. ವೀರಗಲ್ಲು, ವೀರಗಲ್ಲು ಪ್ರಕಾರಗಳು ವೀರಗಲ್ಲುಗಳ ಶಿಲ್ಪ, ವೀರಗಲ್ಲುಗಳ ಸಾಹಿತ್ಯ ಈ ವಿಷಯವಾಗಿ ಶಾಸನಗಳನ್ನು ಆಧರಿಸಿ ಕಾವ್ಯ ಪಠ್ಯಗಳನ್ನು ಉಲ್ಲೇಖಿಸಿ ವಿಷಯ ಪ್ರತಿಪಾದಿಸಿದ್ದಾರೆ. ಇದೊಂದು ಮೌಲಿಕ ಗ್ರಂಥವಾಗಿದೆ.

"ಹಳ್ಳಿಗರ ಜ್ಞಾನ ಅಲಕ್ಷ್ಯಗಳಿಗೆ ತುತ್ತಾಗಿ ಅಳಿದು ಹೋಗುತ್ತಿರುವ ವೀರಗಲ್ಲುಗಳನ್ನು ಸಂಗ್ರಹಿಸಬೇಕು. ಹಳ್ಳಿ ಹಳ್ಳಿಗಳಲ್ಲಿ ಪರದೇಶಿಯಾಗಿ ಬಿದ್ದಿರುವ ಇವುಗಳ ರಕ್ಷಣೆಯ ವ್ಯವಸ್ಥೆಯಾಗಬೇಕು. ವೀರಗಲ್ಲುಗಳ ಶಿಲ್ಪದ ಅಮೂಲಾಗ್ರ ಅಧ್ಯಯನ ವೀರಗಲ್ಲುಗಳ ಪ್ರತ್ಯೇಕ ಸಂಪುಟ, ವೀರಗಲ್ಲುಗಳಿಗೆ ಸಂಬಂಧಿಸಿದ ಹಲವು ಬಗೆಯ ಕಥೆಗಳ ಸಂಗ್ರಹ, ವೀರರನ್ನು ಕುರಿತು ಪ್ರಚಲಿತವಾಗಿರುವ ಲಾವಣಿಗಳ ಸಂಗ್ರಹ, ವೀರರ ಹೆಸರಿನಲ್ಲಿ ಆಚರಿಸುತ್ತಿರುವ ಜಾತ್ರೆ, ಉತ್ಸವ ಮುಂತಾದವು ಸಂಶೋಧನಾ ಮತ್ತು ಚಿತ್ರಣ ಕಾರ್ಯಗಳು ನಡೆಯಬೇಕಾಗಿದೆ"[೧೬] ಎಂದು ಹೇಳಿರುವುದು ವೀರಗಲ್ಲುಗಳ ಸಂರಕ್ಷಣೆ ಮಾಡಬೇಕೆನ್ನುವ ಕಾಳಜಿ ಇದರ ಹಿಂದಡಗಿರುವುದನ್ನು ಗುರುತಿಸಬಹುದಾಗಿದೆ.

ಸಂಶೋಧನಾ ಪಥವು ಡಾ. ಹಿರೇಮಠ ಅವರ ಶಾಸನ ಸಾಹಿತ್ಯವನ್ನು ಒಳಗೊಂಡ ಕೃತಿಯಾಗಿದೆ. ಧಾರವಾಡದ ಚೇತಕ ಪ್ರಕಾಶನವು ೧೯೮೮ರಲ್ಲಿ ಇದನ್ನು ಪ್ರಕಟಿಸಿದೆ ಬಿಜಾಪುರ ಜಿಲ್ಲೆಯ ಶಾಸನಗಳು, ಐಹೊಳೆ ನಿಷ್ಪತ್ತಿ ಹಾಗೂ ಪ್ರಾಚೀನತೆ, ಶಾಸನದಲ್ಲಿ ಗದಾಯುದ್ಧದ ಕಂದಪದ್ಯ, ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮೀ ಮಹಾದೇವಿ, ತರ್ದವಾಡಿನಾಡು ಬಾಗೇವಾಡಿ, ೧೮ ಸಂತತಿ, ಹೆರೂರು ನಿಷಧಿಶಾಸನಗಳು ಇವು ಸಂಶೋಧನಾ ಪಥದಲ್ಲಿರುವ ಶಾಸನಗಳನ್ನು ಕುರಿತಾಗಿರುವ ಲೇಖನಗಳು.

**ಬಿಜಾಪುರ ಜಿಲ್ಲೆಯ ಶಾಸನಗಳು :**

ಬಿಜಾಪುರದ ಹತ್ತು ತಾಲೂಕಿನಲ್ಲಿರುವ ಒಟ್ಟು ಶಾಸನಗಳನ್ನು ಸಂಕಲಿಸಿ ಅಧ್ಯಯನಿಸಲಾಗಿದೆ. ಆಯಾ ತಾಲೂಕಿನಲ್ಲಿ ಲಭ್ಯವಾದ ಗ್ರಾಮಗಳ ಸಂಖ್ಯೆ, ಶಾಸನಗಳು ಇದ್ದ ಗ್ರಾಮಗಳ ಸಂಖ್ಯೆ, ಒಟ್ಟು ಶಾಸನಗಳು ಪ್ರಕಟಿತ ಅಪ್ರಕಟಿತ ಶಾಸನಗಳ ಯಾದಿಯನ್ನೇ ನೀಡಿರುವುದು ಖಚಿತವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ. ವಿಜಾಪುರ ಜಿಲ್ಲೆ ಮತ್ತು ಮಧ್ಯಕಾಲೀನ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ

ವಿಭಾಗಗಳಾಗಿ ವಿಂಗಡಿಸಿ ಶಾಸನಗಳನ್ನು ಅಧ್ಯಯನ ಮಾಡಿದ್ದಾರೆ. ಬಿಜಾಪೂರ ಜಿಲ್ಲೆಯ ಸಮಗ್ರ ಶಾಸನಗಳ ಅಧ್ಯಯನ ಒಂದು ಮಹಾ ಪ್ರಬಂಧದ ವಿಷಯಕ್ಕೆ ಯೋಗ್ಯವಾದುದು. ಆದರೂ ಈ ಲೇಖನದ ಚೌಕಟ್ಟಿನೊಳಗೆ ಹೊಂದಿಸಿ ವಿವೇಚಿಸಿದ್ದು ಮಹತ್ತರವಾದ ಅಂಶವಾಗಿದೆ. ಈ ಲೇಖನದಿಂದ ಬಿಜಾಪೂರ ಜಿಲ್ಲೆಯ ಪ್ರಾಚೀನ ಮತ್ತು ಮಧ್ಯಕಾಲೀನ ಜನರ ಬದುಕಿನ ಚಿತ್ರಣ ಸ್ಥೂಲವಾಗಿ ಲಭಿಸುತ್ತದೆ.

**ಐಹೊಳೆ ನಿಷ್ಪತ್ತಿ ಹಾಗೂ ಪ್ರಾಚೀನತೆ :**

ಈ ಲೇಖನವು ಶಾಸನಗಳನ್ನು ಆಧರಿಸಿ ಐಹೊಳೆ ಪದದ ನಿಷ್ಪತ್ತಿಯನ್ನು ನೀಡಲಾಗಿದೆ. ಇದರಲ್ಲಿ ಪಂಡಿತ ನಿಷ್ಪತ್ತಿ, ಪಾಮರ ನಿಷ್ಪತ್ತಿ, ಎರಡನ್ನೂ ಪರಿಚಯಿಸುತ್ತ ನಿಜ ನಿಷ್ಪತ್ತಿಯನ್ನು ನೀಡಿದ್ದಾರೆ. ಇದು ಗ್ರಾಮನಾಮಕ್ಕೆ ಸಂಬಂಧಿಸಿದ ಅಧ್ಯಯನವಾಗಿದೆ ಐದು ಪುಟದ ಲೇಖನಕ್ಕೆ ೩೦ ಅಡಿಟಿಪ್ಪಣೆಗಳನ್ನು ಬಳಸಿರುವುದು ಡಾ. ಬಿ. ಆರ್. ಅವರ ಶ್ರಮ ಸಂಸ್ಕೃತಿಗೆ ಸಾಕ್ಷಿಯಾಗಿದೆ. ಶಾಸನಗಳ ಜೊತೆಗೆ ಜಾನಪದ, ವ್ಯಾಕರಣ ಮತ್ತು ಸಾಹಿತ್ಯ ಕೃತಿಗಳನ್ನು ಪೂರಕ ಸಾಮಗ್ರಿಯಾಗಿ ಬಳಸಿಕೊಂಡಿರುವುದು ಶ್ರೀಯುತರ ಬಹು ಶ್ರುತತೆಗೆ ನಿದರ್ಶನವಾಗಿದೆ.

**ಶಾಸನದಲ್ಲಿ ಗದಾಯುದ್ಧದ ಕಂದ ಪದ್ಯ :**

ತರಿಕೆರೆ ಶಾಸನದಲ್ಲಿ ರನ್ನನ ಗದಾಯುದ್ಧದ ಪದ್ಯವನ್ನು ಗುರುತಿಸಿದ್ದಾರೆ. ಇಲ್ಲಿಯವರೆಗೆ ಗದಾಯುದ್ದದ ಯಾವ ಪದ್ಯವೂ ಶಾಸನಗಳಲ್ಲಿ ಕಂಡುಬಂದಿರಲಿಲ್ಲ. ಆದರೆ 'ತುಜಿಗೊಳೊಳ್' ಎಂದು ಆರಂಭವಾಗುವ ಕಂದ ಪದ್ಯವು ಕ್ರಿ. ಶ. ೧೨೦೯ರ ಮುದಿಗೆರೆಯ ಶಾಸನದಲ್ಲಿರುವುದನ್ನು ಡಾ. ಬಿ. ಆರ್. ಅವರು ಸಂಶೋಧಿಸಿದ್ದಾರೆ. ಇದು ಹೊಚ್ಚ ಹೊಸ ಅಂಶವಾಗಿದೆ.

"ಎರಡು ಶತಮಾನಗಳ ತರುವಾಯ ಗದಾಯುದ್ಧದ ಕಂದ ಪದ್ಯ ಒಂದನ್ನು ಶಾಸನ ಕವಿ ಕೆಲವು ಮಾರ್ಪಾಟುಗಳೊಂದಿಗೆ ಸ್ವೀಕರಿಸಿದುದು, ಉತ್ತರ ಕರ್ನಾಟಕದಲ್ಲಿ ಹುಟ್ಟಿದ ಗದಾಯುದ್ಧ ಕೃತಿ ಈ ಅವಧಿಯಲ್ಲಿ ದಕ್ಷಿಣ ಕರ್ನಾಟಕದ ತರಿಕೆರೆಯ ಪ್ರದೇಶದಲ್ಲಿ ಪ್ರಸಾರಗೊಂಡದ್ದು ಗಮನಾರ್ಹವಾದ ಸಂಗತಿ"[೧೭] ಎಂದಿರುವುದು. ಡಾ. ಬಿ. ಆರ್. ಹಿರೇಮಠರ ಆಳವಾದ ಅಧ್ಯಯನ, ಸೂಕ್ಷ್ಮಶಾಸನಗಳ ಪರಿವೀಕ್ಷಣೆಗೆ ಉದಾಹರಣೆಯಾಗಿದೆ.

**ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮಿ ಮಹಾದೇವಿ :**

೬ನೆಯ ವಿಕ್ರಮಾದಿತ್ಯನ ಒಲುಮೆಯ ಕಾಂತೆಯೂ ಪಿರಿಯರಸಿಯೂ ಆದ ಲಕ್ಷ್ಮೀ ಮಹಾದೇವಿಯನ್ನು ಕುರಿತಾಗಿ ವಿವರಿಸುವ ಲೇಖನವಿದು. ಶಾಸನಗಳ ಹಿನ್ನೆಲೆಯಲ್ಲಿ ಅವಲೋಕಿಸಿ

ಲಕ್ಷ್ಮೀ ಮಹಾದೇವಿಯು, ಸ್ವತಂತ್ರವಾಗಿ ಆಡಳಿತ ನಡೆಸಿದ ಸಂಗತಿಯನ್ನು ಆಧಾರಗಳೊಂದಿಗೆ ನಿರೂಪಿಸಿದ್ದಾರೆ. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅವಧಿ ಬಸವಪೂರ್ವ ವೀರಶೈವ ಘಟ್ಟವೆನಿಸಿಕೊಂಡಿದೆ. ವೀರಶೈವದ ಆಚಾರ-ವಿಚಾರಗಳು ವಚನ ಸಾಹಿತ್ಯವು ಆಕಾರ ಪಡೆಯುತ್ತಿದ್ದ ಕಾಲ ಆ ಸಂದರ್ಭದಲ್ಲಿದ್ದ "ಲಕ್ಷ್ಮೀ ಮಹಾದೇವಿಯ ವೀರಶೈವರ ಒಲುಮೆ ಕ್ರಮೇಣ ಗಟ್ಟಿಗೊಳ್ಳತೊಡಗಿದ ಕಾಲ"[೧೮] ಎಂದು ಶಾಸನವನ್ನು ಉಲ್ಲೇಖಿಸಿ ವಿಷಯವನ್ನು ಪ್ರತಿಪಾದಿಸಿದ್ದಾರೆ.

**ತರ್ದವಾಡಿ ನಾಡು ಬಾಗೇವಾಡಿ :**

ಇದು ಬಸವಣ್ಣನವರ ಪೂರ್ವಜರಾದ ಅರ್ಜುನವಾಡದಲ್ಲಿರುವ ಶಾಸನಕ್ಕೆ ಪೂರಕವಾಗಿರುವ ಅಂಶಗಳನ್ನು ತಿಳಿಸುತ್ತದೆ. ಇದರಲ್ಲಿ ತರ್ದವಾಡಿ ನಾಡಿನ ಮೇರೆಗಳು (ಸೀಮೆ) ಬಿಜಾಪೂರ ಜಿಲ್ಲೆಯಲ್ಲಿರುವ ಬಾಗೇವಾಡಿಯ ಸುತ್ತಲಿರುವ ಹಳ್ಳಿಗಳನ್ನು ಉಲ್ಲೇಖಿಸುತ್ತದೆ.

"ತರ್ದವಾಡಿ ನಾಡಿನಲ್ಲಿ ಬಾಗೇವಾಡಿ ಮಧ್ಯದಲ್ಲಿದೆ ಎಂದು ಅರ್ಜುನವಾಡ ಶಾಸನ ಹೇಳಿದುದರಿಂದ ತರ್ಧ(ರ್ದ) ವಾಡಿ ಮಧ್ಯಗ್ರಾಮ ಬಾಗವಾಡಿ ಎಂದರೆ ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿಯೇ ಹೊರತು ಬೆಳಗಾವಿ ಜಿಲ್ಲೆಯ ಬೆಲ್ಲದ ಬಾಗೇವಾಡಿ ಅಲ್ಲವೆಂಬುದು ಮೇಲಿನ ವಿವರಗಳಿಂದ ಸ್ಪಷ್ಟವಾಗುತ್ತದೆ"[೧೯] ಎಂದು ಪ್ರತಿಪಾದಿಸಿದ್ದಾರೆ.

"ತರ್ದವಾಡಿ ನಾಡು ಬಿಜಾಪುರ ಜಿಲ್ಲೆಯೂ ಕೂಂಡಿನಾಡು ಹಾಗೂ ಮಲೆನಾಡುಗಳು ಬೆಳಗಾವಿ ಜಿಲ್ಲೆಯೂ ಇದ್ದುದು, ಆಯಾ ಜಿಲ್ಲೆಯ ಶಾಸನಗಳ ಅಧ್ಯಯನದಿಂದ ತಿಳಿಯುತ್ತದೆ. ಇದಲ್ಲದೆ ಬಸವಣ್ಣನವರ ಜನ್ಮಗ್ರಾಮ, ತದ್ದವಾಡಿ, ಮಧ್ಯಗ್ರಾಮ, ಬಾಗವಾಡಿ ಎಂದರೆ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ಎಂಬುದೂ ಬಸವಣ್ಣನವರ ವಂಶಜ (ಬಸವಣ್ಣನವರ ಅಣ್ಣನಾದ ದೇವರಾಜನ ಮಗ, (ಕಲಿದೇವರಸನ ಮಗ) ಹಾಲಬಸವಿದೇವನ (ಕ್ರಿ.ಶ. ೧೨೬೦) ವಾಸಸ್ಥಳ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಕವಿಳಾಸಪುರ (ಈಗ ಭೂಗತವಾಗಿದೆ) ಎಂಬುದೂ ಮೇಲಿನ ಈ ಎಲ್ಲ ವಿವೇಚನೆಗಳಿಂದ ಸ್ಪಷ್ಟವಾಗುತ್ತದೆ"[೨೦] ಎಂದು ಅಂತಿಮ ತೀರ್ಮಾನವನ್ನು ನೀಡಿದ್ದಾರೆ.

**ಹದಿನೆಂಟು ಸಂತತಿ ಮತ್ತು ಹೆರೂರು ನಿಷಧಿ ಶಾಸನಗಳು :**

ಇವು ಶಾಸನ ಕುರಿತು ಮತ್ತೆರಡು ಲೇಖನಗಳು ಒಂದರಲ್ಲಿ ಪಾರಿಭಾಷಿಕ ಹಾಗೂ ವಿಶೇಷ ಶಬ್ದದ ಅರ್ಥ ವಿವರಣೆ ಇದೆ. ಇನ್ನೊಂದರಲ್ಲಿ ಹೆರೂರಿನಲ್ಲಿ ದೊರಕಿದ ನಿಷಧಿಶಾಸನಗಳ ವಿವರಣೆ ಇದೆ.

"ಪ್ರಸ್ತುತ ಸಂಶೋಧನಾ ಪಥ ಗ್ರಂಥದಲ್ಲಿ ಸಂಕಲನಗೊಂಡಿರುವ ಲೇಖನಗಳು ಕೆಲವು ಹೊಸ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಿವೆ. ಡಾ. ಹಿರೇಮಠರ ಸಂಶೋಧನೆ ಸರಿಯಾದ ಮಾರ್ಗದಲ್ಲಿ

ಮುಂದುವರಿಯುತ್ತಿರುವುದನ್ನು ಇವು ಸೂಚಿಸುತ್ತಿವೆ. ಸುಲಭ ಸಾಧ್ಯವಲ್ಲದ ಸಂಶೋಧನೆಗೆ ತೆಕ್ಕೆಬಿದ್ದು, ಅದಕ್ಕಾಗಿಯೇ ಅರ್ಪಿತ ಮನೋಭಾವದಿಂದ ದುಡಿಯುತ್ತಿರುವ ಡಾ. ಬಿ. ಆರ್. ಹಿರೇಮಠ ಅವರು ಸಂಶೋಧನಾ ಕ್ಷೇತ್ರಕ್ಕೆ ಮೌಲಿಕ ಕೊಡುಗೆ ನೀಡಬಲ್ಲರೆಂಬ ನಂಬಿಕೆಯನ್ನು ಇವು ಓದುಗರಲ್ಲಿ ನಿಶ್ಚಯವಾಗಿ ಮೂಡುತ್ತವೆ."[೨೧] ಈ ಮಾತುಗಳು ಪ್ರಸ್ತುತ ಕೃತಿಯ ಮೌಲ್ಯವನ್ನು ಹೇಳುತ್ತವೆ.

**ಹೆರೂರು ನಿಷಧಿ ಶಾಸನಗಳು :**

ಈ ಲೇಖನ ೨ ಪುಟವನ್ನು ಒಳಗೊಂಡಿದೆ. ಇದು ಸಂಶೋಧನಾ ಪಥದ ೯ನೇ ಲೇಖನವಾಗಿದೆ. ಧಾರವಾಡ ಜಿಲ್ಲೆಯ ಹಾನಗಲ್ ತಾಲೂಕಿನ ಹೆರೂರ ಗ್ರಾಮದ ನಿಂಗನಗೌಡ ಹೊನ್ನಗೌಡ ಪಾಟೀಲ ಅವರ ಮನೆಯ ಹಿತ್ತಲಲ್ಲಿ ಲಭಿಸಿದ ನಿಷಧಿ ಶಾಸನಗಳನ್ನು ಅಧ್ಯಯನಿಸಲಾಗುವುದು. "ಗಾವುಂಡ ಮನೆತನದ ಬೊಪ್ಪಗೌಡ, ದೇವಗೌಡ ಸಹೋದರರು ಕಡಕೋಳ ಗ್ರಾಮದವರು. ಕಿರಿಯವನಾದ ದೇವಗೌಡನ ಹೆಂಡತಿ ಗೌರಿ ಗೌಡತಿ. ಈ ದಂಪತಿಗಳಿಗೆ ಹುಟ್ಟಿದ ಮಕ್ಕಳು ಕನಕವ್ವೆ, ನಾಗವ್ವೆ. ಕನಕವ್ವೆ ಹಿರಿಯಮಗಳಾದರೆ ನಾಗವ್ವೆ ಕಿರಿಯಳು. ಮಣಿಗ ವತ್ತು ಹೆಗ್ಗಡ್ಡೆ ಮಲ್ಲಯ್ಯನ ಧರ್ಮಪತ್ನಿ, ನಾಗವ್ವೆ. ಇವರಿಬ್ಬರ ಗುರು ಮೂಲಸಂಘ ಸೂರ್ಯಸ್ಥ ಗಣದ ನಂದಿ ಭಟ್ಟಾರಕ ದೇವರು. ಕನಕವ್ವೆ ಕ್ರಿ.ಶ. ೧೨೪೫ ಡಿಸೆಂಬರ್ ಇಪ್ಪತ್ತೇಳು ಬುಧವಾರ ರಾತ್ರಿ, ನಾಗವ್ವೆ ಕ್ರಿ. ಶ. ೧೨೫೯ ಸೆಪ್ಟೆಂಬರ್ ೨೬ ಶುಕ್ರವಾರ ರಾತ್ರಿ ಸಮಾಧಿವಿಧಿಯಿಂದ ಮರಣ ಹೊಂದಿದ್ದಾರೆ." ಈ ಅಂಶವನ್ನು ಈ ನಿಷಧಿ ಶಾಸನಗಳು ವಿವರಿಸುತ್ತವೆ. ಸಮಾಧಿಮರಣ ಸಂದರ್ಭದಲ್ಲಿ ಮುನಿಗಳಿಗೆ ದಾನ ಮಾಡುತ್ತಿದ್ದ, ಜನಪದ ಧ್ಯಾನಾಸಕ್ತರಾಗುತ್ತಿದ್ದ, ಸನ್ಯಸನವನ್ನು ಹೊಂದುತ್ತಿದ್ದ ಸಂಗತಿಗಳು ಈ ನಿಷಧಿ ಶಾಸನದಲ್ಲಿರುವುದನ್ನು ಡಾ. ಬಿ. ಆರ್. ಅವರು ವಿಶ್ಲೇಷಿಸಿದ್ದಾರೆ. ೧೨೪೫ರ ಕನಕವ್ವೆ ನಿಷಧಿಗಲ್ಲಿನಲ್ಲಿ ಬರೆದ ಚಂಪಕಮಾಲಾ ವೃತ್ತವನ್ನೇ ಕ್ರಿ.ಶ. ೧೨೫೯ರ ನಾಗವ್ವೆಯ ಸಮಾಧಿ ಮರಣ ವರ್ಣನಾ ಪ್ರಸಂಗದಲ್ಲಿಯೂ ನೇರವಾಗಿ ಬಳಸಿಕೊಂಡಿರುವುದನ್ನು ವಿವರಿಸುತ್ತ - "ಸಂದರ್ಭಕ್ಕೆ ಹೊಂದಿಕೊಳ್ಳುವ ಈ ವೃತ್ತವನ್ನು ನಾಗವ್ವೆಯ ನಿಷಧಿಗಲ್ಲಿನಲ್ಲಿ ಪುನರುಕ್ತಗೊಳಿಸುವಾಗ ಮೂಲದ ಕನಕಾಂಬಿಕೆ ಹೆಸರನ್ನು 'ಕನಕಾಂಬಿಲೆ' ಎಂದು ('ಲೆ' ವ್ಯತ್ಯಾಸದೊಂದಿಗೆ) ಹಾಗೆಯೇ ಉಳಿಸಿಕೊಂಡಿರುವುದು. ಲಿಪಿಕಾರನ ಅವಧಾನತೆಯನ್ನು ತೋರಿಸುತ್ತದೆ. ಜೊತೆಗೆ ೩-೪ನೇ ಚರಣಗಳ ಆದಿ ಪ್ರಾಸಾಕ್ಷರದ (ಮೂಲದ) 'ಮ' -ಬದಲಾಗಿ 'ವ' ಸೇರಿಸಿದ್ದಾರೆ. ದ್ವಿತೀಯ ಚರಣದ ಮೂಲದ 'ಸಮತೆಯನ್ನೊಕ್ಕು' 'ಸಮತೆಯನ್ನೊಳಪೊಕ್ಕು' ಆಗಿದೆ. ಲಿಪಿಕಾರ ಮಾಡಿದ (ಳ ಪೊ ಅಕ್ಷರಗಳ) ಆಗಮ ರೂಪದ ಸ್ಖಾಲಿತ್ಯದಿಂದ ಇಂಥ ಛಂದೋಭಂಗ ಉಂಟಾಗಿದೆ."[೨೨] ಇಂತಹ ಸೂಕ್ಷ್ಮ ಸಂಗತಿಗಳನ್ನು ಬಿ. ಆರ್. ಹಿರೇಮಠ ಅವರು ಪ್ರಸ್ತಾಪಿಸಿದ್ದಾರೆ. ಭಾಷೆ -ವ್ಯಾಕರಣ ಛಂದಸ್ಸುಗಳ ಹಿನ್ನೆಲೆಯಲ್ಲಿಯೂ ಕೂಡ ಅಧ್ಯಯನ ಕೈಕೊಂಡಿರುವುದು ಗಮನಾರ್ಹವಾಗಿದೆ. "ಸಾಹಿತ್ಯಿಕ ಗುಣದಿಂದ ತುಂಬಿ ನಿಂತಿರುವ ಬಂಧುಗಳು ಶೋಕಿಸುವ ವಾಸ್ತವಿಕ ಸಂಗತಿಗಳನ್ನು ಪ್ರಕಟಪಡಿಸುವ, ಮರಣ

ಮಿತಿಯನ್ನು ಹೇಳುವ ಸಮಾನ ಸಂದರ್ಭ, ಸಂಬಂಧಿಕರ ಶಾಸನದಲ್ಲಿ (೧೪ ವರ್ಷಗಳ ತರುವಾಯ) ಪುನರುಕ್ತಗೊಂಡ ಚಂಪಕಮಾಲಾ ವೃತ್ತವನ್ನು ತಿಳಿಸುವ ಲಿಪಿಕಾರನ ಸ್ಖಾಲಿತ್ಯ ಕಾರಣ ಪ್ರಮಾಣಗಳನ್ನು ಪರಿಚಯಿಸುವ ಈ ನಿಷಧಿ ಶಾಸನಗಳು ನಿಜಕ್ಕೂ ವೈಶಿಷ್ಟ್ಯಪೂರ್ಣವೆನಿಸಿವೆ"[೨೩] ಎಂದು ವ್ಯಾಖ್ಯಾನಿಸಿರುವುದು ಗಮನಾರ್ಹವಾಗಿದೆ.

**೩.೩.೦. ಹಸ್ತಪ್ರತಿ ಅಧ್ಯಯನ :**

ಹಸ್ತಪ್ರತಿಗಳು ನಾಡಿನ ಸಂಪತ್ತು. ಯಾವುದೇ ಜನಾಂಗದ ಜೀವನ ವಿಧಾನದ ಅಧಿಕೃತ ದಾಖಲೆಗಳು. ಒಂದು ನಾಡಿನ ಸಾಮಾಜಿಕ, ರಾಜಕೀಯ ಭೌಗೋಳಿಕ, ಧಾರ್ಮಿಕ, ಆರ್ಥಿಕ ಚಟುವಟಿಕೆಗಳನ್ನು ಕಟ್ಟಿಕೊಡುವಲ್ಲಿ ಹಸ್ತಪ್ರತಿಗಳ ಪಾತ್ರ ಮಹತ್ತರವಾದುದು. "ಹಸ್ತಪ್ರತಿಗಳು ನಮ್ಮ ಸಂಸ್ಕೃತಿಯ ನಿಧಿಯೂ ಹೌದು. ರಾಜ್ಯದ ಒಳಹೊರಗಿನ ಅನೇಕ ಮಠ ಮಂದಿರಗಳಲ್ಲಿ ಮತ್ತು ಅಭ್ಯಾಸಪ್ರಿಯ, ವ್ಯಕ್ತಿಗಳ ವಶದಲ್ಲಿರುವ ಇವು ಇಂದು ವಾಚನ ದೂರ ವಸ್ತುಗಳಿಗಾಗಿ ಉಪೇಕ್ಷೆಗೆ ಗುರಿಯಾಗಿವೆ."[೨೪] ಉಪೇಕ್ಷಿತ ಕ್ಷೇತ್ರಗಳತ್ತ ಡಾ. ಬಿ. ಆರ್. ಹಿರೇಮಠರಿಗೆ ವಿಶೇಷ ಪ್ರೀತಿ. 'ಹಸ್ತಪ್ರತಿ ಲಿಪಿಕಾರರು' ಡಾ. ಹಿರೇಮಠ ಸ್ವಾತಂತ್ರ್ಯ ಲೇಖನ, ಇದು ಸಂಶೋಧನ ಪಥದಲ್ಲಿ (೧೯೮೪) ಪ್ರಕಟಿತವಾಗಿದೆ.

ಹಸ್ತಪ್ರತಿಗಳು ಕೇವಲ ಗ್ರಂಥ ಸಂಪಾದನೆಯ ಮೂಲಾಧಾರಗಳಲ್ಲ; ಚರಿತ್ರೆಯ ಆಕರ ಸಾಮಗ್ರಿಗಳು. ಹಸ್ತಪ್ರತಿಗಳ ಹತ್ತು ಹಲವು ಮುಖಗಳನ್ನು ಡಾ. ಬಿ. ಆರ್. ಹಿರೇಮಠರು ಶಾಸ್ತ್ರೀಯ ಚೌಕಟ್ಟಿನಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಹಸ್ತಪ್ರತಿ ಲಿಪಿಕಾರರು ಮಹತ್ವದ ಲೇಖನವಾಗಿದೆ. "ಹಸ್ತಪ್ರತಿಗಳಲ್ಲಿ 'ಲಿಪಿಕಾರ' ಎಂಬ ಪದಪ್ರಯೋಗವಿಲ್ಲ. ಆದರೆ ಹಸ್ತಪ್ರತಿಗಳ ನಕಲು ಕಾರ್ಯ ಮಾಡಿದವರು ಅವುಗಳ ಆದಿ ಅಂತ್ಯಗಳಲ್ಲಿ ಲೇಖನ, ಬರಹ, ಲಿಖಿತ, ಹಸ್ತಾಕ್ಷರ, ಕಂನಡಿಸು, ದಸ್ತೂರ ಎಂಬ ಪದಗಳನ್ನು ಬಳಸಿದ್ದಾರೆ. ಇವು ಲೇಖನ ವ್ಯವಸಾಯವನ್ನು ವಿವರಿಸುತ್ತವೆ. ಲೇಖನ ವ್ಯವಸಾಯ ಮಾಡುವವನನ್ನು ಲಿಪಿಕಾರನೆಂದು ಕರೆಯಲಾಗಿದೆ. ಆದುದರಿಂದ ಹಸ್ತಪ್ರತಿಗಳನ್ನು ನಕಲು, ಪ್ರತಿನಕಲು, ಬಳಿನಕಲುಗೊಳಿಸುವ ಲೇಖನ ಕಾರ್ಯ ಕೈಗೊಂಡವರನ್ನು 'ಲಿಪಿಕಾರ' ಎಂದು ಕರೆಯಬಹುದು"[೨೫] ಎಂದು ಸ್ಪಷ್ಟಪಡಿಸಿದ್ದಾರೆ. 'ಲಿಪಿಕಾರ' ಪದದ ಅರ್ಥ ಹಾಗೂ ವ್ಯಾಪ್ತಿಯನ್ನು ಸ್ಪಷ್ಟಪಡಿಸಿರುವುದನ್ನು ಗುರುತಿಸಬಹುದು. 'ಇನ್ನೂರ ಹದಿನಾರು ಸಕಿಲದಟಿಪುಣಾರ್ಥ' ಹಸ್ತಪ್ರತಿಯ ಕೊನೆಯಲ್ಲಿ ದಾಖಲುಗೊಂಡಿರುವುದನ್ನು ಉಲ್ಲೇಖಿಸಿ "ಈಗಿನ ಮಟ್ಟಿಗೆ ವಾಲೆ ಶಾಂತಯ್ಯನೇ ಹಸ್ತಪ್ರತಿ ಪ್ರಥಮ ಲಿಪಿಕಾರನೆಂದು ಹೇಳಬೇಕಾಗುತ್ತದೆ"[೨೬] ಎನ್ನುವಲ್ಲಿ ಕನ್ನಡದ ಪ್ರಪ್ರಥಮ ಹಸ್ತಪ್ರತಿ ಲಿಪಿಕಾರರನ್ನು ಶೋಧಿಸಿದ ಶ್ರೇಯಸ್ಸು ಡಾ. ಬಿ. ಆರ್. ಹಿರೇಮಠ ಅವರಿಗೆ ಸಲ್ಲುತ್ತದೆ.

ಹಸ್ತಪ್ರತಿಗಳಲ್ಲಿ ಕಂಡುಬರುವ ಭಿನ್ನವರ್ಗ, ವರ್ಣ ವಿವಿಧ ವಯೋಮಾನ, ವಿಭಿನ್ನ ಪ್ರವೃತ್ತಿಯ ಲಿಪಿಕಾರನನ್ನು ಅಧ್ಯಯನದ ಅನುಕೂಲಕ್ಕಾಗಿ ೧) ನಿಯುಕ್ತ ಲಿಪಿಕಾರರು ೨) ವೃತ್ತಿ ಲಿಪಿಕಾರರು, ೩) ಹವ್ಯಾಸಿ ಲಿಪಿಕಾರರು ಎಂದು ವರ್ಗೀಕರಿಸಿಕೊಂಡು ಅಧ್ಯಯನ ಕೈಕೊಂಡಿರುವುದು ಶಾಸ್ತ್ರೀಯ ಶಿಸ್ತಿಗೆ ನಿದರ್ಶನವಾಗಿದೆ. ಇದರ ಜೊತೆಗೆ ಸುಂದರ ಲೇಖನ, ಸಣ್ಣ ಲಿಪಿ ಲೇಖನ, ಮತ್ತೆರಡು ಉಪವಿಭಾಗಗಳನ್ನು ಮಾಡಿಕೊಂಡಿರುವುದು ಸೂಕ್ಷ್ಮ ಅಧ್ಯಯನಕ್ಕೆ ನಿದರ್ಶನ ಒದಗಿಸುತ್ತದೆ.

"ಕನ್ನಡವನ್ನೇ ಮಾತೃಭಾಷೆಯನ್ನಾಗಿಸಿಕೊಂಡಿದ್ದ ಜೈನ, ವೀರಶೈವ ಲಿಪಿಕಾರರು ಸಿಂಹಪಾಲು ಗ್ರಂಥಗಳನ್ನು ಪ್ರತಿ ಮಾಡಿದ್ದಾರೆ"[೨೭] ಎಂದು ಸ್ಪಷ್ಟಪಡಿಸಿದ್ದಾರೆ. ಮುಂದುವರೆದು "ಲಿಪಿಕಾರರ ಚರಿತ್ರೆಗೆ ಸಂಬಂಧಿಸಿದಂತೆ (ಅವರು ವಾಸಿಸುತ್ತಿದ್ದ) ಗ್ರಾಮ, ಗುರು, ಶಿಷ್ಯ, ತಂದೆ, ಸಹೋದರ, ಮಗ, ಮಗಳು, ಸ್ನೇಹಿತ ಹಾಗೂ ಲೇಖನ ಮಿತಿ. (ಪ್ರತಿ ಸಂಪೂರ್ಣಗೊಂಡ) ಮೊದಲಾದ ಮಹತ್ವದ ಸಂಗತಿಗಳು ಹಸ್ತಪ್ರತಿಗಳ ಆದಿ ಅಂತ್ಯಭಾಗದ ಪ್ರಶಸ್ತಿಗಳಿಂದ ಗೊತ್ತಾಗುತ್ತದೆ"[೨೮] ಎಂದಿರುವುದು ಶ್ರೀಯುತರ ಆಳವಾದ ಅಧ್ಯಯನಕ್ಕೆ ಸೂಕ್ಷ್ಮ ಗ್ರಹಿಕೆಗೆ ಸಾಕ್ಷಿಯಾಗಿದೆ.

"ಹಸ್ತಪ್ರತಿ ಹಾಗೂ ಶಾಸನ ಲಿಪಿಕಾರರ ಲೇಖನ ಪರಿಣತಿ ಸೌಂದರ್ಯ ಪ್ರಜ್ಞೆಗಳನ್ನು ಸುಂದರ ಲೇಖನ, ಅಲಂಕಾರ ಲೇಖನ, ಶೀಘ್ರ ಲೇಖನ, ಬಹುಲಿಪಿ ಲೇಖನ, ಸಣ್ಣ ಲೇಖನ ಎಂದು ಪರಿಭಾವಿಸಿದ್ದಾರೆ. ಆದರೆ ಹಸ್ತಪ್ರತಿ ಲಿಪಿಕಾರರು ಕೇವಲ ಸುಂದರ ಲೇಖನ ಸಣ್ಣ ಲಿಪಿಲೇಖನ ಪರಿಣತಿ ಹೊಂದಿದುದು ಕಂಡುಬರುತ್ತದೆ"[೨೯] ಎನ್ನುವಲ್ಲಿ ಶಾಸನ ಹಾಗೂ ಹಸ್ತಪ್ರತಿ ಲಿಪಿಕಾರರ ಕುರಿತಾಗಿರುವ, ತೌಲನಿಕ ಅಧ್ಯಯನವು ಇದರಲ್ಲಿದೆ. ಮುಂದೆ 'ಸುಂದರ ಲೇಖನ' ಮತ್ತು ಸಣ್ಣ ಲಿಪಿ ಲೇಖನದ ವಿಶೇಷತೆ ಕುರಿತಾಗಿ ಅಪೂರ್ವ ಮಾಹಿತಿ ಒದಗಿಸಿದ್ದಾರೆ. "ಸುಂದರ ಲೇಖನ ಸಣ್ಣ ಲಿಪಿ ಲೇಖನಗಳನ್ನು ಕಲೆಯಾಗಿ ಪೋಷಿಸಿಕೊಂಡು ಬಂದ ಲಿಪಿಕಾರರು ಹಲವು ಸಂಖ್ಯೆಯ ಹಸ್ತಪ್ರತಿಗಳನ್ನು ಲಿಪಿಗೊಳಿಸಿದ್ದಾರೆ. ಇದಲ್ಲದೆ ಸಾಮಾನ್ಯ ಲಿಪಿಕಾರರು ಸಾವಿರಾರು ಸಂಖ್ಯೆಯ ಗ್ರಂಥಗಳನ್ನು ಪ್ರತಿ ಮಾಡಿದ್ದಾರೆ. ಇದು ಲಿಪಿಕಾರರು ನಾಡಿನ ಕವಿಗಳನ್ನು ಅಮರರನ್ನಾಗಿಸಿದ, ನಾಡವರ ಸಂಸ್ಕೃತಿಯನ್ನು ಅಕ್ಷರವಾಗಿ ಉಳಿಸಿದ ಪರಮ ಪುಣ್ಯ ಕಾರ್ಯ ಮಾಡಿದ್ದಾರೆ"[೩೦] ಎಂದು ಹೇಳುವಲ್ಲಿ ಹಸ್ತಪ್ರತಿ ಲಿಪಿಕಾರರ ಮಹತ್ವವನ್ನು ಅವರು ಮಾಡಿರುವ ಕಾರ್ಯವನ್ನು ಅವರ ಶ್ರಮ ಸಂಸ್ಕೃತಿ ನಾಡಿನ ಚರಿತ್ರೆ ರಚಿಸಲು ನೆರವಾದುದನ್ನು ಸ್ಮರಿಸಿದ್ದಾರೆ.

ಪ್ರಸ್ತುತ ಹಸ್ತಪ್ರತಿ ಲಿಪಿಕಾರರು ಲೇಖನವು ೨೬ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಈ ಲೇಖನಕ್ಕೆ ಆಕರ ಸಾಮಗ್ರಿಯನ್ನಾಗಿ ೧೩೩ ಹಸ್ತಪ್ರತಿಗಳ ನೆರವು ಪಡೆದಿರುವುದು ಶ್ರೀಯುತರ ಅಪಾರ ಪರಿಶ್ರಮಕ್ಕೆ ನಿದರ್ಶನವಾಗಿದೆ. ಹಸ್ತಪ್ರತಿಗಳ ಜೊತೆಗೆ ಸಾಹಿತ್ಯ ಕೃತಿಗಳನ್ನು ವ್ಯಾಕರಣ ಗ್ರಂಥ ಮತ್ತು

ಗ್ರಂಥ ಸಂಪಾದನಾ ಶಾಸ್ತ್ರವನ್ನು ಸಹಾಯಕ ಸಾಮಗ್ರಿಗಳನ್ನು ಬಳಸಿದ್ದಾರೆ. ಈ ಲೇಖನ ಸಿದ್ಧಪಡಿಸಲು ಕಾಗದ ಪ್ರತಿ ತಾಡೋಲೆಗಳನ್ನು ಪೂರಕವಾಗಿ ಸ್ವೀಕರಿದ್ದಾರೆ. ಧಾರವಾಡದ (ಕನ್ನಡ ಅಧ್ಯಯನ ಪೀಠ) ವಚನ ಸಾಹಿತ್ಯ ಹಸ್ತಪ್ರತಿ ಭಂಡಾರ ಮತ್ತು ಮೈಸೂರಿನ ಹಸ್ತಪ್ರತಿ ಭಂಡಾರವನ್ನು ಅಧ್ಯಯನಕ್ಕಾಗಿ ಉಪಯೋಗಿಸಿದ್ದಾರೆ. ಇವೆಲ್ಲ ಮಾಹಿತಿಗಳು ಓರ್ವ ಸಂಶೋಧಕನ ಪ್ರಾಮಾಣಿಕತೆ, ಸಂಯಮಕ್ಕೆ ಉತ್ತಮ ಉದಾರಹಣೆಗಳಾಗಿವೆ.

**೩.೩.೧. ಕನ್ನಡ ಹಸ್ತಪ್ರತಿ ಲಿಪಿಕಾರರು : ಪ್ರಶಸ್ತಿಗಳು :**

ಬಿ. ಆರ್. ಹಿರೇಮಠರವರಿಗೆ ಶಾಸನದಷ್ಟೆ ಪ್ರೀತಿಯ ಆಸಕ್ತಿಯ ಕ್ಷೇತ್ರವೆಂದರೆ ಹಸ್ತಪ್ರತಿ ಶಾಸ್ತ್ರವಾಗಿದೆ. ಕನ್ನಡ ಹಸ್ತಪ್ರತಿ ಲಿಪಿಕಾರರು: 'ಪ್ರಶಸ್ತಿಗಳು' ಕೃತಿಯು ಸಮರ್ಥ ಪುರಾವೆಯಾಗಿದೆ. ಕನ್ನಡ ಹಸ್ತಪ್ರತಿಗಳ ಅಧ್ಯಯನದ ಹಲವು ಮುಖಗಳನ್ನು ಪ್ರಸ್ತುತ ಪುಸ್ತಕವು ಪರಿಚಯಿಸುತ್ತದೆ. ಹಸ್ತಪ್ರತಿ ಲಿಪಿಕಾರರು ಲೇಖನ ಮುಂದುವರಿಕೆ ಅಥವಾ ಅದರ ವಿಸ್ತರಣೆಯೇ ಈ ಕೃತಿಯಾಗಿದೆ. ಹಸ್ತಪ್ರತಿಗಳನ್ನು ಕುರಿತಾಗಿರುವ ಈ ಸಂಶೋಧನ ಲೇಖನಗಳ ಗುಚ್ಛವಿದು. ಮೊದಲ ಲೇಖನ ವಿವಿಧ ಬಗೆಯ, ವಿವಿಧ ಮನೋಧರ್ಮದ, ವಿವಿಧ ವೃತ್ತಿಯ ಹಸ್ತಪ್ರತಿ ಲಿಪಿಕಾರರನ್ನು ಪರಿಚಯಿಸುತ್ತ ಲಿಪಿಕಾರರ ಚರಿತ್ರೆಯನ್ನು ಕಟ್ಟಿಕೊಡುತ್ತದೆ. ಐತಿಹಾಸಿಕ ಅಂಶಗಳನ್ನು ದಾಖಲೆ ಸಹಿತ ಪ್ರಸ್ತುತಪಡಿಸುವ ಲೇಖನಕ್ಕೆ ಹಸ್ತಪ್ರತಿ ಸಾಹಿತ್ಯದಲ್ಲಿ ಅಮೂಲ್ಯವಾದ ಸ್ಥಾನ ಲಭಿಸುತ್ತದೆ. ಚಾರಿತ್ರಿಕ ಮಹತ್ವದ ಲೇಖನವಿದ್ದು, "ಹಸ್ತಪ್ರತಿ ಲಿಪಿಕಾರರು ಶಾಸನ ಲಿಪಿಕಾರರಾಗಿ, ಶಾಸನ ಲಿಪಿಕಾರರು ಹಸ್ತಪ್ರತಿ ಲಿಪಿಕಾರರಾಗಿ ಕಾರ್ಯ ನಿರ್ವಹಿಸಿದ ಯಾವ ಉದಾಹರಣೆಗಳು ಇಲ್ಲಿಯವರೆಗೆ ಲಭಿಸಿರುವುದಿಲ್ಲ."[೩೦] ಈ ಅಂಶವು ಶಾಸನ ಮತ್ತು ಹಸ್ತಪ್ರತಿಗಳೆರಡರ ತೌಲನಿಕ ಅಧ್ಯಯನಕ್ಕೆ ಸಾಕ್ಷಿಯಾಗಿವೆ. ಶಾಸನ ಹಾಗೂ ಹಸ್ತಪ್ರತಿ ಎರಡೂ ಕ್ಷೇತ್ರಗಳಲ್ಲಿ ಶ್ರೀಯುತರಿಗಿರುವ ಪರಿಣಿತಿಗೆ ನಿದರ್ಶನವನ್ನು ಒದಗಿಸುತ್ತದೆ. ಅಲ್ಲದೇ ಬಹುಶಿಸ್ತೀಯ ಅಧ್ಯಯನಕ್ಕೆ ಇದು ಮಾದರಿಯಾಗಿದೆ. "ಇನ್ನು ಮುಂದೆ ವಿದ್ವಾಂಸರು, ಲಿಪಿಕಾರರನ್ನು ಹಸ್ತಪ್ರತಿ ಲಿಪಿಕಾರರು, ಶಾಸನ ಲಿಪಿಕಾರರೆಂದು ಸ್ವತಂತ್ರವಾಗಿ ಪ್ರತ್ಯೇಕವಾಗಿ ಪರಿಭಾವಿಸಬೇಕು."[೩೧] ಈ ಅಂಶವು ಶ್ರೀಯುತರಿಗಿರುವ ಖಚಿತ ಮಾಹಿತಿಯನ್ನು ತಿಳಿಸುತ್ತದೆ. ಮುಂದೆ ಅಧ್ಯಯನಕಾರರಿಗೆ ಸೂಕ್ತವಾದ ಮಾರ್ಗದರ್ಶವನ್ನು ನೀಡುತ್ತದೆ.

ಎರಡನೆಯ ಲೇಖನ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕರ ಜೈನ ಬಸದಿಯ ಹಸ್ತಪ್ರತಿಭಾಂಡಾರದ ಲಿಪಿಕಾರರ, ಅವರ ವೈಶಿಷ್ಟ್ಯವನ್ನು ವಿವರಿಸುತ್ತದೆ. ಜೈನ ಹಸ್ತಪ್ರತಿ ಭಂಡಾರದಲ್ಲಿ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಜೈನ ಮಠದ ಹಸ್ತಪ್ರತಿ ಭಾಂಡಾರ ಅತ್ಯಂತ ಶ್ರೀಮಂತವೂ ವಿಶಿಷ್ಟವೂ ಆದುದಾಗಿದೆ. ಈ ಹಸ್ತಪ್ರತಿ ಭಾಂಡಾರದಲ್ಲಿ ಪದ್ಯ ಸಾಹಿತ್ಯ, ಗದ್ಯಸಾಹಿತ್ಯ, ವ್ಯಾಖ್ಯಾನ ಸಾಹಿತ್ಯಗಳಿಗೆ ಸಂಬಂಧಿಸಿದ ಕನ್ನಡ, ಸಂಸ್ಕೃತ ಮತ್ತು ಪ್ರಾಕೃತ ಭಾಷೆಯ ಹಸ್ತಪ್ರತಿಗಳನ್ನು

ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಜೈನ ಬಸದಿಯಲ್ಲಿರುವ ಗ್ರಂಥಗಳ ವಿವರಗಳನ್ನು ಡಾ. ಬಿ. ಆರ್. ಹಿರೇಮಠವರು ನೀಡುತ್ತಾರೆ (ಇಲ್ಲಿಯೇ ಮಹಾಕವಿ ರನ್ನನ ಕಳೆದು ಹೋದ 'ರನ್ನ ಕಂದ' ಎಂಬ ನಿಘಂಟುವಿನ ಹಸ್ತಪ್ರತಿ ಪ್ರಪ್ರಥಮ ಬಾರಿಗೆ ಶೋಧವಾಗಿರುವುದನ್ನು ಸ್ಮರಿಸಿಕೊಳ್ಳಬಹುದಾಗಿದೆ. ಡಾ. ಎಂ. ಎಂ. ಕಲಬುರ್ಗಿಯವರು 'ರನ್ನ ಕಂದ' ಶೋಧಿಸಿದ್ದು ಈ ದಿವ್ಯ ಸಂದರ್ಭದಲ್ಲಿಯೇ ಎಂಬುದನ್ನು ನೆನಪಿಸಿಕೊಂಡರೆ ಡಾ. ಬಿ. ಆರ್. ಹಿರೇಮಠರವರು ಕೈಕೊಂಡ ಕ್ಷೇತ್ರಕಾರ್ಯವು ಐತಿಹಾಸಿಕ ಮಹತ್ವವನ್ನು ತಿಳಿಸುತ್ತದೆ.) ಕೊಲ್ಲಾಪುರ ಲಕ್ಷ್ಮೀಸೇನ ಭಟ್ಟಾರಕರ ಜೈನ ಬಸದಿಯ ಹಸ್ತಪ್ರತಿ ಭಂಡಾರದ ಲಿಪಿಕಾರರು ಲೇಖನ ಸಂಪೂರ್ಣವಾಗಿ ಕ್ಷೇತ್ರಕಾರ್ಯದ ಬಲದಿಂದ ರಚಿತವಾಗಿರುವುದು ಗಮನಾರ್ಹವಾಗಿದೆ. "ಜೈನ ಹಸ್ತಪ್ರತಿ ಲಿಪಿಕಾರರು ತಮ್ಮ ಲೇಖನ ತಪಸ್ಸಿನ ಮೂಲಕ ಶ್ರೀ ಲಕ್ಷ್ಮೀ ಸೇನ ಭಟಾರಕ ಹಸ್ತಪ್ರತಿ ಭಂಡಾರವನ್ನು ಬೆಳೆಸಿದರೂ ಜೈನಧರ್ಮ, ಸಂಸ್ಕೃತಿ, ಸಾಹಿತ್ಯವನ್ನು ಸಂರಕ್ಷಿಸಿದರು"[೩೩] ಎಂಬ ಮಾತು ಮೌಲಿಕವಾಗಿದೆ. ಈ ಲೇಖನದಲ್ಲಿ ಹಸ್ತಪ್ರತಿಯ ಆರಂಭದ ಪೀಠಿಕೆಗಳು, ವಸ್ತು ವಿಷಯವನ್ನು ವಿವರಿಸಿದ ಹಸ್ತಪ್ರತಿಗಳು ಮತ್ತು ಹಸ್ತಪ್ರತಿಗಳ ಅಂತ್ಯ, ಪ್ರಶಸ್ತಿಗಳಿಂದ ತಿಳಿದುಬರುವ ವಿಶೇಷ ಸಂಗತಿಗಳನ್ನು ಕ್ರೋಢೀಕರಿಸಿ ಕೊಟ್ಟಿರುವುದು ಹೊಸತನದಿಂದ ಕೂಡಿದೆ. ಇಡೀ ಹಸ್ತಪ್ರತಿ ಸಾಹಿತ್ಯಕ್ಕೆ ಇದೊಂದು ವಿನೂತನ ಸೇರ್ಪಡೆಯಾಗಿದೆ.

ಈ ಗ್ರಂಥದ ಮೂರನೆಯ ಲೇಖನ ರಾಜಮಾರ್ಗದವರ ಸ್ವಹಸ್ತಾಕ್ಷರದ ಹಸ್ತಪ್ರತಿಗಳು ಎಂಬುದಾಗಿದೆ. ಅರಸು, ಮಾಂಡಲೀಕ ಮೊದಲಾದ ರಾಜಮಾರ್ಗದವರು ಯಾವ ಧರ್ಮೀಯರು ಇರುತ್ತಿದ್ದರೋ ಹೆಚ್ಚಾಗಿ ಅದೇ ಧರ್ಮದ ಗ್ರಂಥಗಳನ್ನು ನಿಯುಕ್ತ ಲಿಪಿಕಾರರು ರಚಿಸುತ್ತಿದ್ದರು. ಸ್ವತಃ ಸಾಹಿತ್ಯ ಆರಾಧಕರು, ಸಾಹಿತ್ಯ ಪ್ರೀತಿಯುಳ್ಳ ಕೆಲವು ಅರಸರು ತಮಗೆ ಪ್ರಿಯವೆನ್ನಿಸಿದ ಕಾವ್ಯ, ಗ್ರಂಥಗಳ ನಕಲು ಮಾಡಿರುವ ಸಂಗತಿ ಅಪೂರ್ವವಾಗಿದೆ. ಐತಿಹಾಸಿಕವಾಗಿ ತುಂಬ ಮಹತ್ವವೆನಿಸಿದ ರಾಜಮಾರ್ಗದವರ ಸ್ವಹಸ್ತಾಕ್ಷರದ ಹಸ್ತಪ್ರತಿಗಳ ಕುರಿತಾದ ಅಮೂಲ್ಯವಾದ ಮಾಹಿತಿಯನ್ನು ಡಾ. ಬಿ. ಆರ್. ಹಿರೇಮಠರವರು ಈ ಲೇಖನದಲ್ಲಿ ಒದಗಿಸಿದ್ದಾರೆ. ಸೋದೆಯ ಸೋಮಲಿಂಗ ರಾಜನು 'ಶಕ ೧೬೯೩', ಸ್ವಹಸ್ತಾಕ್ಷರ, ಶಿರಸಂಗಿ ಜಾಯಪ್ಪ ದೇಸಾಯಿ 'ಶಕ ೧೬೯೩', ಕಳಲೆ ಕಾಂತರಾಜಯ್ಯನ 'ಶಕ ೧೭೧೩', ಕಳಲೆ ಕೆಂಪರಾಜಯ್ಯನ 'ಶಕ, ೧೭೭೭', ಮೈಸೂರು ನಾರಣ ರಾಜಯ್ಯ ಅರಸು 'ಶಕ ೧೭೯', ಮುಂತಾದವರ ಸ್ವಹಸ್ತಾಕ್ಷರ ಪ್ರತಿಗಳನ್ನು ಇದರಲ್ಲಿ ವಿವೇಚಿಸಿದ್ದಾರೆ. ರಾಜವರ್ಗದ ವ್ಯಕ್ತಿಗಳು ಲಿಪಿಕಾರರಾಗಿ ಮಾಡಿದ ಕಾರ್ಯ ಗಮನಾರ್ಹವಾಗಿದೆ. ಈ ಹಸ್ತಪ್ರತಿಗಳಿಂದ ಅರಸು ಮನೆತನ, ಅರಸನ ಹೆಸರು, ಮಿತಿ, ವಂಶಾವಳಿ, ಗುರುಪರಂಪರೆ, ಗೋತ್ರ ಮೊದಲಾದ ಸಂಗತಿಗಳು ಸ್ಪಷ್ಟವಾಗಿ ಗೊತ್ತಾಗುತ್ತವೆ. ಅಲ್ಲದೇ "ರಾಜವರ್ಗದವರ ಸ್ವಹಸ್ತಾಕ್ಷರದ ಹಸ್ತಪ್ರತಿಗಳು ಚಾರಿತ್ರಿಕ ಮಹತ್ವವನ್ನು ಹೊಂದಿರುತ್ತವೆ. ಆದುದರಿಂದ ನಾಡಿನ ಚರಿತ್ರೆಯ ರಚನೆಯಲ್ಲಿ ಆಕರ ಸಾಮಗ್ರಿಯಾಗಿ ಉಪಯೋಗಿಸಿಕೊಳ್ಳಬಹುದು."[೩೪] ಈ ಲೇಖನದಲ್ಲಿ ಡಾ. ಬಿ. ಆರ್. ಹಿರೇಮಠರವರು ಐತಿಹಾಸಿಕ

ಸಂಗತಿಗಳನ್ನು ನಾಡಿನ ಚರಿತ್ರೆಯನ್ನು ಕಟ್ಟಿಕೊಡುವ ಇತಿಹಾಸಕಾರರಿಗೆ ಪೂರಕ ಮಾಹಿತಿ ಒದಗಿಸುವುದನ್ನು ವಿವರಿಸಿದ್ದಾರೆ.

ನಾಲ್ಕು ಮತ್ತು ಐದನೆಯ ಲೇಖನಗಳು ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು, ಅವುಗಳ ಸ್ವರೂಪ ಮತ್ತು ಅದರ ಮಹತ್ವವನ್ನು ವಿವರಿಸುವ ವಿಷಯಗಳನ್ನು ಒಳಗೊಂಡಿವೆ. ಇತಿಹಾಸದ ರಚನೆಯಲ್ಲಿ, ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಹಸ್ತಪ್ರತಿಗಳು ಹೇಗೆ ಪೂರಕವಾಗುತ್ತವೆಯೆಂಬುದನ್ನು ಮೊಟ್ಟಮೊದಲು ತಿಳಿಸಿದವರೆ ಡಾ. ಬಿ. ಆರ್. ಹಿರೇಮಠರು. ಹಸ್ತಪ್ರತಿಗಳ ಆರಂಭ ಹಾಗೂ ಕೊನೆಯ ಭಾಗದಲ್ಲಿ ಬರೆದಿರುವ ಪ್ರಶಸ್ತಿಗಳು, ಕವಿಕೃತಿ ಪಠ್ಯಗಳನ್ನು ಹೊರತುಪಡಿಸಿದರೆ ಉಳಿಯುವ ಅಂಶಗಳೆಂದರೆ ಚಾರಿತ್ರಿಕ ದಾಖಲೆಗಳು, ಚರಿತ್ರೆಯ ಎಳೆಗಳು, ಐತಿಹಾಸಿಕ ಘಟನೆಗಳು, ಪ್ರಾದೇಶಿಕ ಅಂಶಗಳು. ನಮ್ಮ ನಾಡಿನ ಇತಿಹಾಸದ ರಚನೆಗೆ ಹೇಗೆ ಆಕರ ಸಾಮಗ್ರಿಗಳಾಗಬಲ್ಲವು ಎಂಬುದನ್ನು ದರ್ಶನ ಮಾಡಿಸಿದ ಶ್ರೇಯಸ್ಸು ಡಾ. ಹಿರೇಮಠ ಅವರಿಗೆ ಸಲ್ಲುತ್ತದೆ. ಇತಿಹಾಸ ಮತ್ತು ಹಸ್ತಪ್ರತಿಗಳ ಅಂತರ್ -ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನದ ಅಗತ್ಯವನ್ನು ಪ್ರತಿಪಾದಿಸಿದವರು ಡಾ. ಹಿರೇಮಠರು. ಹೀಗಾಗಿ ಇವೆರಡೂ ಲೇಖನಗಳಿಗೆ ಐತಿಹಾಸಿಕ ಮಹತ್ವವಿದೆ. ಡಾ. ಬಿ. ಆರ್. ಅವರ ಸಂಶೋಧನೆಗೆ ಈ ಲೇಖನಗಳು ಸಮರ್ಥ ನಿದರ್ಶನಗಳಾಗಿವೆ.

ಹಸ್ತಪ್ರತಿಗಳ ಆಸಕ್ತಿ ಕಾರಣವಾಗಿ ಶ್ರೀಯುತರು ಕನ್ನಡ ನಾಡಿನ ಹಸ್ತಪ್ರತಿ ಭಂಡಾರಗಳ ಕ್ಷೇತ್ರಕಾರ್ಯ ಕೈಗೊಂಡಿದ್ದರು. ನಾಡಿನ ಹೊರಗಿರುವ ಹಸ್ತಪ್ರತಿ ಭಂಡಾರಕ್ಕೂ ಭೇಟ್ಟಿಯಿತ್ತಿದ್ದರು. ಅವರ ಪರಿಶ್ರಮದ ಫಲವಾಗಿ 'ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಸೂಚಿ ಮತ್ತು 'ಕೊಲ್ಲಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಜೈನಬಸದಿಯ ಹಸ್ತಪ್ರತಿಗಳನ್ನು (ಡಾ. ಎಂ. ಎಂ. ಕಲಬುರ್ಗಿವರೊಡನೆ ) ಸಂಪಾದಿಸಿ ಕೊಟ್ಟಿದ್ದಾರೆ.

**ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು :**

ಪ್ರಸ್ತುತ ಕೃತಿಯ ನಾಲ್ಕನೇ ಲೇಖನವಿದು. ಕವಿಕೃತಿಯ ಪಠ್ಯಭಾಗವನ್ನು ಲಿಪಿಕಾರರು ಯಥಾವತ್ತಾಗಿ ಪ್ರತಿ ಮಾಡುವಾಗ ಕೊನೆಗೆ ಈ ಪ್ರಶಸ್ತಿಗಳನ್ನು ದಾಖಲಿಸಿರುತ್ತಾರೆ. "ಕರ್ನಾಟಕದ ಹಸ್ತ ಪ್ರತಿಗಳ ಪ್ರಶಸ್ತಿಗಳನ್ನು ಕುರಿತು ಅಧ್ಯಯನ ನಡೆಸುವುದು, ವಿವೇಚಿಸುವುದು ಬಹು ದೊಡ್ಡ ಕೆಲಸ. ಕರ್ನಾಟಕದ ಒಳ ಹೊರಗಿನ ಸಮಗ್ರ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಕುರಿತು ಅಭ್ಯಸಿಸುವುದೂ ಅಲ್ಲದೆ ಅತ್ಯಂತ ಮಹತ್ವದ ಬೆಲೆಯುಳ್ಳ ಹಾಗೂ ಅಗತ್ಯದ ಕಾರ್ಯವೂ ಆಗಿದೆ"[೩೫] ಎಂಬುದನ್ನು ಮನಗಂಡು ಡಾ. ಬಿ.ಆರ್. ಹಿರೇಮಠ ಅವರು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ೮ ಸಂಪುಟಗಳಲ್ಲಿ ಬರುವ ಹಸ್ತಪ್ರತಿ ಪ್ರಶಸ್ತಿಗಳನ್ನು ಆಧಾರವಾಗಿಟ್ಟುಕೊಂಡು ಈ ಲೇಖನ ಸಿದ್ಧಪಡಿಸಿದ್ದು ತುಂಬಾ ಮೌಲಿಕ ಲೇಖನವಿದು. ನಾಡಿನ

ಸಂಸ್ಕೃತಿಯನ್ನು ಸಂರಕ್ಷಿಸುವಲ್ಲಿ ಅತ್ಯಂತ ಶ್ರದ್ಧೆಯಿಂದ ದುಡಿದವರು ಹಸ್ತಪ್ರತಿ ಲಿಪಿಕಾರರು, ಕವಿ ಕೃತಿಯನ್ನು ಪ್ರತಿಮಾಡುವುದರ ಮೂಲಕ ಕವಿಗಳನ್ನು ಸಂಸ್ಕೃತಿಯನ್ನು ಬದುಕಿಸಿಕೊಟ್ಟಿದ್ದಾರೆ. ಸಂಸ್ಕೃತಿ ಅಕ್ಷರವಾಗಿ ಉಳಿದುಕೊಂಡು ಬರಲು ಶ್ರಮಿಸಿದ ಕಾರಣಪುರುಷರು ಇವರಾಗಿದ್ದಾರೆ. ಸಾಹಿತ್ಯ ಸಂಸ್ಕೃತಿಗಳ ವಾರಸುದಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ಸಾಂಸ್ಕೃತಿಕ ಸಂಘಟನಾಕಾರರಾದ ಹಸ್ತಪ್ರತಿ ಲಿಪಿಕಾರರ ಚರಿತ್ರೆಗೆ ಸಂಬಂಧಿಸಿದಂತೆ ಲಿಪಿಕಾರರ ಹೆಸರು, ವಾಸಿಸುತ್ತಿದ್ದ ಗ್ರಾಮ, ತಂದೆ, ತಾಯಿ, ಗುರು, ಇಷ್ಟದೈವ, ವಂಶಗೋತ್ರ, ಸೂತ್ರ ಈ ಮೊದಲಾದ ಮಹತ್ವದ ಸಂಗತಿಗಳು ಪ್ರಶಸ್ತಿಗಳಿಂದ ತಿಳಿದುಬರುತ್ತವೆ. ಇವೆಲ್ಲವುಗಳನ್ನು ಡಾ. ಬಿ.ಆರ್. ಹಿರೇಮಠರವರು ಕೂಲಂಕುಷವಾಗಿ ಅಧ್ಯಯನಿಸಿದ್ದಾರೆ.

ಆರಂಭಿಕ ಹಸ್ತ ಪ್ರತಿಗಳಲ್ಲಿ ದೈವೀ ಭಾವನೆಯನ್ನು, ಪೂಜ್ಯತೆಯನ್ನು, ಪಾವಿತ್ರ್ಯತೆಯನ್ನು ಗುರುತಿಸಿದ್ದಾರೆ. ಕಾಲಕ್ರಮೇಣ ಈ ಪದ್ಧತಿ ಕಡಿಮೆಯಾಗಿದೆ. ಆರಂಭದ ಕಾಲದಲ್ಲಿ 'ಶಿವಾರ್ಪಣ ಮಸ್ತು,' 'ಕೃಷ್ಣಾರ್ಪಣಮಸ್ತು' ಬದಲಾಗಿ ಕಾಣಿಕೆ ತೆಗೆದುಕೊಂಡು ಬರೆದುಕೊಟ್ಟ ಸಂಗತಿಗಳು ತಿಳಿಯುತ್ತವೆ. ಈ ಅಂಶ ವ್ಯಾಪಾರಿ ಪ್ರವೃತ್ತಿಗೆ ನಿದರ್ಶನವಾಗಿದೆ. ಹಸ್ತಪ್ರತಿ ಲಿಪಿಕಾರರು ಪಾರಮಾರ್ಥಿಕದಿಂದ ಪ್ರಾಪಂಚಿಕದ ಕಡೆಗೆ ಹೊರಳಿರುವುದನ್ನು ಗುರುತಿಸಿ ಉದಾಹರಣೆಗಳ ಸಹಿತ ವಿವರಿಸಿದ್ದಾರೆ. ಹಸ್ತಪ್ರತಿಗಳ ಪ್ರಶಸ್ತಿ ಭಾಗದಲ್ಲಿ ಕರ್ನಾಟಕದ ವೀರಶೈವ, ಜೈನ, ಬ್ರಾಹ್ಮಣ ಮಠಗಳ ಹೆಸರು, ಸಂಖ್ಯೆ ಮಠಾಧಿಪತಿಗಳ ಹೆಸರು, ಕಾಲಾವಧಿ, ಶಿಷ್ಯ ಪರಂಪರೆ ಹಾಗೂ ಅರಸು ಅಧಿಕಾರಿಗಳಿಗೆ ಸಂಬಂಧಿಸಿದ ಚರಿತ್ರೆಯ ವಿಷಯಗಳನ್ನು ನಿರೂಪಿಸಿದ್ದಾರೆ. ಕೊನೆಗೆ ಹಸ್ತ ಪ್ರತಿ ಪ್ರಶಸ್ತಿಗಳು "ಹಸ್ತ ಪ್ರತಿ ಲಿಪಿಕಾರರ ಚರಿತ್ರೆ, ಗ್ರಂಥ ಸಂಪಾದನೆ, ಅರಸು ಅಧಿಕಾರಿಗಳ ಚರಿತ್ರೆ, ರಚನೆಗೆ ಮಹತ್ವದ ಆಕರ, ಸಾಮಗ್ರಿಗಳಾಗಿರುತ್ತವೆ"[೩೬] ಎಂದು ಇವುಗಳ ಮಹತ್ವವನ್ನು ವಿವರಿಸಿದ್ದಾರೆ. ಮುಂದುವರಿದು "ನಮ್ಮಲ್ಲಿ ಕರ್ನಾಟಕ ಕವಿ ಚರಿತ್ರೆಯ ಮಾದರಿಯಲ್ಲಿ ಕರ್ನಾಟಕದ ಹಸ್ತಪ್ರತಿ ಲಿಪಿಕಾರರ ಚರಿತ್ರೆ ಇನ್ನೂ ರಚನೆಯಾಗಿಲ್ಲ. ಇತಿಹಾಸಕಾರರು ಇಲ್ಲಿ ಐತಿಹಾಸಿಕ ಅಂಶಗಳನ್ನು ಗಮನಿಸಿದಂತೆ ತೋರುವುದಿಲ್ಲ. ಇನ್ನು ಮುಂದೆಯಾದರೂ ಚರಿತ್ರೆಕಾರರು ಹಾಗೂ ಸಾಹಿತ್ಯ ಚರಿತ್ರೆಕಾರರು ಈ ಆಕರ ಸಾಮಗ್ರಿಯನ್ನು ಬಳಸಿಕೊಳ್ಳುವರೆಂದು ಭಾವಿಸಿದ್ದೇನೆ."[೩೭] ಈ ಮಾತುಗಳು ಇತಿಹಾಸ ಮತ್ತು ಚರಿತ್ರೆಕಾರರು ಮಾಡಬೇಕಾದ ಕಾರ್ಯದ ಕಡೆಗೆ ಗಮನ ಸೆಳೆದಿದ್ದಾರೆ. ಅವರ ದೂರದೃಷ್ಟಿಯನ್ನು ಇದು ಸೂಚಿಸುತ್ತದೆ.

**ಆಕರ ಸಾಮಗ್ರಿಯಾಗಿ ಹಸ್ತಪ್ರತಿಗಳು :**

ಜನೇ ಲೇಖನ ಈ ಗ್ರಂಥದ ಕೊನೆಯ ಲೇಖನ ಇತಿಹಾಸ ರಚನೆಯಲ್ಲಿ ಶಾಸನಗಳನ್ನು ಮೂಲ ಆಕರ ಸಾಮಗ್ರಿಗಳನ್ನಾಗಿಯೂ, ಕಾವ್ಯಗಳನ್ನು ಪೂರಕ ಆಕರ ಸಾಮಗ್ರಿಗಳನ್ನಾಗಿಯೂ ಬಳಸುತ್ತ

ಬಂದಿರುವುದು ಸರ್ವ ವಿದಿತವಾಗಿದೆ. ಆದರೆ ಚಾರಿತ್ರಿಕ ಕಾವ್ಯಗಳು ಕನ್ನಡ ಹಸ್ತಪ್ರತಿ ಪ್ರಶಸ್ತಿಗಳನ್ನು ಆಧರಿಸಿ ಇತಿಹಾಸವನ್ನು ರಚಿಸಿಲ್ಲ. ಅರಸು ಮನೆತನಗಳ ಅವಧಿಯಲ್ಲಿ ಮೂಡಿ ಬಂದ ಸಮಸ್ತ ಸಾಹಿತ್ಯ ಕೃತಿಗಳ ಐತಿಹಾಸಿಕ ಅಂಶಗಳನ್ನು ಗುರುತಿಸುವ, ಸಂಗ್ರಹಿಸುವ, ವಿವೇಚಿಸುವ ಕಾರ್ಯವು ಸಮಗ್ರವಾಗಿ ನಡೆಯಬೇಕಾಗಿದೆ. ಇದರಿಂದ ಕರ್ನಾಟಕದ ಸಮಗ್ರ ಚರಿತ್ರೆಗೆ ಇನ್ನೂ ಹೆಚ್ಚಿನ ವಿಷಯ ಸೇರ್ಪಡೆಯಾಗುವ ಸಾಧ್ಯತೆ ಇದೆ ಎಂಬುದನ್ನು ವಿವರಿಸಲು ಪ್ರಸ್ತುತ ಲೇಖನವನ್ನು ರಚಿಸಲಾಗಿದೆ. ಆಕರ ಸಾಮಗ್ರಿಯಾಗಿ ಹಸ್ತಪ್ರತಿ ಪ್ರಶಸ್ತಿಗಳು ಹೊಂದಿದ ಮಹತ್ವವನ್ನು ಇತಿಹಾಸವನ್ನು ಸಮಗ್ರವಾಗಿ ಕಟ್ಟಿಕೊಳ್ಳಲು ಇವು ನೀಡುವ ಪ್ರಮಾಣಭೂತ ಸಾಕ್ಷಾಧಾರಗಳನ್ನು ಇದರಲ್ಲಿ ವಿವೇಚಿಸಿದ್ದಾರೆ. ರಾಜಪರಿವಾರ ಮತ್ತು ರಾಜನ ಅಧಿಕಾರ ವರ್ಗದವರ ವಿಷಯ ಕೆಲವು ಹಸ್ತಪ್ರತಿಗಳಲ್ಲಿರುತ್ತದೆ. ಈ ಹಸ್ತ ಪ್ರತಿಗಳನ್ನು ಬಳಸಿಕೊಂಡು ಇತಿಹಾಸ ರಚಿಸುವುದಾದರೆ ಅದು ಪರಿಪೂರ್ಣವೆನಿಸುತ್ತದೆ. "ಹಸ್ತ ಪ್ರತಿ ಪ್ರಶಸ್ತಿಗಳು ವಿಪುಲವು, ವೈವಿಧ್ಯಪೂರ್ಣವೂ ಆದ ವಿವರಗಳನ್ನು ಇತಿಹಾಸಕಾರರಿಗೆ ಒದಗಿಸುತ್ತವೆ. ಮತ್ತು ಇಂತಹ ಮಹತ್ವದ ಆಕರ ಸಾಮಗ್ರಿಗಳ ಕಡೆಗೆ ಇತಿಹಾಸಕಾರರು ಆದ್ಯ ಗಮನಹರಿಸಬೇಕಾಗಿದೆ"[೩೮] ಎಂಬುದನ್ನು ಸೂಚಿಸಿದ್ದಾರೆ.

ಪ್ರಾದೇಶಿಕ ಇತಿಹಾಸ ಅಂತರ್ ಶಿಸ್ತೀಯ ಅಧ್ಯಯನ ಮುಂತಾದ ಅಂಶಗಳ ಕುರಿತು ಈ ಹಿಂದೆಯೇ ಗಮನ ಸೆಳೆದಿದ್ದಾರೆ.

ಮೈಸೂರು ಅರಸರು - ಬೆಟ್ಟ ಚಾಮರಸ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು ಮುಂತಾದವರು. ಕಳಲೆ ಅರಸರು - ವೀರರಾಜ, ರಾಜಶೇಖರ, ಮಲ್ಲರಾಜ, ಶಾಂತಯ್ಯ ಮೊದಲಾದವರು. ಸಾಸಲರಸರು -ಸೋಮರಾಜಯ್ಯ, ಸ್ವಾದಿ ಅರಸರು - ಸೋಮಲಿಂಗರಾಜ, ಬೀಳಿ ಅರಸರು -ಮುಮ್ಮಡಿ ಸೋಮಶೇಖರ ನಾಯಕ, ಹಾಗಲವಾಡಿ ಅರಸರು - ಇಮ್ಮಡಿ ಮುದಿಯಪ್ಪನಾಯಕ, ಬಾಗುಳಿ ಅರಸರು -ಬಸವೇಂದ್ರ, ಶಿರಸಂಗಿ ಅರಸರು (ದೇಸಾಯರು) - ಜಾಯಪ್ಪ ದೇಸಾಯಿ, ರಾಯಸದ ಲಕ್ಷ್ಮೀಪತಿ, ರಾಯಸದ ರಸಣ್ಣಯ್ಯ ಹಾಗೂ ಸುಬ್ಬರಾಯ, ರಾಯಸದ ಕಾಳಯ್ಯ, ರಾಮಯ್ಯ, ರಾಯಸದ ಭಾಗವತ ಕೃಷ್ಣಪ್ಪ; ರಾಯಸದ ಬಾಳಯ್ಯ, ಚೆನ್ನರಾಜಯ್ಯ, ಮಾರಯ್ಯಾ ಬೊಕ್ಕಸದ ಗುರಿಕಾರ ಕಾಳಯ್ಯ, ಗುರಿಕಾರ ಮಾದಯ್ಯ, ಗುರಿಕಾರ ತಿಮ್ಮನಾಯಕ, ಗುರಿಕಾರ ಬಸವಲಿಂಗಪ್ಪ ಪಾರು ಪತ್ತೆಗಾರ, ಸಿದ್ಧಯ್ಯ ವೀರಸಂಗಪ್ಪ, ಸರ್ವೆಗಾರ ಪಟ್ಟಣಯ್ಯ, ಸುಂಕದ ಜೀವಪ್ಪನ ಅಪ್ಪಯ್ಯ, ಸುಭೇದಾರ ವೀರಣ್ಣ, ಬಕಸಾಲೆ ತಮ್ಮಿಶೆಟ್ಟಿ, ಅಟ್ಟವಣೆ ಚಾವಡಿ ಕಾರಣಿಕ ಪದುಮಣಯ್ಯ, ಉಗ್ರಾಣದ ಕರಣಿಕ ದೊಡ್ಡಯ್ಯ, ಅರಮನೆ ಲೇಖರಿ ಬಸಪ್ಪ, ಅರಮನೆ ಬಸಮ್ಮ, ಪುರಪ್ರಭು, ಒಡೆಯ, ನಾಡಗೌಡ, ನಾಯಕ, ಗೌಡ, ಹೆಗ್ಗಡೆ, ಚೌಧರಿ, ಸೇನಬೋವ ಮುಂತಾದವರ ಕುರಿತಾಗಿರುವ ಹಸ್ತಪ್ರತಿ ಪ್ರಶಸ್ತಿಗಳನ್ನು ಕಲೆಹಾಕಿ ಅಧ್ಯಯನ ಕೈಗೊಂಡಿದ್ದಾರೆ.

"ಕರ್ನಾಟಕದ ಒಳಗೂ ಹೊರಗೂ ಇರುವ ಹಸ್ತಪ್ರತಿ ಭಂಡಾರಗಳಲ್ಲಿಯ ಸರ್ವ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಒಂದೂ ಬಿಡದಂತೆ ಸಂಗ್ರಹಿಸಿ ಸಮಗ್ರವಾಗಿ ಪ್ರಕಟಿಸುವ ಕಾರ್ಯವಾಗಬೇಕಿದೆ. ಇದರಿಂದ ನಾಡಿನ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ, ಸಾಮಾಜಿಕ, ಚರಿತ್ರೆ ರಚನೆಗೆ ಹೆಚ್ಚಿನ ಮಾಹಿತಿ ದೊರೆತಂತಾಗುತ್ತದೆ"[೩೯] ಎಂದು ಸೂಚಿಸಿರುವುದು ಶ್ರೀಯುತರ ಬಹು ಶೃತತೆಯನ್ನು ಸಾರುತ್ತದೆ.

**೩.೪.೦ : ವಚನ ಸಾಹಿತ್ಯ :**

ವಚನ ಸಾಹಿತ್ಯ ಕನ್ನಡ ತವನಿಧಿಯಾಗಿದೆ. ವಿಶ್ವದ ಯಾವುದೇ ಸಾಹಿತ್ಯರೂಪುಗಳಿಗಿಂತ ತುಂಬ ವಿಭಿನ್ನವಾಗಿದೆ. ತನ್ನದೇ ಆದ ಮಹತ್ವವನ್ನು ಪಡೆದಿದೆ. ಜಾಗತಿಕ ಸಾಹಿತ್ಯಕ್ಕೆ ಕನ್ನಡದ ಕೊಡುಗೆಯೆಂದರೆ ವಚನಸಾಹಿತ್ಯವೆಂಬ ಕೀರ್ತಿಗೂ ಕೂಡ ಭಾಜನವಾಗಿದೆ. ಡಾ. ಬಿ.ಆರ್. ಹಿರೇಮಠರಿಗೆ ಶಾಸನ, ಹಸ್ತಪ್ರತಿಯಷ್ಟೇ ಮತ್ತೊಂದು ಆಸಕ್ತಿಯ ಕ್ಷೇತ್ರವೆಂದರೆ ವಚನಸಾಹಿತ್ಯವಾಗಿದೆ. ಇದಕ್ಕೆ ಅವರ 'ಸಾಹಿತ್ಯ ಪರಿಶೋಧನ' ಹಾಗೂ 'ವೀರಶೈವ ಸಂಪದ' ಗ್ರಂಥಗಳು ಪ್ರಮಾಣವಾಗಿ ನಿಲ್ಲುತ್ತವೆ.

ಸಾಹಿತ್ಯ ಪರಿಶೋಧನವು ಡಾ. ಬಿ. ಆರ್. ಹಿರೇಮಠರು ರಚಿಸಿದ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥವಾಗಿದೆ. ಇದನ್ನು ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು (ಬೆಂಗಳೂರು) ೧೯೯೮ರಲ್ಲಿ ಪ್ರಕಟಿಸಿದೆ. ಇದರಲ್ಲಿ ಒಟ್ಟು ಹನ್ನೊಂದು ವಿವಿಧ ಬಗೆಯ ಲೇಖನಗಳಿವೆ. ಬಸವೋತ್ತರ ಯುಗದ ಸ್ವರವಚನ ಸಾಹಿತ್ಯ, ಏಳನೂರೊಂದು ವಿರಕ್ತೋತ್ತರ ಯುಗದ ವಚನಸಾಹಿತ್ಯ, ಸೋದೆಯ ಸದಾಶಿವರಾಯನ ಸ್ವರವಚನಗಳಲ್ಲಿ ಐತಿಹಾಸಿಕ ಸಂಗತಿಗಳು, ಬೆಡಗಿನ ವಚನಗಳ ವ್ಯಾಖ್ಯಾನಕಾರರು ಹಾಗೂ ಬಸವಣ್ಣನವರ ಟೀಕಿನ ವಚನಗಳು, ಸಾಂಸ್ಕೃತಿಕ ಅಧ್ಯಯನ ಇವೈದು ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿವೆ. ಹಾಗೆಯೇ ಬಸವಣ್ಣನವರ ಪೂರ್ವಜರ ಗ್ರಾಮ, ಹರಿಹರನ ರಗಳೆಗಳಲ್ಲಿ ಕಾಯಕ, ಕನ್ನಡ ಕೃತಿಗಳಿಗೆ ಬರೆದ ವೀರಶೈವ ವ್ಯಾಖ್ಯಾನ ಮೊದಲಾದ ಲೇಖನಗಳು ಕೂಡ ವಚನ ಸಾಹಿತ್ಯಕ್ಕೆ ಪೂರಕವಾಗಿ ಇವೆ.

**ಬಸವೋತ್ತರ ಸ್ವರ ವಚನ ಸಾಹಿತ್ಯ :**

ಇದು ಹೆಸರೇ ಸೂಚಿಸುವಂತೆ ಬಸವೋತ್ತರ ಯುಗದ ಸ್ವರ ವಚನ ಸಾಹಿತ್ಯವನ್ನು ವಿವೇಚಿಸುತ್ತದೆ. "ವಚನ ಹಾಗೂ ಸ್ವರ ವಚನಗಳು ಬಸವಾದಿ ಶಿವಶರಣರು ತಮ್ಮ ಅನುಭವದ ಅಭಿವ್ಯಕ್ತಿಗೆ ರೂಪಿಸಿಕೊಂಡ ಜನಪರ ಮಾಧ್ಯಮಗಳಾಗಿರುತ್ತವೆ"[೪೦] ಎಂದು ಆರಂಭದಲ್ಲಿ ಇವುಗಳ ವಿಶಿಷ್ಟತೆಯನ್ನು ದಾಖಲಿಸುತ್ತಾರೆ. ಬಸವೋತ್ತರ ಯುಗದ ಸ್ವರವಚನ ಸಾಹಿತ್ಯ, ವಿಪುಲತೆ, ವೈವಿಧ್ಯತೆ ಹಾಗೂ ಸತ್ವಶಕ್ತಿಗಳ ದೃಷ್ಟಿಯಿಂದ ಅತ್ಯಂತ ಗಮನಾರ್ಹವಾಗಿದೆ. ಈ ಯುಗದ ಸ್ವರವಚನಗಳ ಅಧ್ಯಯನದಿಂದ ಸ್ವರ ವಚನ ಸಾಹಿತ್ಯ ಪರಂಪರೆಯ ಪ್ರವಾಹದ ಮುನ್ನಡೆ ಇವುಗಳ ಶ್ರೀಮಂತಿಕೆ ಹಾಗೂ ಇವು ಕನ್ನಡ ಸಾಹಿತ್ಯದಲ್ಲಿ ಹೊಂದಿದ ಪ್ರಾಮುಖ್ಯತೆಗಳು ಪ್ರಕಟಗೊಳ್ಳುತ್ತವೆ ಎಂದು ಪ್ರತಿಪಾದಿಸಿದ್ದಾರೆ.

ಬಸವೋತ್ತರ ಯುಗದ ಕರಸ್ಥಲ ನಾಗಿದೇವ, ಗುರುಬಸವರನ್ನು ಮೊದಲುಗೊಂಡು ಸರಗಾಪುರದ ಬಂಡೆಪ್ಪ, ಸಲಗರದ ಸಂಗಯ್ಯ ಮುಂತಾದ ನಲವತ್ತಾರು ಜನರ ಸ್ವರವಚನ ಸಾಹಿತ್ಯರಾಶಿಯನ್ನು ಪರಿಶೀಲಿಸಿದ್ದಾರೆ. "ಬಸವೋತ್ತರ ಯುಗದ ಸ್ವರ ವಚನಗಳು ಹಾಡು, ಪದ, ಸ್ವರ ಪದ, ಅನುಭಾವ ಪದ, ತತ್ವ ಪದ, ಭಜನೆ ಪದ, ಏಕತಾರಿ ಪದ, ಕೈವಲ್ಯಪದ, ವೈರಾಗ್ಯಪದ ಮೊದಲಾದ ಹೆಸರುಗಳಿಂದಲೂ ಪ್ರಸಿದ್ಧಿ ಪಡೆದಿರುತ್ತವೆ"[೪೧] ಎಂಬುದನ್ನು ಗುರುತಿಸಿದ್ದಾರೆ. ಸ್ವರ ವಚನಕಾರರಲ್ಲಿ ವೀರಶೈವರಿಗಲ್ಲದೆ ಬ್ರಾಹ್ಮಣರು, ಹರಿಜನರು, ಮುಸ್ಲೀಮರು ಮುಂತಾದ ಮತೀಯರು ಸ್ವರವಚನಗಳನ್ನು ರಚಿಸಿರುವುದು ವಿಶಿಷ್ಟವಾಗಿರುವುದನ್ನು ಎತ್ತಿ ಹೇಳಿದ್ದಾರೆ. ಸ್ವರ ವಚನಗಳಲ್ಲಿ ಬಳಕೆಯಾಗಿರುವುದು ಸಂಗೀತ ಜ್ಞಾನ, ಕಾಂಬೋದಿ, ಭೈರವಿ, ನಾಟಿ ಮುಂತಾದ ರಾಗಗಳನ್ನು ರೂಪಕ, ಮಟ್ಟ, ಜಂತೆ, ತ್ರಿವಿಡೆ, ಅಟ್ಟ, ಏಕ ಧ್ರುವ, ಆದಿ, ಔತಾಳ ಮೊದಲಾದ ತಾಳಗಳನ್ನು ಪ್ರಸ್ತಾಪಿಸಿದ್ದಾರೆ. "ಸ್ವರ ವಚನಕಾರರ ಸಂಗೀತ ಜ್ಞಾನ ಸಂಗೀತ ಪ್ರಸಾರಗಳನ್ನು ಗುರುತಿಸುವ ವಿವೇಚಿಸುವ ಹಾಗೂ ವಿವರಿಸುವ ಕಾರ್ಯವು ನಡೆಯಬೇಕಾಗಿದೆ"[೪೨] ಎಂದು ಹೇಳುವಲ್ಲಿ ಈ ಕ್ಷೇತ್ರದಲ್ಲಿ ಆಗಬೇಕಾದ ಕಾರ್ಯದ ಕುರಿತಾಗಿಯೇ ಗಮನ ಸೆಳೆದಿದ್ದಾರೆ.

ಸ್ವರ ವಚನಗಳ ಛಂದಸ್ಸು ಹಾಗೂ ದೇಶೀಯ ಛಂದಸ್ಸಿನ ಪ್ರಯೋಗಶೀಲತೆ ಶಿಷ್ಟ ಛಂದಸ್ಸಿನ ಮಾರ್ಗ ಪರಂಪರೆ ಮೊದಲಾದವುಗಳನ್ನು ಕೂಡ ವಿವೇಚಿಸಿದ್ದಾರೆ. "ಜನ ಬದುಕಬೇಕೆಂದು, ಬದುಕನ್ನು ಬೆಳಕಾಗಿಸಿಕೊಳ್ಳಬೇಕೆಂದು, ಸೂತಕ ಮುಕ್ತ ಸಮಾಜ ನಿರ್ಮಾಣವಾಗಬೇಕೆಂದು ಬಯಸಿ ಅನುಭಾವಿಗಳು ಸ್ವರ ವಚನಗಳನ್ನು ರಚಿಸಿದರು"[೪೩] ಎನ್ನುವಲ್ಲಿ ಸ್ವರವಚನರಚನೆಯ ಉದ್ದೇಶವನ್ನೂ ವಿವರಿಸಿದ್ದಾರೆ.

"ಸಂವಹನ ಶೀಲತೆ, ಜಂಗಮತ್ವ, ಕ್ರಿಯಾಶೀಲತೆ, ಗೇಯತೆ, ನಾದ ಮಾಧುರ್ಯ, ಸೃಜನಶೀಲತೆ, ಭಾಷೆಯ ಆತ್ಮೀಯತೆ ಹಾಗೂ ಜೀವಂತಿಕೆಗಳು ಈ ಯುಗದ ಸ್ವರ ವಚನಗಳ ಪ್ರಮುಖ ಲಕ್ಷಣಗಳಾಗಿರುತ್ತವೆ"[೪೪] ಎನ್ನುವಲ್ಲಿ ಸ್ವರವಚನಗಳ ಲಕ್ಷಣಗಳನ್ನು ಹೇಳಿದ್ದಾರೆ. ಸ್ವರ ವಚನಗಳ ಕುರಿತಾಗಿ ಬಂದಿರುವ ಮೌಲಿಕ ಲೇಖನಗಳಲ್ಲಿ ಇದು ಒಂದಾಗಿದೆ.

**ಏಳುನೂರೊಂದು ವಿರಕ್ತೋತ್ತರ ವಚನ ಸಾಹಿತ್ಯ :**



ಬಸವೋತ್ತರ ಯುಗದ ವಚನ ಸಾಹಿತ್ಯದಲ್ಲಿ ಏಳು ನೂರೊಂದು ವಿರಕ್ತಯುಗ ಅತ್ಯಂತ ಪ್ರಮುಖವಾದ ಘಟ್ಟವಾಗಿದೆ. ಏಳುನೂರು ಎಪ್ಪತ್ತು ಅಮರ ಗಣಂಗಳು ೧೬ನೇ ಶತಮಾನದವರು. ನೂರೊಂದು ವಿರಕ್ತರು ಪ್ರೌಢದೇವರಾಯನ ಕಾಲದವರು. ಏಳನೂರೊಂದು ವಿರಕ್ತರನಾಯಕ ವ್ಯಕ್ತಿ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಅವರ ಪ್ರಭಾವಲಯದಲ್ಲಿ ಬೆಳಗಿದವರು ಅನಂತ ವ್ಯಕ್ತಿಗಳು ಅವರ ಶಿಷ್ಯ ಪ್ರಶಿಷ್ಯ ಪರಂಪರೆ ನಾಡಿನುದ್ದಗಲಕ್ಕೂ ಹಬ್ಬಿತ್ತು. ಅವರು ವಚನ ರಚನೆ, ವಚನ ಸಂಗ್ರಹ, ಸಂಕಲನ, ಸಂಪಾದನ, ವ್ಯಾಖ್ಯಾನ ಸಾಹಿತ್ಯವನ್ನು ಸೃಷ್ಟಿಸಿದರು. ಬಸವೋತ್ತರ ಯುಗದ ವಚನ ಸಾಹಿತ್ಯದಲ್ಲಿ ನೂರೊಂದು ವಿರಕ್ತ ಪೂರ್ವ ಯುಗ, ನೂರೊಂದು ವಿರಕ್ತ ಯುಗ. ಏಳು

ನೂರೊಂದು ವಿರಕ್ತ ಯುಗ, ಏಳುನೂರೊಂದು ವಿರಕ್ತೋತ್ತರ ಯುಗ ಹೀಗೆ ನಾಲ್ಕು ಘಟ್ಟಗಳಾಗಿ ವಿಭಜಿಸಿಕೊಂಡಿರುವುದು ಕುತೂಹಲಕಾರಿಯಾಗಿದೆ. ಈ ಲೇಖನದಲ್ಲಿ ಏಳನೂರೊಂದು ವಿರಕ್ತೋತ್ತರ ಯುಗದ ವಚನಸಾಹಿತ್ಯವನ್ನು ಮಾತ್ರ ಪರಿಶೀಲಿಸಿದ್ದಾರೆ.

ತೋಂಟದ ಸಿದ್ಧಲಿಂಗ ಶಿವಯೋಗಿ, ಷಣ್ಮುಖ ಶಿವಯೋಗಿ, ಕಾಡಸಿದ್ದೇಶ್ವರರನ್ನು ಹೊರತುಪಡಿಸಿ ಇತರ ವಚನಕಾರರ ಸಾಹಿತ್ಯದ ಪರಿಚಯ ಮತ್ತು ವಿವೇಚನೆಯನ್ನು ಈ ಲೇಖನದಲ್ಲಿ ಮಾಡಿದ್ದಾರೆ. ಮುಖ್ಯವಾಗಿ ಕಡಕೋಳ ಮಡಿವಾಳಪ್ಪ, ಕುಷ್ಟಗಿ ಕರಿಬಸವೇಶ್ವರ, ಗುಹೇಶ್ವರಯ್ಯ, ಚೆನ್ನಯ್ಯ, ದೇಶೀಕೇಂದ್ರ ಸಂಗನಬಸವೇಶ್ವರ, ನಿರಾಲಂಬ ಪ್ರಭುದೇವ, ಪರಂಜ್ಯೋತಿ ಭಿಕ್ಷದ ಸಂಗಯ್ಯ, ಮುಮ್ಮಡಿ ಕಾರ್ಯೇಂದ್ರ, ಮೂರುಸಾವಿರ ಮುಕ್ತಾಮುನಿ, ಹೇಮಗಲ್ಲ ಹಂಪ ಮೊದಲಾದ ಹನ್ನೊಂದು ಜನ ಶಿವ-ಶರಣರು ಹಾಗೂ ೫೪ ಜನ ಅಜ್ಞಾತ ವಚನಕಾರರು ಏಳು ನೂರೊಂದು ವಿರಕ್ತೋತ್ತರ ಯುಗದಲ್ಲಿ ರಚಿಸಿದ ವಚನಸಾಹಿತ್ಯವನ್ನು ಡಾ. ಹಿರೇಮಠ ಅವರು ಸಮೀಕ್ಷಿಸಿದ್ದಾರೆ. ಅವರು ಹೇಳಿರುವ ವಿಶೇಷ ಸಂಗತಿಗಳನ್ನು ಸಂಗ್ರಹಿಸಿ ಕೊನೆಯಲ್ಲಿ ವಿರಕ್ತೋತ್ತರ ಯುಗದ ಶರಣರು ಹಾಗೂ ವಚನಸಾಹಿತ್ಯದ ವಿವೇಚನೆಯ ಮೂಲಕ ಇಲ್ಲಿ ಹದಿನೇಳು - ಹದಿನೆಂಟು -ಹತ್ತೊಂಬತ್ತನೆಯ ಶತಮಾನದ ವಚನಕಾರರು ಮತ್ತು ವಚನಗಳ ಸ್ಥೂಲವಾದ ಪರಿಚಯ ಮಾಡಿಕೊಡಲಾಗಿದೆ"[೪೫] ಎಂದಿರುವುದು ಸಮಂಜಸವಾಗಿದೆ. ತೀರ ಅಲಕ್ಷಿತವಾಗಿರುವ ವಚನಕಾರರ ಅಧ್ಯಯನ ಉಪೇಕ್ಷಿತ ಸಾಹಿತ್ಯದ ಪರಿಶೀಲನೆ ಮಾಡಿರುವುದು ಸೂಕ್ತವಾಗಿದೆ.

**ಸೋದೆಯ ಸದಾಶಿವರಾಯನ ಸ್ವರವಚನದಲ್ಲಿ ಐತಿಹಾಸಿಕ ಸಂಗತಿಗಳು :**

ಈ ಕೃತಿಯ ಮತ್ತೊಂದು ಮಹತ್ವದ ಲೇಖನವಿದು. ಇತಿಹಾಸ ರಚನೆಯಲ್ಲಿ ಶಾಸನಗಳನ್ನು ಮೂಲ ಆಕರ ಸಾಮಗ್ರಿಗಳಾಗಿ, ಕಾವ್ಯಗಳನ್ನು ಪೂರಕ ಸಾಮಗ್ರಿಗಳಾಗಿ ಬಳಸುತ್ತ ಬರಲಾಗಿದೆ. ಆದರೆ ಇತಿಹಾಸಕ್ಕೆ ಪೂರಕವಾಗಿ ಸ್ವರವಚನಗಳನ್ನು ಬಳಸಿಕೊಂಡಿರುವುದು ಪ್ರಮುಖ ಅಂಶವಾಗಿದೆ. ಸೋದೆ ಅರಸುಮನೆತನವನ್ನು ಆರಂಭದಲ್ಲಿ ಪರಿಚಯಿಸಿ, ಆ ಮನೆತನದಲ್ಲಿ ಬರುವ ಸುಪ್ರಸಿದ್ಧನಾದ ಅರಸ ಸದಾಶಿವರಾಯನ ವ್ಯಕ್ತಿತ್ವ, ಆಡಳಿತವನ್ನು ವಿವರಿಸಿದ್ದಾರೆ. ಸದಾಶಿವರಾಯನ 'ಸದಾಶಿವನೀತಿ'ಯೊಂದೇ ಇಲ್ಲಿಯವರೆಗೆ ಲಭಿಸಿತ್ತು. ಆದರೆ ಡಾ. ಹಿರೇಮಠರ ಪರಿಶ್ರಮದಿಂದ ಅಪೂರ್ವ ತಾಳೆಗರಿ ಹಸ್ತಪ್ರತಿ ಲಭಿಸಿ ಅದರಲ್ಲಿ ಹದಿನೇಳು ಸಾಹಿತ್ಯ ಕೃತಿಗಳು ಅಡಕವಾಗಿರುವುದು ಗಮನಾರ್ಹ ಅಂಶವಾಗಿದೆ. ಇದೊಂದು ಹೊಸ ಶೋಧವಾಗಿದೆ. ಇದರಿಂದಾಗಿ "ಸೋದೆ ಅರಸುಮನೆತನದ ರಾಜಕೀಯ, ಧಾರ್ಮಿಕ, ಸಂಗೀತ ಹಾಗೂ ಸಾಹಿತ್ಯಿಕ ವಿಷಯಗಳನ್ನು ಕುರಿತು ಅಪೂರ್ವ ಅಂಶಗಳು ಬೆಳಕು ಕಾಣುತ್ತಲಿವೆ"[೪೬] ಇದೊಂದು ಚಾರಿತ್ರಿಕ ದಾಖಲೆಯಾಗಿದೆ.

ಸದಾಶಿವರಾಯನ ಹದಿನೇಳು ಹೊಸ ಕೃತಿಗಳನ್ನು ಹೆಸರಿಸಿ ನಂತರ 'ಸ್ವರವಚನ'ಗಳನ್ನು ಪರಿಚಯಿಸಿದ್ದಾರೆ. "ಸದಾಶಿವರಾಯನ ಹೆಸರಿನಲ್ಲಿ ಸದ್ಯ ೧೬೦ ಸ್ವರವಚನಗಳು ಲಭಿಸುತ್ತಿವೆ.

ಪ್ರತಿಯೊಂದು ಸ್ವರವಚನದ ಆರಂಭದಲ್ಲಿ 'ಪಲ್ಲ'ವಿದೆ, ಇವು ಗಾತ್ರದಲ್ಲಿ ಎರಡು ನುಡಿಯಿಂದ ೧೧ ನುಡಿಯವರೆಗೂ ವ್ಯಾಪಿಸಿವೆ. ಪ್ರತಿಯೊಂದು ಸ್ವರವಚನದಲ್ಲಿ ಆದಿಪ್ರಾಸ ನಿಯಮಿತವಾಗಿದ್ದು ನುಡಿಯಿಂದ ನುಡಿಗೆ ಬೇರೆ ಬೇರೆಯಾಗಿರುತ್ತದೆ. ಇದರಿಂದ ಸ್ವರವಚನಗಳಲ್ಲಿ ಪ್ರಾಸ ವೈವಿಧ್ಯ ಸಹಜವಾಗಿ ಬರುತ್ತವೆ. ೧೨ ಅನುಪ್ರಾಸ, ಅಂತ್ಯಪ್ರಾಸಗಳೊಂದಿಗೆ ವಡಿಯನ್ನೂ ಇಲ್ಲಿ ಬಳಸಲಾಗಿದೆ. ಹೀಗೆ ಈ ಸ್ವರ ವಚನಗಳು ಛಂದೋ ವೈವಿಧ್ಯದಿಂದ ಕೂಡಿದವುಗಳಾಗಿರುತ್ತವೆ"[೬೭] ಎಂದು ಸ್ಥೂಲವಾಗಿ ಪರಿಚಯಿಸಿದ್ದಾರೆ.

ಸ್ವರವಚನಗಳಲ್ಲಿ ದಾಖಲಿಸಿರುವ ಸೋದೆ ಅರಸುಮನೆತನದ 'ವಂಶಾವಳಿ'ಯನ್ನು ರೂಪಿಸಿರುವುದು ವಿನೂತನವಾಗಿದೆ.* ಹಲವು ಸ್ವರವಚನಗಳನ್ನು ಉದಾಹರಿಸಿ ವಿಷಯವನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಈ ರೀತಿಯಾಗಿ ಸೋದೆಯ ಸದಾಶಿವರಾಯನ ಸ್ವರವಚನಗಳಲ್ಲಿ ವ್ಯಕ್ತವಾದ ಐತಿಹಾಸಿಕ ಸಂಗತಿಗಳು ಅತ್ಯಂತ ಮಹತ್ವದ ದಾಖಲೆಗಳಾಗಿವೆ. ಇದು ಇತಿಹಾಸಕಾರರು ಮತ್ತು ಸಂಶೋಧಕರಿಗೆ ಅಮೂಲ್ಯ ಗಣಿಯಾಗಿದೆ. ಡಾ. ಬಿ. ಆರ್. ಹಿರೇಮಠರ ಮೌಲಿಕ ಸಂಶೋಧನೆಯಿದು.

**ಬೆಡಗಿನ ವಚನಗಳ ವ್ಯಾಖ್ಯಾನಕಾರರು :**

ಇದು ಸಾಹಿತ್ಯ ಪರಿಶೋಧನದಲ್ಲಿರುವ ಮತ್ತೊಂದು ವಚನಗಳ ಕುರಿತಾಗಿರುವ ಲೇಖನವಾಗಿದೆ. ಇದರಲ್ಲಿ ವಚನಕಾರರು ತಮ್ಮ ವಚನಗಳನ್ನು ಬೆಡಗಿನ ವಚನವೆಂದು ಎಲ್ಲಿಯೂ ಹೇಳಿಲ್ಲ. ಆದರೆ ತದನಂತರ ಬಂದ ವಚನ ಸಂಕಲನಕಾರರು ಹಾಗೂ ವಿದ್ವಾಂಸರು ವಚನಕಾರರ ಬೆಡಗಿನ ವಚನ ಗುರುತಿಸಿರುವುದನ್ನು ಡಾ. ಬಿ. ಆರ್. ಹಿರೇಮಠ ಅವರು ಪ್ರತಿಪಾದಿಸಿದ್ದಾರೆ. ತದನಂತರ ಬಂದ ಸಂಕಲನಕಾರರು ಬೆಡಗಿನ ವಚನಗಳಿಗೆ ವ್ಯಾಖ್ಯಾನ ನೀಡಿದ್ದಾರೆ. ಬೆಡಗಿನ ವಚನಗಳನ್ನು ಮೂರು ರೀತಿಯಾಗಿ ವಿಂಗಡಿಸಿಕೊಂಡಿದ್ದಾರೆ. ೧) ಕೇವಲ ಬೆಡಗಿನ ವಚನ ವ್ಯಾಖ್ಯಾನ ೨) ಸಮಗ್ರ ವಚನಕಾರರ ಸಮಗ್ರ ವಚನಗಳಲ್ಲಿಯ ಬೆಡಗಿನ ವಚನಗಳ ವ್ಯಾಖ್ಯಾನ ೩) ವಚನ ಸಂಕಲನಗಳಲ್ಲಿಯ ಬೆಡಗಿನ ವಚನಗಳ ವ್ಯಾಖ್ಯಾನ. ಈ ವ್ಯಾಖ್ಯಾನಗಳು ಕೇವಲ ತಾತ್ವಿಕಾರ್ಥ ಪ್ರಧಾನವಾಗಿರುತ್ತವೆ. ಬೆಡಗಿನ ವಚನಗಳಿಗೆ ವಿವಿಧ ಮಾದರಿಯ ವ್ಯಾಖ್ಯಾನಗಳಿವೆ ಎಂದು ವಿವರಿಸುತ್ತ ತಾತ್ವಿಕಾರ್ಥದಲ್ಲಿರುವ ಪ್ರತಿಪದಾರ್ಥ ೨) ವಾಕ್ಯರೂಪದಲ್ಲಿರುವ ತಾತ್ವಿಕಾರ್ಥ ೩) ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ವಿವರಣ ರೂಪದ ತಾತ್ವಿಕಾರ್ಥ ೪) ಪಥವನ್ನು ಹಿಮ್ಮೆಟ್ಟಿಸಿ ಬರೆದ ಪ್ರತಿ ಪದಾರ್ಥ ಹಾಗೂ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ ೫) ಸಾರವತ್ತಾದ ಹಾಗೂ ಸಂಗ್ರಹರೂಪದ ತಾತ್ವಿಕಾರ್ಥ ೬) ವಾಕ್ಯರೂಪ ಹಾಗೂ ಸಾರರೂಪದಲ್ಲಿರುವ ಎರಡೂ ತಾತ್ವಿಕಾರ್ಥ ಹೀಗೆ ವಿವಿಧ ಉಪಶೀರ್ಷಿಕೆಗಳಡಿಯಲ್ಲಿ ಬೆಡಗಿನ ವಚನಗಳನ್ನು ವಿವೇಚಿಸಿದ್ದಾರೆ, ವಿಶ್ಲೇಷಿಸಿದ್ದಾರೆ. ಮತ್ತು ವ್ಯಾಖ್ಯಾನಕಾರರ ಆಳವಾದ ಅಧ್ಯಯನ,

ಅನುಭವ, ಪಾಂಡಿತ್ಯ ಹಾಗೂ ಉಜ್ವಲ ಪ್ರತಿಭೆಗಳು ವ್ಯಕ್ತವಾಗುತ್ತವೆ. ಬೆಡಗಿನ ವಚನಗಳು ಭಾಷೆಯ ಸರ್ವ ಸಾಧ್ಯತೆಯನ್ನು ವಿಸ್ತರಿಸಿವೆ. ಹೀಗಾಗಿ ಇದೊಂದು ಮೌಲಿಕ ಲೇಖನವಾಗಿದೆ. "ಬೆಡಗಿನ ವಚನಗಳ ವ್ಯಾಖ್ಯಾನಕಾರರು ೧೨ನೇ ಶತಮಾನದ ವೀರಶೈವ ತತ್ವಗಳ ಸಂರಕ್ಷಕರು, ಪ್ರಸಾರಕರೂ ಆಗಿದ್ದಾರೆ. ವೀರಶೈವ ವ್ಯಾಖ್ಯಾನಕಾರರಿಗೂ ವಿಶಿಷ್ಟವಾದ ಸ್ಥಾನವಿದೆ"[೬೮] ಎಂಬ ಮಾತು ಸಮಂಜಸವಾಗಿದೆ.

**ಬಸವಣ್ಣನವರ ಟೀಕಿನ ವಚನಗಳು ಸಾಂಸ್ಕೃತಿಕ ಅಧ್ಯಯನ :**

ಇದು ಸಾಹಿತ್ಯ ಪರಿಶೋಧನದಲ್ಲಿರುವ ವಚನ ಸಾಹಿತ್ಯ ಕುರಿತಾದ ಕೊನೆಯ ಲೇಖನ. "ವಚನಗಳ ಹಾಗೂ ವಚನಗಳಿಗೆ ಬರೆದ ಟೀಕೆಗಳ ಸಾಂಸ್ಕೃತಿಕ ಅಧ್ಯಯನ ತುಂಬಾ ವಿಭಿನ್ನವಾಗಿರುತ್ತದೆ. ಒಂದು ಶರಣರ ಕಾಲದ ಸಾಂಸ್ಕೃತಿಕ ಜೀವನವನ್ನು ಹೇಳಿದರೆ, ಇನ್ನೊಂದು ಟೀಕಾಕಾರನ ಕಾಲದ ಸಾಂಸ್ಕೃತಿಕ ಜೀವನದ ಚಿತ್ರಣವನ್ನು ಒದಗಿಸುತ್ತದೆ. ಹೀಗಿದ್ದು ಟೀಕಾಕಾರನ ಕಾಲದಲ್ಲಿಯೂ ಅವನ ಪ್ರದೇಶದ ಜನಜೀವನವನ್ನು ಚಿತ್ರಿಸುವಲ್ಲಿ ಬಸವಣ್ಣನವರ ಕಾಲದ ಸಾಮಾಜಿಕ ಜೀವನದ ಎಳೆಗಳು ಸೇರಿಕೊಂಡಿರುವ ಸಾಧ್ಯತೆ ಇದೆ"[೬೯] ಎಂಬುದನ್ನು ಪ್ರತಿಪಾದಿಸಿದ್ದಾರೆ. ಡಾ. ಎಂ. ಎಂ. ಕಲಬುರ್ಗಿಯವರು ಸಂಪಾದಿಸಿದ ಬಸವಣ್ಣನವರ ಟೀಕಿನ ವಚನಗಳು ಸಂ. ೧-೨ ರ ಕುರಿತಾಗಿ ಸಾಂಸ್ಕೃತಿಕ ಅಧ್ಯಯನ ಕೈಗೊಂಡಿದ್ದಾರೆ. ಒಂದನೆಯ ಟೀಕಾಕರ್ತನ ಅನಾಮಧೇಯವಾಗಿದ್ದರೂ ಆತನು ಹಂಪೆಯ ಪ್ರದೇಶದವನೆಂದು ಆತನು ಬದುಕಿದ ಕಾಲಾವಧಿ ೧೫ನೇ ಶತಮಾನ ಎಂದು ಡಾ. ಬಿ. ಆರ್. ಹಿರೇಮಠ ಅವರು ತೀರ್ಮಾನಿಸಿದ್ದಾರೆ. "ಒಂದನೆಯ ಟೀಕೆಯನ್ನಾಧರಿಸಿ ೧೫ನೇ ಶತಮಾನದ ಒಂದು ಸಾಂಸ್ಕೃತಿಕ ಚಿತ್ರವನ್ನು ಕಂಡುಕೊಳ್ಳುವ ಪ್ರಯತ್ನವಿದಾಗಿದೆ"[೭೦] ಎಂದು ಸ್ವತಃ ಸಂಶೋಧಕರೇ ಸ್ಪಷ್ಟಪಡಿಸಿದ್ದಾರೆ. ಎರಡೂ ಸಂಪುಟಗಳ ಒಡಲೊಳಗೆ ಹುದುಗಿರುವ ರಾಜಕೀಯ, ಸಾಮಾಜಿಕ, ಧಾರ್ಮಿಕ, ಮೊದಲಾದ ವಿಷಯಗಳನ್ನು ಸಂಗ್ರಹಿಸಿ ಸಾಂಸ್ಕೃತಿಕ ಅಧ್ಯಯನವನ್ನು ಡಾ. ಹಿರೇಮಠ ಅವರು ಕೈಗೊಂಡಿದ್ದಾರೆ.

ಈ ಅಧ್ಯಯನದಿಂದಾಗಿ ಅಪೂರ್ವವಾದ ಸಂಗತಿಗಳು ಬೆಳಕಿಗೆ ಬಂದಿವೆ. ಆದರೂ ಡಾ. ಬಿ. ಆರ್. ಹಿರೇಮಠ ಅವರು - "ಇಲ್ಲಿಯ ಅನೇಕ ವಿಷಯಗಳನ್ನು ಕುರಿತು ಇನ್ನೂ ಚರ್ಚೆ ವಿವೇಚನೆಗಳು ನಡೆಯಬೇಕಾಗಿದ್ದು, ಇದು ಒಂದು ಸ್ಥೂಲವಾದ ಸಾಂಸ್ಕೃತಿಕ ಅಧ್ಯಯನವೆಂಬುದನ್ನು ಗಮನಿಸಬೇಕು"[೭೧] ಎಂಬ ಮಾತುಗಳು ಸಂಶೋಧಕರ ಸರಳತೆ, ಸೌಜನ್ಯತೆ ಮತ್ತು ಪ್ರಾಮಾಣಿಕತೆಗಳಿಗೆ ಹಿಡಿದ ಕನ್ನಡಿಯಾಗಿದೆ.

"ಪ್ರಸ್ತುತ ಡಾ. ಬಿ. ಆರ್. ಹಿರೇಮಠ ಅವರ ಸಾಹಿತ್ಯ ಪರಿಶೋಧನ ಕೃತಿ ವಚನಸಾಹಿತ್ಯ ಪರಂಪರೆಗೆ ಸಂಬಂಧಿಸಿದುದಾಗಿದ್ದು. ಅನೇಕ ಮೌಲಿಕ ವಿಚಾರಗಳಿಂದ ಕೂಡಿದೆ. ಕನ್ನಡ ಸಾಹಿತ್ಯಕ್ಕೆ ಇದೊಂದು ಮಹತ್ತರವಾದ ಕೊಡುಗೆಯಾಗಿದೆ"[೭೨] ಎಂಬ ವಿದ್ವಾಂಸರ ಮಾತುಗಳು ಈ ಕೃತಿಯ ಮಹತ್ವವನ್ನು ಸಾರಿ ಹೇಳುತ್ತವೆ.

ವೀರಶೈವ ಸಂಪದವು ಡಾ. ಬಿ. ಆರ್. ಹಿರೇಮಠ ಅವರಿಂದ ರಚನೆಗೊಂಡಿರುವ ವಚನಸಾಹಿತ್ಯ ಕುರಿತಾದ ಮತ್ತೊಂದು ಸಂಶೋಧನಾ ಗ್ರಂಥವಿದು. ಸುಕ್ಷೇತ್ರ ಹಾರಕೂಡದ ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠವು ಈ ಕೃತಿಯನ್ನು ಪ್ರಕಟಿಸಿದೆ. ಇದು ೧೯೯೮ರಲ್ಲಿ ಮೊದಲ ಬಾರಿಗೆ ಬೆಳಕು ಕಂಡಿದೆ. ಇದರಲ್ಲಿ ಒಟ್ಟು ೬ ಲೇಖನಗಳಿದ್ದು, ವಚನ ಸಾಹಿತ್ಯಕ್ಕೆ ಸಂಬಂಧಿಸಿದ ೩ ಲೇಖನಗಳಿವೆ. ೧) ಮಡಿವಾಳ ಮಾಚಿದೇವನ ವಚನಗಳ ವಿವೇಚನೆ ೨) ನೂರೊಂದು ವಿರಕ್ತ ಯುಗದ ಸ್ವರ ವಚನ ಸಾಹಿತ್ಯ ೩) ವಚನ ಸಾಹಿತ್ಯ ಪ್ರಕಟಣೆಯ ದ್ವಿತೀಯ ಘಟ್ಟ ಇವು ಪ್ರಮುಖವಾಗಿವೆ.

**ಮಡಿವಾಳ ಮಾಚಿದೇವನ ವಚನಗಳ ವಿವೇಚನೆ :**

ಮಡಿವಾಳ ಮಾಚಿದೇವ ೧೨ನೇ ಶತಮಾನದ ಶಿವಶರಣರಲ್ಲಿ ಒಬ್ಬನಾಗಿದ್ದಾನೆ. ಈತನ ವಿಷಯವನ್ನು ಪ್ರಾಸಂಗಿಕವಾಗಿ ತಿಳಿಸುವ ಪ್ರಾಚೀನ ಹಾಗೂ ನಡುಗನ್ನಡ ಕಾವ್ಯಗಳನ್ನು ಪಟ್ಟಿಮಾಡಿ ಮಾಚಿದೇವನ ಜೀವನ ಚರಿತ್ರೆಯನ್ನು ಡಾ. ಹಿರೇಮಠರು ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಮಾಚಿದೇವನ ಕಾರ್ಯ, ದೇವರ ಹಿಪ್ಪರಗಿಯಿಂದ ಕಲ್ಯಾಣಕ್ಕೆ ಹೋದ ಘಟನೆ, ಕಲ್ಯಾಣದ ಅನುಭವ ಮಂಟಪದಲ್ಲಿ ಭಾಗಿಯಾದ ಪ್ರಸಂಗ ಮೊದಲಾದವುಗಳನ್ನು ಆತನ ವಚನಗಳಿಂದಲೇ ಸೊಗಸಾಗಿ ನಿರೂಪಿಸಿದ್ದಾರೆ. "ಬಸವಣ್ಣನ ಅರಮನೆ, ಮಹಾಮನೆ, ಅನುಭವಮಂಟಪ, ಅಲ್ಲಿ ನಿತ್ಯ ನಡೆಯುತ್ತಿದ್ದ ದಾಸೋಹ, ಅಲ್ಲಿ ಕಾರ್ಯ ನಿರತ ಶರಣರು, ಮಾಚಿದೇವನ ಮೇಲೆ ಗಾಢವಾದ ಪ್ರಭಾವ ಬೀರಿದವು. ಮಾಚಿದೇವನ ಮಹಾ ಚೈತನ್ಯ ಉದ್ದೀಪಗೊಳ್ಳುವುದಕ್ಕೆ ಇವೆಲ್ಲ ನೆರವಾದವು."[೫೩] ಈ ಮಾತುಗಳು ಮಾಚಿದೇವ ವ್ಯಕ್ತಿತ್ವ ಸಿದ್ಧಿಯನ್ನು ನಿರೂಪಿಸುತ್ತವೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಮುಂತಾದವರು ಮಡಿವಾಳ ಮಾಚಿದೇವನ ಬಗ್ಗೆ ಹೇಳಿರುವ ವಚನಗಳನ್ನು ಉಲ್ಲೇಖಿಸಿದ್ದಾರೆ. ಅದಲ್ಲದೇ ಮರುಳ ಶಂಕರದೇವ, ಅಕ್ಕಮಹಾದೇವಿ, ನುಲಿಯ ಚಂದಯ್ಯ ಮುಂತಾದ ಶಿವಶರಣರು ಮಾಚಿದೇವ ಮಹಾವ್ಯಕ್ತಿತ್ವದ ದಿವ್ಯದರ್ಶನ ಮಾಡಿಸಿರುವುದನ್ನು ನಿರೂಪಿಸುತ್ತ - "ಪಾರದರ್ಶಕ ವ್ಯಕ್ತಿತ್ವದ ಪರಮಪಾವನ ಮೂರ್ತಿಯಾದ ಮಾಚಯ್ಯನು ಶರಣರ ದೃಷ್ಟಿಯಲ್ಲಿ ಮಹಾಬೆಳಗು, ಮಹಾಘನ"[೫೪] ಎಂದು ವ್ಯಾಖ್ಯಾನಿಸಿದ್ದು ಯಥೋಚಿತವಾಗಿದೆ. ಮಡಿವಾಳ ಮಾಚಿದೇವನ ಜೀವನದಲ್ಲಿ ಜರುಗಿದ ಘಟನೆಗಳು ಹಲವು. ಅದರಲ್ಲಿ ಬಿಜ್ಜಳನು ಕಳಿಸಿದ ಮದ್ದಾನೆಯ ಮದವಿಳಿಸಿದ್ದು, ಬಸವಣ್ಣನವರ ಅಹಂಕಾರ ನಿರಸನ ಮಾಡಿದ್ದು, ನುಲಿಯ ಚಂದಯ್ಯನಿಗೆ ಇಷ್ಟಲಿಂಗದ ಅವಶ್ಯಕತೆಯನ್ನು ತಿಳಿಸಿದ್ದು ಮುಂತಾದವು ಪ್ರಮುಖವಾಗಿವೆ. ಇವೆಲ್ಲವುಗಳನ್ನು ಲೇಖಕರು ಪ್ರಸ್ತಾಪಿಸಿ ಮಾಚಿದೇವನ ಕಾಯಕನಿಷ್ಠೆಯನ್ನು ಪ್ರತಿಪಾದಿಸಿದ್ದಾರೆ.

ಮಾಚಿದೇವ ಕೇವಲ ಶರಣನಾಗಿರದೆ ವಚನಕಾರನೂ ಆಗಿದ್ದ ಆತನ ನಾಲ್ಕುನೂರು ವಚನಗಳು ಲಭಿಸುತ್ತಿವೆ. ಕಲಿದೇವರದೇವ, ಕಲಿದೇವ ಎಂಬುದು ಮಾಚಿದೇವನ ವಚನಾಂಕಿತವಾಗಿದೆ.

ಮಾಚಿದೇವನ ಹಲವಾರು ವಚನಗಳನ್ನು ವಿವೇಚನೆಗೆ ಒಳಪಡಿಸಿದ್ದಾರೆ. "ಮಾಚಿದೇವನ ಕಾಯಕನಿಷ್ಠೆ, ಅನ್ಯದೈವಗಳ ವಿರೋಧ ಮುಂತಾದವುಗಳನ್ನು ವಿವರಿಸಿದ್ದಾರೆ. ನೀತಿಬೋಧಕವೂ, ಸಾಹಿತ್ಯಾಂಶಯುಕ್ತವಾದ ವಚನಗಳನ್ನು ಉಲ್ಲೇಖಿಸಿದ್ದಾರೆ. ಮಾಚಿದೇವನ ವಚನಗಳ ಅಧ್ಯಯನದಿಂದ ಮಾಚಿದೇವನೊಬ್ಬ ವಿದ್ವಾಂಸ, ಅನುಭಾವಿ, ಕಾಯಕಜೀವಿ, ಸಮಾಜಸುಧಾರಕನೆಂಬುದು ವಿದಿತವಾಗುತ್ತದೆ"[೨೫] ಎಂದು ವಿಶ್ಲೇಷಿಸಿರುವುದು ಅರ್ಥಪೂರ್ಣವಾಗಿದೆ.

**ನೂರೊಂದು ವಿರಕ್ತಯುಗದ ಸ್ವರವಚನ ಸಾಹಿತ್ಯ :**

ಇದು ವೀರಶೈವ ಸಂಪದದ ೨ನೇ ಲೇಖನ. ಕನ್ನಡದಲ್ಲಿ ರಚಿತವಾದ ಈ ಸಮಗ್ರ ಸ್ವರವಚನ ಸಾಹಿತ್ಯವನ್ನು ಅಧ್ಯಯನದ ಅನುಕೂಲತೆಗಾಗಿ ಬಸವ ಪೂರ್ವ ಯುಗದ ಸ್ವರವಚನ ಸಾಹಿತ್ಯ, ಬಸವಯುಗದ ಸ್ವರವಚನ ಸಾಹಿತ್ಯ, ಬಸವೋತ್ತರ ಯುಗದ ಸ್ವರ ವಚನಸಾಹಿತ್ಯ ಎಂದು ಸ್ಥೂಲವಾಗಿ ವಿಭಜಿಸಿಕೊಂಡಿದ್ದಾರೆ. ಮತ್ತೆ ಬಸವೋತ್ತರ ಯುಗದ ಸ್ವರ ವಚನ ಸಾಹಿತ್ಯದಲ್ಲಿ ನೂರೊಂದು ವಿರಕ್ತರ ಪೂರ್ವಯುಗ, ನೂರೊಂದು ವಿರಕ್ತರ ಯುಗ, ನೂರೊಂದು ವಿರಕ್ತೋತ್ತರ ಯುಗ, ಏಳು ನೂರೊಂದು ವಿರಕ್ತರ ಯುಗ, ಏಳು ನೂರೊಂದು ವಿರಕ್ತೋತ್ತರ ಯುಗ ಎಂದು ಮತ್ತೆ ಉಪವಿಭಾಗ ಮಾಡಿಕೊಂಡಿದ್ದಾರೆ. ಹೀಗೆ ವರ್ಗೀಕರಿಸಿರುವುದು ಡಾ. ಬಿ. ಆರ್. ಅವರ ಸಂಶೋಧನೆ ಶಿಸ್ತಿಗೆ ಶಾಸ್ತ್ರೀಯ ಚೌಕಟ್ಟಿಗೆ ಪೂರಕವಾಗಿದೆ. ಮುಖ್ಯವಾಗಿ ಅಧ್ಯಯನದ ಅನುಕೂಲಕ್ಕಾಗಿ ಹೀಗೆ ವರ್ಗೀಕರಿಸಿಕೊಂಡಿರುವುದನ್ನು ಮರೆಯಬಾರದು. ಇದರಲ್ಲಿ ನೂರೊಂದು ವಿರಕ್ತಯುಗದ ಸ್ವರ ವಚನ ಸಾಹಿತ್ಯವನ್ನು ವಿಶ್ಲೇಷಣೆ ಮಾಡಿದ್ದಾರೆ. ಕೀರ್ತನ ಸಾಹಿತ್ಯ ಸಂಗೀತಗಳ ಅಸ್ತಿತ್ವ, ಪ್ರಕಾರ ಪ್ರಸಾರಗಳ ಸ್ಪಷ್ಟವಾದ ಪರಿಚಯ ಮಾಡಿಸಿದ್ದಾರೆ. ಇದರಿಂದ ಸ್ವರವಚನ ಸಾಹಿತ್ಯ ಸಂಗೀತಗಳ ಮಹತ್ವ ತಂತಾನೆ ವೇದ್ಯವಾಗುತ್ತದೆ.

ಷಟ್ಪದಿ, ಕಿರಿಯಕ್ಕರ, ಚೌಪದಿ ಮುಂತಾದ ಛಂದಸ್ಸನ್ನು ಗುರುತಿಸಿದ್ದಾರೆ. ಶುದ್ಧ ದೇಶಿಯ ಲಯ ಮಟ್ಟುಗಳನ್ನು ಪರಿಚಯಿಸಿದ್ದಾರೆ. ಕಣಿ, ವಚನ, ಪದ, ಚಂದಮಾಮ, ಕೋಲಾಟಪದ, ಆರತಿ ಪದ ಮೊದಲಾದ ಶುದ್ಧ ಜಾನಪದ ಸಾಹಿತ್ಯ ಪ್ರಕಾರಗಳು ಸ್ವರ ವಚನ ಸಾಹಿತ್ಯದಲ್ಲಿರುವುದನ್ನು ಸಾದರಪೂರ್ವಕವಾಗಿ ನಿರೂಪಿಸಿದ್ದಾರೆ. ಸ್ವರ ವಚನ ಸಾಹಿತ್ಯದಲ್ಲಿ ಸಿದ್ಧಾಂತ ನಿರ್ಣಯವೇ ಅಂತಿಮವಾದರೂ ತತ್ವಪದಗಳು, ಲೋಕನೀತಿ, ಅನುಭಾವ ಶಿವಯೋಗ ಮೊದಲಾದವುಗಳನ್ನು ಸ್ಪಷ್ಟವಾಗಿ ಗುರುತಿಸಿ ವಿಶ್ಲೇಷಿಸಿರುವುದು ಶ್ರೇಷ್ಠ ಸಂಶೋಧನೆಗೊಂದು ಮಾದರಿಯಾಗಿದೆ. "ಭಕ್ತಿ, ಜ್ಞಾನ, ವೈರಾಗ್ಯ, ಯೋಗ, ಮುಕ್ತಿ ಪರವಾದ ಸ್ವರವಚನ ಸಾಹಿತ್ಯಕ್ಕೆ ರಾಗ ತಾಳಗಳ ಮೂಲಕ, ಸಂಗೀತವನ್ನು ಸಂಯೋಜಿಸಿ ಸ್ವರ ವಚನಗಳು ಜನಪರವಾಗುವಂತೆ ನೋಡಿಕೊಂಡುದು ಈ ಯುಗದ

ವೈಶಿಷ್ಟ್ಯವೆನಿಸಿದೆ. ಆತ್ಮೋದ್ಧಾರ ಸಮಾಜೋದ್ಧಾರ ಹಾಗೂ ಆಧ್ಯಾತ್ಮಿಕ ಚಿಂತನೆಗಳು ಮೇಲ್ವರ್ಗದವರಿಗೆ ಮಾತ್ರ ಸೀಮಿತವಾದವುಗಳಲ್ಲ. ಇವುಗಳ ಸಾಧನೆ, ಆಚರಣೆ, ಅನುಷ್ಠಾನ, ಜನಸಾಮಾನ್ಯರಿಂದಲೂ ಸಾಧ್ಯವೆಂಬುದನ್ನು ಈ ಸಾಹಿತ್ಯದ ಮೂಲಕ ಸ್ವರ ವಚನಕಾರರು ತೋರಿಸಿಕೊಟ್ಟರು. ಆಧ್ಯಾತ್ಮಿಕತೆಯನ್ನು ಸಾಮಾಜಿಕರಣಗೊಳಿಸಿದ ಅಪೂರ್ವ ಸಾಧನೆ. ಈ ಯುಗದ ಸ್ವರ ವಚನಕಾರರದಾಗಿದೆ:"[೫೬] ಹೀಗೆ ನೂರೊಂದು ವಿರಕ್ತಯುಗದ ಸ್ವರವಚನ ಸಾಹಿತ್ಯಕ್ಕೆ ವಿಶಿಷ್ಟವಾದ ಭಾಷ್ಯ ಬರೆದಿದ್ದಾರೆ.

**ವಚನ ಸಾಹಿತ್ಯ ಪ್ರಕಟಣೆ ದ್ವಿತೀಯ ಘಟ್ಟ :**

ಇದು ವೀರಶೈವ ಸಂಪದದ ೩ನೇ ಲೇಖನವಾಗಿದೆ. ೧೯-೨೦ನೇ ಶತಮಾನದಲ್ಲಿ ವಚನಸಾಹಿತ್ಯದ ಸಂಗ್ರಹ ಸಂಕಲನ, ಸಂಪಾದನ, ವ್ಯಾಖ್ಯಾನ ಕಾರ್ಯಗಳು ನಡೆದವು. ಹಸ್ತಪ್ರತಿ ನಿರ್ಮಾಣಕಾರ್ಯ ನಿಂತು ಯಂತ್ರ ಪ್ರತಿನಿರ್ಮಾಣಕಾರ್ಯ ಆರಂಭವಾದದ್ದು ೧೯ನೇ ಶತಮಾನದ ಕೊನೆಯಲ್ಲಿ ವಚನ ಪ್ರಕಟಣಾಕಾರ್ಯ ಆರಂಭವಾಗಿದ್ದು, ೧೯ನೇ ಶತಮಾನದ ಕೊನೆ ಅರುಣೋದಯದ ಕಾಲ ೨೦ ನೇ ಶತಮಾನ ಅದರ ಸೂರ್ಯೋದಯದ ಕಾಲ. ವಚನ ಸಾಹಿತ್ಯದ ಪ್ರಕಟಣಾ ಕಾರ್ಯ ಸುವ್ಯವಸ್ಥಿತವಾಗಿ ವ್ಯಾಪಕವಾಗಿ ಮತ್ತು ಸುಸ್ಥಿರವಾಗಿ ನಡೆದದ್ದು ೨೦ನೇ ಶತಮಾನದಲ್ಲಿಯೇ, ಡಾ. ಫ. ಗು. ಹಳಕಟ್ಟಿಯವರು ಇದಕ್ಕೆ ಆದ್ಯ ಪುರುಷರಾಗಿದ್ದಾರೆ. ಡಾ. ಫ. ಗು. ಹಳಕಟ್ಟಿಯವರು ವಚನಸಾಹಿತ್ಯ ಪ್ರಕಟಣೆಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟು ವಚನ ಪಿತಾಮಹರೆನಿಸಿಕೊಂಡರು. ಇವೇ ಮೊದಲಾದ ಅಂಶಗಳನ್ನು ಆರಂಭದಲ್ಲಿ ಪ್ರಸ್ತಾಪಿಸಿ ಹಳಕಟ್ಟಿಯವರ ವಚನಸಾಹಿತ್ಯ, ವಚನ ಶಾಸ್ತ್ರಸಾರ, ಹಿತಚಿಂತಕ, ಪ್ರೆಸ್ ಶಿವಾನುಭವ ಪತ್ರಿಕೆ, ಶಿವಾನುಭವ ಗ್ರಂಥಮಾಲೆ ಮೊದಲಾದವುಗಳನ್ನು ಸವಿಸ್ತಾರವಾಗಿ ನಿರೂಪಿಸಿದ್ದಾರೆ. ಹಳಕಟ್ಟಿಯವರ ಶಿವಾನುಭವ ಗ್ರಂಥಮಾಲೆಯ ಮೂಲಕ ಪ್ರಕಟವಾದ ವಚನ ಸಾಹಿತ್ಯದ ಸಮಗ್ರ ಪಟ್ಟಿಯೊಂದನ್ನು ಒದಗಿಸಿದ್ದಾರೆ. "ಇಷ್ಟು ದೊಡ್ಡ ಪ್ರಮಾಣದಲ್ಲಿ ಹಸ್ತಪ್ರತಿ ಸಂಗ್ರಹಿಸಿದವರಲ್ಲಿ, ವಚನ ಗ್ರಂಥವನ್ನು ಪ್ರಕಟಿಸಿದವರಲ್ಲಿ ಹಳಕಟ್ಟಿಯವರೇ ಪ್ರಥಮರು, ಆದ್ದರಿಂದಲೇ ಅವರು ವಚನ ಸಾಹಿತ್ಯದ ಸಾಹಿತ್ಯ ಪ್ರಕಟಣೆಯ ಪಿತಾಮಹರೆನಿಸಿದರು. ಸಿಬ್ಬಂದಿ ಸೌಲಭ್ಯ, ಧನಸಹಾಯ, ಉತ್ತೇಜಕ ಪರಿಸರದ ಕೊರತೆಗಳ ಮಧ್ಯದಲ್ಲಿಯೇ ದೃತಿಗೆಡದೆ ಹಳಕಟ್ಟಿಯವರು ಈ ಸಾಹಿತ್ಯದ ಪ್ರಕಟಣಾ ಕಾರ್ಯವನ್ನು ನೆರವೇರಿಸಿದರು."[೫೭] ಈ ಮಾತುಗಳು ಹಳಕಟ್ಟಿಯವರ ಶ್ರಮ ಸಂಸ್ಕೃತಿಯನ್ನು ಸಮರ್ಪಕವಾಗಿ ಪರಿಚಯಿಸುತ್ತವೆ.

ವಚನ ಶಾಸ್ತ್ರಸಾರ ಭಾಗ ಒಂದು, ಭಾಗ ಎರಡು, ಭಾಗ ಮೂರು ಇವುಗಳಲ್ಲಿ ಅಡಕಗೊಂಡಿರುವ ವಿಷಯದ ಪಕ್ಷಿನೋಟವನ್ನು ಕಟ್ಟಿಕೊಟ್ಟರು. "ಹಳಕಟ್ಟಿಯವರು ಪ್ರಕಟಿಸಿದ ಹತ್ತು ಸಾವಿರ ಪುಟಗಳಿಗೂ ಮಿಕ್ಕಿದ ವೀರಶೈವ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ಸಿಂಹಪಾಲು ಸಲ್ಲುತ್ತದೆ. ಅಲ್ಲಿಯವರೆಗೆ ಕೇವಲ

೬೦ ವಚನಕಾರರು ಗೊತ್ತಿದ್ದರು. ಹಳಕಟ್ಟಿಯವರ ಮೂಲಕ ಮೂರುನೂರಕ್ಕೂ ಹೆಚ್ಚು ವಚನಕಾರರು ಬೆಳಕಿಗೆ ಬಂದರು. ಹಳಕಟ್ಟಿಯವರಲ್ಲದೆ ಇನ್ನಿತರರು ಅದೇ ಕಾಲದಲ್ಲಿ ವಚನಸಾಹಿತ್ಯ ಪ್ರಕಟಿಸಿರುವ ವಿವರಗಳನ್ನು ಡಾ. ಬಿ. ಆರ್. ಅವರು ಈ ಲೇಖನದಲ್ಲಿ ಸ್ಥೂಲವಾಗಿ ನೀಡಿದ್ದಾರೆ.

**೩.೫.೦ ; ಶರಣ ಸಾಹಿತ್ಯ :**

೧೨ನೇ ಶತಮಾನ ಕನ್ನಡ ಸಾಹಿತ್ಯದಲ್ಲಿ ಅಪೂರ್ವ ಕಾಲವಾಗಿದೆ. ವಚನಕಾರರ ಆಂದೋಲನದಿಂದಾಗಿ ಸಾಹಿತ್ಯಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಎಲ್ಲಾ ಕ್ಷೇತ್ರಗಳಲ್ಲೂ ಆಮೂಲಾಗ್ರ ಬದಲಾವಣೆ ಉಂಟಾಯಿತು. ಶಿವಶರಣರು ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ವಚನಗಳನ್ನು ಬಳಸಿಕೊಂಡರು. ಸಮಾಜ ಸುಧಾರಣೆಯೇ ಅವರ ಮುಖ್ಯ ಉದ್ದೇಶವಾಗಿತ್ತು. ಅದಕ್ಕೆ ಪೂರಕವಾಗಿ ವಚನ ರಚನೆಗಳು ರೂಪಗೊಂಡವು. ಇದರ ಕುರಿತಾಗಿ ಈ ಹಿಂದೆ ವಿಸ್ತೃತವಾಗಿ ಅಧ್ಯಯನ ಮಾಡಲಾಗಿದೆ. ವಚನಕಾರರು ಮತ್ತು ಬಸವಾದಿ ಪ್ರಮುಖ ಶಿವಶರಣರನ್ನು ವಸ್ತುವಾಗಿಟ್ಟುಕೊಂಡು ರಚನೆಗೊಂಡ ಸಾಹಿತ್ಯವನ್ನು ಶರಣ ಸಾಹಿತ್ಯವೆಂದು ಕರೆಯುತ್ತೇವೆ. ವಚನ ಚಳುವಳಿ ಮುಗಿದ ನಂತರ ಆ ಚಳುವಳಿ ಅಂಶವನ್ನು ಆಕರ ಸಾಮಗ್ರಿಯನ್ನಾಗಿಸಿಕೊಂಡು ಹರಿಹರ, ರಾಘವಾಂಕ, ಭೀಮಕವಿ, ವಿರುಪಾಕ್ಷಪಂಡಿತ, ಚಾಮರಸ, ಸುರಂಗ, ಷಡಕ್ಷರಿ, ಪದ್ಮಣಾಂಕ, ಕೆರೆಯಪದ್ಮರಸ, ಮುಂತಾದವರು ರಚಿಸಿರುವ ಸಾಹಿತ್ಯವನ್ನು ಶರಣ ಸಾಹಿತ್ಯವೆಂದು ಗುರುತಿಸುತ್ತೇವೆ. ಈ ಭಾಗದಲ್ಲಿ ಡಾ. ಬಿ ಆರ್. ಹಿರೇಮಠ ಅವರು ಶರಣ ಸಾಹಿತ್ಯದ ಕುರಿತಾಗಿ ಬರೆದಿರುವ ಲೇಖನಗಳನ್ನು ಅವಲೋಕಿಸಲಾಗುವುದು.

ಸಾಹಿತ್ಯ ಪರಿಶೋಧನ ಗ್ರಂಥದಲ್ಲಿ ಹರಿಹರನ ರಗಳೆಗಳಲ್ಲಿ ಕಾಯಕ ತತ್ವ ಮತ್ತು ಕನ್ನಡ ಕೃತಿಗಳಿಗೆ ಬರೆದ ವೀರಶೈವ ವ್ಯಾಖ್ಯಾನ ಎಂಬ ಲೇಖನಗಳು ಶರಣ ಸಾಹಿತ್ಯದ ಕುರಿತಾಗಿವೆ.

**೧. ಹರಿಹರನ ರಗಳೆಗಳಲ್ಲಿ ಕಾಯಕತತ್ವ :**

ಇದು ಸಾಹಿತ್ಯ ಪರಿಶೋಧನ ಕೃತಿಯ ಎರಡನೆಯ ಲೇಖನವಾಗಿದ್ದು, ೧೦ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. "ಜೀವವನ್ನು ದೇವರ ಮಟ್ಟಕ್ಕೆ ಎತ್ತರಿಸುವ ಜೀವಾತ್ಮ ಪರಮಾತ್ಮರಲ್ಲಿ ಸಮರಸವನ್ನುಂಟುಮಾಡುವ ಕ್ರಿಯಾರೂಪ ಶಕ್ತಿಯನ್ನು ಹೊಂದಿದ ಮಹಾಯೋಗವೇ ಕಾಯಕ. ಅಂತರಾತ್ಮದಲ್ಲಿ ಹುದುಗಿದ ಕ್ರಿಯಾ ಶಕ್ತಿಯ ಅಭಿವ್ಯಕ್ತಿ ರೂಪವೇ ಕಾಯಕವೆನಿಸಿಕೊಳ್ಳುತ್ತದೆ."[೫೮] ಇದು ಡಾ. ಬಿ. ಆರ್. ಅವರು ಕಾಯಕ ತತ್ವಕ್ಕೆ ಬರೆದ ವ್ಯಾಖ್ಯಾನವಾಗಿದೆ. "ಸಮಾಜದ ಪ್ರತಿಯೊಬ್ಬ ವ್ಯಕ್ತಿ ತನ್ನ ಜೀವನ ನಿರ್ವಹಣೆಗಾಗಿ ಒಂದಿಲ್ಲೊಂದು ವೃತ್ತಿಯನ್ನು ಕೈಕೊಳ್ಳುತ್ತಾನೆ. ಜೀವನೋಪಾಯಕ್ಕಾಗಿ ಕೈಕೊಂಡ ವೃತ್ತಿ ಕಾಯಕವೆನಿಸುವುದಿಲ್ಲ. ಕೇವಲ ಸತಿ, ಸುತ, ಬಂಧುಗಳ ಜೀವನ ನಿರ್ವಹಣೆಗಾಗಿ ಮಾಡುವ ಕೆಲಸ ವೃತ್ತಿಯಾಗುತ್ತದೆ. ಶಿವನಿಗಾಗಿ ಸಮಾಜ ಕಲ್ಯಾಣಕ್ಕಾಗಿ

ಮಾಡುವ ಕಾರ್ಯ ಕಾಯಕವೆನಿಸುತ್ತದೆ"[೫೯] ಎನ್ನುವಲ್ಲಿ ಕಾಯಕ ಮತ್ತು ಕೆಲಸಕ್ಕಿರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿದ್ದಾರೆ. ಶರಣರು ಹೇಳಿದ ಕಾಯಕದಲ್ಲಿ ಸರ್ವಸಮನ್ವಯತೆ, ವ್ಯಕ್ತಿ ಹಾಗೂ ಸಮಾಜಗಳ ಜೀವನದಲ್ಲಿ ಸಾಧಿಸುವ ಪರಿಪೂರ್ಣತೆ ಇರುತ್ತದೆ. ಶಿವಶರಣರ ಸಮಗ್ರ ದೃಷ್ಟಿ ಕಾಯಕದ ಮೂಲಕ ಅಭಿವ್ಯಕ್ತಿಗೊಂಡಿದೆ ಎಂಬುದನ್ನು ಈ ಲೇಖನಗಳಲ್ಲಿ ಪ್ರತಿಪಾದಿಸಿದ್ದಾರೆ. ಹರಿಹರನು ಶಿವಶರಣರ ಚರಿತ್ರೆಯನ್ನು ವಿವರಿಸುವಾಗ ಅವರ ಕುಲ, ಕೈಗೊಂಡ ಕಾಯಕ, ನಿಷ್ಠೆಯ ಸತ್ವ ಪರೀಕ್ಷೆ, ಶಿವ ಸಾಕ್ಷಾತ್ಕಾರ, ಈ ಕ್ರಮ ಅನುಸರಿಸಿದುದು ಕಂಡುಬರುತ್ತದೆ.

ಇಳೆಯಾಂಡ ಗುಡಿಮಾರ, ಕುಂಬಾರ ಗುಂಡಯ್ಯ ಮುಂತಾದವರ ಬದುಕನ್ನಾಧರಿಸಿ ಹರಿಹರನು ರಚಿಸಿದ ರಗಳೆಗಳನ್ನು ಇಲ್ಲಿ ವಿವೇಚನೆಗೆ ಎತ್ತಿಕೊಂಡಿದ್ದಾರೆ. "ಹರಿಹರ ನಿರೂಪಿಸಿದ ಕಾಯಕ ಪ್ರಭೇದ ವೈವಿಧ್ಯಮಯವಾದುದು ಆಕಳು ಕಾಯುವ ನಾಯನಾರ, ಒಕ್ಕಲುಮಗ ಇಳೆಯಾಂಡ ಗುಡಿಮಾರ, ಬೇಡರ ಕಣ್ಣಪ್ಪ, ಮೀನುಗಾರ ಅತಿಭಕ್ತ, ಭತ್ತ ಕೊಯ್ಯುವ ಅರಿವಾಳ್ತಾಂಡ, ಬಟ್ಟೆ ಹೊಲೆಯುವ ತಿರುಕುರುಂಪೆ ತೊಂಡ, ಕುಂಬಾರ ಗುಂಡಯ್ಯ, ಗಾಣಿಗ ಕಲಿಯ ನಾಯನಾರ, ಅಂಕಣಕಾರ, ಮೊನೆ ಇಡುವರು, ಸೇನಾಪತಿ ಕೊಲ್‌ಪುಲಿಯಾಂಡ, ನೇಕಾರ ನೇಶನಾಯಿನಾರ, ಮಾದಾರ ಚೆನ್ನಯ್ಯ, ದಂಡನಾಯಕ ಕೇಶಿರಾಜ, - ಬಸವಣ್ಣ ಮೊದಲಾದವರ ಕಾಯಕ ಜೀವನವನ್ನು ತನ್ನ ಜೀವನದರ್ಶನ ಹಿನ್ನೆಲೆಯಲ್ಲಿ ವಿವರಿಸಿದ್ದಾನೆ. ಕಾಯಕ ಜೀವಿ ಹರಿಹರನು ಕಾಯಕಗಳಲ್ಲಿ ಮೇಲು ಕೀಳು, ಹಿರಿದು-ಕಿರಿದು, ಉಚ್ಚ-ನೀಚ ಎಂಬ ಭಾವನೆಯನ್ನು ತಾಳದೆ ಸಮಾನವಾಗಿ ಕಂಡಿದ್ದಾನೆ. ಎಲ್ಲರ ಕಾಯಕ ಪ್ರಭೇದಗಳ ಪರಿಣಾಮ ಒಂದೇ. ಕಾರಣ ಅವು ಸಮಾನ, ಶ್ರೇಷ್ಠವಾದವುಗಳು. ಆವ ಕಾಯಕ ಮಾಡಿದರೂ ಒಂದೇ ಕಾರಕವೆಂಬ ಅಭಿಪ್ರಾಯ ಅವನದು."[೬೦] ಈ ಮಾತುಗಳು ಹರಿಹರ ಕಾಯಕಜೀವಿಗಳ ಜೀವನದರ್ಶನ ಮಾಡಿಸಿರುವುದನ್ನು ಡಾ. ಬಿ. ಆರ್. ಹಿರೇಮಠ ಅವರು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಇಲ್ಲಿಯವರೆಗೆ ಹರಿಹರನು ಭಕ್ತಿಕವಿ, ಕ್ರಾಂತಿ ಕವಿ, ಶಿವ ಕವಿ ಎಂಬ ಮಾತಿಗೆ ಪೂರಕವಾಗಿ ಡಾ. ಬಿ. ಎರ್. ಹಿರೇಮಠ ಅವರು ಹರಿಹರನಿಗೆ 'ಕಾಯಕ ಯೋಗಿ' ಎಂದು ಕರೆದಿರುವುದು ಉಪಾಧಿಯಾಗಿದೆ. "ಹರಿಹರನ ಬಗೆಗೆ ಭಕ್ತಿ, ಪ್ರೀತಿ, ಇದ್ದಾಗ್ಯೂ ಕೆಲವು ಕಡೆಗೆ ಅವುಗಳ ವಿವರಣೆ ಬರಬೇಕಾದಷ್ಟು ಬಂದಿಲ್ಲವೆನಿಸುತ್ತದೆ"[೬೧] ಎಂದು ಆತನ ಮಿತಿಯನ್ನು ಗುರುತಿಸಿದ್ದಾರೆ.

"ಕಾಯಕ ತತ್ವದ ನಿರೂಪಣೆಯಲ್ಲಿ ಹರಿಹರನು ಹೆಚ್ಚಾಗಿ ೧೨ನೇ ಶತಮಾನದ ಶಿವಶರಣರನ್ನು ಅನುಸರಿಸಿರುವುದು ಕಂಡುಬರುತ್ತದೆ. ಅವರ ವಚನಗಳನ್ನು ಕಣ್ಣಾರೆ ನೋಡಿರುವ ಸಾಧ್ಯತೆಯಿದೆ. ಶರಣರು ವೃತ್ತಿಯನ್ನು ಆಧ್ಯಾತ್ಮಿಕ ಸಾಧನವನ್ನಾಗಿ ಬಳಸಿಕೊಂಡ ರೀತಿಯನ್ನು ವರ್ಣಿಸಿದ್ದಾನೆ. ಶರಣರ ಬೆಡಗಿನ ವಚನಗಳನ್ನು ಅವಲೋಕಿಸಿರಬಹುದು. ಅಂಥ ಪ್ರೇರಣೆಯ ಛಾಯೆ ರಗಳೆಗಳಲ್ಲಿ ಇದ್ದಂತೆ

ತೋರುತ್ತದೆ. ಕಾಯಕಯೋಗಿ ಹರಿಹರನಿಗೆ ಕಾಯಕ ಮಹತ್ವಪೂರ್ಣವೂ, ಅವಶ್ಯಕವೂ ಎಂದೆನಿಸಿರಬೇಕು."[೬೨] ಈ ಮಾತು ಡಾ. ಬಿ. ಆರ್. ಅವರು ಹರಿಹರನನ್ನು ವಿಭಿನ್ನ ರೀತಿಯಲ್ಲಿ ಕಂಡಿರುವುದು ನಿದರ್ಶನವಾಗಿದೆ.

**ಕನ್ನಡ ಕೃತಿಗಳಿಗೆ ಬರೆದ ವೀರಶೈವ ವ್ಯಾಖ್ಯಾನ :**

ಈ ಲೇಖನವು ಸಾಹಿತ್ಯ ಪರಿಶೋಧನೆಯ ೯ನೇ ಲೇಖನವಾಗಿದೆ. ೧೯ ಪುಟಗಳ ವ್ಯಾಪ್ತಿಯ ಲೇಖನ ಇದಾಗಿದೆ. "ವೀರಶೈವ ಸಾಹಿತ್ಯವು ವೀರಶೈವ ಮೌಲ್ಯಗಳಿಗೆ ಬರೆದ ಸಾಹಿತ್ಯಿಕ ವ್ಯಾಖ್ಯಾನವಾಗಿದೆ. ವಚನ ಸಾಹಿತ್ಯವು ವೀರಶೈವ ಸಾಹಿತ್ಯದ ಪ್ರಥಮ ಬೆಳೆ. ಈ ವಚನ ಸಾಹಿತ್ಯಕ್ಕೆ ಹರಿಹರ, ರಾಘವಾಂಕ ಮೊದಲಾದವರು ಸಾಹಿತ್ಯಿಕ ವ್ಯಾಖ್ಯಾನವನ್ನು ನೀಡಿದ್ದಾರೆ. ೧೫-೧೯ನೆಯ ಶತಮಾನದ ಸಂಕಲನ, ಸಂಪಾದನ, ವ್ಯಾಖ್ಯಾನಕಾರರು ತಾತ್ವಿಕ ವ್ಯಾಖ್ಯಾನವನ್ನು ರೂಪಿಸಿದರು. ವಚನಸಾಹಿತ್ಯದ ತರುವಾಯ ರಚಿತವಾದ ವೀರಶೈವ ಸಾಹಿತ್ಯವನ್ನು ಸೃಜನಸಾಹಿತ್ಯ, ಸಂಕಲನ - ಸಂಪಾದನಾಸಾಹಿತ್ಯ ಹಾಗೂ ವ್ಯಾಖ್ಯಾನ ಸಾಹಿತ್ಯವೆಂದು ಹೆಸರಿಸಬಹುದು"[೬೩] ಎಂದು ಆರಂಭದಲ್ಲಿಯ ವೀರಶೈವ ಸಾಹಿತ್ಯಕ್ಕೆ ತಮ್ಮದೇ ಆದ ವ್ಯಾಖ್ಯಾನ ನೀಡಿದ್ದಾರೆ.

ಯಾವುದೇ ಸೃಜನ ಸಾಹಿತ್ಯದ ತರುವಾಯ ವಿಮರ್ಶಾ ಸಾಹಿತ್ಯ ಹುಟ್ಟುತ್ತದೆ. ಕೃತಿಯೊಂದರ ಅರ್ಥ, ಭಾವ, ಉದ್ದೇಶ ಆಶಯಗಳನ್ನು ವಿಮರ್ಶೆಯು ಕಟ್ಟಿಕೊಡುತ್ತದೆ. ಕನ್ನಡ ಸಾಹಿತ್ಯದ ಅವಸ್ಥಾಭೇದ ಹಾಗೂ ಅರ್ಥ ಜಟಿಲತೆಗಳು ವಿಮರ್ಶಾ ಸಾಹಿತ್ಯಕ್ಕೆ ಸೇರಿದ ಟೀಕಾ ಸಾಹಿತ್ಯದ ಹುಟ್ಟಿಗೆ ಕಾರಣವಾದವು. ಧರ್ಮ ಪ್ರಸಾರದ ಸಾಧನವಾದ ವೀರಶೈವ ಟೀಕಾ ಸಾಹಿತ್ಯವನ್ನು ಭಾಷೆ, ಸಾಹಿತ್ಯ ಸಂಸ್ಕೃತಿ ಮುಂತಾದವುಗಳ ವ್ಯಾಖ್ಯಾನಕ್ಕೆ ಬಳಸಿಕೊಂಡಿರುವುದು ವಿದಿತವಾಗುತ್ತದೆ. ಡಾ. ಬಿ. ಆರ್. ಹಿರೇಮಠ ಅವರು ವೀರಶೈವ ಕೃತಿಗಳಿಗೆ ವೀರಶೈವರು ಬರೆದ ಕನ್ನಡ ಟೀಕೆ ಮತ್ತು ವೀರಶೈವೇತರ ಕೃತಿಗಳಿಗೆ ವೀರಶೈವರು ಬರೆದ ಕನ್ನಡ ಟೀಕೆ ಎಂದು ಎರಡು ಭಾಗಗಳನ್ನಾಗಿ ಮಾಡಿಕೊಂಡು ಅಧ್ಯಯನ ಕೈಗೊಂಡಿದ್ದಾರೆ. ಇದರಲ್ಲಿ ಕನ್ನಡ ಭಾಷಾ ಸಾಹಿತ್ಯಕ್ಕೆ ವೀರಶೈವರು ಬರೆದ ಕನ್ನಡ ಟೀಕೆಯನ್ನು ಕುರಿತು ವಿಸ್ತೃತವಾಗಿ ಚರ್ಚಿಸಿದ್ದಾರೆ.

"ವೀರಶೈವ ಕೃತಿಗಳಲ್ಲಿ ವಚನ (ಸಂಕಲನ)ಗಳಿಗೆ ಬರೆದ ಟೀಕೆಗಳೆ ಅಧಿಕ ಸಂಖ್ಯೆಯಲ್ಲಿರುತ್ತವೆ. ವೀರಶೈವ ಚಳುವಳಿಯ ರೂಪವನ್ನು ಬಿಟ್ಟು ಧರ್ಮವಾಗಿ ನಿಂತ ಕಾಲದಲ್ಲಿ ಈ ಟೀಕೆಗಳು ಹುಟ್ಟಿಕೊಂಡಿವೆ. ಹೀಗಾಗಿ ಇವುಗಳಲ್ಲಿ ಸಾಹಿತ್ಯಿಕ ಹಾಗೂ ಸಾಮಾಜಿಕ ಅಂಶಗಳಿಗಿಂತ ತಾತ್ವಿಕಾರ್ಥವೇ ಪ್ರಧಾನವಾಯಿತು."[೬೪] ಈ ವಿವೇಚನೆಯು ಡಾ. ಬಿ.ಆರ್. ಅವರ ಗಂಭೀರ ಅಧ್ಯಯನಕ್ಕೆ ಸಾಕ್ಷಿಯಾಗಿದೆ. ಶುದ್ಧ ವಾಚ್ಯಾರ್ಥದಲ್ಲಿ ಇರುವ, ಪ್ರತಿಪದಾರ್ಥ ವಾಚ್ಯಾರ್ಥದಲ್ಲಿರುವ ವಿವರಣ ರೂಪದ ಪ್ರತಿಪದಾರ್ಥ ವಾಕ್ಯವನ್ನು ಹಿಮ್ಮೆಟ್ಟಿಸಿ ಬರೆದ ತಾತ್ವಿಕಾರ್ಥ, ಸಾರವತ್ತಾದ ಹಾಗೂ ಸಂಗ್ರಹ ರೂಪದ

ತಾತ್ಪರ್ಯಾರ್ಥ ಪ್ರತಿಪದಾರ್ಥ ಹಾಗೂ ವಾಕ್ಯವನ್ನು ಹಿಮ್ಮೆಟಿಸಿ ಬರೆದ ತಾತ್ವಿಕಾರ್ಥ ಕೆಲವೊಂದು ಪದಗಳಿಗೆ ಮಾತ್ರ ಬರೆದ ಅರ್ಥ, ಕೆಲವು ವಿಶಿಷ್ಟ ಪದಗಳಿಗೆ ಮಾತ್ರ ಬರೆದ ಅರ್ಥ ಇವೇ ಮೊದಲಾದ ಶೀರ್ಷಿಕೆಗಳಲ್ಲಿ ವಚನಗಳಿಗೆ ಏಕಾರ್ಥದ ಟೀಕೆಗಳನ್ನು ಬರೆದ ವಿವಿಧ ಮಾದರಿಯನ್ನು ವಿವರಿಸಿದ್ದಾರೆ. ಹಾಗೆಯೇ ಪ್ರತಿಪಾದಾರ್ಥ ರೂಪದ ವಾಚ್ಯಾರ್ಥ ಹಾಗೂ ತಾತ್ವಿಕಾರ್ಥ ಪ್ರತಿಪದಾರ್ಥ ಹಾಗೂ ಸಾರರೂಪದ ತಾತ್ವಿಕಾರ್ಥ ಎಂದು ಎರಡು ಉಪವಿಭಾಗವಾಗಿ ಮಾಡಿಕೊಂಡು ವಚನಗಳಿಗೆ ವಾಚ್ಯಾರ್ಥ ಹಾಗೂ ತಾತ್ವಿಕಾರ್ಥಗಳೆಂಬ ಎರಡು ಮಾದರಿಯನ್ನು ನಿರೂಪಿಸಿದ್ದಾರೆ. ಅಂತೆಯೇ ವಚನಗಳಿಗೆ ಒಂದು ಅರ್ಥ ಎರಡು ತಾತ್ವಿಕಾರ್ಥಗಳಿರುವ ಬೇರೆ ಬೇರೆ ಮಾದರಿಗಳನ್ನು ಕೂಡ ಇಲ್ಲಿ ವಿವೇಚಿಸಿದ್ದಾರೆ. ಇದೂ ಅಲ್ಲದೆ ಶಾಸ್ತ್ರ ಕೃತಿಗಳಿಗೆ ಬರೆದ ಪ್ರತಿಪದಾರ್ಥ (ಟೀಕೆ), ಕಾವ್ಯಗಳಿಗೆ ಬರೆದ ಪ್ರತಿಪದಾರ್ಥ ಎಂದು ಮತ್ತೆರಡು ವಿಧದಲ್ಲಿ ವಿಭಜಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಈ ಸೂಕ್ಷ್ಮ ವಿಭಜನೆಯು ಡಾ. ಬಿ. ಆರ್. ಹಿರೇಮಠವರ ಆಳವಾದ ಅಧ್ಯಯನ ಅಗಾಧ ಪಾಂಡಿತ್ಯಕ್ಕೆ ನಿದರ್ಶನವಾಗಿದೆ.

"ವ್ಯಾಖ್ಯಾನ' ಸಾಹಿತ್ಯ ಕೃತಿಗಳಿಗೆ ಬರೆದ ವಿವರಣ ರೂಪದ ವಿಮರ್ಶೆ. ಸಾಹಿತ್ಯ ವಿಮರ್ಶೆಯ ದೃಷ್ಟಿ ಜನಾಂಗದಿಂದ ಜನಾಂಗಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಕಾಲದಿಂದ ಕಾಲಕ್ಕೆ ಭಿನ್ನವಾಗುತ್ತ ಸಾಗುವುದು ಅತ್ಯಂತ ಸಹಜಕ್ರಿಯೆ ೧೨ ಶತಮಾನದಲ್ಲಿ ರಚಿತವಾದ ವಚನರಾಶಿಯನ್ನು ಹರಿಹರ ರಾಘವಾಂಕರು ಸಾಹಿತ್ಯ ದೃಷ್ಟಿಯಿಂದ ನೋಡಿದರೆ ೧೫-೧೬ ಶತಮಾನದ ೧೦೧ ಹಾಗೂ ೭೦೧ ವಿರಕ್ತರು ತಾತ್ವಿಕ ದೃಷ್ಟಿಯಿಂದ ನೋಡಿದರು. ಇಂದು ವಚನಗಳನ್ನು ಸಾಮಾಜಿಕ ದೃಷ್ಟಿಕೋನದಿಂದ ಅವಲೋಕಿಸುತ್ತಿದ್ದೇವೆ. ಹೀಗೆ ವಚನಗಳನ್ನು ನೋಡುವ ಸಾಹಿತ್ಯಿಕ ತಾತ್ವಿಕ, ಸಾಮಾಜಿಕ ದೃಷ್ಟಿಗಳು ಬೇರೆ ಬೇರೆ ಅಲ್ಲ. ಅವು ಒಂದಕ್ಕೊಂದು ಪೂರಕ ಹಾಗೂ ಪ್ರೇರಕ"[೬೫] ಎಂಬ ಮಾತು ತುಂಬಾ ಅರ್ಥವತ್ತಾಗಿದೆ. ಕನ್ನಡ ಕೃತಿಗಳಿಗೆ ಬರೆದ ವೀರಶೈವ ಟೀಕಾ ಸಾಹಿತ್ಯದ ಉಗಮ, ವಿಕಾಸ, ಸ್ವರೂಪ, ಸ್ವಭಾವ, ಸಾಧನೆ, ಸಿದ್ಧಿಗಳ ಸ್ಥೂಲ ಪರಿಚಯ ಇಲ್ಲಿದೆ. ಡಾ. ಬಿ. ಆರ್. ಅವರ ಶ್ರದ್ಧೆ, ನಿಷ್ಠೆ ದಣಿವರಿಯದೆ ದುಡಿದು ಭಾಷೆಯನ್ನು ದುಡಿಸಿಕೊಂಡ ರೀತಿ ಗಮನಾರ್ಹವಾಗಿದೆ. ಅವರ ಅಭಿರುಚಿ ಆಸಕ್ತಿಯ ಕ್ಷೇತ್ರಗಳು ಬೆರಗನ್ನುಂಟುಮಾಡುತ್ತವೆ.

ವೀರಶೈವ ಸಂಪದ ಗ್ರಂಥದಲ್ಲಿಯ ೨ನೇ ಲೇಖನವು ಶರಣ ಸಾಹಿತ್ಯಕ್ಕೆ ಸಂಬಂಧಿಸಿದೆ. ಹರಿಹರನ ಶಿವಭಕ್ತಿಯ ಐದು ರಗಳೆಗಳು ಲೇಖನವು ೨೪ ಪುಟಗಳಷ್ಟು ಸುದೀರ್ಘವಾಗಿದೆ. ಮಹಾಕವಿ ಹರಿಹರ ಬರೆದಿರುವ ರಗಳೆಗಳಲ್ಲಿ ಇಳೆಯಾಂಡ ಗುಡಿಮಾರ ರಗಳೆ, ಮಾದರ ಚೆನ್ನಯ್ಯನ ರಗಳೆ, ಅಮರನೀತಿ ರಗಳೆ, ಬೇಡರ ಕಣ್ಣಪ್ಪನ ರಗಳೆ, ಕಾರಿಕಲಮ್ಮೆಯ ರಗಳೆ, ಈ ಐದು ರಗಳೆಗಳ ವೈಶಿಷ್ಟ್ಯತೆಗಳನ್ನಿಲ್ಲಿ ಚರ್ಚಿಸಿದ್ದಾರೆ. ಆರಂಭದಲ್ಲಿ ಹರಿಹರನ ತಂದೆ ತಾಯಿ, ಗುರುಪರಂಪರೆ, ಶಿಷ್ಯ ಸಮುದಾಯವನ್ನು

ಸ್ಥೂಲವಾಗಿ ಪರಿಚಯಿಸಿದ್ದಾರೆ. ಹರಿಹರನ ಬದುಕಿನಲ್ಲಿ ಆಗಿರುವ ಪವಾಡ, ದೋರ ಸಮುದ್ರದಲ್ಲಿ ಜರುಗಿದ ತೆರೆಯ ಪವಾಡ, ಹರಿಹರೇಶ್ವರ ದೇವಾಲಯದಲ್ಲಿದ್ದ ಬ್ರಹ್ಮರಾಕ್ಷಸರನ್ನು ಓಡಿಸಿದ ಪವಾಡ. ಮೆಚ್ಚಿ ಬಂದ ಗಣಿಕಾಸ್ತ್ರೀಯಳ ಪ್ರಸಂಗ ಮೊದಲಾದವುಗಳ ಮೂಲಕ ಹರಿಹರನ ವ್ಯಕ್ತಿತ್ವದ ವಿವಿಧ ಮುಖಗಳನ್ನು ಅನಾವರಣಗೊಳಿಸಿದ್ದಾರೆ.

"ಹಂಪೆಯ ವಿರೂಪಾಕ್ಷನ ಸಾಕ್ಷಾತ್ ಸುಪುತ್ರನಾದ ಹರಿಹರ ತನ್ನನ್ನು ಶಿವಕವಿ, ರಸಿಕ ಚಕ್ರಿ, ಜಾಣ, ವಿವೇಕಿ, ಕವಿತಾ ನಿಧಾನನೆಂದು ಕರೆದುಕೊಂಡಿದ್ದಾನೆ. ಸಮಕಾಲೀನ ಮತ್ತು ಅನಂತರದ ಕವಿಗಳು ಹರಿಹರನನ್ನು ಹಂಪೆಯ ಹರೀಶ್ವರ ಹರಿಗ, ಹರಿಯಣ್ಣ, ಹರೀಶನೆಂದು ಕರೆದು ಗೌರವಿಸಿದ್ದಾರೆ. ವೀರಶೈವ ಕವಿಗಳು ತಮ್ಮ ಕಾವ್ಯಗಳಲ್ಲಿ ಹರಿಹರನನ್ನು ಅತ್ಯಂತ ಪೂಜ್ಯ ಭಾವನೆಯಿಂದ ಸ್ಮರಿಸಿದ್ದಾರೆ. ಜೈನ ಕವಿಗಳಿಗೆ ಪಂಪ ಹೇಗೆ ಪೂಜ್ಯನೋ ಹಾಗೆಯೇ ವೀರಶೈವ ಕವಿಗಳಿಗೆ ಹರಿಹರ ಪೂಜ್ಯನಾಗಿದ್ದಾನೆ"[೬೬] ಎಂದು ಡಾ. ಬಿ. ಆರ್. ಹಿರೇಮಠ ಅವರು ಹರಿಹರನ ವ್ಯಕ್ತಿತ್ವವನ್ನು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಮುಂದೆ ಹರಿಹರನ ಕೃತಿಗಳನ್ನು ಹೆಸರಿಸಿ ಆತನ ವೈವಿಧ್ಯಪೂರ್ಣ ರಚನೆಗಳ ಸತ್ವವನ್ನು ವಿವರಿಸಿದ್ದಾರೆ.

ಇಳೆಯಾಂಡ ಗುಡಿಮಾರ ರಗಳೆಯ ಕಥೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಆ ಕಾವ್ಯದ ಆಶಯವನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಹಾಗೆಯೇ ಇನ್ನುಳಿದ ನಾಲ್ಕೂ ರಗಳೆಗಳ ಕಥಾ ವಸ್ತುವನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಅದರ ಸಾರವನ್ನು ಉಣಬಡಿಸಿದ್ದಾರೆ.

'ಇಳೆಯಾಂಡ ಗುಡಿಮಾರ' "ಸಕಲವನ್ನು ಶಿವಭಕ್ತರಿಗೆ ದಾನ ಮಾಡಿದ ಶಿವಭಕ್ತನ ಕಥೆ ಕಲಾತ್ಮಕವಾಗಿ ಮೂಡಿಬಂದಿದೆ. ಸಮರ್ಪಣಾ ಭಾವದ ಶಿವಭಕ್ತಿ ಇಲ್ಲಿ ಚೆನ್ನಾಗಿ ನಿರೂಪಿತವಾಗಿದೆ. ಗುಡಿಮಾರ ಮಾಡಿದ ತ್ಯಾಗ ಸಹಿಸಿಕೊಂಡ ಕಷ್ಟಗಳು ಅರ್ಥವತ್ತಾಗಿ ಅರಳಿ ನಿಂತಿವೆ. ಶಿವ ಭಕ್ತನಿಗೆ ಸಂಗ್ರಹ ಸ್ವಭಾವವಿರಬಾರದು. ಅಂತರಂಗ ಬಹಿರಂಗ ಒಂದೇ ತೆರನಾಗಿರಬೇಕು."[೬೭]

'ಮಾದಾರ ಚೆನ್ನಯ್ಯ' - "ಶಿವ ಭಕ್ತಿ ಎಂಬುದು ಗುಪ್ತವೂ, ನಿರಾಡಂಬರವೂ ಆದುದಾಗಿದೆ. ಶಿವನೊಲುಮೆ ಪಡೆಯಲು ವೃತ್ತಿ, ಜಾತಿ, ಅಂತಸ್ತು ಮುಖ್ಯವಲ್ಲ ಶಿವಭಕ್ತಿಯ ಎದುರಿನಲ್ಲಿ ರಾಜ. ಭೃತ್ಯ, ಎಲ್ಲರೂ ಸಮಾನರು. ಶಿವಭಕ್ತಿಯಲ್ಲಿ ಮೇಲು ಕೀಳೆಂಬುದಿಲ್ಲ."[೬೮]

'ಅಮರ ನೀತಿ'- "ಸಕಲ ಸಂಪತ್ತು ಹಾಗೂ ಸತಿ ಸುತರೊಂದಿಗೆ ತನ್ನನ್ನು ಶಿವನಿಗರ್ಪಿಸಿಕೊಂಡ ಶಿವಭಕ್ತಿ ಅಮರ ನೀತಿ ಕಥೆಯ ಸಾರವಾಗಿದೆ. ಸರ್ವ ಸಮರ್ಪಣಾ ಭಾವದ ಭಕ್ತಿಗೆ ಮಾತ್ರ ಶಿವನೊಲಿಯುತ್ತಾನೆ. ಲೌಕಿಕ ವಸ್ತುವನ್ನು ದಾನ ಮಾಡುವುದು ತ್ಯಾಗವೆನಿಸಿಕೊಳ್ಳುತ್ತದೆ. ತ್ಯಾಗ ಅಹಂಕಾರ ರಹಿತವಾಗಿರಬೇಕು. ಕೇವಲ ಭೌತಿಕ ವಸ್ತುಗಳಿಗೆ ಸೀಮಿತವಾಗಿರದೆ ವ್ಯಕ್ತಿಯ

ಸರ್ವಾರ್ಪಣೆಯವರೆಗೂ ಹೋಗಿ ನಿಲ್ಲಬೇಕು, ವ್ಯಕ್ತಿ ಸರ್ವಾರ್ಪಣೆಯಲ್ಲಿಯೇ ದೈವಿ ಪ್ರಸನ್ನತೆ ಇದೆ. ಮಾನವನು ಸಮಬಾಳ್ವೆ ಹಾಗೂ ದೈವಿ ಸುಖಗಳನ್ನು ಪಡೆಯಲು ಶಿವಭಕ್ತಿ ಸಾಧನವಾಗಿ ನಿಲ್ಲುತ್ತದೆ."[೧೯]

"ವೃತ್ತಿ ಯಾವುದಿದ್ದರೂ ಮನಮುಟ್ಟಿ ಮಾಡುವ ಪೂಜೆ ಮಾತ್ರ ಶಿವನನ್ನು ಒಲಿಸಬಲ್ಲದು. ಮುಗ್ಧ ಮಲೀನ ಮನದ ಭಕ್ತಿಗಳ ಭೇದವನ್ನು ಬೇಡರ ಕಣ್ಣಪ್ಪ ಹಾಗೂ ಪೂಜಾರಿ ಪಾತ್ರಗಳ ಮೂಲಕ ಹರಿಹರ ಸ್ಪಷ್ಟಪಡಿಸಿದ್ದಾನೆ. ಕಣ್ಣಪ್ಪನ ಭಕ್ತಿಯ ನಿರ್ಭರತೆ ಮಾನಸಿಕ ಮುಗ್ಧತೆ ಹಾಗೂ ಉಗ್ರನಿಷ್ಠೆಗಳು ಚೆನ್ನಾಗಿ ಪ್ರತಿಪಾದಿತವಾಗಿವೆ."[೨೦]

'ಕಾರಿಕಾಲಮ್ಮೆ' - "ಲೋಕದಲ್ಲಿದ್ದುಕೊಂಡು ಗುಪ್ತ ಭಕ್ತಿ ಆಚರಿಸುವುದು ಅಷ್ಟು ಸುಲಭವಲ್ಲ. ಮಹಾ ಶಿವಭಕ್ತೆ ಕಾರಿಕಾಲಮ್ಮೆಯ ಭಕ್ತಿ ಗುಪ್ತವಾಗಿತ್ತು. ಭಕ್ತಿ ಪ್ರದರ್ಶನದ ವಸ್ತುವಾಗಬಾರದು ಎಂಬುದು ಅವಳ ಅಚಲ ನಂಬಿಕೆಯಾಗಿತ್ತು. ಕಾರಿಕಾಲಮ್ಮೆಯ ಕಷ್ಟ ಸಹಿಷ್ಣುತೆ, ಭಕ್ತಿಯಲ್ಲಿರುವ ತಾದಾತ್ಮತೆ, ಚಿತ್ತದ ವಿರಕ್ತಿ ಹಾಗೂ ಅಚಲನಿಷ್ಠೆಗಳು ಮನೋಜ್ಞವಾಗಿ ಚಿತ್ರಿತವಾಗಿವೆ."[೨೧]

ಹರಿಹರನ ಲೋಕಾನುಭವ ಅಪಾರವಾದುದು ತನ್ನ ಬದುಕನ್ನು ಲೋಕಾನುಭವದಿಂದ ಶಿವಾನುಭವಕ್ಕೆ ಪರಿವರ್ತಿಸಿಕೊಂಡವನಾತ. ಹೀಗಾಗಿ ಆತನ ರಗಳೆಗಳಲ್ಲಿ ಲೋಕಾನುಭವ ಶಿವಾನುಭವಗಳೆರಡು ಸಮಾವೇಶ ಗೊಳ್ಳುತ್ತವೆ. ಹರಿಹರ ತನ್ನ ರಗಳೆಯ ಮೂಲಕ ಜನ ಮಾನಸವನ್ನು ತಿದ್ದುವ ಲೋಕ ಶಿಕ್ಷಣ ಕಾರ್ಯವನ್ನು ಕೈಗೊಂಡಿದ್ದನೆಂಬುದನ್ನು ಡಾ. ಬಿ.ಆರ್. ಹಿರೇಮಠ ಅವರು ಪರಿಣಾಮಕಾರಿಯಾಗಿ ಪ್ರತಿಪಾದಿಸಿದ್ದಾರೆ.

"ಹರಿಹರನದು ಸ್ವತಂತ್ರ ಪ್ರವೃತ್ತಿ ಪ್ರಯೋಗಶೀಲ, ಮನಸ್ಸು, ಕ್ರಿಯಾಶೀಲ ಪ್ರತಿಭೆ ಅವನಿಗೆ ಬದುಕು ಕಾವ್ಯ ಬೇರೆ ಬೇರೆಯಾಗಿರಲಿಲ್ಲ. ಹರಿಹರ ಬದುಕಿದಂತೆ ಬರೆದ, ಬರೆದಂತೆ ಬದುಕಿದ ಶಿವಕವಿ ವಿರಕ್ತ ಕವಿ ಎನಿಸಿಕೊಂಡ. ಹರಿಹರನ ರಗಳೆಗಳು ಒಂದರ್ಥದಲ್ಲಿ ವೀರಶೈವ ಮೌಲ್ಯಗಳಿಗೆ ಬರೆದ ಸಾಹಿತ್ಯಿಕ ವ್ಯಾಖ್ಯಾನದಂತಿವೆ."[೨೨] ಈ ಮಾತುಗಳು ಡಾ. ಬಿ.ಆರ್. ಹಿರೇಮಠ ಅವರಿಗೂ ಅಕ್ಷರಶಃ ಅನ್ವಯಿಸುತ್ತವೆ. "ಹೊಸತನ್ನು ಕಾಣುವುದು ಮಾತ್ರವೇ ಸಂಶೋಧನೆಯಲ್ಲ, ಹಳೆಯದನ್ನು ಸೂಕ್ತವಾಗಿ ಪರಿಷ್ಕರಿಸುವುದು, ಸೇರ್ಪಡಿಸುವುದು, ವ್ಯಾಖ್ಯಾನಿಸಿವುದು ಮೌಲ್ಯ ನಿರ್ಣಯ ಮಾಡುವುದು ಸಹ ಸಂಶೋಧನೆಯೇ ಆಗುತ್ತದೆ."[೨೩]

ಇವು ಪುಸ್ತಕ ರೂಪದಲ್ಲಿ ಪ್ರಕಟವಾದವುಗಳು. ಪುಸ್ತಕ ರೂಪದಲ್ಲಿ ಪ್ರಕಟವಾದ ಬಿಡಿ ಬಿಡಿಯಾಗಿರುವ ಲೇಖನಗಳು ಹೇರಳವಾಗಿವೆ. ಅವುಗಳಲ್ಲಿ ಶಿವಾಗಮಗಳು ಮತ್ತು ಹಾವಿನಹಾಳ ಕಲ್ಲಯ್ಯ, ವೀರಶೈವ ಪುರಾಣಗಳು ಮತ್ತು ವೀರಶೈವಾಮೃತ ಪುರಾಣ, ಶಿವಾನುಭಾವಿ ನಿಜಗುಣ ಶಿವಯೋಗಿ, ಶ್ರೀ ಸಿದ್ಧರಾಮೇಶ್ವರ ಪುರಾಣ, ಹಾವೇರಿ ಶ್ರೀ ಶಿವಬಸವೇಶ್ವರ ಪುರಾಣ, ಶರಣ ಸಾಹಿತ್ಯ

ಮತ್ತು ಸಂಸ್ಕೃತಿ, ಸಾಂಸ್ಕೃತಿಕ ಕೇಂದ್ರಗಳಾಗಿ ವೀರಶೈವ ಮಠಗಳು ಮುಂತಾದವು ಗಮನಾರ್ಹವಾಗಿವೆ. ಡಾ. ಬಿ.ಆರ್. ಹಿರೇಮಠರ ಬಿಡಿ ಲೇಖನಗಳನ್ನೆಲ್ಲ ಸಂಕಲಿಸಿ ಸಂಪಾದಿಸಿ ಪ್ರಕಟಿಸುವ ಕಾರ್ಯವಾಗಬೇಕಾಗಿದೆ. ಸಮಗ್ರ ಸಂಪುಟಗಳು ಹೊರಬಂದರೆ ಡಾ. ಬಿ.ಆರ್. ಹಿರೇಮಠರ ಸಂಶೋಧನೆಯ ಮಹತ್ವ ಚಿಂತನೆಯ ನೆಲೆಗಳನ್ನು ತಿಳಿದುಕೊಳ್ಳಲು ನೆರವಾಗುತ್ತವೆ. ಖಂಡಿತವಾಗಿಯೂ ಶ್ರೀಯುತರ ಲೇಖನಗಳು ಸಂಶೋಧನಾ ಕ್ಷೇತ್ರದ ವಿಸ್ತರಣೆಯಾಗಿರುತ್ತವೆ. ಪುಸ್ತಕ ರೂಪದಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಮಾತ್ರ ಈ ಅಧ್ಯಾಯದಲ್ಲಿ ವಿವೇಚನೆಗೆ ಎತ್ತಿಕೊಳ್ಳಲಾಗಿದೆ. ಬಿಡಿ ಲೇಖನಗಳನ್ನು (ಪುಸ್ತಕ ರೂಪದಲ್ಲಿ ಪ್ರಕಟವಾಗದೆ ಅಲ್ಲಲ್ಲಿ ಪತ್ರಿಕೆಗಳಲ್ಲಿ ಚೆಲ್ಲುವರಿದ ಲೇಖನಗಳನ್ನು) ಪ್ರತ್ಯೇಕವಾಗಿಯೇ ಅಧ್ಯಯನಿಸುವ ಅವಶ್ಯಕತೆಯಿದೆ. ಎಂಬ ಡಾ. ಟಿ.ವ್ಹಿ. ವೆಂಕಟಾಚಲಶಾಸ್ತ್ರಿಗಳ ಮಾತನ್ನು ಗಮನಿಸಿದಾಗ ಡಾ. ಬಿ.ಆರ್. ಹಿರೇಮಠರು ಕೈಗೊಂಡ ಶರಣಸಾಹಿತ್ಯದ ಅಧ್ಯಯನವು ಶ್ರೇಷ್ಠ ಸಂಶೋಧನೆಯೇ ಆಗುತ್ತದೆ. ಕನ್ನಡ ಸಂಶೋಧನೆಯ ಮೇರೆಯನ್ನು ವಿಸ್ತರಿಸಿ, ಅದರ ಉನ್ನತ ಆದರ್ಶಗಳನ್ನು ಎತ್ತಿ ಹಿಡಿದವರಲ್ಲಿ ಡಾ. ಬಿ.ಆರ್. ಹಿರೇಮಠರೂ ಓರ್ವರಾಗಿದ್ದಾರೆ.

"ಶರಣ ಸಾಹಿತ್ಯದ ಪ್ರಥಮ ಬೆಳೆ ವಚನ ಸಾಹಿತ್ಯ. ಈ ಸಾಹಿತ್ಯದ ನಿರ್ಮಾಪಕರು ಹನ್ನೆರಡನೆಯ ಶತಮಾನದ ಶಿವಶರಣರು, ಇವರ ತರುವಾಯ ವೀರಶೈವ ಸಾಹಿತ್ಯವನ್ನು ಸೃಜನ, ಸಂಕಲನ -ಸಂಪಾದನ ಮತ್ತು ವ್ಯಾಖ್ಯಾನ ಸಾಹಿತ್ಯವಾಗಿದೆ."[೭೪] ಡಾ. ಬಿ.ಆರ್. ಹಿರೇಮಠ ಅವರು ಶರಣಸಾಹಿತ್ಯದ ಕುರಿತಾಗಿ ತಲಸ್ಪರ್ಶಿ ಅಧ್ಯಯನ ಕೈಗೊಂಡವರು. ಅದರ ಫಲವಾಗಿ ಮೂಡಿ ಬಂದಿರುವ ಶ್ರೀಯುತರ ಲೇಖನಗಳು ತುಂಬ ಮೌಲಿಕವಾಗಿವೆ, ವಿಷಯದ ಆಳ ಮತ್ತು ವಿಸ್ತಾರ ಬೆರಗುಗೊಳಿಸುತ್ತದೆ. ಒಂದು ವಿಷಯವನ್ನು ಸೂಕ್ಷ್ಮವಾಗಿ ಗ್ರಹಿಸುವ, ಸ್ಥೂಲವಾಗಿ ವಿವರಿಸುವ, ಖಚಿತವಾಗಿ ವಿಶ್ಲೇಷಿಸುವ ಅಂಶಗಳು ಸಂಶೋದನ ಸಾಹಿತ್ಯಕ್ಕೆ ಹೊಸ ಕೊಡುಗೆಗಳಾಗಿವೆ. ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಇವರ ಲೇಖನಗಳು ಕಟ್ಟಿಕೊಡುವ ಮೌಲ್ಯಗಳು ಆಯಾ ಯುಗದ ಜನಾಂಗದ ಜೀವನವನ್ನು ಅರಿತುಕೊಳ್ಳಲು ನೆರವಾಗುತ್ತವೆ. ಡಾ. ಬಿ.ಆರ್. ಹಿರೇಮಠ ಅವರದು ಸಂಸ್ಕೃತಿನಿಷ್ಠವಾದ ಸಂಶೋಧನೆಯಾಗಿದೆ. ಅದಕ್ಕೆ ಪ್ರಸ್ತುತ ಭಾಗವು ಉತ್ತಮ ಉದಾಹರಣೆಯಾಗಿದೆ.

**೩.೬.೦ -ಸಂಕೀರ್ಣ ಸಾಹಿತ್ಯ :**

ಸಾಹಿತ್ಯವನ್ನು ಸೃಜನ ಮತ್ತು ಸೃಜನೇತರವೆಂದು ಅಧ್ಯಯನದ ಅನುಕೂಲಕ್ಕಾಗಿ ವಿಭಜಿಸುತ್ತಾರೆ. ಕಾವ್ಯ, ಕತೆ, ಕಾದಂಬರಿ, ನಾಟಕ, ಪ್ರಬಂಧ, ಪ್ರವಾಸ ಕಥನ, ಶಿಶುಸಾಹಿತ್ಯ ಮುಂತಾದವುಗಳನ್ನು ಸೃಜನಶೀಲ ಸಾಹಿತ್ಯವೆಂದೂ; ವಿಮರ್ಶೆ ಸಂಶೋಧನೆ, ಹಸ್ತಪ್ರತಿ, ಶಾಸನ, ಗ್ರಂಥಸಂಪಾದನೆ, ವ್ಯಾಕರಣ, ಛಂದಸ್ಸು, ಅಲಂಕಾರ, ಜೀವನಚರಿತ್ರೆ, ಅಭಿನಂದನ ಸಾಹಿತ್ಯ ಮುಂತಾದವುಗಳನ್ನು ಸೃಜನೇತರ ಸಾಹಿತ್ಯವೆಂದು ವಿದ್ವಾಂಸರು ಗುರುತಿಸುತ್ತ ಬಂದಿದ್ದಾರೆ. ಡಾ. ಬಿ.ಆರ್. ಹಿರೇಮಠ

ಅವರ ಸಾಹಿತ್ಯ ಎರಡನೆಯ ಗುಂಪಿಗೆ ಸೇರುತ್ತದೆ. ಡಾ. ಬಿ. ಆರ್. ಅವರ ಒಟ್ಟು ಸಂಶೋಧನೆಯ ಮೊತ್ತವನ್ನು ಶಾಸನ, ಹಸ್ತಪ್ರತಿ, ವಚನ ಸಾಹಿತ್ಯ, ಶರಣಸಾಹಿತ್ಯವೆಂದು ಉಪಅಧ್ಯಾಯಗಳನ್ನಾಗಿ ಮಾಡಿಕೊಂಡು ಅಧ್ಯಯನಿಸಲಾಗಿದೆ. ಈ ಮೇಲೆ ಪ್ರಸ್ತಾಪಿಸಿದ ವಿಭಾಗಕ್ಕೆ ಸೇರದೆ ಇರುವ ಅಂಶಗಳನ್ನುಳ್ಳ ಲೇಖನಗಳನ್ನು ಸಂಕೀರ್ಣ ಸಾಹಿತ್ಯವೆಂದು ಪರಿಗಣಿಸಿ ಇಲ್ಲಿ ವಿವೇಚಿಸಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಡಾ. ಬಿ. ಆರ್. ಅವರ 'ಸಂಶೋಧನ ಪಥ'ದಲ್ಲಿ ಪ್ರಕಟವಾಗಿರುವ - ನೀತಿ ಗೆರೆಯಲ್ಲಿರುವ ಗುಂಡ ಬ್ರಹ್ಮಯ್ಯಗಳ ವಿಗ್ರಹ, ಕನ್ನಡ ಸಾಹಿತ್ಯದಲ್ಲಿ ಸಂಶೋಧನೆ ಲೇಖನಗಳನ್ನು; 'ಸಾಹಿತ್ಯ ಪರಿಶೋಧನ'ದಲ್ಲಿ ಪ್ರಕಟವಾಗಿರುವ ಮಹಾನಾಡಪ್ರಭುಗಳ ಆಶ್ರಿತ ಕವಿ ಮಲ್ಲಿಕಾರ್ಜುನನ ಕೃತಿಗಳು, ಮಹಾನಾಡಪ್ರಭುಗಳ ರಾಜಗುರುಗಳು, ಹಾಗಲವಾಡಿ ರಾಜಾಶ್ರಯದ ಸೋಸಲೆ ರೇವಣಾರಾಧ್ಯರು ಹಾಗೂ ಅವರ ಕೃತಿಗಳು ಲೇಖನಗಳನ್ನು ; 'ವೀರಶೈವ ಸಂಪದ' ಗ್ರಂಥದಲ್ಲಿ ಪ್ರಕಟವಾಗಿರುವ - ಹರ್ಡೇಕರ ಮಂಜಪ್ಪನವರ ಮುದ್ರಣ, ಪ್ರಕಾಶನ, ಪ್ರಸಾರ ಕಾಯಕ ಹಾಗೂ ಎಸ್.ಎಸ್. ಬಸವನಾಳರ ಕಾವ್ಯಶಾಸ್ತ್ರ ಕೃತಿಗಳ ಪರಿಷ್ಕರಣ ಲೇಖನಗಳನ್ನು ಇಲ್ಲಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಸಂಶೋಧನ ಪಥವು ೧೯೮೪ರಲ್ಲಿ ಧಾರವಾಡದ ಚೇತಕ ಪ್ರಕಾಶನದಿಂದ ಪ್ರಕಟವಾಗಿದೆ. ಇದರಲ್ಲಿ ಒಟ್ಟು ಹತ್ತು ಸಂಶೋಧನಾ ಲೇಖನಗಳಿವೆ. ಸಂಕೀರ್ಣ ವಿಭಾಗದ ವಿಷಯಕ್ಕೆ ಸಂಬಂಧಿಸಿದಂತೆ ಮೂರು ಲೇಖನಗಳಿವೆ.

**'ನೀತಿಗೆರೆಯಲ್ಲಿಯ ಗುಂಡಬ್ರಹ್ಮಯ್ಯಗಳ ವಿಗ್ರಹ':**

ಸಂಶೋಧನ ಪಥದ ಎಂಟನೆಯ ಲೇಖನವಿದು ; ಎರಡು ಪುಟದ ವ್ಯಾಪ್ತಿಯನ್ನು ಹೊಂದಿದೆ. ಗುಂಡಬ್ರಹ್ಮಯ್ಯಗಳ ಚರಿತ್ರೆಯನ್ನು ದಾಖಲಿಸಿರುವ ಗಣಸಹಸ್ರನಾಮಾವಳಿ, ಬಸವಪುರಾಣ, ಕುಮಾರರಾಮನ ಸಾಂಗತ್ಯಗಳು, ಗುಂಡಬ್ರಹ್ಮಯ್ಯಗಳ ಚರಿತ್ರೆ ಮುಂತಾದ ಗ್ರಂಥಗಳು ಆಕರವಾಗಿವೆ. ಆದರೆ ಡಾ. ಬಿ. ಆರ್. ಹಿರೇಮಠ ಅವರು ವಿಗ್ರಹ ಮತ್ತು ದೇವಾಲಯಗಳ ಹಿನ್ನೆಲೆಯಲ್ಲಿ ಗುಂಡಬ್ರಹ್ಮಯ್ಯರನ್ನು ತಿಳಿಯಲು ಆಕರ ಸಾಮಗ್ರಿಗಳನ್ನಾಗಿ ಬಳಸಿರುವುದು ವಿನೂತನವಾಗಿದೆ.

ಡಾ. ಬಿ.ಎಸ್. ಗದ್ದಗಿಮಠರು ಬನವಾಸಿಯ ಮಧುಕೇಶ್ವರ ದೇವಾಲಯದ ಶಿವೋತ್ಸವ ಮಂಟಪದ ಗಗರಿಯಲ್ಲಿರುವ ಗುಂಡಬ್ರಹ್ಮಯ್ಯಗಳ ವಿಗ್ರಹವನ್ನು ; ಡಾ. ಎಂ.ಎಂ. ಕಲಬುರ್ಗಿಯವರು ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ಮತ್ತು ಚಿತ್ರದುರ್ಗದ ಸಂಪಿಗೆಸಿದ್ಧೇಶ್ವರ ದೇವಾಲಯದಲ್ಲಿರುವ ಗುಂಡಬ್ರಹ್ಮಯ್ಯಗಳ ವಿಗ್ರಹವನ್ನು, ಡಾ. ವಿ. ಶಿವಾನಂದ ಅವರು ಬ್ಯಾಡಗಿ

ತಾಲೂಕಿನ ಗುಂಡೇನಹಳ್ಳಿಯ ಗುಂಡಬ್ರಹ್ಮಯ್ಯ ದೇವಾಲಯದಲ್ಲಿರುವ ಗುಂಡಬ್ರಹ್ಮಯ್ಯಗಳ ವಿಗ್ರಹವನ್ನು ಗುರುತಿಸಿ ಅವುಗಳ ಮೇಲೆ ಹೊಸಬೆಳಕು ಚೆಲ್ಲಿದ್ದಾರೆ. ಹಿರಿಯರು ಕ್ರಮಿಸಿದ ದಾರಿಯಲ್ಲಿಯೇ ಸಾಗಿದ ಡಾ. ಬಿ.ಆರ್. ಹಿರಮೇಠರು ಅವರಿಗಿಂತ ವಿಭಿನ್ನವಾದ ನೀತಿಗೆರೆಯಲ್ಲಿರುವ ಗುಂಡ ಬ್ರಹ್ಮಯ್ಯಗಳ ವಿಗ್ರಹವನ್ನು ಶೋಧಿಸಿ ಬೆಳಕಿಗೆ ತಂದಿದ್ದಾರೆ.

ನೀತಿಗೆರೆಯು ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ ತಾಲೂಕಿನಲ್ಲಿರುವ ಪುಟ್ಟ ಗ್ರಾಮವಾಗಿದೆ. ವೀರಭದ್ರ ದೇವಾಲಯದಲ್ಲಿರುವ ಗುಂಡಬ್ರಹ್ಮಗಳ ಹೊಸ ವಿಗ್ರಹವನ್ನು ಕಂಡುಹಿಡಿದಿದ್ದಾರೆ. ಇದು ಗುಂಡಬ್ರಹ್ಮಯ್ಯಗಳ ಕುರಿತಾಗಿರುವ ಐದನೆಯ ವಿಗ್ರಹ. "ಶಿಲ್ಪ ವಿನ್ಯಾಸದ ದೃಷ್ಟಿಯಿಂದ ಧಾರವಾಡ ಕನ್ನಡ ಸಂಶೋಧನ ಸಂಸ್ಥೆ ಹಾಗೂ ಗುಂಡೇನಹಳ್ಳಿ ವಿಗ್ರಹಗಳು ಒಂದು ವರ್ಗಕ್ಕೆ ಸೇರಿದರೆ, ಚಿತ್ರದುರ್ಗ ಮತ್ತು ನೀತಿಗೆರೆ ವಿಗ್ರಹಗಳು ಮತ್ತೊಂದು ವರ್ಗಕ್ಕೆ ಒಳಪಡುತ್ತವೆ. ಇಲ್ಲಿ ಚಿತ್ರದುರ್ಗ ಮತ್ತು ನೀತಿಗೆರೆ ವಿಗ್ರಹಗಳು ಒಂದೇ ವರ್ಗದವುಗಳೆನಿಸಿದರೂ ಕೆಲವು ಅಂಶಗಳಲ್ಲಿ ವ್ಯತ್ಯಾಸಗಳಿವೆ"[೨೫] ಎಂದು ವಿವರಿಸಿ ಆ ವ್ಯತ್ಯಾಸಗಳನ್ನು ಈ ರೀತಿಯಾಗಿ ಪಟ್ಟಿ ಮಾಡಿದ್ದಾರೆ.

"ಚಿತ್ರದುರ್ಗ ವಿಗ್ರಹದಲ್ಲಿ ಒಂದು ವಿಗ್ರಹ ಎಡಗೈಯಲ್ಲಿ ಇನ್ನೊಂದು ವಿಗ್ರಹ ಬಲಗೈಯಲ್ಲಿ ಇಷ್ಟಲಿಂಗವನ್ನು ಹಿಡಿದಿದ್ದರೆ; ಮಧ್ಯದಲ್ಲಿರುವ ಶೂಲವನ್ನು ಒಂದು ವಿಗ್ರಹ ಬಲಗೈಯಿಂದಲೂ ಇನ್ನೊಂದು ವಿಗ್ರಹ ಎಡಗೈಯಿಂದಲೂ ಹಿಡಿದುಕೊಂಡು ನಿಂತಿವೆ. ಅಲ್ಲದೆ ಈ ವಿಗ್ರಹಗಳು ಕೊರಳು, ರಟ್ಟೆ, ಮುಂಗೈ, ಕಿವಿಗಳಲ್ಲಿ ರುದ್ರಾಕ್ಷಿಮಾಲೆಯನ್ನು ಸೊಂಟದಲ್ಲಿ ನೇತಾಡುವ ಖಡ್ಗ, ಕಾಲಲ್ಲಿ ಆಭರಣ (ಕಾಲ್ಪೆಂಡೆ)ವನ್ನು ಹೊಂದಿರುತ್ತವೆ. ಆದರೆ ನೀತಿಗೆರೆ ವಿಗ್ರಹದಲ್ಲಿ ಮೇಲೆ ಕಮಾನಿನ ಆಕಾರದ ಆಕರ್ಷಕವಾದ ಸಿಂಹ ಲಲಾಟವಿದ್ದು, ಕೆಳಗೆ ಎಡಗೈಯಲ್ಲಿ ಇಷ್ಟಲಿಂಗವನ್ನು ಹಿಡಿದುಕೊಂಡು ಬಲಕೈಯಿಂದ ಆ ಇಷ್ಟಲಿಂಗವನ್ನು ಅರೆಮುಚ್ಚಿ ಭಕ್ತಿಯಿಂದ ನಿಂತಿರುವ ವಿಗ್ರಹಗಳಿವೆ. ಮಧ್ಯದಲ್ಲಿ ಎರಡು ಶೂಲಗಳು [ಈ ವಿಗ್ರಹಗಳೂ ಕೊರಳು, ರಟ್ಟೆ, ಮುಂಗೈ, ಕಿವಿಗಳಲ್ಲಿ ರುದ್ರಾಕ್ಷಿ ಮಾಲೆಗಳನ್ನು. ಸೊಂಟದಲ್ಲಿ ನೇತಾಡುವ ಖಡ್ಗ, ಕಾಲಲ್ಲಿ ಕಾಲ್ಪೆಂಡೆ(?) ಧರಿಸಿರುವದನ್ನು ಮರೆಯುವಂತಿಲ್ಲ]. ವಿಗ್ರಹಗಳ ಎಡಬಲದಲ್ಲಿ ಗುಂಡಬ್ರಹ್ಮಯ್ಯಗಳ ಸತಿಯರ (?) ವಿಗ್ರಹಗಳನ್ನು ಕಂಡರಿಸಲಾಗಿದೆ. ಹೀಗೆ ನೀತಿಗೆರೆಯ ಗುಂಡಬ್ರಹ್ಮಯ್ಯಗಳ ವಿಗ್ರಹ ಕೆಲವು ಅಂಶಗಳಿಂದ ವಿಶಿಷ್ಟಪೂರ್ಣವಾಗಿ ನಿಲ್ಲುತ್ತದೆ."[೨೬] ಹೀಗೆ ಡಾ. ಬಿ.ಆರ್. ಹಿರೇಮಠ ಅವರು ಈಗಾಗಲೇ ಲಭ್ಯವಿರುವ ಮಾಹಿತಿಯನ್ನು ವಿವರಿಸಿ ತಾವು ಹೊಸದಾಗಿ ಕಂಡುಕೊಂಡ ಸಂಗತಿಗಳನ್ನು ವಿವರಿಸುವುದು ಸಂಶೋಧನೆಯ ಶಿಸ್ತಿಗೆ ಅನುಗುಣವಾಗಿದೆ. ಈ ಕ್ಷೇತ್ರದಲ್ಲಿ ಈಗಾಗಲೇ ನಡೆದಿರುವ ಸಂಶೋಧನೆಯನ್ನು ಪ್ರಸ್ತಾಪಿಸಿರುವುದು ಸಂಶೋಧಕನ ಪ್ರಾಮಾಣಿಕತೆಗೆ ಪುರಾವೆ ಎಂದೆನಿಸುತ್ತವೆ.

**ಕನ್ನಡ ಸಾಹಿತ್ಯದಲ್ಲಿ ಸಂಶೋಧನೆ :**

ಈ ಲೇಖನ ಸಂಶೋಧನಾ ಪಥದ ೧೧ನೇ ಲೇಖನವಾಗಿದ್ದು ೮ ಪುಟಗಳನ್ನು ಒಳಗೊಂಡಿದೆ. ಇದರಲ್ಲಿ ಸಂಶೋಧನ ಎಂದರೇನು? ಸಂಶೋಧನಾ ಸ್ವರೂಪ, ಸಂಶೋಧನ ವಸ್ತು ವಿಷಯಗಳು, ಕನ್ನಡ ಸಾಹಿತ್ಯದಲ್ಲಿ ಇಲ್ಲಿಯವರೆಗೆ ನಡೆದ ಸಂಶೋಧನೆಗಳ ಕಾರ್ಯ ವಿಧಾನಗಳನ್ನು ವಿವರಿಸಿದ್ದಾರೆ. ಪ್ರಸ್ತುತ ಲೇಖನ ಒಟ್ಟು ಮೂರು ವಿಭಾಗಗಳಲ್ಲಿ ನಿರೂಪಿತಗೊಂಡಿದೆ. "ಸಂಶೋಧನೆ ವ್ಯಕ್ತಿ ನಿಷ್ಠವಾದುದಲ್ಲ ವಸ್ತು ನಿಷ್ಠವಾದದ್ದು. ವಸ್ತುನಿಷ್ಠಸತ್ಯವನ್ನು ಪ್ರಕಟಿಸುವುದು ಸಂಶೋಧಕನ ಗುರಿಯಾಗಿದೆ."[೭೭] "ಸಂಶೋಧನೆಯಲ್ಲಿ ಕಲ್ಪನೆಗೆ ಅವಕಾಶವಿಲ್ಲ. ಊಹೆಗೆ ಅವಕಾಶವಿದೆ. ಇದ್ದ ಸಾಮಗ್ರಿಯ ಬಲದಿಂದ ಸಂಶೋಧಕನು ಊಹೆಯನ್ನು ಮಂಡಿಸಬಹುದು. ಆದರೆ ಊಹೆ ಕಾಲಾಂತರದಲ್ಲಿ ಸತ್ಯವಾಗಿ ಪರಿಣಮಿಸಬಹುದು. ಇಲ್ಲವೆ ಬಿದ್ದು ಹೋಗಬಹುದು. ಊಹೆಗಳು ಸಂಬಂಧಿಸಿದ ಸಂಶೋಧನೆ ಮುಂದುವರೆಯಲು ದಾರಿಮಾಡಿಕೊಡುತ್ತವೆ."[೭೮] "ವಿಸ್ತಾರವಾದ ವ್ಯಾಸಂಗ, ಖಚಿತವಾದ ವಿಷಯ ಪರಿಜ್ಞಾನ, ಸಂಶೋಧನ ತತ್ವಗಳ ಗ್ರಹಿಕೆ, ಹೊಸದನ್ನು ಹೇಳಬೇಕೆಂಬ ಹಂಬಲಗಳೊಂದಿಗೆ ಅಪಾರವಾದ ಶ್ರದ್ಧೆ, ಪರಿಶ್ರಮ ಹಾಗೂ ಸಂಶೋಧನೆಗೆ ತಲಸ್ಪರ್ಶಿಯಾದ ಆಕರಗಳ ಪರಿಶೋಧನೆ ಇರುವುದು ವಿದಿತವಾಗುತ್ತದೆ."[೭೯] "ಮುಂದಿನ ದಶಕದ ಸಂಶೋಧನ ಕಳೆದ ದಶಕದ ಸಂಶೋಧನ ಗ್ರಂಥ ಹಾಗೂ ಲೇಖನಗಳಲ್ಲಿ ಕಂಡುಬರುವ ನ್ಯೂನ್ಯತೆಯ ಗಂಟುಗಳನ್ನು ಬಿಡಿಸಿಕೊಂಡು, ಅಲ್ಲಲ್ಲಿ ಮೂಡಿಬಂದ ಮೌಲಿಕತೆಯನ್ನು ಮೈಗೂಡಿಸಿಕೊಂಡು, ಇನ್ನೂ ಅಸ್ಪೃಶ್ಯವಾಗಿ ಬಿದ್ದಿರುವ ಅನೇಕ ವಿಷಯದತ್ತ ಗಮನಹರಿಸುವುದು ಅವಶ್ಯವಿದೆ."[೮೦] ಈ ಮೇಲೆ ಪ್ರಸ್ತಾಪಿಸಿರುವ ಕೆಲವು ಅಂಶಗಳು ಸಂಶೋಧನೆಯ ಖಚಿತತೆಯನ್ನು ಹೇಳುತ್ತವೆ. ಮುಂದೆ ನಡೆಯಬೇಕಾದ ಕಾರ್ಯಗಳತ್ತ ಹೊಸ ನೋಟವೊಂದನ್ನು ಕಟ್ಟಿಕೊಡುತ್ತವೆ. ಸಂಶೋಧನೆ ಕೈಕೊಳ್ಳುವವರಿಗೆ ಪ್ರಸ್ತುತ ಲೇಖನವು ದಾರಿದೀಪವಾಗಿದೆ.

**ಮಹಾನಾಡ ಪ್ರಭುಗಳ ಆಶ್ರಿತ ಕವಿ ಮಲ್ಲಿಕಾರ್ಜುನನ ಕೃತಿಗಳು :**

ಸಾಹಿತ್ಯ ಪರಿಶೋಧನದ ೬ನೇ ಲೇಖನವಿದು. ೧೨ ಪುಟಗಳ ವ್ಯಾಪ್ತಿಯನ್ನು ಈ ಲೇಖನ ಒಳಗೊಂಡಿದೆ. ಆರಂಭದಲ್ಲಿ ರಾಜಾಶ್ರಯ, ರಾಜಾಶ್ರಯದಲ್ಲಿರುವ ಸಾಹಿತ್ಯ, ಕನ್ನಡ ರಾಜಾಶ್ರಯದ ಸಾಹಿತ್ಯ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. "ಪಾಳೆಗಾರ ಮನೆತನಗಳು ದೇಶೀಯವಾಗಿದ್ದು ಪ್ರಾದೇಶಿಕ ಭಾಷೆ, ಸಾಹಿತ್ಯ, ಸಂಸ್ಕೃತಿ, ಧರ್ಮ, ಕಲೆಗಳಿಗೆ ಅಗ್ರ ಪ್ರಾಶಸ್ತ್ಯ ನೀಡಿದವು. ಕರ್ನಾಟಕದ ಪಾಳೇಗಾರರಲ್ಲಿ ವೀರಶೈವ ಪಾಳೆಗಾರರ ಮನೆತನಗಳು ಸತ್ವ, ಸಂಖ್ಯೆ, ಶಕ್ತಿ ಸಾಹಿತ್ಯಗಳ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವೆನಿಸಿವೆ"[೮೧] ಎಂದು ವಿವರಿಸುತ್ತ ಮಹಾನಾಡ ಪ್ರಭುಗಳ ಹಿನ್ನೆಲೆಯಲ್ಲಿ

ನಿರೂಪಿಸಿದ್ದಾರೆ. ಆರಂಭದಲ್ಲಿ ಮಹಾನಾಡ ಪ್ರಭುಗಳ ಚಟುವಟಿಕೆಗಳು ರಾಜ್ಯಸ್ಥಾಪನೆ, ರಾಜ್ಯವಿಸ್ತಾರ, ರಾಜ್ಯದ ಸುಭದ್ರತೆಗೆ ಒತ್ತುಕೊಟ್ಟಿದ್ದವು. ತದನಂತರ ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳತ್ತ ಗಮನಹರಿಸಿರುವುದನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ನಿರೂಪಿಸಿದ್ದಾರೆ.

ಮಲ್ಲಿಕಾರ್ಜುನ, ಬಿಜ್ಜಾವರ ಮಹಾನಾಡ ಪ್ರಭುಗಳ ರಾಜಾಶ್ರಯದ ಕವಿಯಾಗಿದ್ದ ಆತನ ಕಾಲ ೧೫೭೮ ರಿಂದ ೧೬೫೦. ಶಿವಾನುಭವಿಯೂ, ಶಿವಕವಿಯೂ ಆಗಿದ್ದ ಈತನಿಗೆ ಇಮ್ಮಡಿ ಚಿಕ್ಕ ಭೂಪಾಲ, ತೋಂಟದರಾಯ ಹಾಗೂ ಸಪ್ಪೇಂದ್ರರ ರಾಜಾಶ್ರಯ ಸಂಪ್ರಾಪ್ತವಾಗಿದ್ದಿತು. ಮಹಾನಾಡ ಪ್ರಭುಗಳ ಪ್ರೀತಿ, ಗೌರವ, ಆದರಗಳಿಗೆ ಪಾತ್ರನಾಗಿದ್ದ "ಕವಿ ಮಲ್ಲಿಕಾರ್ಜುನ ಅಹೋಬಲನೆಂಬ ಪಂಡಿತನ ಮೊಮ್ಮಗನ ಮಗ ಗುರುಸಿದ್ಧಮಲ್ಲೇಶ, ಚೆನ್ನಮಲ್ಲೇಶ, ಸಪ್ಪೇಶ್ವರರು ಈತನಿಗೆ ಪರಮಗುರುಗಳಾಗಿದ್ದರು. ಇಮ್ಮಡಿ ಚಿಕ್ಕ ಭೂಪಾಲ ಈ ಕವಿಯ ಕವಿತ್ವವನ್ನು ಮೆಚ್ಚಿ ಆನೆ, ಪಲ್ಲಕ್ಕಿ, ಅಲಂಕಾರ ಮೊದಲಾದ ಬೆಲೆಯುಳ್ಳ ವಸ್ತುಗಳನ್ನು ರಾಜ ಮರ್ಯಾದೆಯಿಂದ ನೀಡಿ ರಾಜೋಚಿತವಾಗಿ ಗೌರವಿಸಿದ್ದು"[೮೨] ಎಂದು ಕವಿಯ ಜೀವನ ಸಾಧನೆಗಳನ್ನು ಸಂಕಲಿಸಿದ್ದಾರೆ. ಮಲ್ಲಿಕಾರ್ಜುನ ಹೆಸರಿನಲ್ಲಿ ಚಿಕ್ಕ ಭೂಪಾಲ ಸಾಂಗತ್ಯ, ಕಂಚಿ ಶಂಕರ ಆರಾಧ್ಯ ಕೃತ ಸಂಸ್ಕೃತ ಬಸವ ಪುರಾಣ ಟೀಕೆ, ಗುರುರಾಜ ಕೃತ ಸಂಸ್ಕೃತ ಪಂಡಿತಾರಾಧ್ಯ ಚರಿತ್ರೆ ಟೀಕೆ, ರಾಮಾಯಣ ಸಾರ ವ್ಯಾಖ್ಯಾನ, ಆದಿತ್ಯ ಸ್ತೋತ್ರ ವ್ಯಾಖ್ಯಾನ, ಶಿವಕರ್ಣಾಮೃತ, ಕರ್ನಾಟಕ ವ್ಯಾಖ್ಯಾನ, ಅಮೃತೇಶ್ವರ ಭಾಷ್ಯ, ಭಾರತಸಾರ ವ್ಯಾಖ್ಯಾನ, ಬ್ರಹ್ಮ ತರ್ಕ ಸ್ತವದ ಕನ್ನಡ ಟೀಕು, ಪಂಚಶ್ಲೋಕಿ ವ್ಯಾಖ್ಯಾನ, ಅಕ್ಷರಾಂಕ ಗದ್ಯ ಟೀಕೆ, ಕೃತಿಗಳು ಲಭಿಸುತ್ತವೆ ಎಂಬ ಅಮೂಲ್ಯ ಮಾಹಿತಿಯನ್ನು ಡಾ. ಬಿ. ಆರ್. ಹಿರೇಮಠ ಅವರು ಕಲೆ ಹಾಕಿದ್ದಾರೆ. "ಮಲ್ಲಿಕಾರ್ಜುನನು ಕವಿಯಾಗಿ, ವ್ಯಾಖ್ಯಾನಕಾರನಾಗಿ ಕಾರ್ಯ ಮಾಡಿದುದು ಈತನ ಸೃಜನಶಕ್ತಿ ವಿಮರ್ಶನ ಶಕ್ತಿಗಳ ಪ್ರತೀಕವೆನಿಸಿದೆ."[೮೩] ಆತನ ವ್ಯಕ್ತಿ ವಿಶೇಷತೆಯನ್ನು ಸಾಹಿತ್ಯ ಸಾಧನೆಯನ್ನು ದಾಖಲಿಸಿದ್ದಾರೆ. ಮಲ್ಲಿಕಾರ್ಜುನ ರಚಿಸಿರುವ ವಿವಿಧ ಕೃತಿಗಳ ಸಾರವನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಕೆಲವೆಡೆ ಸಾಂಗತ್ಯವನ್ನು ಉದಾಹರಿಸಿದ್ದಾರೆ. ಶೃಂಗಾರ, ವೀರರಸಗಳನ್ನುಳ್ಳ ದೃಶ್ಯಗಳನ್ನು ಉಲ್ಲೇಖಿಸಿದ್ದಾರೆ. ದೇಶಿಯ ಅಂಶಗಳನ್ನೊಳಗೊಂಡ ಪದ್ಯಗಳನ್ನು ಉದಾಹರಿಸಿದ್ದಾರೆ. "ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಚಾರಿತ್ರಿಕ ಕಾವ್ಯವಾಗಿ, ಧಾರ್ಮಿಕ ಕಾವ್ಯವಾಗಿ, ಸಾಹಿತ್ಯ ಕೃತಿಯಾಗಿ ಮಹತ್ವದ್ದಾಗಿದೆ. ಇಂಥ ಅಪೂರ್ವ ಕೃತಿಯನ್ನು ರಚಿಸಿದ ಕವಿ ಮಲ್ಲಿಕಾರ್ಜುನ ಆತನಿಗೆ ರಾಜಾಶ್ರಯ ನೀಡಿದ ಮಹಾನಾಡ ಪ್ರಭುಗಳು ಕನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯವು ೧೬ನೆಯ ಶತಮಾನದ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ಚರಿತ್ರೆಗೆ ಉಪಯುಕ್ತ ಮಾಹಿತಿ ಪೂರೈಸುವ ಆಕರ ಗ್ರಂಥವಾಗಿ ಪರಿಣಮಿಸಿದೆ" [೮೪] ಎಂದು ಕವಿ ರಾಜರ ವ್ಯಕ್ತಿತ್ವ ಮತ್ತು ಸಾಹಿತ್ಯ ಕೃತಿಯ ಸತ್ವವನ್ನು ಒಟ್ಟೊಟ್ಟಾಗಿ ಕಟ್ಟಿಕೊಟ್ಟಿದ್ದಾರೆ.

**ಮಹಾನಾಡ ಪ್ರಭುಗಳ ರಾಜಗುರುಗಳು :**

ಸಾಹಿತ್ಯ ಪರಿಶೋಧನ ಗ್ರಂಥದಲ್ಲಿರುವ ೭ನೆಯ ಲೇಖನವಿದು. ೧೪ ಪುಟಗಳಲ್ಲಿ ರಚಿತವಾಗಿದೆ. ಆರಂಭದಲ್ಲಿ ಪ್ರಾಚೀನ ಕರ್ನಾಟಕದ ವೀರಶೈವ ಅರಸು ಮನೆತನಗಳು, ಪಾಳೆಗಾರರು, ಮಹಾನಾಡ ಪ್ರಭುಗಳು ಮುಂತಾದವುಗಳನ್ನು ಪ್ರಸ್ತಾಪಿಸಿದ್ದಾರೆ. ಮಹಾನಾಡ ಮನೆತನದ ಮೂಲ ಪುರುಷರೆಂದರೆ ಕಾಳನಗೌಡ, ಚೆನ್ನಪ್ಪಗೌಡ, ಸಂಗಪ್ಪಗೌಡ, ಕಾಳಚಿಕ್ಕಪ್ಪಗೌಡ, ರಾಮಪ್ಪಗೌಡ, ಚಿಕ್ಕಪ್ಪಗೌಡ ಮಲೇಗೌಡ ಪ್ರಭುಗಳ ಹೆಸರುಗಳನ್ನು ದಾಖಲಿಸಿದ್ದಾರೆ. ಕೋರಾ, ತೆರಿಯೂರು, ಚೋಳುರು, ಗುಬ್ಬಿ, ಹೊಸಹಳ್ಳಿ. ಎಣ್ಣೆಗೆರೆ, ಬಿದಿರೆ, ಮುಮ್ಮಡಿ ಪಟ್ಟಣ ಈ ಗ್ರಾಮಗಳ ಪ್ರದೇಶವೇ ಮಹಾನಾಡು. ಈ ಮಹಾನಾಡು ಪ್ರದೇಶವನ್ನಾಳಿದ ಅರಸರಿಗೆ ಮಹಾನಾಡ ಪ್ರಭುಗಳೆಂದು ಕರೆಯುತ್ತಿದ್ದರು. ಮಹಾನಾಡ ಪ್ರಭುಗಳಿಗೆ ಏಳನಾಡ ಪ್ರಭುಗಳು ಎಂದು ಮತ್ತೊಂದು ಪರ್ಯಾಯವೂ ಇತ್ತು. ಚೆನ್ನರಾಯ ದುರ್ಗ, ಮಿಡಿಗೇಸಿ, ಮಧುಗಿರಿ ಅರಸರೆಂದು ಇವರು ಪ್ರಖ್ಯಾತರಾಗಿದ್ದರು. ಪರಮ ವೀರಶೈವರಾದ ಮಹಾನಾಡ ಪ್ರಭುಗಳು ಬಿಜ್ಜಾವರ, ಸಿದ್ಧಾಪುರ, ಮಧುಗಿರಿಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೧೨ನೇ ಶತಮಾನದಿಂದ ೧೭ನೇ ಶತಮಾನದವರೆಗೂ ರಾಜ್ಯಭಾರ ಮಾಡಿದರು. ಇವೇ ಮೊದಲಾದ ಐತಿಹಾಸಿಕ ಸಂಗತಿಯನ್ನು ಲೇಖನದ ಆರಂಭದಲ್ಲಿ ಹೇಳಿದ್ದಾರೆ. ಈ ಅರಸುಮನೆತನಕ್ಕೆ ಗುರುಗಳಾಗಿ ಬಂದವರು ಶಿವಯೋಗಿ ಸಿದ್ಧರಾಮೇಶ್ವರ, ತೋಂಟದ ಸಿದ್ಧಲಿಂಗ ಶಿವಯೋಗಿ, ಸಿದ್ಧಮಲ್ಲಿಕಾರ್ಜುನ, ಬೋಳಬಸವೇಶ್ವರ, ಹರದನಹಳ್ಳಿ ಬಸವಲಿಂಗ ಸ್ವಾಮಿ, ಹಾಗೂ ವಿರಕ್ತ ತೋಂಟದಾರ್ಯರು. ರಾಜಗುರುಗಳು ಹಾಗೂ ಧರ್ಮಗುರುಗಳು ಆಗಿ ಕಾರ್ಯನಿರ್ವಹಿಸಿರುವುದನ್ನು ಅನುಕ್ರಮವಾಗಿ ಡಾ. ಬಿ.ಆರ್. ಅವರು ವಿವರಿಸಿದ್ದಾರೆ. ಈ ರಾಜಗುರುಗಳ ಹಾಗೂ ಧರ್ಮಗುರುಗಳ ವ್ಯಕ್ತಿ ವಿಶಿಷ್ಟತೆಯನ್ನು; ಧರ್ಮ, ಸಾಹಿತ್ಯ, ಸಂಸ್ಕೃತಿ, ಪೋಷಣೆಗೆ ನೀಡಿದ ಆದ್ಯತೆಗಳನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸಿದ್ದಾರೆ. "ತೋಂಟದಾರ್ಯರು ರಾಜಗುರುಗಳು, ಧರ್ಮ ಗುರುಗಳಾಗಿದ್ದಂತೆಯೇ ಕಾವ್ಯರ್ಷಿಗಳೂ ಆಗಿದ್ದರು. ಆ ಕಾವ್ಯರ್ಷಿ ಸೃಷ್ಟಿಸಿದ ಸಾಹಿತ್ಯ ಅಪಾರವಾಗಿದ್ದು ವೈವಿಧ್ಯಪೂರ್ಣವೆನಿಸಿದೆ."[೮೫] ಅವರು ಬರೆದ ೨೫ ಕೃತಿಗಳ ಶೀರ್ಷಿಕೆಯನ್ನು ಉಲ್ಲೇಖಿಸಿದ್ದಾರೆ. "ರಾಜಗುರು ವಿರಕ್ತ ತೋಂಟದಾರ್ಯ ಪುರಾಣ, ಕಾವ್ಯ, ಶತಕ, ರಗಳೆ, ಟೀಕೆ, ಗದ್ಯ, ಸ್ವರವಚನ, ನಿಘಂಟು ಹಾಗೂ ಸ್ತೋತ್ರ ಸಾಹಿತ್ಯ ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಛಂದೋವೈವಿಧ್ಯ ಸಾಹಿತ್ಯ, ರೂಪ ವೈವಿಧ್ಯಗಳಿಂದ ಕೂಡಿದ ಇವರ ಸಾಹಿತ್ಯ ವಿಶೇಷವಾಗಿ ವೀರಶೈವ ಸಿದ್ಧಾಂತಕ್ಕೆ ಸಂಬಂಧಿಸಿದುದಾಗಿದೆ. ವಿರಕ್ತ ತೋಂಟದಾರ್ಯರು ರಾಜಗುರುವಾಗಿ, ಧರ್ಮಗುರುವಾಗಿ, ದಾರ್ಶನಿಕರಾಗಿ, ಕಾವ್ಯಯೋಗಿಯಾಗಿ ಮಾಡಿರುವ ಕಾರ್ಯ ಅನುಪಮ ಹಾಗೂ ಅನನ್ಯವಾಗಿದೆ"[೮೬] ಎಂದು ಡಾ. ಬಿ. ಆರ್. ಅವರು ವಿರಕ್ತ ತೋಂಟದಾರ್ಯರ ಸಾಹಿತ್ಯ, ಸಾಧನೆ, ಸಿದ್ಧಿಯನ್ನು ಸರಿಯಾಗಿ ಗುರುತಿಸಿದ್ದಾರೆ. ಇದೇ ರೀತಿ ಉಳಿದ ಗುರುಗಳ ಅನನ್ಯತೆಯನ್ನು ಅಲ್ಲಲ್ಲಿ ಸಾದರಪಡಿಸಿದ್ದಾರೆ.

**ಹಾಗಲವಾಡಿ ರಾಜಾಶ್ರಯದ ಸೋಸಲೆ ರೇವಣಾರಾಧ್ಯರು ಹಾಗೂ ಅವರ ಕೃತಿಗಳು :**

ಇದು ಸಾಹಿತ್ಯ ಪರಿಶೋಧನದ ೮ನೇ ಲೇಖನವಾಗಿದೆ. ೧೮ ಪುಟಗಳಲ್ಲಿ ಇದು ರಚನೆಗೊಂಡಿದೆ. ಹಾಗಲವಾಡಿಯು ವೀರಶೈವರಿಗೆ ದಕ್ಷಿಣ ಕರ್ನಾಟಕದಲ್ಲಿ ಪ್ರಮುಖ ಕೇಂದ್ರವಾಗಿತ್ತು. ಗುಬ್ಬಿ, ಎಡೆಯೂರು, ಗೂಳೂರು, ಗುಮ್ಮಳಾಪುರ, ಸ್ವಾದಿ, ಕೆಳದಿಗಳ ತರುವಾಯ ವೀರಶೈವ ಪರಂಪರೆಯನ್ನು ಮುಂದುವರೆಸಿದ ಶ್ರೇಯಸ್ಸು ಹಾಗಲವಾಡಿ ಅರಸು ಮನೆತನದ್ದಾಗಿದೆ. ಇಲ್ಲಿಯವರೆಗೆ ಹಾಗಲವಾಡಿ ಅರಸು ಮನೆತನದ ಅಧ್ಯಯನವಾಗಿರಲಿಲ್ಲ. ಡಾ. ಬಿ. ಆರ್. ಹಿರೇಮಠ ಅವರು ಪ್ರಪ್ರಥಮ ಬಾರಿಗೆ ಈ ಅರಸು ಮನೆತನದ ಕುರಿತಾಗಿ ಅಧ್ಯಯನ ಕೈಗೊಂಡಿರುವುದರಿಂದ ಇದೊಂದು ಚಾರಿತ್ರಿಕ ದಾಖಲೆಯ ಸಂಗತಿಯಾಗಿದೆ. "ಹಾಗಲವಾಡಿ ಅರಸರು ಕನ್ನಡ, ಸಂಸ್ಕೃತ ಉಭಯ ಭಾಷಾ ಸಾಹಿತ್ಯಗಳಿಗೂ ರಾಜಾಶ್ರಯ ನೀಡಿದರು. ಈ ಅರಸು ಮನೆತನದವರು ವಿದ್ಯಾಪಕ್ಷಪಾತಿಗಳು, ಕಾವ್ಯ ಪೋಷಕರು, ಧರ್ಮ ಪ್ರಸಾರಕರೂ, ಅನುಭಾವಿಗಳು, ದಾರ್ಶನಿಕರು, ರಾಜರ್ಷಿಗಳೂ, ಸ್ವತಃ ಕವಿಗಳೂ ಆಗಿದ್ದರು. ಹೀಗಾಗಿ ಇವರ ಆಶ್ರಯದಲ್ಲಿ ಧಾರ್ಮಿಕ ತಾತ್ವಿಕ ಭಕ್ತಿಪರ, ಸ್ತುತಿ ಪರ ಸಾಹಿತ್ಯ ಸೃಷ್ಟಿಯಾಯಿತು"[೮೭] ಎಂದು ಹಾಗಲವಾಡಿ ಅರಸು ಮನೆತನದ ಸಾಹಿತ್ಯ, ಸಂಸ್ಕೃತಿ ಪೋಷಿಸಿರುವುದನ್ನು ವಿವರಿಸಿದ್ದಾರೆ. ಮುಂದೆ ಹಾಗಲವಾಡಿ ಅರಸು ಮನೆತನದ ರಾಜರುಗಳು ಈ ಅರಸು ಮನೆತನದ ರಾಜಗುರುಗಳು ಮುಂತಾದ ವಿಷಯಗಳನ್ನು ವಿಸ್ತೃತವಾಗಿ ನಿರೂಪಿಸಿದ್ದಾರೆ. ಆಮೇಲೆ ಶೀರ್ಷಿಕೆಯ ವಸ್ತುವನ್ನು ಪರಿಚಯಿಸುತ್ತಾರೆ. "ಹಾಗಲವಾಡಿ ಅರಸು ಮನೆತನದ ಆಶ್ರಯದಲ್ಲಿದ್ದು ವೀರಶೈವ ಸಾಹಿತ್ಯ ಕೃಷಿ ಮಾಡಿದವರಲ್ಲಿ ಸೋಸಲೆ ರೇವಣಾರಾಧ್ಯರು ಅತ್ಯಂತ ಪ್ರಮುಖರೆನಿಸಿದ್ದಾರೆ. ಈ ಮನೆತನದ ಪ್ರಖ್ಯಾತ ಅರಸನಾದ ಹಿರಿಯ ಮುದಿಯಪ್ಪ ನಾಯಕನ (ಕ್ರಿ.ಶ. ೧೫೩೮ ೧೬,೧೭) ಆಸ್ಥಾನದಲ್ಲಿದ್ದ ವೀರಶೈವ ವಿದ್ವಾಂಸರ ಬಹುಶ್ರುತ ಪಂಡಿತರಾಗಿದ್ದ ರೇವಣಾರಾಧ್ಯರು ಅನುಭಾವಿ, ತತ್ವಜ್ಞಾನಿ, ದಾರ್ಶನಿಕ, ಕನ್ನಡ ಸಂಸ್ಕೃತ ಉಭಯ ಭಾಷಾ ಕೋವಿದರಾಗಿದ್ದರು. ಹಿರಿಯ ಮಠದ ಅಧಿಪತಿಯ ರೇಣುಕಾಚಾರ್ಯರ ವಂಶೋದ್ಭವ ಮನೆತನದವರು. ಇವರು ಈ ವೀರಶೈವ ಅರಸು ಮನೆತನದ ರಾಜಗುರುವೂ, ಧರ್ಮ ಗುರುವೂ ಆಗಿದ್ದರು."[೮೮] ಹೀಗೆ ಕವಿಗಳ ಇತಿವೃತ್ತವನ್ನು ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

ಸೋಸಲೆ ರೇವಣಾರಾಧ್ಯರು ರಚಿಸಿದ ಕೃತಿಗಳಲ್ಲಿ ದಾಖಲೆಗೊಂಡಿರುವ ವಂಶಪರಂಪರೆಯನ್ನು ಡಾ. ಬಿ. ಆರ್. ಅವರು ರೇಖಾಚಿತ್ರದ ಮೂಲಕ ದಾಖಲಿಸಿದ್ದು ಯಥೋಚಿತವಾಗಿದೆ.*

ಶಿವಯೋಗಿ ರೇವಣಾರಾಧ್ಯರು, ಸೋಸಲೆಗ್ರಾಮದವರು. ಉಭಯ ಭಾಷಾ ವಿಶಾರದರಾದ ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲಿಯೂ ಸಾಹಿತ್ಯ ರಚನೆ ಮಾಡಿದ್ದಾರೆ. ಅವರ ಒಟ್ಟು ಸಾಹಿತ್ಯವನ್ನು ಡಾ. ಬಿ.ಆರ್. ಹಿರೇಮಠ ಅವರು ವಿಂಗಡಿಸಿದ್ದು ಹೀಗಿದೆ.

೧. ಸಂಸ್ಕೃತ ಸಂಕಲನ - ಸಂಗ್ರಹ ಕೃತಿಗಳು (೧ ರಿಂದ ೮)

೨. ಕನ್ನಡ ವ್ಯಾಖ್ಯಾನ ಕೃತಿಗಳು (೯ ರಿಂದ ೧೯)

೩. ಕನ್ನಡ ಸೃಜನ ಕೃತಿಗಳು (೨೦ ರಿಂದ ೨೧)

ಈ ವಿಂಗಡಣೆ ಅಧ್ಯಯನದ ಅನುಕೂಲಕ್ಕಾಗಿ ಮಾಡಿದ್ದು, ಶಾಸ್ತ್ರೀಯ ಶಿಸ್ತು ಹಾಗೂ ಸಂಶೋಧನ ವಿಧಾನಗಳಿಗೆ ಅನುಗುಣವಾಗಿದೆ. ಸೋಸಲೆ ರೇವಣಾರಾಧ್ಯರ ಕೃತಿಗಳ ಆಶಯದ ಪಕ್ಷಿನೋಟವನ್ನು ಡಾ. ಬಿ.ಆರ್. ಹಿರೇಮಠರು ಸೊಗಸಾಗಿ ನಿರೂಪಿಸಿದ್ದಾರೆ. ಅನುಬಂಧದಲ್ಲಿ ಸೋಸಲೆ ರೇವಣಾರಾಧ್ಯರ ಅಪ್ರಕಟಿತ ಕೃತಿಗಳ ಹಸ್ತಪ್ರತಿಗಳ ಆದಿ, ಅಂತ್ಯ ಭಾಗಗಳನ್ನು ಆಯ್ದು ಓದುಗರ ಮಾಹಿತಿಗಾಗಿ ಒದಗಿಸಿರುವುದು ಅರ್ಥಪೂರ್ಣವಾಗಿದೆ. ಶಾರೀರ ಪ್ರಕಾಶಿಕೆ, ಅಂತಃಕರಣ ಪ್ರದೀಪಿಕೆ, ಸ್ವಸ್ವರೂಪ ಪ್ರದೀಪಿಕೆ, ಪರಮಾತ್ಮ ಪ್ರಕಾಶಿಕೆ, ನಿಜದೀಪ್ತಿ ಪ್ರಕಾಶಿಕೆ, ನಮಸ್ಕಾರ ಗದ್ಯಟೀಕೆ, ಶಿವಾಧಿಕ್ಯ ಶಿಖಾಮಣಿ ಟೀಕೆ, ಸಿದ್ಧಾಂತ ಶಿಖಾಮಣಿ ಟೀಕೆ, ಹೀಗೆ ೯ ಕೃತಿಗಳ ಆದಿ, ತಾತ್ಪರ್ಯ ಮತ್ತು ಅಂತ್ಯ ಭಾಗಗಳನ್ನು ಅನುಬಂಧದಲ್ಲಿ ಕೊಟ್ಟಿರುವುದು ಶ್ರೀಯುತರ ಸಾಹಿತ್ಯದ ಸತ್ವವನ್ನು ಅರಿತುಕೊಳ್ಳಲು ಸಹೃದಯರಿಗೆ ನೆರವಾಗುತ್ತದೆ. ಅಪ್ರಕಟಿತ ಕೃತಿಗಳನ್ನು ಅಧ್ಯಯನಿಸಲು ಹಸ್ತಪ್ರತಿಗಳನ್ನು ಪರಿಶೀಲಿಸುವುದು ಅವುಗಳ ವಿಶಿಷ್ಟತೆಯನ್ನು ದಾಖಲಿಸುವುದು ಪರಿಶ್ರಮ ಮತ್ತು ತಾಳ್ಮೆಯ ಕಾರ್ಯವಾಗಿದೆ. ಸತತ ಪರಿಶ್ರಮ, ಅಧ್ಯಯನಾಸಕ್ತಿ, ಸಂಸ್ಕೃತಿ ಶ್ರದ್ಧೆ, ಸಂಶೋಧನೆ ನಿಷ್ಠೆಗೆ ಇನ್ನೊಂದು ಹೆಸರೇ ಡಾ. ಬಿ. ಆರ್. ಎಂಬಂತೆ ಇಲ್ಲಿ ಕಂಡುಬರುತ್ತದೆ.

**೧. ಹರ್ಡೀಕರ ಮಂಜಪ್ಪನವರ ಮುದ್ರಣ ಪ್ರಕಾಶನ -ಪ್ರಸಾರ ಕಾಯಕ :**

ಇದು ವೀರಶೈವ ಸಂಪದದ ೫ನೇ ಲೇಖನವಾಗಿದೆ. ೧೬ ಪುಟಗಳ ರಚನೆ ಇದಾಗಿದೆ. ಹರ್ಡೀಕರ ಮಂಜಪ್ಪನವರು ಕರ್ನಾಟಕದ ಗಾಂಧಿ ಎಂದೇ ಖ್ಯಾತಿ ಪೆತ್ತವರು. ಬಹುಮುಖ ಪ್ರತಿಭೆಯ ವ್ಯಕ್ತಿತ್ವದ ಅದಮ್ಯ ಚೇತನವಾಗಿದ್ದವರು. ಸ್ವತಂತ್ರ ಆಂದೋಲನ, ರಾಷ್ಟ್ರ, ಸಮಾಜ, ಶೈಕ್ಷಣಿಕ, ಸಾಹಿತ್ಯಿಕ ಸೇವೆ, ಪತ್ರಿಕೋದ್ಯಮ ಮೊದಲಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಆಧುನಿಕ ವಚನ ಸಾಹಿತ್ಯ, ಜೀವನ ಚರಿತ್ರೆ, ಆತ್ಮಚರಿತ್ರೆ, ಮಕ್ಕಳ ಸಾಹಿತ್ಯ ಮುಂತಾದ ಹತ್ತು ಹಲವು ವಿಷಯಗಳಿಗೆ ಆದ್ಯ ಪುರುಷರಾಗಿ ಗಮನಸೆಳೆದಿದ್ದಾರೆ. ಒಂದು ವಿಶ್ವವಿದ್ಯಾಲಯ ಮಾಡಬಹುದಾದ ಕಾರ್ಯವನ್ನು ಏಕ ವ್ಯಕ್ತಿ ನೆಲೆಯಲ್ಲಿ ಮಾಡಿರುವುದು ಅದ್ಭುತ ಸಾಧನೆ. ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತುತ ಲೇಖನದಲ್ಲಿ ಮಂಜಪ್ಪನವರ ವ್ಯಕ್ತಿತ್ವ ಮುದ್ರಣ ಪ್ರಕಾಶನ ಪ್ರಸಾರ ಕಾಯಕ ಕುರಿತಾಗಿ ವಿವರಿಸಿದ್ದಾರೆ. "ಹಲವು ಕ್ಷೇತ್ರಗಳಲ್ಲಿ ಪ್ರಾಮಾಣಿಕತೆಯಿಂದ ದುಡಿಯುವ ಮೂಲಕ ಆ ಕ್ಷೇತ್ರಗಳಿಗೆ ಏಕಕಾಲಕ್ಕೆ ಘನತೆ ಮತ್ತು ಪಾವಿತ್ರ್ಯತೆಗಳನ್ನು ತಂದುಕೊಟ್ಟವರು. ತಮ್ಮ ನೈಷ್ಠಿಕ ಬ್ರಹ್ಮಚರ್ಯದ ತೇಜಸ್ಸು, ಅಪಾರವಾದ ಜ್ಞಾನಾನುಭವಗಳನ್ನು ಲೋಕಹಿತ, ಜನಹಿತ ಕಾರ್ಯಗಳಿಗೆ ಸರ್ವ ಸಮರ್ಪಣಾಭಾವದಿಂದ

ಧಾರೆ ಎರೆದರು. ಜನಹಿತ ವಿಚಾರ -ಆಚಾರಗಳ ಪ್ರಚಾರಕ್ಕಾಗಿ ಮಂಜಪ್ಪನವರು ಬರವಣಿಗೆಯನ್ನು ಕೈಗೆತ್ತಿಕೊಂಡರು. ಅದರ ಯಶಸ್ಸಿಗಾಗಿ ಮುದ್ರಕರಾಗಿ, ಪ್ರಕಾಶಕರಾಗಿ, ಪ್ರಸಾರಕರಾಗಿ ಮಂಜಪ್ಪನವರು ಮಾಡಿದ ಪ್ರಯತ್ನ ಅನನ್ಯವಾದದ್ದು. ಅಸಾಧಾರಣವಾದದ್ದು."[೮೯] ಇಲ್ಲಿ ಡಾ. ಬಿ.ಆರ್. ಅವರು ಹರ್ಡೀಕರ ಮಂಜಪ್ಪನವರ ವ್ಯಕ್ತಿ ವಿಶಿಷ್ಟತೆಯನ್ನು ಅವರ ಕಾರ್ಯ ಚಟುವಟಿಕೆಗಳ ವೈಖರಿಯನ್ನು ಪರಿಚಯಿಸಿದ್ದು ಪರಿಣಾಕಾರಿಯಾಗಿದೆ.

ಮುಂದೆ ಮುದ್ರಣ ಯಂತ್ರ, ಗ್ರಂಥ ಪ್ರಕಟಣೆಯ ಇತಿಹಾಸ ಮುದ್ರಣದ ಸೌಕರ್ಯ, ಮುದ್ರಕನಾಗಿ ಮಾಡಿದ ಅನುಪಮ ಸಾಧನೆ, 'ಧನುರ್ಧಾರಿ' ಪತ್ರಿಕೆ ಆರಂಭ, ಯಶಸ್ವಿಯಾಗಿ ಮುನ್ನಡೆ ಮೊದಲಾದವುಗಳನ್ನು ವಿವರಿಸಿದ್ದಾರೆ. "ಮಂಜಪ್ಪನವರು ಮುದ್ರಣ ಯಂತ್ರ ಸ್ಥಾಪನೆಗಾಗಿ ನಡೆಸಿದ ಹೋರಾಟ, ಸಾಹಸ, ಅಲೆದಾಟ, ಅನುಭವಿಸಿದ ಸಂಕಟ, ಸೋಲು, ಹೊಂದಿದ ಆಸಕ್ತಿ, ತೋರಿದ ಉತ್ಸಾಹಗಳು ನಮ್ಮನ್ನು ಬೆರಳು ಕಚ್ಚಿಸುತ್ತವೆ. ಯಂತ್ರದೊಂದಿಗೆ ಯಂತ್ರವಾಗಿ ನಿಂತು. ರಾತ್ರಿಯನ್ನು ಹಗಲನ್ನಾಗಿಸಿ ಕಾರ್ಯ ಮಾಡಿರುವುದು ಗಮನಾರ್ಹವೆನಿಸಿದೆ."[೯೦] ಈ ಮಾತುಗಳು ಮಂಜಪ್ಪನವರು ಮುದ್ರಣ ಯಂತ್ರ ಸ್ಥಾಪನೆಗೆ ಮಾಡಿದ ಹೋರಾಟಕ್ಕೆ ಪಟ್ಟ ಪರಿಶ್ರಮಕ್ಕೆ ಸಾಕ್ಷಿಯಾಗಿವೆ.

ಪ್ರಕಾಶಕರಾಗಿ ಮಂಜಪ್ಪನವರು ಮಾಡಿದ ಕಾರ್ಯವನ್ನು ವಿವರಿಸಿದ್ದಾರೆ. ಧನುರ್ಧಾರಿ, ಉದ್ಯೋಗ, ಶರಣಸಂದೇಶ ಮೊದಲಾದ ಪತ್ರಿಕೆಗಳನ್ನು ಪ್ರಕಾಶನಗೊಳಿಸಿ ನಾಡಿನ ಜನರಿಗೆ ತಲುಪಿಸಿದ ಶ್ರೇಯಸ್ಸು ಮಂಜಪ್ಪನವರದಾಗಿದೆ. ಪತಿತೋದ್ಧಾರ ಪುಸ್ತಕವನ್ನು ನಿಜಗುಣಶಿವಯೋಗಿಗಳು ಹಾಗೂ ಸರ್ಪಭೂಷಣ ಶಿವಯೋಗಿಗಳ ಆಯ್ದ ಹಾಡುಗಳನ್ನು, ಬಸವೇಶ್ವರರ ಕೆಲವು ವಚನಗಳನ್ನು ಮಂಜಪ್ಪನವರು ಪ್ರಕಟಿಸಿದ್ದು ಅವರ ಪ್ರಕಾಶನದ ಆರಂಭದ ಚಟುವಟಿಕೆಯಾಗಿದೆ. ಮಹಾಯುದ್ಧದಿಂದಾಗಿ ಕಾಗದದ ಬೆಲೆ ವಿಪರೀತ ಏರಿದಾಗ ೧೯೧೮ರಿಂದ ದೊಡ್ಡ ಗ್ರಂಥಗಳಿಗೆ ಬದಲಾಗಿ ಚಿಕ್ಕ ಗ್ರಂಥಗಳನ್ನು ಪ್ರಕಟಿಸಿದರು. ಹಾಳೆ ಸಿಗದಿರುವಾಗ ಕೈ ಕಾಗದ ಬಳಸಿ, ಸ್ವತಃ ಕೈಯಿಂದ ಕಾಗದ ತಯಾರಿಸಿ ಪ್ರಕಟಣೆ ನಿಲ್ಲದಂತೆ ಕಾಳಜಿ ವಹಿಸಿದರು. ಎಂತಹ ಕಠಿಣ ಪ್ರಸಂಗದಲ್ಲಿಯೂ ವರ್ಷಕ್ಕೊಂದು ಪುಸ್ತಕ ಪ್ರಕಟಿಸುತ್ತ ಬಂದಿರುವುದು ಗಮನಾರ್ಹವಾಗಿದೆ.

೧೯೨೦ರಿಂದ ಗ್ರಂಥರಚನೆ ಮತ್ತು ಪ್ರಕಟಣೆ ಮಂಜಪ್ಪನವರ ಪರಮಧೇಯವಾಗಿ ಪರಿಣಮಿಸಿತು. ತಮ್ಮ ಧೇಯೋದ್ದೇಶದ ಸಾಧನೆಗಾಗಿ ರಾಷ್ಟ್ರಜೀವನ ಗ್ರಂಥಮಾಲೆ, ಸತ್ಯಾಗ್ರಹ ಗ್ರಂಥಾವಳಿ, ಜ್ಞಾನೋದಯ ಗ್ರಂಥಮಾಲೆ, ಜನಜಾಗೃತಿ ಗ್ರಂಥಮಾಲೆ, ಮಕ್ಕಳ ಸಾಹಿತ್ಯಮಾಲೆ, ಪ್ರಗತಿ ಗ್ರಂಥಮಾಲೆ, ವೀರಶೈವ ವಿದ್ಯಾಲಯ ಗ್ರಂಥಮಾಲೆಯನ್ನು ರೂಪಿಸಿಕೊಂಡು ಕಾರ್ಯಪ್ರವೃತ್ತರಾದರು. ಈ ಗ್ರಂಥ ಮಾಲೆಗಳ ಮೂಲಕ ಪ್ರಕಟವಾಗಿರುವ ಪುಸ್ತಕಗಳ ವಿವರಣೆಯನ್ನು ಡಾ. ಬಿ. ಆರ್. ಅವರು ವಿಸ್ತೃತವಾಗಿ

ಪರಿಚಯಿಸಿದ್ದಾರೆ. "ಗ್ರಂಥ ಪ್ರಕಟಣೆ ಸುಲಭದ ಮತ್ತು ಸಾಮಾನ್ಯರ ಕೆಲಸವಲ್ಲ. ಈ ಕೆಲಸದಲ್ಲಿ ತೊಡಗಿಸಿಕೊಂಡ ಮಂಜಪ್ಪನವರಿಗೆ ಅದು ಲಾಭದ ಮಾರ್ಗವಲ್ಲ. ಜನಹಿತದ ಮಾಧ್ಯಮ. ಈ ಕ್ಷೇತ್ರದಲ್ಲಿ ವಿಶ್ವವಿದ್ಯಾಲಯಗಳಂತಹ ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಮಿಗಿಲಾದ ಪ್ರಕಟಣೆ ಕಾರ್ಯವನ್ನು ಇವರು ವೈಯಕ್ತಿಕವಾಗಿ ಮಾಡಿ ತೋರಿಸಿದರು. ಖಾಸಗಿ ಮಟ್ಟದಲ್ಲಿ ಅವರು ಮಾಡಿದ ಗ್ರಂಥ ಪ್ರಕಟಣೆ ಅನುಪಮ ಮತ್ತು ಅನುಕರಣೀಯವಾದುದಾಗಿದೆ."[೬೧] ಈ ಮಾತುಗಳು ಹರ್ಡೇಕರ ಮಂಜಪ್ಪನವರು ಪ್ರಕಾಶಕರಾಗಿ ಮಾಡಿದ ಕಾರ್ಯದ ಮೇಲೆ ಬೆಳಕು ಚೆಲ್ಲುತ್ತವೆ.

ಮಂಜಪ್ಪನವರು ಮುದ್ರಕರಾಗಿ, ಪ್ರಕಾಶಕರಾಗಿ ಮಾಡಿದ ಇನ್ನೊಂದು ಮಹತ್ವದ ಕಾರ್ಯವೆಂದರೆ ಪ್ರಸಾರ. ಮಂಜಪ್ಪನವರು ಗ್ರಂಥ ಪ್ರಸಾರಕ್ಕಾಗಿ ಮಾಡಿದ ಕಾರ್ಯ ಅದ್ಭುತವೂ ಅಮೂಲ್ಯವೂ ಆಗಿದೆ. ೧೯೧೫ರಲ್ಲಿ ಸ್ವಕರ್ತವ್ಯಸಿದ್ಧಾಂತದ ಒಂದು ಸಾವಿರ ಪ್ರತಿಗಳನ್ನು ಪ್ರಕಟಿಸಿ ಪ್ರಸಾರಗೊಳಿಸಿದರು. ಮಕ್ಕಳಿಗಾಗಿ ಬರೆದ ಪುಲಕೇಶಿ, ವಿವೇಕಾನಂದ, ಲಾಲಾಲಜಪತರಾಯ್ ಗ್ರಂಥಗಳ ಪ್ರಕಟಣೆ, ಏಕಲವ್ಯ, ಕಚ ದೇವಯಾನಿ, ಸುಕಲಾದೇವಿ, ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ, ಶರಣಬಸವೇಶ್ವರ ಮುಂತಾದ ಕೃತಿಗಳ ತಲಾ ೨೦೦೦ ಕೃತಿಗಳನ್ನು ಪ್ರಕಟಿಸಿ ಪ್ರಸಾರಗೊಳಿಸಿದ್ದು ಅದ್ವಿತೀಯವಾಗಿದೆ. "೧೯೨೪ರ ಬೆಳಗಾವಿ ರಾಷ್ಟ್ರೀಯ ಕನ್ನಡ ಸಭೆಯಲ್ಲಿ 'ಸತ್ಯಾಗ್ರಹಿ ಬಸವೇಶ್ವರ' ಗ್ರಂಥದ ಸಾವಿರಾರು ಪ್ರತಿಗಳನ್ನು ಉಚಿತವಾಗಿ ಹಂಚಿದರು. ಬಸವ ತತ್ವಗಳು ಮಹಾತ್ಮಾ ಗಾಂಧೀಜಿಯವರಿಗೆ, ಪರ ಪ್ರಾಂತದವರಿಗೂ ತಿಳಿಯಲೆಂಬ ಉದ್ದೇಶದಿಂದ ಹಿಂದಿ, ಮರಾಠಿ ಭಾಷೆಗಳಲ್ಲಿ ಅಚ್ಚಿಸಿದ್ದರು. ಬಸವ ಸಂದೇಶದ ೫೦ ಸಾವಿರ ಪ್ರತಿಗಳು ಮಾರಾಟವಾದವು."[೬೨] ಬಸವ ಸಂದೇಶದ ಐವತ್ತು ಸಾವಿರ ಪ್ರತಿಗಳು ಮಾರಾಟವಾದ ಸಂದರ್ಭದಲ್ಲಿ ಹರ್ಡೀಕರ ಮಂಜಪ್ಪನವರು - "ಕರ್ನಾಟಕದಲ್ಲಿ ಒಂದು ಅಭೂತಪೂರ್ವ ಪ್ರಸಂಗ"[೬೩] ಎಂದು ಉದ್ಗರಿಸಿದ್ದು ಯಥೋಚಿತವಾಗಿದೆ ಎಂದು ಬಿ.ಆರ್. ಹಿರೇಮಠ ಅವರು ಹರ್ಡೀಕರ ಮಂಜಪ್ಪನವರ ಮಾತನ್ನೇ ಉಲ್ಲೇಖಿಸಿದ್ದು ಸಮಯೋಚಿತವಾಗಿದೆ.

ಮಂಜಪ್ಪನವರು ೧೯೧೫ರಿಂದ ೨೫ರ ವರೆಗೆ ೧೦ ವರ್ಷದಲ್ಲಿ ಪ್ರಸಾರ ಮಾಡಿದ ಗ್ರಂಥಗಳ ಸಂಖ್ಯೆ ಮತ್ತು ಪತ್ರಿಕೆಗಳ ಅಂಕಿ ಸಂಖ್ಯೆಯನ್ನು ಡಾ. ಬಿ. ಆರ್. ಅವರು ದಾಖಲಿಸಿದ್ದಾರೆ. ಒಟ್ಟು ೬೫ ಸಾವಿರ ಪ್ರತಿಗಳು ಪ್ರಸಾರವಾಗಿದ್ದು ವಿಶೇಷ ಅಂಶವಾಗಿದೆ.

ಬುದ್ಧಿಯ ಮಾತು, ಸ್ತ್ರೀ ನೀತಿ ಸಂಗ್ರಹ, ರಾಮತೀರ್ಥರ ಉಪನ್ಯಾಸ, ಆರೋಗ್ಯ ಜೀವನ ಮುಂತಾದ ೪೦ ಸಣ್ಣ ಮತ್ತು ದೊಡ್ಡ ಗ್ರಂಥಗಳ ಮೂರು ಲಕ್ಷ ಪ್ರತಿಗಳು ಪ್ರಸಾರವಾದ ಸಂಗತಿಯು ಬೆರಗುಗೊಳಿಸುವಂತಹುದು. ಈ ಎಲ್ಲ ಅಂಶಗಳನ್ನು ಡಾ. ಬಿ.ಆರ್. ಅವರು ಸುಧಾರಣೆಗಳೊಂದಿಗೆ ನಿರೂಪಿಸಿದ್ದಾರೆ. "ಪ್ರಕಾಶನಕ್ಕಾಗಿ ಸಾಕಷ್ಟು ಧನಸಹಾಯ, ಮಾರಾಟ ವ್ಯವಸ್ಥೆಗೆ ಮಳಿಗೆ ಸಿಬ್ಬಂದಿ,

ಜಾಹೀರಾತು ಪ್ರಕಟಣೆಗಳಿದ್ದರೂ ಒಂದು ಗ್ರಂಥದ ನೂರು ಪ್ರತಿಗಳೂ ಮಾರಾಟವಾಗುವುದು ಇಂದು ದುಸ್ತರವಾಗಿದೆ. ಪ್ರಕಟವಾದ ಎಲ್ಲ ಗ್ರಂಥಗಳೂ ಬೀಗಮುದ್ರೆ ಬಿಗಿಸಿಕೊಂಡು ಸಂಗ್ರಹ ಕೊಠಡಿಯಲ್ಲಿ ಉಳಿಯುವ ಪರಿಸ್ಥಿತಿ ಇಂದು ಬಂದೊದಗಿದೆ. ಆದರೆ ಅಷ್ಟೊಂದು ಧನ ಸಹಾಯವಿಲ್ಲದೆ ಮಾರಾಟ ವ್ಯವಸ್ಥೆ, ಸಿಬ್ಬಂದಿ ಸಹಾಯ, ಜಾಹೀರಾತು, ಪ್ರಕಟಣೆ ಅನುಕೂಲಗಳಿಲ್ಲದಿದ್ದರೂ ಮಂಜಪ್ಪನವರು ೩ ಲಕ್ಷ ಪ್ರತಿಗಳ ಪ್ರಸಾರ ಕಾರ್ಯ ಮಾಡಿದುದು ಅಸದೃಷವೆನಿಸಿದೆ."[೯೪] ಈ ಮಾತುಗಳು ಅಂದಿನ ಮತ್ತು ಇಂದಿನ ಕಾಲಕ್ಕೆ ಹೋಲಿಸಿ ತೌಲನಿಕವಾಗಿ ವಿಶ್ಲೇಷಿಸಿದ್ದು, ವಸ್ತುನಿಷ್ಠವಾಗಿ ವಿವೇಚಿಸಿರುವುದು ಗಮನಾರ್ಹವಾಗಿದೆ. ವ್ಯಕ್ತಿ, ಕಾಲ, ಪ್ರದೇಶ, ಪರಿಸರ ಮುಂತಾದ ಅಂಶಗಳನ್ನು ಪರಸ್ಪರ ಹೋಲಿಸಿ ವಾಸ್ತವಿಕ ಸಂಗತಿಗಳನ್ನು ನಿರ್ಭಿಡೆಯಿಂದ ದಾಖಲಿಸಿರುವುದು ಸಂಶೋಧಕನ ನೇರ ನುಡಿಗೆ ಉತ್ತಮ ಉದಾಹರಣೆಯಾಗಿದೆ.

"ಮಂಜಪ್ಪನವರು ಮಾಡಿದ ಪ್ರಸಾರವೆಂದರೆ ಸಮಾಜ ವಿಮರ್ಶೆ, ಆಧುನಿಕ ಆಲೋಚನೆಗಳ ಪ್ರಸಾರಕಾರ್ಯವೇ ಆಗಿದೆ. ಸಂಸ್ಕೃತಿಯ ಸಂವರ್ಧನೆಯ ಪ್ರಸಾರಕಾರ್ಯವಾಗಿದೆ. ಈ ಕಾರ್ಯಕ್ಕಾಗಿ ಎಣ್ಣೆ ಬತ್ತಿಯಾಗಿ ಉರಿದು ನಾಡಿಗೆ ಬೆಳಕಾದವರು, ಮುದ್ರಣ ಪ್ರಕಾಶನ ಪ್ರಸಾರಗಳ ತ್ರಿವೇಣಿ ಸಂಗಮವಾಗಿದ್ದ ಮಂಜಪ್ಪನವರು ಆಯಾ ಕ್ಷೇತ್ರಗಳನ್ನು ಆಳಿದವರು, ಬಾಳಿದವರು"[೯೫] ಎಂದು ಹರ್ಡೇಕರ ಮಂಜಪ್ಪನವರ ವ್ಯಕ್ತಿತ್ವ ಮತ್ತು ಚಟುವಟಿಕೆಗಳಿಗೆ ಹೊಸ ಭಾಷ್ಯ ಬರೆದಿದ್ದಾರೆ. ಕನ್ನಡ ಸಂಶೋಧನಾ ಸಾಹಿತ್ಯದಲ್ಲಿ ಇದೊಂದು ಮಹತ್ವದ ಲೇಖನವಾಗಿದೆ.

**ಸ.ಸ. ಬಸವನಾಳರ ಕಾವ್ಯ ಶಾಸ್ತ್ರ ಕೃತಿಗಳ ಪರಿಷ್ಕರಣ:**

ಇದು ವೀರಶೈವ ಸಂಪದದ ೨ನೆಯ ಹಾಗೂ ಕೊನೆಯ ಲೇಖನವಾಗಿದೆ. ೪೦ ಪುಟಗಳ ಸುದೀರ್ಘ ಲೇಖನವಿದು. ಎಸ್.ಎಸ್. ಬಸವನಾಳರು ವೀರಶೈವ ಪುಣ್ಯ ಪುರುಷರಲ್ಲಿ ಒಬ್ಬರಾಗಿದ್ದಾರೆ. ಬಸವನಾಳರು ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ ಪತ್ರಿಕೋದ್ಯಮ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ ಸಲ್ಲಿಸಿದ ಸೇವೆ ಅಮೋಘವಾಗಿದೆ. ಬಸವನಾಳರು "ತಮ್ಮ ಬಹುಶ್ರುತ ಪ್ರತಿಭೆ ಕ್ರಿಯಾಶೀಲ ಪಾಂಡಿತ್ಯ, ಬಹುಶಿಸ್ತೀಯ ಉತ್ಪತ್ತಿ, ಪಾರದರ್ಶಕ ವ್ಯಕ್ತಿತ್ವ, ಉದಾತ್ತ ಬದುಕು, ಪವಿತ್ರ ಸಂಕಲ್ಪಗಳಿಂದ ವಿವಿಧ ಕ್ಷೇತ್ರಗಳಲ್ಲಿ ಮನಮುಟ್ಟಿ ದುಡಿಯುವುದರ ಮೂಲಕ ಕನ್ನಡವನ್ನು, ಕನ್ನಡಿಗರನ್ನು ಕರ್ನಾಟಕವನ್ನು ಬೆಳೆಸಿದ ಬೆಳಕಾಗಿಸಿದ ಪುಣ್ಯ ಚೇತನರೆನಿಸಿದ್ದಾರೆ."[೯೬] ಹೀಗೆ ಡಾ. ಬಿ.ಆರ್. ಅವರು ಆರಂಭದಲ್ಲಿ ಬಸವನಾಳರ ಭವ್ಯ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ.

"ಬಸವನಾಳರ ಜೀವನನಿಷ್ಠೆ, ಕಾಯಕನಿಷ್ಠೆ, ಸಮಾಜಸೇವೆ ಸಾಹಿತ್ಯ ಧಾರ್ಮಿಕ ಸೇವೆಗಳು ಸಾಂಸ್ಕೃತಿಕ ಸಂಘಟನೆ ಪತ್ರಿಕೋದ್ಯಮದ ಸಾಧನೆಗಳು ಕನ್ನಡಿಗರಿಗೆ ಇಂದಿಗೂ ಆದರ್ಶ ಪ್ರಾಯವಾಗಿವೆ. ಅನುಕರಣೀಯವೆನಿಸಿವೆ"[೯೭] ಎನ್ನುವಲ್ಲಿ ಬಸವನಾಳರ ಸಾಧನೆಯನ್ನು ಬಿ.ಆರ್. ಅವರು

ಪರಿಣಾಮಕಾರಿಯಾಗಿ ದಾಖಲಿಸಿದ್ದಾರೆ. "ಬಸವನಾಳರು ಹಲವು ಕ್ಷೇತ್ರಗಳಲ್ಲಿ ದುಡಿದವರು. ಕನ್ನಡ ಸಾಹಿತ್ಯ ಸಂಶೋಧನೆ, ವಿಮರ್ಶೆ, ಗ್ರಂಥ ಸಂಪಾದನಾ ಮೊದಲಾದ ಕ್ಷೇತ್ರಗಳಲ್ಲಿ ಅವಿಸ್ಮರಣೀಯ ಕಾರ್ಯ ಮಾಡಿದ್ದಾರೆ. ಬಸವನಾಳರ ಗ್ರಂಥ ಪರಿಷ್ಕರಣ ರಚನೆ ನಡುಗನ್ನಡ, ಷಟ್ಪದಿ ಕಾವ್ಯ, ಅನುಭಾವ ಸಾಹಿತ್ಯ, ರಗಳೆ, ಶತಕ, ಶಾಸ್ತ್ರ ಕೃತಿ ಮುಂತಾದ ವೈವಿಧ್ಯಮಯ ಕ್ಷೇತ್ರಗಳಲ್ಲಿ ದುಡಿದು ವೈಶಿಷ್ಟ್ಯಪೂರ್ಣ ಕೊಡುಗೆ ನೀಡಿದ್ದಾರೆ. 'ಗ್ರಂಥ ಸಂಪಾದನೆಯ ಶಾಸ್ತ್ರೀಯ ವಿಧಾನಗಳು ರೂಪುಗೊಳ್ಳದ ಕಾಲದಲ್ಲಿ ಬಸವನಾಳರು ಕೈಗೊಂಡ ಕಾವ್ಯ ಶಾಸ್ತ್ರ ಪರಿಷ್ಕರಣ ಕಾರ್ಯ, ಪ್ರಾಮಾಣಿಕ ಪರಿಶ್ರಮ, ದಿಟ್ಟ ಸಾಹಸದ ಪ್ರತೀಕವೆನಿಸಿದೆ."[೮೮] ಈ ಮಾತುಗಳು ಬಸವನಾಳರ ಗ್ರಂಥ ಸಂಪಾದನಾ ಪರಿಣಿತಿಗೆ ಸಾಕ್ಷಿಯಾಗಿವೆ. ಬಸವನಾಳರ ಸಾಹಿತ್ಯ ಚಟುವಟಿಕೆಗಳನ್ನು ಪರಿಷ್ಕರಣಾ ಕಾರ್ಯವನ್ನು ಒಟ್ಟು ಐದು ವಿಧವಾಗಿ ಡಾ. ಬಿ. ಆರ್. ಅವರು ವಿಂಗಡಿಸಿದ್ದಾರೆ.

೧. ಪುರಾಣಕಾವ್ಯ, ಪುರಾಣ ಸಾಹಿತ್ಯ ಪರಿಷ್ಕರಣ, ಇದರಲ್ಲಿ ಪ್ರಭುಲಿಂಗಲೀಲೆ, ಶಬರ ಶಂಕರ ವಿಳಾಸಂ, ಚೆನ್ನಬಸವ ಪುರಾಣಂ ಸಮಾವೇಶಗೊಂಡಿವೆ.

೨. ರಗಳೆ ಸಾಹಿತ್ಯ ಪರಿಷ್ಕರಣ ಇದರಲ್ಲಿ ರೇವಣ ಸಿದ್ಧೇಶ್ವರ ರಗಳೆ ಪರಿಷ್ಕರಣವಿದೆ.

೩. ಶತಕ ಸಾಹಿತ್ಯ ಪರಿಷ್ಕರಣ ಇದರಲ್ಲಿ ಹರಿಹರನ ರಕ್ಷಾಶತಕ ಪಂಪಾಶತಕಗಳು ಅಡಕವಾಗಿವೆ.

೪. ಅನುಭಾವ ಸಾಹಿತ್ಯ ಪರಿಷ್ಕರಣ ಇದರಲ್ಲಿ ಕೈವಲ್ಯವಲ್ಲರಿ, ಕೈವಲ್ಯ ದರ್ಪಣ, ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು ಒಳಗೊಂಡಿವೆ.

೫. ಶಾಸ್ತ್ರ ಸಾಹಿತ್ಯ ಪರಿಷ್ಕರಣ ಇದರಲ್ಲಿ ಕಾವ್ಯಾವಲೋಕನಂ ಮತ್ತು ಕರ್ನಾಟಕ ಶಬ್ದಾನುಶಾಸನ ಪ್ರವೇಶಿಕೆ ಕೃತಿಗಳ ಸಂಪಾದನೆ ಇದೆ.

ಈ ರೀತಿಯಾಗಿ ೫ ವಿಭಾಗಗಳಲ್ಲಿ ಬಸವನಾಳರ ಗ್ರಂಥ ಪರಿಷ್ಕರಣವನ್ನು ಡಾ. ಬಿ. ಆರ್. ಅವರು ವಿವೇಚಿಸಿದ್ದಾರೆ. ಇದೊಂದು ವಿಸ್ತೃತವಾದ ಲೇಖನವಾಗಿದೆ. ಬಸವನಾಳರು ಗ್ರಂಥ ಸಂಪಾದನೆಯಲ್ಲಿ ಬರೆದ ಪ್ರಸ್ತಾವನೆಯನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. ಗ್ರಂಥ ಕರ್ತೃ, ಕರ್ತೃವಿನ ಕಾಲ, ಕಥಾವಸ್ತು, ಕವಿಕಾವ್ಯ ವಿಮರ್ಶೆ, ಚಾರಿತ್ರಿಕ ನಿರೂಪಣೆ, ಭಾಷೆ ಶೈಲಿ, ಕೊನೆಯ ಮಾತು. ಹೀಗೆ ಉಪಶೀರ್ಷಿಕೆಗಳ ಅಡಿಯಲ್ಲಿ ವಿಷಯವನ್ನು ಸಾದ್ಯಂತವಾಗಿ ಸಾಧಾರಗಳೊಂದಿಗೆ ವಿವರಿಸಿರುವುದನ್ನು ಡಾ. ಹಿರೇಮಠ ಅವರು ಪ್ರಸ್ತಾಪಿಸಿ ಗ್ರಂಥ ಸಂಪಾದನೆಯ ಶಾಸ್ತ್ರೀಯ ಶಿಸ್ತನ್ನು ಪರಿಚಯಿಸಿದ್ದಾರೆ. "ಕನ್ನಡ ಗ್ರಂಥ ಪರಿಷ್ಕರಣ ಕಾರ್ಯ ಬಸವನಾಳರ ಮೂಲಕ ಸಾರ್ಥಕತೆಯನ್ನು ಪಡೆದುಕೊಳ್ಳುವಂತಾಯಿತು. ಬಸವನಾಳರ ಪ್ರಯತ್ನದಿಂದ ಪ್ರಾಚೀನ ಕನ್ನಡ ಗ್ರಂಥಗಳ ಪ್ರಕಟಣೆಗೆ ಹೊಸ ಆವಿಷ್ಕಾರ ಪ್ರಾಪ್ತವಾಯಿತು"[೮೯] ಎಂದು ಹೇಳಿರುವುದು ಬಸವನಾಳರ ಗ್ರಂಥ ಸಂಪಾದನೆಗೆ ಅಧಿಕೃತ ಮಾನ್ಯತೆ

ಲಭಿಸಿದಂತಾಗಿದೆ. ಅನುಬಂಧದಲ್ಲಿ ತಾಳೆ ಓಲೆ ಪ್ರತಿಗಳು, ಕೈ ಬರಹದ ಕಾಗದದ ಪ್ರತಿ, ಮುದ್ರಿತ ಪ್ರತಿಗಳು, ಅವುಗಳಿಗೆ ಸೂಚನೆಯು, ಸಂಕ್ಷಿಪ್ತ ಸೌಂಜ್ಞೆ ವಿವರ, ಪಾಠಾಂತರಗಳು, ಒಪ್ಪೋಲೆ, ಟಿಪ್ಪಣಿಗಳು, ಲಘುಟಿಪ್ಪಣಿ ಮುಂತಾದ ಹಲವಾರು ವಿಷಯಗಳನ್ನು ಈ ಲೇಖನದಲ್ಲಿ ಪ್ರಸ್ತಾಪಿಸುವುದರ ಮೂಲಕ ಗ್ರಂಥ ಸಂಪಾದನೆಯ ಪ್ರಾಥಮಿಕ ಪಾಠವನ್ನು ಡಾ. ಬಿ. ಆರ್. ಹಿರೇಮಠ ಅವರು ಕಟ್ಟಿಕೊಟ್ಟಿದ್ದಾರೆ. ತುಂಬ ಪರಿಶ್ರಮದ ಆಳವಾದ ಅಧ್ಯಯನ ಹಾಗೂ ಬಹುಶ್ರುತತೆ ಲೇಖನದುದ್ದಕ್ಕೂ ಗೋಚರವಾಗುತ್ತದೆ.

ವ್ಯಾಸಂಗ ತರಂಗವು ಡಾ. ಬಿ. ಆರ್. ಹಿರೇಮಠ ಅವರಿಂದ ರಚನೆಗೊಂಡಿರುವ ಮತ್ತೊಂದು ಸಂಶೋಧನಾ ಸಂಕಲನವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ವ್ಯಾಸಂಗ ತರಂಗವನ್ನು ೨೦೦೪ರಲ್ಲಿ ಪ್ರಕಟಿಸಿದೆ. ಪ್ರಸ್ತುತ ಕೃತಿಯು ೧೮೮ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದ್ದು ಕುವೆಂಪು ಶತಮಾನೋತ್ಸವ ಮಾಲಿಕೆಯಲ್ಲಿ ಪ್ರಕಟಿತವಾಗಿದೆ. ಇದರಲ್ಲಿ ಮುಖ್ಯವಾಗಿ ೧೪ ಲೇಖನಗಳಿವೆ. ವಿವಿಧ ಸಂದರ್ಭ ಮತ್ತು ವಿಭಿನ್ನ ಕಾರಣಗಳಿಗಾಗಿ ವಿದ್ವತ್ ಪತ್ರಿಕೆಗಳಿಗೂ ಬರೆದ ಲೇಖನಗಳು ಇವಾಗಿವೆ. ಇಲ್ಲಿಯ ಬಹುಪಾಲು ಲೇಖನಗಳು ಲೇಖಕರಿಗೆ ಪ್ರಿಯವಾದ ಶಾಸನ ಕ್ಷೇತ್ರಕ್ಕೆ ಸಂಬಂಧಿಸಿದ್ದುವು. ಹಾಗೆ ಇವು ಸಂಶೋಧನಾತ್ಮಕ ಲೇಖನಗಳೇ ಆಗಿವೆ.

ಧಾರವಾಡ ಜಿಲ್ಲೆಯ ಶಾಸನಗಳು, ಮುಧೋಳ ಗ್ರಾಮನಾಮ ವಿವೇಚನೆ, ಶಾಸನೋಕ್ತ ಕೃಷಿ ಸಂಘ ಅರವತ್ತೊಕ್ಕಲು, ಪ್ರಾಚೀನ ಕರ್ನಾಟಕದಲ್ಲಿ ಸಹಕಾರ ಹಾಗೂ ಆರ್ಥಿಕ ಚಟುವಟಿಕೆಗಳು, ಅಯ್ಯಾ ಹೊಳೆ ಐನೂರ್ವರ ಪ್ರಶಸ್ತಿಗಳು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕರ ದಾನಕಾರ್ಯಗಳು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಂತೆ ಸುಂಕ, ಪ್ರಾಚೀನ ಮತ್ತು ಮಧ್ಯಕಾಲೀನ ಮಾರಾಟ ಸುಂಕ, ಗೋವೆಯ ಕದಂಬ ಮೂರನೆಯ ಗೋವಲದೇವನ ಪ್ರಾಚೀನ ಶಾಸನ ಮತ್ತು ಕಳಚೂರಿ ಬಿಜ್ಜಳನ ಶಿರೋಳ ಶಾಸನ, ಇವೆ ಮೊದಲಾದ ಹತ್ತು ಲೇಖನಗಳು ಶಾಸನ ಕ್ಷೇತ್ರಕ್ಕೆ ಸಂಬಂಧಿಸಿವೆ.

**ಧಾರವಾಡ ಜಿಲ್ಲೆಯ ಶಾಸನಗಳು :**

ಈ ಲೇಖನ ಸುದೀರ್ಘವಾಗಿದ್ದು ೨೪ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದರಲ್ಲಿ "ಶಾಸನಗಳು ನಾಡಿನ ಜನರ ಬದುಕಿನ ವಿವಿಧ ಮುಖಗಳನ್ನು ಪರಿಚಯಿಸುವ ಪ್ರಾಮಾಣಿಕ ದಾಖಲೆಗಳು ಇವು ನಾಡಿನ ಬೆಲೆಯುಳ್ಳ ಸಾಂಸ್ಕೃತಿಕ ಸಂಪತ್ತು. ಈ ಸಾಂಸ್ಕೃತಿಕ ಸಂಪತ್ತಿನ ರಕ್ಷಣೆ ನಮ್ಮ ಪರಮ ಕರ್ತವ್ಯ."[೦೦೦] ಈ ಮಾತುಗಳು ಶಾಸನವನ್ನು ಪರಿಚಯಿಸುತ್ತಿದ್ದು ಶಾಸನ ಸಾಹಿತ್ಯಕ್ಕೆ ವ್ಯಾಖ್ಯಾನದಂತಿವೆ. ಲೇಖನದ ಆರಂಭದಲ್ಲಿರುವ ಈ ಮಾತುಗಳು ಶಾಸನಕ್ಕೆ ಸಂಬಂಧಿಸಿದಂತೆ ಉಳಿದ ಲೇಖನಗಳಿಗೆ

ಸೂಕ್ತ ಪ್ರವೇಶಿಕೆಯನ್ನು ಒದಗಿಸುತ್ತವೆ. "ಧಾರವಾಡ ಜಿಲ್ಲೆಯ ಒಟ್ಟು ಶಾಸನಗಳ ಸಂಖ್ಯೆ ಪ್ರಕಟಿತ ಅಪ್ರಕಟಿತ ಶಾಸನಗಳು, ತಾಲೂಕಾವಾರು ಲಭಿಸುವ ಶಾಸನಗಳು, ಗ್ರಾಮಗಳ ಸಂಖ್ಯೆ, ಶಾಸನಗಳ ಸಂಖ್ಯೆ ಮುಂತಾಗಿ ವಿಸ್ತೃತವಾದ ಮಾಹಿತಿಯನ್ನು ಒದಗಿಸಿದ್ದಾರೆ. ಧಾರವಾಡ ಜಿಲ್ಲಾ ಶಾಸನಾಭ್ಯಾಸಿಗಳಿಗೆ ಇದೊಂದು ಕೈಪಿಡಿಯಾಗಿದೆ. "ಧಾರವಾಡ ಜಿಲ್ಲೆಯ ಶಾಸನಗಳು ಪ್ರಾಚೀನ ಕಾಲದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ಸಾದರಪಡಿಸುತ್ತವೆ"[೧೦೧] ಎಂಬ ಮಾತು ಸಮಂಜಸವಾಗಿದೆ.

**ಮುಧೋಳ ಗ್ರಾಮನಾಮ ವಿವೇಚನೆ :**

ಇದು ನಾಮವಿಜ್ಞಾನಕ್ಕೆ ಸಂಬಂಧಿಸಿದ ಲೇಖನ ಮುಧೋಳದ ಮೂಲರೂಪ, ನಿಜವಾದ ನಿಷ್ಪತ್ತಿಯನ್ನು ವಿವರಿಸುವ ಲೇಖನವಿದು. ಆರಂಭದಲ್ಲಿ ನಾಮ ವಿಜ್ಞಾನ, ಅದರ ಅಂಗವಾದ ಸ್ಥಳನಾಮ ವಿಜ್ಞಾನ ಮುಂತಾದ ವಿಷಯಗಳನ್ನು ಚರ್ಚಿಸುತ್ತಾರೆ. ಆಯಾ ಸ್ಥಳದ ಭೌಗೋಳಿಕ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸತ್ವಗಳನ್ನು ಗ್ರಾಮನಾಮಗಳು ಅಳವಡಿಸಿಕೊಂಡಿರುತ್ತವೆ. ಗ್ರಾಮನಾಮಗಳ ಅಧ್ಯಯನವೆಂದರೆ "ಆಯಾ ಪ್ರದೇಶದ, ಆಯಾ ಸ್ಥಳದ ಅಧ್ಯಯನವೆಂದೇ ಅರ್ಥ. ಗ್ರಾಮನಾಮಗಳು ಜನರ ಅಭಿರುಚಿ, ಆಸಕ್ತಿ ಜೀವನ ವಿಧಾನ, ಸಮಾಜ ವ್ಯವಸ್ಥೆಗಳ ಪರಿಕಲ್ಪನೆಯನ್ನು ತಿಳಿಸಿಕೊಡುತ್ತವೆ. ಲಿಖಿತ ದಾಖಲೆಗಳು ಸಿಗದಾಗ ಗ್ರಾಮನಾಮಗಳೇ ನಾಡಿನ ಚರಿತ್ರೆಯ ಅಧ್ಯಯನಕ್ಕೆ, ರಚನೆಗೆ ಅಗತ್ಯ ಹಾಗೂ ಏಕೈಕ ಆಕರ ಸಾಮಗ್ರಿಗಳಾಗಿ ಪರಿಣಿಸುತ್ತವೆ"[೧೦೨] ಎಂದು ವ್ಯಾಖ್ಯಾನಿಸಿರುವುದು ಅರ್ಥಪೂರ್ಣವಾಗಿದೆ. ಮುಧೋಳ ಗ್ರಾಮದ ಪಂಡಿತ ನಿಷ್ಪತ್ತಿ, ಪಾಮರ ನಿಷ್ಪತ್ತಿಗಳೆರಡನ್ನು ಚರ್ಚಿಸಿ ನಿಜ ನಿಷ್ಪತ್ತಿಯನ್ನು ನಿಷ್ಕರ್ಷಿಸಿದ್ದಾರೆ. "ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಯಾವುದೇ ಗ್ರಾಮ 'ಸಂತೆ' ನೆರೆಯಿಸುವುದರ ಮೂಲಕವೇ 'ಪಟ್ಟಣ' ಎನಿಸಿಕೊಳ್ಳುತ್ತಿದ್ದಿತು. ಇದರಿಂದ ಆ ಪಟ್ಟಣದಲ್ಲಿ ವಾಣಿಜ್ಯ ಚಟುವಟಿಕೆಗಳು ತೀವ್ರಗೊಂಡು ಅದು ವಾಣಿಜ್ಯ ಕೇಂದ್ರವಾಗಿ ಪರಿಣಮಿಸುತ್ತಿದ್ದಿತು. ಆದುದರಿಂದ 'ಮುಧೋಳ' ಹತ್ತನೆಯ ಶತಮಾನದಷ್ಟು ಹಿಂದೆಯೇ ವ್ಯಾಪಾರದ ಪ್ರಮುಖ ಪಟ್ಟಣವಾಗಿಯೂ ವರ್ತಕರ 'ವಾಣಿಜ್ಯಕೇಂದ್ರ'ವಾಗಿಯೂ ರೂಪಗೊಂಡು, ಪ್ರಖ್ಯಾತಿ ಪಡೆದಿದ್ದಿತೆಂದು ವ್ಯಾಖ್ಯಾನಿಸಲು ಇಲ್ಲಿ ಅವಕಾಶವಿದೆ."[೧೦೩] ಈ ಮಾತುಗಳು ಮುಧೋಳದ ಐತಿಹಾಸಿಕ ಹಿನ್ನೆಲೆಗೆ ಸಾಕ್ಷಿಯಾಗಿವೆ.

**ಶಾಸನೋಕ್ತ ಕೃಷಿ ಸಂಘ ; ಅರವತ್ತೊಕ್ಕಲು :**

ಪ್ರಾಚೀನ ಕರ್ನಾಟಕದಲ್ಲಿ ಸಹಕಾರ ಹಾಗೂ ಆರ್ಥಿಕ ಚಟುವಟಿಕೆಗಳು ಅಯ್ಯಾವೊಲೆ ಐನೂರ್ವರ ಪ್ರಶಸ್ತಿಗಳು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕರ ದಾನಕಾರ್ಯಗಳು, ಪ್ರಾಚೀನ

ಮತ್ತು ಮಧ್ಯಕಾಲಿನ ಕರ್ನಾಟಕದ ಮಾರಾಟ ಸುಂಕ ಇವು ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನಾ ಮಹಾಪ್ರಬಂಧದಲ್ಲಿ ವಿಸ್ತೃತ ಚರ್ಚೆಗೊಳಗಾಗಿರುವ ವಿಷಯಗಳೆ ಆಗಿವೆ.(ಮುದ್ರಣದ ಸಂದರ್ಭದಲ್ಲಿ ಪುಸ್ತಕ ಗಾತ್ರ ಹೆಚ್ಚಾಗುವುದರಿಂದ ಪುಟಗಳ ಸಂಖ್ಯೆ ಮೀರಬಾರದೆಂಬ ವಿಶ್ವವಿದ್ಯಾಲಯದ ಮಿತಿಗೆ ಒಳಪಟ್ಟು "ಶಾಸನಗಳಲ್ಲಿ ಕರ್ನಾಟಕದ ವರ್ತಕರು" ಪ್ರಕಟವಾಗಿದೆ. ಅಲ್ಲಿ ಪ್ರಕಟಿಸಲಾಗದ ಲೇಖನಗಳ ವಸ್ತುವನ್ನೇ ಇಲ್ಲಿ ಸಂಶೋಧನಾ ಚೌಕಟ್ಟಿಗೆ ಒಳಪಡಿಸಿ ಸ್ವತಂತ್ರ ಲೇಖನಗಳನ್ನಾಗಿ ಮಾಡಿದ್ದಾರೆ.) ಈ ಲೇಖನಗಳ ವಿಷಯ ಈ ಹಿಂದೆ ಚರ್ಚಿಸಿರುವುದರಿಂದ ಮತ್ತೆ ಇಲ್ಲಿ ಪರಿಚಯಿಸುವ ಅವಶ್ಯಕತೆ ಇಲ್ಲ.

**ಗೋವೆಯ ಕದಂಬ ಮೂರನೆಯ ಗೋವಲದೇವನ ಪ್ರಾಚೀನ ಶಾಸನವು :**

೧೦ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದೊಂದು ಪ್ರವಾಸ ಕಥನದಂತೆ ಲೇಖನವು ಆರಂಭವಾಗುತ್ತದೆ. ತನ್ನ ಆಕರ್ಷಕ ಶೈಲಿಯಿಂದ ಓದಿಸಿಕೊಂಡು ಹೋಗುತ್ತದೆ. ಮುಂದೆ ಮುತ್ತಿಗೆ ಈ ಶಾಸನ ಗೋವೆಯ ಕದಂಬ ಮೂರನೆಯ ಗೋವಲ ದೇವನ ಆಳ್ವಿಕೆಯ ಮೊಟ್ಟಮೊದಲ ಶಾಸನವೆಂದು ಹೊಸ ನಿರ್ಣಯಕ್ಕೆ ಬರುತ್ತಾರೆ. "ಕ್ರಿ. ಶ. ೧೧೨೫ರ ಮುಗದ ಶಾಸನ, ೩ನೇ ಗೋವಲ ದೇವನ ಕೊನೆಯ ಶಾಸನ ಹೀಗೆ ಈತನು ಕ್ರಿ.ಶ. ೧೦೭೬ ರಿಂದ ೧೧೨೫ರ ವರೆಗೆ ಅಂದರೆ ೪೯ ವರ್ಷಗಳ ದೀರ್ಘಾವಧಿಯ ವರೆಗೆ ಕಲ್ಯಾಣ ಚಾಲುಕ್ಯರ ಮಹಾಮಂಡಲೇಶ್ವರನಾಗಿದ್ದನು. ಇದರಿಂದ ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಅಂತ್ಯದವರೆಗೂ ಈತ ಮಹಾಮಂಡಲೇಶ್ವರನಾಗಿಯೇ ಕಾರ್ಯ ನಿರ್ವಹಿಸಿದುದು ವ್ಯಕ್ತವಾಗುತ್ತದೆ.  ಇದು ಇತ್ತೀಚಿನ ವರ್ಷಗಳಲ್ಲಿಯೇ ಅತ್ಯಂತ ಮಹತ್ವದ ಸಂಶೋಧನೆಯಾಗಿದೆ"[೧೦೪] ಎಂಬ ಸಂಗತಿ ಗಮನಾರ್ಹವಾಗಿದೆ. ಪ್ರಸ್ತುತ ಶಾಸನದ ಪೂರ್ಣ ಪಠ್ಯವನ್ನು ಈ ಲೇಖನದಲ್ಲಿ ನೀಡಿದ್ದಾರೆ. ಈ ಶಾಸನವು ರಾಜಕೀಯ ಧಾರ್ಮಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ಕುರಿತಾಗಿ ಅನೇಕ ಹೊಸ ಸಂಗತಿಗಳನ್ನು ಪ್ರಥಮ ಬಾರಿಗೆ ತಿಳಿಸಿಕೊಡುತ್ತವೆ.ಇಂಥ ಮಹತ್ವದ ಅಪ್ರಕಟಿತ ಶಾಸನವನ್ನು ಪರಿಶೋಧಿಸಿ ಪ್ರಕಟಿಸಿರುವುದು ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಗೆ ಶ್ರೇಷ್ಠ ನಿದರ್ಶನವಾಗಿದೆ.

**ಕಳಚೂರಿ ಬಿಜ್ಜಳನ ಶಿರೋಳ ಶಾಸನ :**

ಇದು ಶಿರೋಳ ಗ್ರಾಮದಲ್ಲಿರುವ ಕಳಚೂರಿ ಬಿಜ್ಜಳನ ಶಾಸನವಾಗಿದೆ. ಇದರ ಕಾಲ ಕ್ರಿ.ಶ. ೧೧೩೪, ಶಿರೋಳ ಗ್ರಾಮ ನಾಮದ ನಾಮ ವಿವೇಚನೆ ಮಾಜಿ ಸಿರಿಯ +ಪೋಟಿಲ್> ಸಿರಿವೊಟಿಲ್ >ಸಿರಿಪೊಟಿಲ್>ಸಿರೋಳ>ಶಿರೋಳ್ ಎಂದು ಗ್ರಾಮ ನಾಮದ ನಿಜ ನಿಷ್ಪತ್ತಿಯನ್ನು ಮಾಡಿದ್ದಾರೆ. ೨೮ ಸಾಲುಗಳಲ್ಲಿರುವ ಶಾಸನದ ಪೂರ್ಣ ಪಠ್ಯವನ್ನು ಕಟ್ಟಿಕೊಟ್ಟಿದ್ದಾರೆ. ಶಾಸನದ ವಿಷಯವನ್ನು ವಿವರಿಸುತ್ತ ಬಿಜ್ಜಳ ತಾನು ಮಹಾಮಂಡಳೇಶ್ವರನಾಗಿದ್ದಾಗ (ಕ್ರಿ. ಶ. ೧೧೩೪ ರಲ್ಲಿಯ) ತಾನೇ

ಚಕ್ರವರ್ತಿಯೆಂದು ಸಾರಿಕೊಂಡ ಸಂಗತಿ ಈ ಶಾಸನದ "ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಕಾಳಾಂಜರಪುವರಾಧೀಶ್ವರ ಸುವರ್ಣ ವೃಷಭಧ್ವಜ ಡಮರುಗ ತೂರ್ಯ್ಯ ನಿರ್ಘೋಷಣ ಕದನ ಪ್ರಚಂಡ ಸುಭಟರಾದಿತ್ಯ ಕಲಿಗಳಂಕುಸ ಚಲದಂಕರಾಮ ಸಾಹಸೋತ್ತುಂಗ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತು ಕಳಚುರ್ಯ್ಯ ಚಕ್ರವರ್ತಿ ವೀರ ಬಿಜ್ಜಲದೇವ" ಎಂಬ ಗದ್ಯದಿಂದ ಸ್ಪಷ್ಟವಾಗುತ್ತದೆ. ಇದು ಬಿಜ್ಜಳನ ಆರಂಭದ ರಾಜಕೀಯ ಮಹದಾಕಾಂಕ್ಷೆಯನ್ನು ಎತ್ತಿ ಹೇಳುವ ಮಹತ್ವದ ದಾಖಲೆಯಾಗಿದೆ."[೧೦೫] ಈ ಶಾಸನದ ವಿಶಿಷ್ಟತೆಯನ್ನು ಡಾ. ಬಿ. ಆರ್. ಹಿರೇಮಠ ಅವರು ಗುರುತಿಸಿದ್ದು ವಿಶೇಷವಾಗಿದೆ. ಬಿಜ್ಜಳನ ಮಹತ್ವಾಕಾಂಕ್ಷೆಯನ್ನು ತಿಳಿಸುವ ಈ ಶಾಸನ ಕರ್ನಾಟಕದ ಸಂಸ್ಕೃತಿ ಇತಿಹಾಸದಲ್ಲಿ ಮಹತ್ವದ ದಾಖಲೆಯಾಗಿದೆ.

ನಯಸೇನನ ಕಥನ ಕಲೆ, ಸೋದೆ ಸದಾಶಿವ ರಾಯನ ಹೊಸಕೃತಿಗಳು, ಮಧುಗಿರಿ ಚೆನ್ನರಾಯದುರ್ಗ, ಮಿಡಿಗೇಶಿ ದೊರೆಗಳ ವಂಶಾವಳಿ, ಕನ್ನಡ ಸಂಶೋಧನಾ ಸಾಹಿತ್ಯ ಮುಂತಾದವು ವಿಮರ್ಶಾಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳಾಗಿವೆ. ನಾಲ್ಕು ಲೇಖನಗಳು ಸಾಂದರ್ಭಿಕ ರಚನೆಗಳಾಗಿದ್ದು ಆಯಾ ವಿಷಯಗಳ ನಿರೂಪಣೆ ಸೊಗಸಾಗಿ ಮೂಡಿಬಂದಿದೆ. ವ್ಯಾಸಂಗ ತರಂಗ ಕೃತಿಯಲ್ಲಿ ಬಂದಿರುವ ಲೇಖನಗಳು ಹಲವಾರು ಹೊಸ ಅಂಶಗಳನ್ನು ವಿವರಿಸುತ್ತವೆ. "ಇಲ್ಲಿಯ ಅಧಿಕ ಸಂಖ್ಯೆಯ ಲೇಖನಗಳು ಕನ್ನಡ ಸಂಶೋಧನ ಕ್ಷೇತ್ರದ ಕ್ಷಿತಿಜವನ್ನು ವಿಸ್ತರಿಸುತ್ತಿವೆ. ಇದರಿಂದ ಸಂಶೋಧಕರಿಗೆ, ಚರಿತ್ರೆಕಾರರಿಗೆ, ವಿದ್ವಾಂಸರಿಗೆ, ಸಂಸ್ಕೃತಿ ಅಧ್ಯಯನಶೀಲರಿಗೆ ಹೆಚ್ಚಿನ ಪ್ರಯೋಜನವಾಗಲಿದೆಯೆಂದು ಭಾವಿಸಿದ್ದೇನೆ. ವಸ್ತುನಿಷ್ಠತೆ, ಸಾಧಾರತೆ, ಹೊಸ ಅಂಶಗಳು ಇವು ಇಲ್ಲಿಯ ಲೇಖನಗಳ ವೈಶಿಷ್ಟ್ಯವೆನಿಸಿದೆ. ಈ ಕೃತಿಯಲ್ಲಿಯ ಲೇಖನಗಳು 'ಅಂತರ್‌ಶಿಸ್ತೀಯ' ಅಥವಾ 'ಬಹುಶಿಸ್ತೀಯ' ಅಧ್ಯಯನಕ್ಕೆ ಉಪಯುಕ್ತ ಆಕರ ಸಾಮಗ್ರಿಗಳಾಗಿ ಪರಿಣಮಿಸಿವೆ. ಹೀಗೆ 'ವ್ಯಾಸಂಗ ತರಂಗ'ದಲ್ಲಿಯ ಲೇಖನಗಳು ವಿಷಯ ವೈವಿಧ್ಯ ವಿಪುಲ ಆಕರ ಸಾಮಗ್ರಿ ವಸ್ತುನಿಷ್ಠ ಪ್ರಕಟಣೆ, ಮೂಲ ಸಂಶೋಧನೆಗಳಿಂದ ಕೂಡಿದವುಗಳಾಗಿರುತ್ತದೆ. ಇದರಲ್ಲಿ ಚಾರಿತ್ರಿಕ ಮಹತ್ವದ, ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಿಸಿದ ವಿವರಗಳು, ಸಮಾವೇಶಗೊಂಡಿರುತ್ತವೆ. ಈ ರೀತಿಯಾಗಿ ಈ ಕೃತಿಗೆ ವಿವಿಧ ರೂಪದ ಪ್ರಯೋಜನ ಸಂಪ್ರಾಪ್ತವಾಗಿದೆ"[೧೦೬] ಎಂಬ ಮಾತುಗಳು ಗಮನಾರ್ಹವಾಗಿದ್ದು ಇಡೀ ಪುಸ್ತಕದ ಆಶಯವನ್ನು ತೆರೆದಿಡುತ್ತದೆ. ಸಂಶೋಧನೆ ಕೈಗೊಳ್ಳುವವರಿಗೆ ಈ ಕೃತಿ ಮಾರ್ಗದರ್ಶಿಯಾಗಿರುವಂತೆ ಪ್ರಸ್ತುತ ಪುಸ್ತಕದ ವ್ಯಾಸಂಗ ಮಾಡುವವರಿಗೆ ಲೇಖಕರ ಮಾತುಗಳು ದಾರಿದೀಪವಾಗಿವೆ. ಕನ್ನಡದ ಸಂಶೋಧನ ಸಾಹಿತ್ಯ ಕ್ಷೇತ್ರದಲ್ಲಿ ಡಾ. ಬಿ. ಆರ್. ಹಿರೇಮಠ ಅವರ ವ್ಯಾಸಂಗ ತರಂಗ ಒಂದು ಪ್ರಮುಖ ಕೊಡುಗೆಯಾಗಿದೆ.

**ನಯಸೇನನ ಕಥನ ಕಲೆ :**

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಕುವೆಂಪು ಶತಮಾನೋತ್ಸವ ಮಾಲಿಕೆಯಲ್ಲಿ ೨೦೦೪ರಲ್ಲಿ ಈ ಲೇಖನ ಪ್ರಕಟವಾಗಿವೆ. ಇದರಲ್ಲಿ ೧೪ ಲೇಖನಗಳಿವೆ. 'ನಯಸೇನನ ಕಥನ ಕಲೆಯು ವ್ಯಾಸಂಗ ತರಂಗದ ೧೧ನೇ ಲೇಖನವಾಗಿದೆ. ೧೦ ಪುಟದ ಲೇಖನವಿದು. ಇದರಲ್ಲಿ ನಯಸೇನನ ಕಾಲ, ಪರಿಸರ ಧರ್ಮ ಸಾಹಿತ್ಯ ಮುಂತಾದವುಗಳನ್ನು ಆರಂಭದಲ್ಲಿ ಪರಿಚಯಿಸಿ ನಯಸೇನನ ಕೃತಿ ಧರ್ಮಾಮೃತವನ್ನು ಆಧಾರವಾಗಿಟ್ಟುಕೊಂಡು ಈ ಲೇಖನ ಬರೆದಿದ್ದಾರೆ. ಶಿಥಿಲಗೊಳ್ಳುತ್ತಿದ್ದ ತನ್ನ ಜೈನಧರ್ಮ, ಸಮಾಜದ ತಳಪಾಯದಂತಿರುವ ಸಾಮಾನ್ಯ ಜನರಿಂದಲೇ ನಿಲ್ಲುವುದೆಂಬ ಆತ್ಮವಿಶ್ವಾಸ ತಾಳಿದವನು ನಯಸೇನ. ಆದ್ದರಿಂದ ಅತ್ಯಂತ ನಿಕಟಪರಿಚಯವಾದ ಕಥಾ ಮಾಧ್ಯಮವನ್ನು ಧರ್ಮಾಮೃತ ಕಾವ್ಯ ರಚಿಸಲು ಬಳಸಿಕೊಂಡನು. ಜಾನಪದೀಯ ಅಂಶಗಳನ್ನು ತುಂಬಿ ಆಡುನುಡಿಯ ಸೊಗಡಿನ ಮುಖಾಂತರ ಜೈನಧರ್ಮದ ತಿರುಳನ್ನು ಸಾರಲು ಈ ಕಥೆಗಳ ಮುಖಾಂತರ ಹೇಳ ಹೊರಟನು. "ಆಯಾ ಯುಗದ ಯುಗಧರ್ಮ, ಕಾವ್ಯೋದ್ದೇಶ ಮತ್ತು ಆಯಾಕಾಲದ ಪ್ರಜೆಗಳ ಅಥವಾ ಸಹೃದಯಗಳ ಅಭಿರುಚಿಗಳ ಹಿನ್ನೆಲೆಯಲ್ಲಿ ಕಥನ ಕಲೆಯನ್ನು ಪರಿಭಾವಿಸಬೇಕಾಗುತ್ತದೆ" [೧೦೭] ಎಂದು ಹೇಳಿ ನಯಸೇನನ ಕಥನ ಕಲೆಯನ್ನು ವಿವೇಚಿಸಿದ್ದಾರೆ. ನಯಸೇನನು ಹುಟ್ಟು ಕಥೆಗಾರ, ನಿರಾಯಾಸವಾಗಿ ಕಥೆಗಳನ್ನು ಹೇಳುತ್ತಾ ಹೋಗುತ್ತಾನೆ. ಹಾಸ್ಯದ ಲೇಪನ, ಜಾನಪದೀಯ ಸೊಗಡು, ಆಡುನುಡಿಯ ಭಾಷೆಯ ಬನಿ ಓದುಗರನ್ನು ಸೆರೆಹಿಡಿಯುತ್ತವೆ. ಕುತೂಹಲ ಮತ್ತು ಆಸಕ್ತಿಯನ್ನು ಕೆರಳಿಸಿ ಓದಿಸಿಕೊಂಡು ಹೋಗುತ್ತವೆ. "ಜಾನಪದ ಅಂತಃಸತ್ವದಿಂದ ತುಂಬಿ ತುಳುಕುತ್ತಿರುವ ಧರ್ಮಾಮೃತದಲ್ಲಿಯ ಎಲ್ಲ ೧೪ ಕಥೆಗಳು ಸುಂದರ ಹಾಗೂ ಕಲಾತ್ಮಕವಾಗಿವೆ. ದಯಾಮಿತ್ರಶೆಟ್ಟಿ ವಸುಭೂತಿಯ ಕಥೆ, ಜಿನಭಕ್ತ ಶೆಟ್ಟಿಯ ಕತೆಗಳಲ್ಲಿ ತನ್ನ ಎತ್ತರವನ್ನು ಸತ್ವವನ್ನು ತಲುಪಿ ಅನವೊಬ್ಬ ಹುಟ್ಟು ಕಥೆಗಾರನೆಂಬುದನ್ನು ಸಾಬೀತುಪಡಿಸುತ್ತವೆ"[೧೦೮] ಎಂದು ಹೇಳಿ ಅವೆರಡೂ ಕಥೆಗಳನ್ನು ಪರಿಶೀಲಿಸಿದ್ದಾರೆ. ಎಲ್ಲರಿಗೂ ತಿಳಿಯುವಂತೆ ಕಥೆಯ ಮೂಲಕ ಜಿನಧರ್ಮ ಬೋಧಿಸುವುದು ನಯಸೇನನ ಮುಖ್ಯ ಉದ್ದೇಶವಾಗಿತ್ತು. ಕಥಾಶರೀರದಲ್ಲಿ ಸಾಂದರ್ಭಿಕವಾಗಿ ಅರಳುವ ಗಾದೆ ಮಾತುಗಳು ನಯಸೇನನ ಕಥನ ಕಲೆಗೆ ವಿಶೇಷ ಮೆರುಗನ್ನು ನೀಡಿವೆ. "ಬಳಕೆಯ ಮಾತು ಹಾಗೂ ನುಡಿಗಟ್ಟುಗಳನ್ನು ಕಥೆಗಳಲ್ಲಿ ಸಂದರ್ಭಕ್ಕನುಗುಣವಾಗಿ ಬಳಸುವುದು ನಯಸೇನನ ಕಥನ ಕಲೆಯ ಮತ್ತೊಂದು ರೀತಿ"[೧೦೯] ಎಂದು ಡಾ. ಬಿ. ಆರ್. ಅವರು ಸರಿಯಾಗಿ ಗುರುತಿಸಿದ್ದಾರೆ. "ನಯಸೇನ ತರ್ಕಬದ್ಧವಾದ ಅರ್ಥಪೂರ್ಣವಾದ ಸಂಭಾಷಣೆಗಳನ್ನು ಕೆಲವು ಕಥೆಗಳಲ್ಲಿ ಸಜೀವವಾಗಿರಿಸಿದ್ದಾನೆ. ಸಂಕ್ಷಿಪ್ತತೆ, ನಾಟಕೀಯತೆಗಳಿಂದ ಕೂಡಿದ ಇಂಥ ಸಂಭಾಷಣೆಗಳು ಕಥೆಯಲ್ಲಿ ಬಂದರೆ ಕಥೆಗೆ ಒಂದು ರೀತಿಯ ಬೆಡಗು ಉಂಟಾಗುತ್ತದೆ" [೧೧೦] ಎಂಬುದನ್ನು ಯಶೋಧನ ಮುನಿ ಬೆಸ್ತ ಮಗಸೇನರ ಸಂಭಾಷಣೆ (ಧನಕೀರ್ತಿ ಕತೆ) ಮೂಲಕ ಸ್ಪಷ್ಟಪಡಿಸಿದ್ದಾರೆ. ಸನ್ನಿವೇಶ ನಿರ್ಮಾಣ, ವರ್ಣನಾ ಪ್ರಸಂಗ, ನೀತಿಬೋಧೆ, ತತ್ವನಿರೂಪಣಾ ಸಂದರ್ಭಗಳಲ್ಲಿ ಕಥೆಗಾರನಿಗೆ ಪ್ರಮಾಣಪರಿಜ್ಞಾನ

ಇರಬೇಕಾದುದು ತೀರ ಅವಶ್ಯಕವಿದೆ. ಈ ಪ್ರಮಾಣ ಪರಿಜ್ಞಾನ ಪ್ರಜ್ಞೆ ಇಲ್ಲದಿದ್ದರೆ ಕಥನ ಕಲೆಗೆ ಧಕ್ಕೆ ಉಂಟಾಗುತ್ತದೆ. "ನೋಂಪಿಯನ್ನು ಆಚರಿಸುವಾಗ ವಸುಭೂತಿ ಅನುಭವಿಸಿದ ಕ್ಲೇಷ, ಸೂರ್ಪನೆಂಬ ಕಳ್ಳನು ದೇವರ ಮುಕ್ಕೊಡೆಯಲ್ಲಿದ್ದ ರತ್ನವನ್ನು ಕದಿಯಲು ಹೂಡಿದ ನಾಟಕ ಮೊದಲಾದ ಸನ್ನಿವೇಶಗಳಲ್ಲಿ ಕ್ರಿಯಾಶೀಲತೆ ಸಹಜತೆಗಳನ್ನು ಗುರುತಿಸಬಹುದು. ಇಂಥವುಗಳಿಂದ ಕಥನ ಕಲೆಯ ಶ್ರೀಮಂತಿಕೆ ಇನ್ನೂ ವರ್ಧಿಸುತ್ತದೆ. ಇಂಥವುಗಳಿಂದ ಹಿತಮಿತವಾದ ಅರ್ಥಪೂರ್ಣವಾದ, ಅಕೃತಕವಾದ ವರ್ಣನೆ ಸನ್ನಿವೇಶಗಳಿಂದ ಕಥೆಗಳು ಸರ್ವಾಂಗ ಸುಂದರವಾಗಿ ಕಾಣುವಂತೆ ನಯಸೇನ ಪ್ರಯತ್ನಿಸಿದ್ದಾನೆ." [೧೧೧] ಇಲ್ಲಿ ನಯಸೇನನ ಕಥನ ಕಲೆಯ ಒಳಗುಟ್ಟನ್ನು ಬಿಚ್ಚಿಟ್ಟಿದ್ದಾರೆ.

ನಯಸೇನ ಉಪಮಾಲೋಲ, ಉಪಮಾ ಅಲಂಕಾರಗಳನ್ನು ಸರಮಾಲೆಯಾಗಿ ಜೋಡಿಸುತ್ತಾನೆ. ಉಪಮೆಗಳು ಹ್ರಸ್ವವಾಗಿಯೂ, ದೀರ್ಘವಾಗಿಯೂ ಬಂದಿದ್ದರೂ ಸನ್ನಿವೇಶ ಸಂದರ್ಭಾನುಸಾರವಾಗಿ ಚಿತ್ರಣಗೊಂಡಿವೆ. ಇದರಿಂದ ಕಥೆಗಳಿಗೆ ವಿಶೇಷವಾದ ಹಾಗೂ ವಿನೂತನವಾದ ಕಲಾತ್ಮಕತೆ ಪ್ರಾಪ್ತವಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ನಯಸೇನನ ಉಪಮೆಗಳ ಸರಮಾಲೆಯನ್ನು ಪ್ರಸ್ತಾಪಿಸಿ ಉದಾಹರಣೆಯನ್ನೇ ಆಧಾರವಾಗಿ ನೀಡಿರುವುದು ಲೇಖನಕ್ಕೆ ಮಹತ್ವ ಪ್ರಾಪ್ತವಾಗಿದೆ. ನಯಸೇನನ ಸಹಜತೆ ಮತ್ತು ಸರಳತೆಗಳ ಮೇಳವಿಕೆ, ಜನಪರಭಾಷಾ ಬಳಕೆ ಕುತೂಹಲ, ಆಸಕ್ತಿ, ಆಕರ್ಷಣೆ, ಆತ್ಮೀಯತೆಗಳು ಸಹೃದಯರನ್ನು ಓದಿಸಿಕೊಂಡು ಹೋಗುವಿಕೆ, ಜಾನಪದ ಕಥೆಗಳ ಜಾಡಿನಲ್ಲಿ ಮುನ್ನಡೆಯುವಿಕೆ, ಸಮಯೋಚಿತ ಉಪಮೆಗಳ ಬಳಕೆ, ಪಾತ್ರರಚನಾ ಚಾತುರ್ಯ, ಹರಿತವಾದ ವಿಡಂಬನಾ ರೀತಿಯಿಂದ ಧರ್ಮಾಮೃತ ಕಥೆಗಳಿಗೆ ಅಪೂರ್ವವಾದ ಕಲಾತ್ಮಕತೆ ಪ್ರಾಪ್ತವಾಗಿದೆ ಎಂಬುದನ್ನು ಹಲವಾರು ನಿದರ್ಶನಗಳ ಮೂಲಕ ಬಿ. ಆರ್. ಅವರು ಸ್ಪಷ್ಟಪಡಿಸಿದ್ದಾರೆ.

**ಸೋದೆ ಸದಾಶಿವರಾಯನ ಹೊಸ ಕೃತಿಗಳು :**

ಇದು ಈ ಗ್ರಂಥದ ೧೨ನೆಯ ಲೇಖನವಾಗಿದೆ. ೫ ಪುಟದ ಲೇಖನವಿದು. ಕರ್ನಾಟಕದ ಸುಪ್ರಸಿದ್ಧ ಅರಸು ಮನೆತನಗಳಲ್ಲಿ ಸ್ವಾದಿಯ ಅರಸು ಮನೆತನವೂ ಒಂದು. ಸದಾಶಿವರಾಯ ಈ ಅರಸು ಮನೆತನದ ದೊರೆ ಈತ ಶಿವಭಕ್ತನೂ, ದಕ್ಷ ಆಡಳಿತಗಾರನೂ ಆಗಿದ್ದಂತೆ ಕವಿಯೂ ಆಗಿದ್ದನು. ಇಲ್ಲಿಯವರೆಗೆ ಸದಾಶಿವ ನೀತಿಯೊಂದೇ ಈತನ ಸಾಹಿತ್ಯ ಕೃತಿ ಎಂದು ಭಾವಿಸಲಾಗಿತ್ತು. ಸದಾಶಿವರಾಯನ ಉಳಿದ ಸಾಹಿತ್ಯ ಕೃತಿಗಳ ಸ್ವರೂಪವಾಗಲಿ, ಸಂಖ್ಯೆಯಾಗಲಿ ಇಲ್ಲಿಯ ವರೆಗೆ ಯಾರಿಗೂ ಗೊತ್ತಿರಲಿಲ್ಲ. ಡಾ. ಬಿ. ಆರ್. ಅವರು ತಮಗೆ ಲಭಿಸಿದ ತಾಳೆಗರಿಯಲ್ಲಿರುವ ಸೋದೆ ಸದಾಶಿವರಾಯನ ಇತರ ಕೃತಿಗಳ ಮೇಲೆ ಹೊಸ ಬೆಳಕು ಚೆಲ್ಲಿದ್ದಾರೆ. ಕನ್ನಡಕ್ಕಿದೊಂದು ಮೌಲಿಕವಾದ ಲೇಖನ. ಒಂದೇ ಹಸ್ತಪ್ರತಿಯಲ್ಲಿ ಸದಾಶಿವರಾಯನ ಕೃತಿಗಳೆಲ್ಲವೂ ಅಡಕವಾಗಿರುವುದು ಮತ್ತೊಂದು ವಿಶೇಷವಾಗಿದೆ. ಒಟ್ಟು ೧೬ ಕೃತಿಗಳನ್ನು ಬಿ. ಆರ್. ಹಿರೇಮಠರು ಸಂಶೋಧಿಸಿ ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ.

ಅವು ಯಾವವೆಂದರೆ ೧)ಸ್ವರವಚನಗಳು ೨) ಸಮಸ್ಯಾಪೂರ್ಣ ವೃತ್ತಕಂದ ೩) ರಾಗಮಾಲಿಕೆ ೪) ಪಂಚವಿಂಶತಿ ಲೀಲೆಯ ರಗಳೆ ೫) ತ್ರಿವಿದಿ ೬) ಉಳುಮೆಯ ಮಹಾತ್ಮೆ ೭) ಜೋಗುಳ ಪದ ೮) ನವರಸ ಜಕ್ಕಾಣಿ ೯) ಪಂಚವಿಂಶತಿ ಲೀಲೆಯ ಮೂಲ ಪದ್ಯ ೧೦) ಚಾವಡಿ ೧೧) ಭಿಕ್ಷಾಟನ ಲೀಲೆಯ ಕಂದ ೧೨) ಖಡ್ಗ ಪ್ರಬಂಧ ೧೩) ಮಂಗಲಾಷ್ಟಕಗಳು ೧೪) ಪ್ರಭುಲಿಂಗಲೀಲೆಯ ಚಾವಡಿ ೧೫) ಮಹಾಚದುರಂಗ ಲಕ್ಷಣ ೧೬) ಕಲಹಕೇತಯ್ಯಗಳ ಲಕ್ಷಣ. ಅಪ್ರಕಟಿತವಾಗಿರುವ ಈ ಎಲ್ಲ ಕೃತಿಗಳು ಈ ಲೇಖನದಲ್ಲಿ ಪ್ರಥಮಬಾರಿಗೆ ಉಲ್ಲೇಖಗೊಂಡಿವೆ. ಈ ಹದಿನಾರು ಕೃತಿಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಅಲ್ಲಿ ಬಳಕೆಯಾಗಿರುವ ಛಂದಸ್ಸು, ಸಂಗೀತ, ರಾಗ, ತಾಳಗಳು, ಶ್ಲೋಕ, ಕಂದ, ವೃತ್ತ, ದ್ವಿಪದಿ ಹಾಡು, ಷಟ್ಪದಿ, ಪದ್ಯಗಳ ಸಂಖ್ಯೆ, ಲಾವಣಿ, ರಗಳೆ, ಚಾವಡಿ ಮುಂತಾದವುಗಳನ್ನೆಲ್ಲ ಈ ಲೇಖನದಲ್ಲಿ ಸಾರವತ್ತಾಗಿ ಪರಿಚಯಿಸಿದ್ದಾರೆ. ಬಿ.ಆರ್. ಅವರ ಈ ಲೇಖನವು ಸೋದೆ ಸದಾಶಿವರಾಯನ ಮೂಲ ಕೃತಿಗಳನ್ನು ಓದುವಂತೆ ಪ್ರೇರಣೆ ನೀಡುತ್ತದೆ. "ಸದಾಶಿವರಾಯನ ಈ ಹೊಸ ಕೃತಿಗಳ ಮೂಲ ಕ ಸ್ವಾದಿ ಅರಸುಮನೆತನ ಹಾಗೂ ಸಾಹಿತ್ಯಗಳ ಅಧ್ಯಯನಕ್ಕೆ ವಿಶೇಷ ಹಾಗೂ ವಿನೂತನ ಪ್ರಯೋಜನವಾಗುವಲ್ಲಿ ಸಂದೇಹವಿಲ್ಲ. ಆದುದರಿಂದ ಈ ಕೃತಿಗಳ ಪ್ರಕಟಣೆ ಅಧ್ಯಯನ ಕಾರ್ಯ ಬೇಗ ನಡೆಯುವಂತಾಗಬೇಕಾಗಿದೆ"[೧೧೨] ಎಂದಿರುವುದು ಸಂಸ್ಕೃತಿ ಚಿಂತನಕ್ಕೆ ಶ್ರೇಷ್ಠ ನಿದರ್ಶನವಾಗಿದೆ.

ವೀರಶೈವ ಸಂಶೋಧನೆಗಳು ಡಾ. ಬಿ.ಆರ್. ಹಿರೇಮಠ ಅವರು ಸಂಶೋಧನಾತ್ಮಕ ಲೇಖನಗಳ ಸಂಕಲನವಾಗಿದೆ. ಅರುಣೋದಯ ಪ್ರಕಾಶನವು ೧೯೯೨ರಲ್ಲಿ ಪ್ರಕಟಿಸಿದೆ. ೧೧ ಲೇಖನಗಳನ್ನೊಳಗೊಂಡ ಈ ಪುಸ್ತಕವು ೧೨೦ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಪುಸ್ತಕದ ಆರಂಭದಲ್ಲಿ ಡಾ. ಬಿ. ಆರ್. ಹಿರೇಮಠ ಅವರು ಈ ಕೃತಿಯ ಕುರಿತಾಗಿ ಹೇಳಿದ್ದು ಹೀಗೆ. -" ನನ್ನ ಸುದೀರ್ಘವಾದ, ವಿಶಾಲವಾದ ವ್ಯಾಸಂಗ ಮತ್ತು ಸಂಶೋಧನೆಗಳ ಫಲವಾಗಿ ಇಲ್ಲಿಯವರೆಗೆ ವಿಪುಲ ಸಂಖ್ಯೆಯ ಲೇಖನಗಳು ಹೊರಬಂದಿರುತ್ತವೆ. ಬಿಡಿಬಿಡಿಯಾಗಿ ಪ್ರಕಟಗೊಂಡ ಇವುಗಳಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದ ಲೇಖನಗಳನ್ನು ಸಂಗ್ರಹಿಸಿ ಒಟ್ಟಾಗಿ ಪ್ರಕಟಿಸುವುದು ಹೆಚ್ಚು ಉಪಯುಕ್ತವೆಂದು ನನ್ನ ಸಹೋದ್ಯೋಗಿ ಸ್ನೇಹಿತರು ಸೂಚಿಸಿದರು. ಇದನ್ನು ಮನದಂದು ವೀರಶೈವ ಧರ್ಮ, ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆಯ ಲೇಖನಗಳನ್ನು ಮಾತ್ರ ಆಯ್ದುಕೊಂಡು ಇಲ್ಲಿ ಸಮಾವೇಶಗೊಳಿಸಿದ್ದೇನೆ. ಹೀಗೆ ವೀರಶೈವ ವಿಷಯವನ್ನು ಕುರಿತ ಹನ್ನೊಂದು ಸಂಶೋಧನಾತ್ಮಕ ಲೇಖನಗಳ ಗ್ರಂಥರೂಪವೇ ವೀರಶೈವ ಸಂಶೋಧನೆಗಳು"[೧೧೩] ಈ ಮಾತುಗಳು ಪ್ರಸ್ತುತ ಕೃತಿಯ ಆಶಯವನ್ನು ನಿರೂಪಿಸುತ್ತವೆ. ಈ ಕೃತಿಯಲ್ಲಿ

ಎಳಮೇಲ ಸಿಂಹಪರ್ಷೆ -ಅಭಿವನ ಪಾಶುಪತ -ವೀರಶೈವ, ಏಕಾಂತದ ರಾಮಯ್ಯ : ಇನ್ನಷ್ಟು ಹೊಸಸಂಗತಿಗಳು, ಶಿವಶರಣ ಸಾತಯ್ಯ, ಶಾನ್ತಿಮಯ್ಯ, ಸಾತಿಮಯ್ಯ, ಹನ್ನೆರಡನೆಯ ಶತಮಾನದ

ತರುವಾಯ ವಚನಸಾಹಿತ್ಯದ ಸಂರಕ್ಷಣೆ ಪ್ರಸಾರ, ತೋಂಟದ ಸಿದ್ಧಲಿಂಗ ಯತಿ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರ ಕಾಲ : ಮರುಪರಿಶೀಲನೆ, ಗೋಸಲಪೀಠಸಂಪಾದನೆಗಳು ಒಂದು ಅಧ್ಯಯನ, ಶೂನ್ಯ ಸಂಪಾದನೆ ಹಾಗೂ 'ಏಕೋತ್ತರ ಶತಸ್ಥಲ'ಗಳ ಸಂಗ್ರಹ ಕೃತಿಗಳು, ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದನಹಳ್ಳಿ ಬಸಲಿಂಗಸ್ವಾಮಿಗಳು, ಕೆಳದಿ ; ಕನ್ನಡ ಧಾರ್ಮಿಕ ಸಾಹಿತ್ಯ, ಸ್ವಾದಿ ಅರಸರ ಕಾಲದ ಸಾಹಿತ್ಯ.

ಇವೇ ಮೊದಲಾದ ೧೧ ಲೇಖನಗಳಿವೆ. "ಪ್ರಸ್ತುತ ಕೃತಿಯಲ್ಲಿರುವ ಸಂಶೋಧನಾ ಲೇಖನಗಳಿಂದ ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿ ಚರಿತ್ರೆಗಳ ಮೇಲೆ ಹೊಸ ಬೆಳಕು ಬೀಳುವುದೆಂದು ಭಾವಿಸಿದ್ದೇನೆ. ಇದಲ್ಲದೆ ಕೆಲವು ಲೇಖನಗಳು ಹೊಸ ಅಧ್ಯಯನಗಳಿಗೆ ಅವಕಾಶ ಕಲ್ಪಿಸಿಕೊಡುತ್ತವೆ ಎಂದು ತಿಳಿದಿದ್ದೇನೆ"[೧೧೪] ಎನ್ನುವ ಅಭಿಪ್ರಾಯವು ಅಧ್ಯಯನ ಮಾಡುವವರಿಗೆ ಮಾರ್ಗದರ್ಶಿಯಾಗಿದೆ.

**ಏಳಮೇಲ ಸಿಂಹಪರ್ಷೆ ಅಭಿನವ ಪಾಶುಪತ :**

ವೀರಶೈವ ೧೧ನೆಯ ಶತಮಾನದ ಸುಮಾರಿಗೆ ಕರ್ನಾಟಕದ ಲಕುಲೀಶ ಪಾಶುಪತದಲ್ಲಿ ಶಕ್ತಿ ಪರ್ಷೆ ಮತ್ತು ಸಿಂಹಪರ್ಷೆ ಎಂಬ ಎರಡು ಪ್ರಬೇಧಗಳು ಕಾಣಿಸಿಕೊಂಡಿರುವುದನ್ನು ಶಾಸನಗಳ ಆಧಾರದಿಂದ ಸ್ಪಷ್ಟಗೊಳಿಸಲಾಗಿದೆ. ಶಕ್ತಿ ಪರ್ಷೆಯಲ್ಲಿಯ ಪರ್ವತಾವಳಿ ಮತ್ತು ಭುಜಂಗಾವಳಿ ಎಂಬ ಉಪ ಪ್ರಬೇಧಗಳು ಕಂಡುಬರುತ್ತವೆ. ಪರ್ವತಾವಳಿಯಲ್ಲಿ ಮೂವರ ಕೋಣೆಯ ಸಂತತಿ, ಶಿವಲಿಂಗಿ ಸಂತತಿ, ಬೆಳ್ಳಿಯ ಸಂತತಿ, ಕಿಟ್ಟಗಾವಿಯ ಸಂತತಿ, ಅಗಸ್ತ್ಯೇಶ್ವರ ಸಂತತಿಗಳು, ಭುಜಂಗಾವಳಿಯಲ್ಲಿ ಇಟ್ಟಿಗೆಯ ಸಂತತಿಯು ಇದ್ದವು. ಹೀಗೆ ಒಬ್ಬ ಶೈವ ಯತಿಯ ಹೆಸರಿನ ಪರಂಪರೆಯ ಮಠಗಳು ಕರ್ನಾಟಕದಲ್ಲಿ ಪ್ರಾದೇಶಿಕವಾಗಿ ಬೆಳೆದು ಬಂದುದರ ಮೂಲಕ ಲಕುಲೀಶ ಪಾಶುಪತದಲ್ಲಿ ವಿವಿಧ ರೀತಿಯ ಪ್ರಬೇಧಗಳು. ಶಾಖೋಪಶಾಖೆಗಳು ಹುಟ್ಟಿಕೊಂಡವು. ಇದು ಆ ಧರ್ಮದ ಪ್ರಗತಿಶೀಲತೆಯನ್ನು ಸೂಚಿಸುತ್ತವೆ. ವಿದ್ವಾಂಸರು ಶಕ್ತಿ ಪರ್ಷೆಯ ಈ ಎರಡು ಪ್ರಬೇಧ ಉಪಪ್ರಬೇಧಗಳ ಬಗೆಗೆ ಇಲ್ಲಿಯವರೆಗೆ ಸಾಕಷ್ಟು ವಿವರಿಸಿದ್ದಾರೆ, ವಿವೇಚಿಸಿದ್ದಾರೆ. ಆದರೆ ಸಿಂಹಪರ್ಷೆಯ ವಿವರಗಳು ಅಷ್ಟಾಗಿ ಸಿಗುವುದಿಲ್ಲವೆಂದು ಹೇಳಿ ವಿವೇಚನೆಗೆ ವಿರಾಮ ನೀಡಿದ್ದಾರೆ. ಈ ಸಂಗತಿಯನ್ನು ಗಮನಿಸಿದ ಡಾ. ಬಿ. ಆರ್. ಹಿರೇಮಠರು ಲಕುಲೀಶ ಪಾಶುಪತದ ಪ್ರಮುಖ ಪ್ರಭೇದವಾದ ಸಿಂಹಪರ್ಷೆಯ, ಅದರಲ್ಲೂ ಏಳಮೇಲ ಸಿಂಹ ಪರ್ಷೆಯ ಕುರಿತು ಸಿಗುವ ಪ್ರಕಟಿತ - ಅಪ್ರಕಟಿತ ಶಾಸನಗಳನ್ನು ಉಲ್ಲೇಖಿಸಿ ಪ್ರಸ್ತುತ ಲೇಖನವನ್ನು ಸಿದ್ಧಪಡಿಸಿದ್ದಾರೆ. ವೀರಶೈವ ಸಾಹಿತ್ಯಕ್ಕೆ ಇದು ಅಮೂಲ್ಯ ಕೊಡುಗೆಯಾಗಿದೆ. ಏಳಮೇಲ ಸಿಂಹಪರ್ಷೆಯ ಕುರಿತಾಗಿ ಡಾ. ಬಿ.ಆರ್. ಹಿರೇಮಠರು ಹೊಚ್ಚ ಹೊಸ ಸಂಗತಿಯನ್ನು ಪ್ರಪ್ರಥಮಬಾರಿಗೆ ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ.

"ಡಾ. ಬಿ. ಆರ್. ಹಿರೇಮಠ ಅವರು ಸುದೀರ್ಘ ವಿವೇಚನೆ ಮಾಡುತ್ತ ಹಲವಾರು ಶಾಸನಗಳು, ಸಂಶೋಧನಾ ಆಧಾರವಾಗಿಟ್ಟುಕೊಂಡು ವಿಷಯವನ್ನು ವಿವೇಚಿಸುತ್ತ ಅಂತಿಮ ತೀರ್ಮಾನಕ್ಕೆ ಬಂದದ್ದು ಹೀಗಿದೆ." ಕರ್ನಾಟಕದ ಲಕುಲೀಶ ಪಾಶುಪತದ ಸಿಂಹಪರ್ಷೆ ೧೦ನೇ ಶತಮಾನದ ಅಂತ್ಯ, ಇಲ್ಲವೆ ೧೧ನೇ ಶತಮಾನದ ಆದಿಯಿಂದ ಆರಂಭವಾಯಿತೆಂದು ಗೊತ್ತಾಗುತ್ತದೆ. ಒಟ್ಟಿನಲ್ಲಿ ಕರ್ನಾಟಕದ ಲಕುಲೀಶ ಪಾಶುಪತದಲ್ಲಿ ಸಿಂಹಪರ್ಷೆ ಮೊದಲಿನದು-ಶಕ್ತಿ ಪರ್ಷೆ ಆಮೇಲಿನದು ಎಂಬ ಸಂಗತಿ ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ.:"[೧೧೫] ಈ ಮಾತುಗಳು ಬಿ. ಆರ್. ಅವರ ಸಂಶೋಧನ ಸತ್ವಕ್ಕೆ ಸಾಕ್ಷಿಯಾಗಿವೆ. ಐತಿಹಾಸಿಕ ಮಹತ್ವವುಳ್ಳ ಲೇಖನದಲ್ಲಿ ೨೧ ಶಾಸನಗಳನ್ನು ಪರಿಶೀಲಿಸಿ ಹಲವು ಮಹತ್ವದ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ೨೦ ಅಡಿಟಿಪ್ಪಣಿಗಳನ್ನು ಬಳಸಿ ಸಿದ್ಧವಾದ ಈ ಲೇಖನ ಡಾ. ಬಿ. ಆರ್. ಅವರ ವಸ್ತುನಿಷ್ಠ ಸಂಶೋಧನೆಗೊಂದು ನಿದರ್ಶನವಾಗಿದೆ. "ಬಸವ ಪೂರ್ವಯುಗದಲ್ಲಿ ಆಕಾರ ಪಡೆದ ಈ ಹೊಸ ಪಾಶುಪತವು ಅಭಿನವೀಕರಣದತ್ತ ಹೆಜ್ಜೆ ಹಾಕುತ್ತಲಿದ್ದಿತೆಂದು ಹೇಳಬಹುದಾಗಿದೆ. ಇದು ಬಸವ ಪೂರ್ವದ ವೀರಶೈವದ ಅಧ್ಯಯನಕ್ಕೆ ಉಪಯುಕ್ತ ಆಕರವೆನಿಸಿದೆ"[೧೧೬] ಎಂದು ಅಂತಿಮ ತೀರ್ಮಾನಕ್ಕೆ ಬಂದು ಎಳಮೇಲು ಸಿಂಹಪರ್ಷೆಯ ಲಕುಲೀಶ ಪಂಥದ ಶಿಷ್ಯ ಪ್ರಶಿಷ್ಯ ಪರಂಪರೆಗಳನ್ನು ಹೊಸದಾಗಿ ಪುನರ್ ರಚಿಸಿದ್ದಾರೆ. ಲೇಖನದ ಕೊನೆಗೆ ೧೭ ಪ್ರಮುಖ ಅಂಶವನ್ನು ಪ್ರಸ್ತಾಪಿಸಿದ್ದಾರೆ. ಕೊನೆಗೆ ದೇವಾಲಯ ನಿರ್ಮಾಣ, ಮಠ ಸ್ಥಾಪನೆ, ದಾನ ಸ್ವೀಕಾರ, ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳ ಪ್ರಸಾರ, ವಚನ ರಚನೆ, ರಾಜಾಪ್ರಜೆ, ಮನ್ನಣೆ ಮೊದಲಾದ ಕಾರ್ಯಗಳು 'ಅಭಿ'ನವ ಪಾಶು 'ಪತ'ದವರಿಂದ ನಡೆದವು ಎಂಬ ಮಹತ್ವದ ಸಂಗತಿಗಳನ್ನು ವಿವರಿಸಿದ್ದಾರೆ.

**'ಶಿವಶರಣ ಸಾತಯ್ಯ-ಶಾನ್ತಿಮಯ್ಯ-ಸಾತಿಮಯ್ಯ' :**

ಇದು ೪ ಪುಟಗಳನ್ನು ಒಳಗೊಂಡ ಕಿರುಲೇಖನ. ಶಾಸನಗಳಲ್ಲಿ ಕಂಡುಬರುವ ಸಾತಯ್ಯ ಶಾನ್ತಿಮಯ್ಯ -ಸಾತಿಮಯ್ಯ ಇವರನ್ನು ನಾಮ, ಕಾಲ, ಸಾದೃಶ್ಯದಿಂದ ಅಭಿನ್ನರೆಂದು ಹೇಳುವ ಸಾಧ್ಯತೆ ಇದೆ. ಕೆಲವು ವಿದ್ವಾಂಸರು ಸಾತಯ್ಯ, ಶಾನ್ತಿಮಯ್ಯರು ಅಭಿನ್ನರೆಂದು ಹೇಳಿದ್ದುಂಟು. ಆದರೆ ಸಾತಿಮಯ್ಯನನ್ನು ಮೇಲಿನವರ ಜೊತೆಯಲ್ಲಿ ತಳುಕು ಹಾಕುವುದಾಗಲಿ ಅವನನ್ನು ಕುರಿತು ಚರ್ಚಿಸುವುದಾಗಲಿ ಕಂಡು ಬಂದಿಲ್ಲ. ಇದೇ ವಿಷಯವಾಗಿ ಪ್ರಸ್ತುತ ಲೇಖನದಲ್ಲಿ ಚರ್ಚೆ ಇದೆ. ಈ ಚರ್ಚೆಯನ್ನು ಹೀಗೆ ಇತ್ಯರ್ಥ ಗೊಳಿಸಲಾಗಿದೆ. "ಭೂಯಾರ, ಶಿರಿವಾಳ, ಕಡ್ಲೆವಾಡ ಶಾಸನಗಳಲ್ಲಿ ಉಲ್ಲೇಖಿತರಾದ ಸಾತಯ್ಯ, ಶಾನ್ತಿಮಯ್ಯ-ಸಾತಿಮಯ್ಯರು ಅಭಿನ್ನ ವ್ಯಕ್ತಿಗಳಲ್ಲ ಭಿನ್ನ ಭಿನ್ನ ವ್ಯಕ್ತಿಗಳೆಂದು ತಿಳಿದುಬರುತ್ತದೆ."[೧೧೭] ಇಲ್ಲಿ ಡಾ. ಬಿ. ಆರ್. ಹಿರೇಮಠರು ವ್ಯಕ್ತಿಗಳ ಹೆಸರಿನ ಸಾಮ್ಯತೆಯಿಂದ ಒಂದೇ ಎಂದು ಪರಿಗಣಿಸಿದ ಸಂದರ್ಭದಲ್ಲಿ ತಮ್ಮ ಆಳವಾದ ಸಂಶೋಧನೆಯಿಂದ

ಶಾಸನಗಳ ಪರಿವೀಕ್ಷಣೆಯಿಂದ ವ್ಯಕ್ತಿಗಳು ಬೇರೆ ಬೇರೆ ಎಂದು ಸಿದ್ಧಪಡಿಸಿದ್ದಾರೆ. ಇಂತಹ ಸಣ್ಣ ಸಣ್ಣ ಸಂಗತಿಗಳ ಕುರಿತು ಎಷ್ಟೊಂದು ಗಂಭೀರವಾಗಿ ಆಲೋಚಿಸುತ್ತಿದ್ದಾರೆಂಬುದಕ್ಕೆ ಈ ಲೇಖನ ಒಂದು ಉತ್ತಮ ಉದಾಹರಣೆಯಾಗಿದೆ.

**'ಏಕಾಂತ ರಾಮಯ್ಯ ಇನ್ನಷ್ಟು ಹೊಸ ಸಂಗತಿಗಳು' :**

ಇದು ೫ ಪುಟಗಳ ವ್ಯಾಪ್ತಿಯನ್ನೊಳಗೊಂಡ ಲೇಖನ, ಈ ಲೇಖನದಲ್ಲಿ ಅಬ್ಬಲೂರು ಶಾಸನವನ್ನು ಹೊರತುಪಡಿಸಿ ಕೆಂಪನೂರು ಗ್ರಾಮದ ಶಾಸನ, ಏಕಾಂತರಾಮಯ್ಯನ ಅನ್ವಯೋಬ್ಧೂತವಾದ 'ಏಕಾಂತರಾಮಯ್ಯ' ಕುರಿತಾಗಿ ಇರುವ ಶಾಸನದ ಜಿಜ್ಞಾಸೆ ಇದೆ. ಕೆಂಪನೂರು ಶಾಸನದ ಪೂರ್ಣ ಪಠ್ಯವನ್ನು ಕೊಟ್ಟು ದೇವನಾಗರಿ ಲಿಪಿಯಲ್ಲಿರುವ ಈ ಶಾಸನ ಯಾವುದೇ ಅರಸು ಅಥವಾ ಮಹಾಮಂಡಲೇಶ್ವರರ ಆಳ್ವಿಕೆಯನ್ನು ಉಲ್ಲೇಖಿಸುವುದಿಲ್ಲ ಎಂದು ಸ್ಪಷ್ಟಪಡಿಸುತ್ತಾರೆ. ಮುಂದೆ ಶಾಸನದ ವಿಷಯ ಏಕಾಂತರಾಮಯ್ಯ, ಏಕಾಂತ ಬಸವೇಶ್ವರ ಮುಂತಾದ ಉಪಶೀರ್ಷಿಕೆಗಳ ಅಡಿಯಲ್ಲಿ ವಿಷಯವನ್ನು ವಿಶ್ಲೇಷಿಸುತ್ತಾರೆ. ಎರಡನೆ ಭಾಗದಲ್ಲಿ ಏಕಾಂತ ರಾಮಯ್ಯನ ವಿಗ್ರಹ ಮತ್ತು ದೇವಾಲಯ ಕುರಿತಾಗಿ ಚರ್ಚಿಸುತ್ತಾರೆ.

**೧೨ನೇ ಶತಮಾನದ ತರುವಾಯ ವಚನ ಸಾಹಿತ್ಯದ ಸಂರಕ್ಷಣೆ ಪ್ರಸಾರ :**

ಈ ಲೇಖನದಲ್ಲಿ ೧೨ನೇ ಶತಮಾನದ ವಚನ ಚಳುವಳಿ, ಕಲ್ಯಾಣ ಕ್ರಾಂತಿ ಹರಿಹರ ರಾಘವಾಂಕರ ವೀರಶೈವ ಸಾಹಿತ್ಯ. ೧೩-೧೪ ಶತಮಾನದಲ್ಲಿ ಮಹಮ್ಮದೀಯರ ದಾಳಿ, ವಿಜಯನಗರ ಸಾಮ್ರಾಜ್ಯ ಪ್ರೌಢದೇವರಾಯ, ಲಕ್ಕಣ ದಂಡೇಶ ಕಾಲಕ್ಕೆ ವಚನ ಸಾಹಿತ್ಯದ ಪುನರುತ್ಥಾನ, ಶೂನ್ಯ ಸಂಪಾದನೆಗಳು ಮುಂದೆ ಕಾಲಕಾಲಕ್ಕೆ ವೀರಶೈವ ಮಠಗಳು ವಚನ ಸಾಹಿತ್ಯ ಸಂರಕ್ಷಣೆ ಮತ್ತು ಪ್ರಸಾರ ಮಾಡಿದ್ದನ್ನು ವಿವರಿಸಿದ್ದಾರೆ.

**ತೋಂಟದ ಸಿದ್ಧಲಿಂಗಯತಿ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರ ಕಾಲ ಮರುಪರಿಶೀಲನೆ. :**

ಇದು ೪ ಪುಟದ ವ್ಯಾಪ್ತಿಯನ್ನೊಳಗೊಂಡ ಲೇಖನ ತೋಂಟದ ಸಿದ್ಧಲಿಂದ ಶಿವಯೋಗಿಗಳ ಕಾಲವನ್ನು ಕುರಿತು ಡಾ. ಎಲ್. ಬಸವರಾಜು, ಡಾ. ಎಸ್. ಶಿವಣ್ಣ ಮತ್ತು ಡಾ. ಎಂ. ಎಂ. ಕಲಬುರ್ಗಿಯವರು ಚರ್ಚಿಸಿದ್ದಾರೆ. "ತೋಂಟದಾರ್ಯರು ಬದುಕಿದ ಅವಧಿ ೧೫ನೇ ಶತಮಾನದ ೩ನೆಯ ಪಾದವಲ್ಲ. ೧೬ನೇ ಶತಮಾನದ ಮೂರನೆಯ ಪಾದವೆಂದು ಮತ್ತೂ ಸ್ಪಷ್ಟವಾಗುತ್ತದೆ ಎಂದು ಹೇಳುವ ಡಾ. ಎಂ. ಎಂ. ಕಲಬುರ್ಗಿಯವರ ಅಭಿಪ್ರಾಯಕ್ಕೆ ಪೋಷಕವಾಗುವ ಒಂದು ಹೊಸ ಅಂಶವನ್ನು ಇಲ್ಲಿ ಸೇರಿಸಬಯಸುತ್ತೇನೆ"[೧೧೮] ಎನ್ನುವಲ್ಲಿ ಈ ಲೇಖನದ ಆಶಯ ಸ್ಪಷ್ಟವಾಗಿದೆ. ತೋಂಟದ ಸಿದ್ಧಲಿಂಗಯತಿ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರ ಕಾಲವನ್ನು

ಪರಿಶೀಲನೆಗೊಳಪಡಿಸುತ್ತ ಹಲವಾರು ಆಧಾರಗಳನ್ನು ಒದಗಿಸಿ ಕೊನೆಗೆ ಇತ್ಯರ್ಥಕ್ಕೆ ಬಂದದ್ದು ಹೀಗೆ. "ಗೂಳೂರು ಸಿದ್ಧವೀರಣ್ಣಾರ್ಯರ ಕಾಲ ಕ್ರಿ.ಶ. ೧೫೧೦ ಅಲ್ಲ. ಕ್ರಿ.ಶ. ೧೬೧೬ ಎಂದು ನಿರ್ಧಾರವಾಗುತ್ತದೆ. ಇದು ವಿರಕ್ತ ತೋಂಟದಾರ್ಯರ ಕಾಲವೂ ಆಗಿದೆ. ಇದರಿಂದ ಗೂಳೂರು ಸಿದ್ಧವೀರಣ್ಣೊಡೆಯರು ಇಮ್ಮಡಿ ಚಿಕ್ಕಭೂಪಾಲನ ತರುವಾಯವೂ ಇದ್ದರೆಂದು ತಿಳಿದುಬರುತ್ತದೆ. ಒಟ್ಟಿನಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲ ಕ್ರಿ.ಶ. ೧೫೭೦ ಗುಮ್ಮಳಾಪುರದ ಸಿದ್ಧಲಿಂಗದೇವರ ಕಾಲ ಕ್ರಿ.ಶ. ೧೫೮೦ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರ ಕಾಲ. ಕ್ರಿ.ಶ. ೧೬೧೬ ಎಂಬ ವಿಷಯಗಳು ಗೊತ್ತಾಗುತ್ತವೆ"[೧೧೯] ಇಲ್ಲಿ ಒಂದು ಅಂಶ ಸ್ಪಷ್ಟವಾಗಿದೆ. ಬಿ. ಆರ್. ಹಿರೇಮಠರು ಈ ಕೃತಿಯ ಮೊದಲ ಲೇಖನದಲ್ಲಿ ಡಾ. ಎಂ. ಎಂ. ಕಲಬುರ್ಗಿಯವರ ಅಭಿಪ್ರಾಯವನ್ನು ನಿರಾಕರಿಸಿದ್ದಾರೆ. ಪ್ರಸ್ತುತ ಲೇಖನದಲ್ಲಿ ಅವರ ಅಭಿಪ್ರಾಯವನ್ನು ಅನುಮೋದಿಸಿ ಅದಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿದ್ದಾರೆ. ಇದರಿಂದ ಸ್ಪಷ್ಟವಾಗುವ ಸಂಗತಿ ಏನೆಂದರೆ ಸತ್ಯ ಸಂಗತಿಗಳನ್ನು ಅನಾವರಣಗೊಳಿಸುವುದಾಗಿದೆ.

**ಗೋಸಲ ಪೀಠ ಪರಂಪರೆಯ ಸಾಹಿತ್ಯ:**

ಇದು ೧೧ ಪುಟಗಳ ಸುದೀರ್ಘ ಲೇಖನ. ಇದರಲ್ಲಿ ವೀರಶೈವ ಸಾಹಿತ್ಯ ಪರಂಪರೆ ವೀರಶೈವ ಸಾಹಿತ್ಯದ ಉತ್ತರಾಧಿಕಾರಿಗಳಾಗಿ ಬಂದ ಹರಿಹರ, ರಾಘವಾಂಕ, ಭೀಮಕವಿಗಳ ಸಾಹಿತ್ಯ ಮುಂದೆ ಬಂದ ಸೃಜನ ಸಾಹಿತ್ಯ, ವಚನಸಾಹಿತ್ಯ, ಸ್ವರವಚನ ಸಾಹಿತ್ಯ, ಕಾವ್ಯ ಸಾಹಿತ್ಯ, (ಶ್ರವ್ಯ ದೃಶ್ಯ) ಸಂಕಲನ ಸಾಹಿತ್ಯ, ಸಂಪಾದನಾ ಸಾಹಿತ್ಯ, ಸಂಗ್ರಹ (ಸಂಕ್ಷೇಪ) ಸಾಹಿತ್ಯ, ವ್ಯಾಖ್ಯಾನ ಸಾಹಿತ್ಯ ಮುಂತಾದ ಉಪಶೀರ್ಷಿಕೆಗಳಲ್ಲಿ ವಿಷಯವನ್ನು ಸುದೀರ್ಘವಾಗಿ ಪರಾಮರ್ಶಿಸಿದ್ದಾರೆ. "ಗೋಸಲ ಪೀಠಪರಂಪರೆಯವರು ರಚಿಸಿದ ವೀರಶೈವ ವ್ಯಾಖ್ಯಾನ ಸಾಹಿತ್ಯ ೧) ವಚನಗಳಿಗೆ ಬರೆದ ವ್ಯಾಖ್ಯಾನ ೨) ಕನ್ನಡ ಕೃತಿಗಳಿಗೆ ಬರೆದ ವ್ಯಾಖ್ಯಾನ ೩) ಸಂಸ್ಕೃತ ಕೃತಿಗಳಿಗೆ ಬರೆದ ಕನ್ನಡ ವ್ಯಾಖ್ಯಾನ ಹೀಗೆ ಮೂರು ಪ್ರಕಾರದ್ದಾಗಿರುತ್ತದೆ"[೧೨೦] ಎಂದು ಹೇಳಿ "ಗೋಸಲ ಪೀಠ ಪರಂಪರೆಯವರ ಸಂಕಲನ, ಸಂಪಾದನಾ, ವ್ಯಾಖ್ಯಾನ ಕಾರ್ಯವನ್ನು ಗ್ರಂಥ ಲೇಖನ ಕಾರ್ಯದಲ್ಲಿ ನಿರತರಾಗಿದ್ದ ಬಿಜಾಂಟೆಯ ಪ್ರದೇಶದ ಕ್ರೈಸ್ತ ಮಠಗಳನ್ನೂ ಇಜಿಪ್ತದ ಪ್ರಸಿದ್ಧ ಗ್ರಂಥ ಸಂಪಾದಕ ಜಿನೋಡೋಟಸ್, ಶಿಷ್ಯ ಅರಿಸ್ಟೋಫೆನಿಸ್, ಶಿಷ್ಯ ಅರಿಸ್ಟಾರ್ಕಸ್‌ರ ಗುರು ಶಿಷ್ಯ ಪರಂಪರೆಯನ್ನೂ ನಮಗೆ ನೆನಪಿಸಿ ಕೊಡುತ್ತದೆ."[೧೨೧] ೧೫, ೧೬ನೇ ಶತಮಾನದ ಗೋಸಲ ಪೀಠದ ಶಿಷ್ಯ ಪ್ರಶಿಷ್ಯರ ಸಾಹಿತ್ಯವೆಂದರೆ ಕನ್ನಡ ಸಾಹಿತ್ಯವೆಂದೇ ಅರ್ಥ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗೋಸಲ ಪೀಠ ಪರಂಪರೆಯವರು ನೀಡಿದ ಕೊಡುಗೆಯನ್ನು ಪರಿಭಾವಿಸಬೇಕು ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ.

**ಉಪಶೂನ್ಯ ಸಂಪಾದನೆಗಳು ಒಂದು ಅಧ್ಯಯನ :**

ಇದು ೫ ಪುಟದ ಲೇಖನ. ಇದರಲ್ಲಿ ಶೂನ್ಯ ಸಂಪಾದನೆಗಳು, ಉಪಶೂನ್ಯ ಸಂಪಾದನೆಗಳ ಜಿಜ್ಞಾಸೆ ಇದೆ. ಸಂಪಾದನೆಯ ವಚನಗಳು, ಸುಖಸಂಪಾದನೆಯ ವಚನಗಳು ಎರಡನ್ನು ತೌಲನಿಕವಾಗಿ ವಿವೇಚಿಸಿದ್ದಾರೆ. "ಶಿರ್ವಣ ಪ್ರಸಾದಿ ಮಹಾದೇವಯ್ಯಗಳ 'ಶೂನ್ಯ ಸಂಪಾದನೆ'ಯ ತರುವಾಯ, ಹಲಗೆಯ ದೇವರ 'ಶೂನ್ಯ ಸಂಪಾದನೆ'ಗಿಂತ ಮೊದಲು ನುಲಿಯ ಚೆಂದಯ್ಯಗಳ ಸಂಪಾದನೆ, ಘಟ್ಟಿವಾಳಯ್ಯನ ಸಂಪಾದನೆ ಆಯ್ದಕ್ಕಿ ಮಾರಯ್ಯಗಳ ಸಂಪಾದನೆಗಳು 'ಸಂಪಾದನೆಯ ವಚನಗಳು' ಹಾಗೂ 'ಸುಖ ಸಂಪಾದನೆಯ ವಚನಗಳು' ಎಂಬ 'ಉಪಶೂನ್ಯ ಸಂಪಾದನೆ' ಕೃತಿಗಳಲ್ಲಿ ಇದ್ದವೆಂಬುದು ಗೊತ್ತಾಗುತ್ತದೆ. ಈ 'ಉಪಶೂನ್ಯ ಸಂಪಾದನೆ'ಗಳಲ್ಲಿ ಕೆಲವು ವಚನಗಳಿದ್ದು. ಮಧ್ಯದಲ್ಲಿ ಗದ್ಯವಿರುವುದಿಲ್ಲ. ಆದರೆ ವಿವಿಧ ಸಂಪಾದನೆಗಳನ್ನು ಸೂಚಿಸುವಾಗ ಮಾತ್ರ ಒಂದು ವಾಕ್ಯದ ಮಟ್ಟಿಗಿನ ಗದ್ಯವನ್ನು ಬಳಸಲಾಗಿದೆ."[೧೨೨] ಇದರಲ್ಲಿ ಶೂನ್ಯ ಸಂಪಾದನೆ- ಉಪಶೂನ್ಯ ಸಂಪಾದನೆ ರಚನೆ ಹಾಗೂ ಅವುಗಳ ಕಾಲಾವಧಿಯನ್ನು ಚರ್ಚಿಸಲಾಗಿದೆ. ಉಪಶೂನ್ಯ ಸಂಪಾದನೆಯು ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆಯ ತರುವಾಯ ಹುಟ್ಟಿಕೊಂಡಿರುತ್ತದೆ. ಶೂನ್ಯ ಸಂಪಾದನೆಗಳ ಸಂಖ್ಯೆ ಅಧಿಕಗೊಂಡು ಅಧ್ಯಯನಕ್ಕೆ ಹೊಸ ಸ್ವರೂಪ ಪ್ರಾಪ್ತವಾದಂತಾಗಿದೆ"[೧೨೩] ಎಂಬ ಮಾತು ಶೂನ್ಯ ಸಂಪಾದನೆಗಳ ತೌಲನಿಕ ಅಧ್ಯಯನಕ್ಕೆ ನಿದರ್ಶನ ಒದಗಿಸುತ್ತದೆ.

**ಶೂನ್ಯ ಸಂಪಾದನೆ ಹಾಗೂ ಏಕೋತ್ತರ ಶತಸ್ಥಲಗಳ ಸಂಗ್ರಹ ಕೃತಿಗಳು :**

ಇದು ೮ ಪುಟಗಳ ಲೇಖನ ಇದರಲ್ಲಿ ಶೂನ್ಯ ಸಂಪಾದನೆ ಏಕೋತ್ತರ ಶತಸ್ಥಲಗಳ ಸಂಗ್ರಹ ಕೃತಿಗಳ ಜಿಜ್ಞಾಸೆಯಾಗಿದೆ. ಇದರಲ್ಲಿ ಸಂಗ್ರಹ, ಸಂಕಲನ, ಸಂಪಾದನೆ ಕೃತಿಗಳ ವಿವೇಚನೆ ಇದೆ.

**ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದನಹಳ್ಳಿ ಬಸವಲಿಂಗ ಸ್ವಾಮಿ :**

ಈ ಲೇಖನ ೫ ಪುಟ ವ್ಯಾಪ್ತಿಯನ್ನು ಒಳಗೊಂಡಿದೆ. ಮಹಾನಾಡ ಪ್ರಭು ಕರಿತಿಮ್ಮ ಚಿಕ್ಕಪ್ಪಗೌಡ ಹಾಗೂ ಸೋಮಾಂಬಿಯರಿಗೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಆಶೀರ್ವಾದದಿಂದ ಹುಟ್ಟಿದ ಮಗ, ಇಮ್ಮಡಿ ಚಿಕ್ಕಭೂಪಾಲ. ಹರವೆಯ ಕಾಳಗದಲ್ಲಿ ಇಮ್ಮಡಿ ಚಿಕ್ಕಭೂಪಾಲ ಹಾಗೂ ಮಗ ತೋಂಟದರಾಯ ಮರಣವನ್ನಪ್ಪಿದರು. ನಂತರ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯರಾದ ಬೋಳಬಸವೇಶ್ವರರು, ಇಮ್ಮಡಿ ಚಿಕ್ಕಭೂಪಾಲನ ಎರಡನೆಯ ಮಗ ಸಪ್ಪೇಂದ್ರನಿಗೆ ಮಹಾನಾಡ ರಾಜ್ಯದ ಪಟ್ಟವನ್ನು ಕಟ್ಟಿದ ವಿಷಯ ತಿಳಿಯುತ್ತದೆ. ಅವನೇ ಮುಂದೆ ಮುಮ್ಮಡಿ ಚಿಕ್ಕಭೂಪಾಲನಾಗಿ ಬಿಜ್ಜಾವರದ ರಾಜಧಾನಿಯನ್ನು ಆಳಿದನು. ಬೋಳ ಬಸವೇಶ್ವರರು ಮುಮ್ಮಡಿ ಚಿಕ್ಕಬೂಪಾಲನ ಗುರುಗಳಾಗಿದ್ದರೆಂದು ತಿಳಿಯುತ್ತದೆ. ಡಾ. ಬಿ. ಆರ್. ಹಿರೇಮಠ ಅವರು ಈ ಅಂಶವನ್ನು ಅಧಾರವಾಗಿರಿಸಿಕೊಂಡು ಹೊಸ ಅಂಶವನ್ನು ಶೋಧಿಸಿದ್ದಾರೆ. "ತೋಂಟದ ಸಿದ್ಧಲಿಂಗ ಶಿವಯೋಗಿಗಳ

ವಂಶೋದ್ಭವ(ಶಿಷ್ಯ)ರಾದ ಹರದನಹಳ್ಳಿ ಗೋಚರ ಬಸವಲಿಂಗ ಸ್ವಾಮಿಗಳು ಮುಮ್ಮಡಿ ಚಿಕ್ಕಭೂಪಾಲನ ಎರಡನೆಯ ಗುರುಗಳಾಗಿದ್ದರೆಂಬ ಹೊಸ ಸಂಗತಿ ಬಿಜ್ಜಾವರದ ಪಡದ್ಯೆಯ್ಯನವರ ಮನೆಯಲ್ಲಿರುವ ಕಾಗದದ ಪ್ರತಿಯಿಂದ ವೇದ್ಯವಾಗುತ್ತದೆ. ಈ ಮನೆತನದವರು, ಆತನು ಮುಮ್ಮಡಿ ಚಿಕ್ಕಭೂಪಾಲ ಮನೆತನದ ಗುರುಗಳೆಂದು ಹೇಳುವರು. ಮಹಾನಾಡ ಪ್ರಭುಗಳ ರಾಜಧಾನಿಯಲ್ಲಿಯೇ ಈ ಹಸ್ತಪ್ರತಿ ದೊರೆತಿರುವುದು ಹೆಚ್ಚು ಮಹತ್ವಪೂರ್ಣವೆನಿಸಿದೆ" [೧೨೪] ಎಂದು ತಿಳಿಸಿದ್ದಾರೆ. ತಾವು ಕೈಕೊಂಡ ಕ್ಷೇತ್ರಕಾರ್ಯದಲ್ಲಿ ಲಭಿಸಿದ ಹಸ್ತಪ್ರತಿಯ ಆಧಾರದ ಮೇಲಿಂದ ಈ ಲೇಖನವನ್ನು ಕಟ್ಟಿಕೊಟ್ಟಿದ್ದಾರೆ. ಈ ಮಹತ್ವದ ಸಂಗತಿಗಳನ್ನು ಇದರಲ್ಲಿ ದಾಖಲಿಸಿದ್ದಾರೆ.* "ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯರಾದ ಹರದನಹಳ್ಳಿ ಗೋಚರ ಬಸವಲಿಂಗಸ್ವಾಮಿಗಳನ್ನು ಮೊದಲಬಾರಿಗೆ ಪರಿಚಯಿಸಿಕೊಡುತ್ತದೆ. ಬಿಜ್ಜಾವರದ ಹಸ್ತಪ್ರತಿ ಬೋಳಬಸವೇಶ್ವರರ ತರುವಾಯ ಬಸವಲಿಂಗಸ್ವಾಮಿಗಳು (ಕ್ರಿ.ಶ. ೧೬೪೫) ಬಿಜ್ಜಾವರದಲ್ಲಿ ಮಹಾನಾಡ ಪ್ರಭುಗಳ ಗುರುಗಳಾಗಿ ನಿಂತದ್ದು ರಾಜಶಕ್ತಿ. ಧರ್ಮ ಶಕ್ತಿಗಳ ಅಪೂರ್ವ ಸಂಗಮವೆನಿಸಿದೆ. ಸಿದ್ಧಲಿಂಗ ಶಿವಯೋಗಿಗಳ ಕಾಲದಲ್ಲಿ ಎಡೆಯೂರು ವೀರಶೈವರ ಮರುಸುಗ್ಗಿಗೆ ಕೇಂದ್ರವಾಗಿದ್ದರೆ, ಬೋಳಬಸವೇಶ್ವರ ಹಾಗೂ ಬಸವಲಿಂಗದೇವರ ಸಮಯದಲ್ಲಿ ಬಿಜ್ಜಾವರ ವೀರಶೈವ ಚಟುವಟಿಕೆಗಳ ಪ್ರಧಾನ ಸ್ಥಳವಾಗಿದ್ದಿತು. ಮಹಾನಾಡ ಪ್ರಭುಗಳು ವೀರಶೈವಕ್ಕೆ ರಾಜಾಶ್ರಯ ನೀಡಿ ಅದನ್ನು ಬೆಳೆಸುತ್ತಾ ಬಂದರು."[೧೨೫] ಈ ರೀತಿಯಾಗಿ ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದನಹಳ್ಳಿ ಬಸವಲಿಂಗ ಸ್ವಾಮಿಗಳು ಅವರ ಕುರಿತಾಗಿ ಹೊಸ ಅಂಶಗಳನ್ನು ಪ್ರಪ್ರಥಮ ಬಾರಿಗೆ ಡಾ. ಬಿ. ಆರ್. ಅವರು ತಿಳಿಸಿದ್ದಾರೆ.

**ಕೆಳದಿ: ಕನ್ನಡ ಧಾರ್ಮಿಕ ಸಾಹಿತ್ಯ :**

ಇದು ೧೧ ಪುಟಗಳ ಸುದೀರ್ಘ ಲೇಖನ. ಈ ಲೇಖನದಲ್ಲಿ ವಿಜಯನಗರ ಸಾಮ್ರಾಜ್ಯದ ತರುವಾಯ ವೀರಶೈವ ಅರಸು ಮನೆತನನಗಳ ಸ್ಥೂಲವಾದ ಪಕ್ಷಿನೋಟ ಕೊಟ್ಟು ಕೆಳದಿ ಅರಸು ಮನೆತನಗಳ ಪರಿಚಯ ಮಾಡಿದ್ದಾರೆ. ಕೆಳದಿ ಅರಸು ಮನೆತನಗಳ ಆಸ್ಥಾನದ ಧಾರ್ಮಿಕ ಸಾಹಿತ್ಯವನ್ನು ವ್ಯಾಖ್ಯಾನ ಕೃತಿ, ಪದ್ಯಕೃತಿ, ಗದ್ಯಕೃತಿ ಎಂದು ಮುಖ್ಯವಾಗಿ ಮೂರು ವಿಧವಾಗಿ ವಿಂಗಡಿಸಿಕೊಂಡಿದ್ದಾರೆ. ಇದರಲ್ಲಿ ವ್ಯಾಖ್ಯಾನ ಕೃತಿಗಳು ಪ್ರಥಮವಾಗಿದ್ದು ಸಟೀಕಾ ಪುರುಷ ಸೂಕ್ತ, ನಮಕ, ಚಮಕ ಅಥವಾ ಶ್ರೀರುದ್ರ ಕರ್ನಾಟಕದ ಟೀಕೆ, ವೀರಮಾಹೇಶ್ವರ ತಂತ್ರದ ಟೀಕೆ, ವೀರಮಾಹೇಶ್ವರಾಚಾರ್ಯ ಸುಧಾವಾರ್ಧಿಟೀಕೆ, ವೀರಶೈವ ಸುಧಾನಿಧಿ ಟೀಕೆ ಮುಂತಾದ ಉಪಭಾಗಗಳಿವೆ. ೨ನೇ ಭಾಗದಲ್ಲಿ ಪದ್ಯಕೃತಿಗಳನ್ನು ಪರಿಚಯಿಸುತ್ತ ಅವುಗಳಲ್ಲಿ ಸ್ವತಂತ್ರಕೃತಿಯಾದ ಸ್ವಪೂಜಾದರ್ಶನ, ಗಣ, ಸಹಸ್ರನಾಮಗಳನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ಸೃಜನೇತರ ಕೃತಿಗಳಲ್ಲಿ ಅನುವಾದ ಕೃತಿಗಳು, ಕಾಶಿಕಾಂಡ, ಕರ್ನಾಟಕ ಶಿವಗೀತೆ ಮೊದಲಾದವುಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಮೂರನೆಯದಾಗಿ ಗದ್ಯಕೃತಿ ವಿಭಾಗದಲ್ಲಿ ಶಿವಪೂಜಾವಿಧಾನ ಕುರಿತಾಗಿ ಸುದೀರ್ಘವಾಗಿ

ವಿವರಿಸಿದ್ದಾರೆ. ಮುಂದುವರೆದು ಕೆಳದಿ ಅರಸರ ಆಸ್ಥಾನದಲ್ಲಿ ರಚನೆಯಾದ ಕನ್ನಡ ಧಾರ್ಮಿಕ ಸಾಹಿತ್ಯದಿಂದ ವ್ಯಕ್ತವಾಗುವ ಸಂಗತಿಗಳನ್ನು ಪಟ್ಟಿಮಾಡಿ ಮೂವತ್ತು ವಿಶೇಷ ಅಂಶಗಳನ್ನು ಗುರುತಿಸಿದ್ದಾರೆ. ಇದು ಲೇಖಕರ ಆಳವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ. ಈ ಲೇಖನವು ಕೆಳದಿ ಅರಸರ ಕಾಲದ ಕನ್ನಡ ಧಾರ್ಮಿಕ ಗ್ರಂಥಗಳು ಆ ಕಾಲದ ವೀರಶೈವ ಧರ್ಮ ಸ್ವರೂಪ ಧಾರ್ಮಿಕ ಸ್ಥಿತಿಗತಿ, ಸಾಂಸ್ಕೃತಿಕ ಚಟುವಟಿಕೆಗಳನ್ನು ತಿಳಿಸಿಕೊಡುತ್ತದೆ.

ಸ್ವಾದಿ ಅರಸರ ಕಾಲದ ಸಾಹಿತ್ಯ ಈ ಕೃತಿಯ ಕೊನೆಯ ಲೇಖನವಾಗಿದೆ. ಇದೊಂದು ಅತ್ಯಂತ ಮಹತ್ವದ ಸಂಶೋಧನೆಯಾಗಿದ್ದು ಕನ್ನಡ ಸಾಹಿತ್ಯಕ್ಕೆ ಬಿ. ಆರ್. ಅವರು ನೀಡಿದ ಅಪೂರ್ವ ಕೊಡುಗೆಯಾಗಿದೆ. ಇದರ ಕುರಿತಾಗಿ ಸ್ವತಂತ್ರ ಸಂಪಾದನೆಯಲ್ಲಿ ವಿಸ್ತೃತವಾಗಿ ಚರ್ಚೆಗೆ ಎತ್ತಿಕೊಳ್ಳಲಾಗುವುದು. ಈ ಲೇಖನವು ಸೋದೆ ಸದಾಶಿವರಾಯನ ಕೃತಿಗಳ ಗ್ರಂಥಕ್ಕೆ ಬರೆದ ಪ್ರಸ್ತಾವನೆಯಾಗಿದೆ. ಹೀಗೆ 'ವೀರಶೈವ ಸಂಶೋಧನೆಗಳು' ಡಾ. ಬಿ.ಆರ್. ಹಿರೇಮಠ ಅವರ ಮೌಲಿಕ ಕೃತಿಯಾಗಿದೆ. ಇದರಲ್ಲಿ ಬಂದಿರುವ ಎಲ್ಲ ಸಂಗತಿಗಳು ಮೊಟ್ಟಮೊದಲ ಬಾರಿಗೆ ಬೆಳಕು ಕಾಣುತ್ತಿರುವುದರಿಂದ ಕನ್ನಡ ಸಾಹಿತ್ಯ ಸಂಶೋಧನ ಕ್ಷೇತ್ರವನ್ನು ಈ ಕೃತಿಯು ವಿಸ್ತರಿಸಿದೆ.

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಸಂಕೀರ್ಣ ಸಾಹಿತ್ಯಕ್ಕೆ ಇದೀಗ ಹಿಂದೆಂದಿಗಿಂತಲೂ ಮಹತ್ವ ಪ್ರಾಪ್ತವಾಗಿದೆ. ಒಟ್ಟು ಸಾಹಿತ್ಯವನ್ನು ಸೃಜನಶೀಲ ಮತ್ತು ಸೃಜನೇತರ ಎಂದು ಅಧ್ಯಯದ ಅನುಕೂಲಕ್ಕಾಗಿ ವಿಭಾಗಿಸುವುದುಂಟು. ಸಂಕೀರ್ಣವು ಸೃಜನೇತರ ಸಾಹಿತ್ಯದಲ್ಲಿ ಸಮಾವೇಶಗೊಳ್ಳುತ್ತದೆ. ಡಾ. ಬಿ. ಆರ್. ಅವರು ಸೃಜನೇತರ ಸಾಹಿತ್ಯದ ಇತರ ಸಾಹಿತ್ಯದಲ್ಲಿ ಕೃಷಿಮಾಡಿರುವಂತೆ ಸಂಕೀರ್ಣ ಸಾಹಿತ್ಯ ಪ್ರಕಾರದಲ್ಲಿಯೂ ಕೃಷಿ ಮಾಡಿದ್ದಾರೆ. ಆ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಶೇಷವಾದ ಕೊಡುಗೆ ನೀಡಿದ್ದಾರೆ.

●●

## ಕೊನೆ ಟಿಪ್ಪಣಿಗಳು :

೧. ಡಾ. ಬಿ. ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು ಪುಟ - ೧೦
೨. ಅದೇ, ಪುಟ - ೧೧
೩. ಅದೇ, ಪುಟ - ೨೬
೪. ಅದೇ, ಪುಟ -೪೧
೫. ಅದೇ, ಪುಟ - ೩೬
೬. ಅದೇ, ಪುಟ - ೪೯
೭. ಅದೇ, ಪುಟ - ೭೧
* ಕುತೂಹಲಕ್ಕಾಗಿ ನೋಡಿ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ - ೧೨೭ರಿಂದ ೧೨೮
೮. ಅದೇ,ಪುಟ - ೬೬
೯. ಅದೇ, ಪುಟ - ೧೬೯
೧೦. ಅದೇ, ಪುಟ - ೧೬೯
೧೧. ಅದೇ, ಪುಟ - ೧೭೨
೧೨. ಅದೇ, ಪುಟ - ೧೭೨
೧೩. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಮುನ್ನುಡಿಯಲ್ಲಿ ಪುಟ - VIII
೧೪. ಅದೇ, ಸಮಾರೋಪ, ಪುಟ - ೧೭೦, ೧೭೧
೧೫. ಡಾ. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಕರ್ನಾಟಕದ ವರ್ತಕರು ಮುನ್ನುಡಿ ಪುಟ -೮
೧೬. ಡಾ.ಬಿ. ಆರ್. ಹಿರೇಮಠ : ವೀರಗಲ್ಲುಗಳು - ಉಪಸಂಹಾರ ಪುಟ -೪೪
೧೭. ಡಾ.ಬಿ. ಆರ್. ಹಿರೇಮಠ : ಸಂಶೋಧನಾ ಪಥ ಪುಟ - ೪೯
೧೮. ಅದೇ, ಪುಟ - ೫೫
೧೯. ಅದೇ, ಪುಟ - ೫೮
೨೦. ಡಾ.ಬಿ. ಆರ್. ಹಿರೇಮಠ : ಸಂಶೋಧನಾ ಪಥ ಪುಟ - ೬೦
೨೧. ಡಾ. ಬಿ.ವ್ಹಿ. ಮಲ್ಲಾಪುರ : ಸಂಶೋಧನಾ ಪಥ ಬೆನ್ನುಡಿ
೨೨. ಡಾ.ಬಿ. ಆರ್. ಹಿರೇಮಠ : ಸಂಶೋಧನಾ ಪಥ ಪುಟ - ೬೮
೨೩. ಅದೇ, ಪುಟ - ೬೪
೨೪. ಡಾ. ಎಂ. ಎಂ. ಕಲಬುರ್ಗಿ : ಹಸ್ತಪ್ರತಿ ಸೂಚಿ ಪ್ರಸ್ತಾವನೆ ಪುಟ-೩
೨೫. ಡಾ.ಬಿ. ಆರ್. ಹಿರೇಮಠ : ಸಂಶೋಧನಾ ಪಥ ಪುಟ - ೧
೨೬. ಅದೇ, ಪುಟ - ೧೦
೨೭. ಅದೇ, ಪುಟ - ೧೨
೨೮. ಅದೇ, ಪುಟ - ೧೨
೨೯. ಅದೇ, ಪುಟ - ೧೨
೩೦. ಡಾ.ಬಿ. ಆರ್. ಹಿರೇಮಠ : ಕನ್ನಡ ಹಸ್ತಪ್ರತಿ ಲಿಪಿಕಾರ ಪ್ರಶಸ್ತಿಗಳು ಪುಟ - ೨೬
೩೧. ಅದೇ, ಪುಟ - ೨೬
೩೨. ಅದೇ, ಪುಟ - ೨೬
೩೩. ಅದೇ, ಪುಟ - ೪೯
೩೪. ಅದೇ, ಪುಟ - ೫೨
೩೫. ಅದೇ, ಪುಟ - ೫೩
೩೬. ಅದೇ, ಪುಟ - ೬೮
೩೭. ಅದೇ, ಪುಟ - ೬೮
೩೮. ಅದೇ, ಪುಟ - ೭೧
೩೯. ಅದೇ, ಪುಟ - ೯೩
೪೦. ಬಿ.ಆರ್. ಹಿರೇಮಠ ಸಾಹಿತ್ಯ ಪರಿಶೋಧನ ಪುಟ - ೧೫
೪೧. ಅದೇ, ಪುಟ - ೧೬
೪೨. ಅದೇ, ಪುಟ - ೧೭
೪೩. ಅದೇ, ಪುಟ - ೨೪
೪೪. ಅದೇ, ಪುಟ - ೨೫

೪೫. ಅದೇ, ಪುಟ - ೫೨

೪೬. ಅದೇ, ಪುಟ - ೫೪

೪೭. ಅದೇ, ಪುಟ - ೫೪, ೫೫

* ಕುತೂಹಲಕ್ಕಾಗಿ ನೋಡಿ; ಸಾಹಿತ್ಯ ಪರಿಶೋಧನ ಪುಟ - ೬೧

೪೮. ಅದೇ, ಪುಟ - ೧೩೫

೪೯. ಅದೇ, ಪುಟ - ೧೩೬

೫೦. ಅದೇ, ಪುಟ - ೧೩೭

೫೧. ಅದೇ, ಪುಟ - ೧೫೦

೫೨ ಡಾ. ಎನ್. ಬಸವಾರಾಧ್ಯ : ಸಾಹಿತ್ಯ ಪರಿಶೋಧನ, ಮುನ್ನುಡಿ

೫೩. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಪದ ಪುಟ - ೩

೫೪. ಅದೇ, ಪುಟ - ೧೫

೫೫. ಅದೇ, ಪುಟ - ೧೫

೫೬. ಅದೇ, ಪುಟ - ೫೭

೫೭. ಅದೇ, ಪುಟ - ೬೩

೫೮. ಡಾ. ಬಿ. ಆರ್. ಹಿರೇಮಠ : ಸಾಹಿತ್ಯ ಪರಿಶೋಧನ, ಪುಟ - ೬

೫೯. ಅದೇ, ಪುಟ - ೬

೬೦. ಡಾ. ಬಿ. ಆರ್. ಹಿರೇಮಠ :ಸಾಹಿತ್ಯ ಪರಿಶೋಧ ಹರಿಹರನ ಕಾಯಕತತ್ವ ಪುಟ - ೧೩-೧೪

೬೧. ಅದೇ, ಪುಟ - ೧೨

೬೨. ಅದೇ, ಪುಟ - ೧೪

೬೩. ಡಾ. ಬಿ. ಆರ್. ಹಿರೇಮಠ :ಸಾಹಿತ್ಯ ಪರಿಶೋಧನ, ಕನ್ನಡ ಕೃತಿಗಳಿಗೆ ಬರೆದ ವೀರಶೈವ ವ್ಯಾಖ್ಯಾನ ಪುಟ - ೧೦೮

೬೪. ಅದೇ, ಪುಟ - ೧೧೨

೬೫. ಅದೇ ಪುಟ - ೧೨೨

೬೬. ಡಾ. ಬಿ. ಆರ್. ಹಿರೇಮಠ :ವೀರಶೈವ ಸಂಪದ. ಹರಿಹರನ ರಗಳೆಗಳು ಪುಟ - ೧೭

೬೭. ಅದೇ, ಪುಟ - ೨೧

೬೮. ಅದೇ, ಪುಟ - ೨೪

೬೯. ಅದೇ, ಪುಟ - ೨೯

೭೦. ಅದೇ, ಪುಟ - ೨೯

೭೧. ಅದೇ, ಪುಟ - ೩೮

೭೨. ಅದೇ, ಪುಟ - ೪೦

೭೩. ಡಾ. ಎಸ್. ಎಸ್. ಅಂಗಡಿ : ಕನ್ನಡ ಸಂಶೋಧನೆ ಮತ್ತು ಚಿದಾನಂದಮೂರ್ತಿ;ಮುನ್ನುಡಿ ಪುಟ - V

೭೪. ಡಾ. ಬಿ. ಆರ್. ಹಿರೇಮಠ :ವೀರಶೈವ ಸಂಪದ ಪುಟ - ೧೬

೭೫. ಡಾ. ಬಿ. ಆರ್. ಹಿರೇಮಠ : ನೀತಿಗೆರೆಯಲ್ಲಿ ಗುಂಡಬ್ರಹ್ಮಯ್ಯನ ವಿಗ್ರಹ ಸಂಶೋಧನಾ ಪಥ ಪುಟ - ೬೫

೭೬. ಅದೇ, ಪುಟ - ೬೫

೭೭. ಡಾ. ಬಿ. ಆರ್. ಹಿರೇಮಠ :ಸಂಶೋಧನಾ ಪಥ ಕನ್ನಡ ಸಾಹಿತ್ಯದಲ್ಲಿ ಸಂಶೋಧನೆ, ಪುಟ - ೭೬

೭೮. ಅದೇ, ಪುಟ - ೭೬

೭೯. ಅದೇ, ಪುಟ - ೭೭

೮೦. ಅದೇ, ಪುಟ - ೭೭

೮೧. ಡಾ. ಬಿ. ಆರ್. ಹಿರೇಮಠ :ಸಾಹಿತ್ಯ ಪರಿಶೋಧನ ಮಹಾನಾಡ ಪ್ರಭುಗಳ ಆಶ್ರಿತ ಕವಿ ಮಲ್ಲಿಕಾರ್ಜುನನ ಕೃತಿಗಳು ಪುಟ - ೬೫

೮೨. ಅದೇ, ಪುಟ - ೬೭

೮೩. ಅದೇ, ಪುಟ - ೬೭

೮೪. ಅದೇ, ಪುಟ - ೭೫, ೭೬

೮೫. ಅದೇ, ಪುಟ - ೮೮

೮೬. ಅದೇ, ಪುಟ - ೮೯

೮೭. ಡಾ. ಬಿ. ಆರ್. ಹಿರೇಮಠ :ಸಾಹಿತ್ಯ ಪರಿಶೋಧನ, ಹಾಗಲವಾಡಿ ರಾಜಾಶ್ರಯದ ಸೋಸಲೆ ರೇವಾಣಾಧ್ಯರು ಹಾಗೂ ಅವರ ಕೃತಿಗಳು ಸಾಹಿತ್ಯ ಪರಿಶೋಧನ, ಪುಟ - ೧೯

೮೮. ಅದೇ, ಪುಟ - ೬೩

* ಕುತೂಹಲಕ್ಕಾಗಿ ನೋಡಬಹುದು ರಾಜಾಶ್ರಯದ ಸೋಸಲೆ ರೇವಣಾಧ್ಯರು ಹಾಗೂ ಅವರ ಕೃತಿಗಳು ಸಾಹಿತ್ಯ ಪರಿಶೋಧನ ಪುಟ - ೯೩

೮೯. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಪದ, ಹರ್ಡೀಕರ ಮಂಜಪ್ಪನವರ ಮುದ್ರಣ ಪ್ರಕಾಶನ -ಪ್ರಸಾರ ಕಾಯಕ ವೀರಶೈವ ಸಂಪದ ಪುಟ - ೩೪

೯೦. ಅದೇ, ಪುಟ - ೭೮

೯೧. ಅದೇ, ಪುಟ - ೮೭

೯೨. ಅದೇ ಪುಟ - ೮೯

೯೩. ಅದೇ ಪುಟ - ೮೯

೯೪. ಅದೇ, ಪುಟ - ೯೦

೯೫. ಅದೇ, ಪುಟ - ೯೦

೯೬. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಪದ, ಸ.ಸ. ಬಸವನಾಳರ ಕಾವ್ಯ ಶಾಸ್ತ್ರ ಕೃತಿಗಳ ಪರಿಷ್ಕರಣ ವೀರಶೈವ ಸಂಪದ ಪುಟ - ೯೧

೯೭. ಅದೇ, ಪುಟ - ೯೧

೯೮. ಅದೇ, ಪುಟ - ೯೩

೯೯. ಅದೇ, ಪುಟ - ೧೧೯

೧೦೦. ಡಾ. ಬಿ. ಆರ್. ಹಿರೇಮಠ :ಶಾಸನ ಅಧ್ಯಯನ, ಧಾರವಾಡ ಜಿಲ್ಲೆಯ ಶಾಸನಗಳು ಪುಟ - ೨೮

೧೦೧. ಅದೇ ಪುಟ ೮೯

೧೦೨. ಡಾ. ಬಿ. ಆರ್. ಹಿರೇಮಠ :ವ್ಯಾಸಂಗ ತರಂಗ, ಮುಧೋಳ : ಗ್ರಾಮನಾಮ ವಿವೇಚನೆ ಪುಟ - ೨೬

೧೦೩. ಅದೇ, ಪುಟ - ೨೯

೧೦೪. ಡಾ. ಬಿ. ಆರ್. ಹಿರೇಮಠ :ವ್ಯಾಸಂಗ ತರಂಗ, ಗೋವೆಯ ಕದಂಬ ಮೂರನೆಯ ಗೋವಲದೇವನ ಪ್ರಾಚೀನ ಶಾಸನವು ಪುಟ - ೧೩೮

೧೦೫. ಅದೇ, ಪುಟ - ೧೩೮

೧೦೬. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ ನನ್ನ ನುಡಿ, ಪುಟ - V

೧೦೭. ಡಾ. ಬಿ. ಆರ್. ಹಿರೇಮಠ : ನಯಸೇನನ ಕಥನ ಕಲೆ, ವ್ಯಾಸಂಗ ತರಂಗ ಪುಟ - ೯೦

೧೦೮. ಅದೇ, ಪುಟ - ೯೨

೧೦೯. ಅದೇ, ಪುಟ - ೯೩

೧೧೦. ಅದೇ, ಪುಟ - ೯೨

೧೧೧. ಅದೇ, ಪುಟ - ೯೪

೧೧೨. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ ಸೋದೆ ಸದಾಶಿವರಾಯನ ಹೊಸ ಕೃತಿಗಳು ಪುಟ - ೧೪೨

೧೧೩. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಶೋಧನೆಗಳು ಪುಟ - ೫

೧೧೪. ಅದೇ, ನನ್ನ ಮಾತು, ಪುಟ - ೫

೧೧೫. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಶೋಧನೆಗಳು,ಏಳಮೇಲ ಸಿಂಹಪರ್ಷೆ ಅಭಿನವ ಪಾಶುಪತ ಪುಟ - ೨

೧೧೬. ಅದೇ, ಪುಟ - ೧೦

೧೧೭. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಶೋಧನೆಗಳು, ಶಿವಶರಣ ಸಾತಯ್ಯ-ಶಾನ್ತಿಮಯ್ಯ-ಸಾತಿಮಯ್ಯ ವೀರಶೈವ ಸಂಶೋಧನೆಗಳು ಪುಟ - ೧೮

೧೧೮. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಶೋಧನೆಗಳು, ತೋಂಟದ ಸಿದ್ಧಲಿಂಗ ಯತಿ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರ ಕಾಲ ಮರುಪರಿಶೀಲನೆ ಪುಟ - ೨೨

೧೧೯. ಅದೇ, ಪುಟ - ೨೨

೧೨೦. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ, ಸೋಸಲ ಪೀಠ ಪರಂಪರೆಯ ಸಾಹಿತ್ಯ, ಪುಟ - ೪೪

೧೨೧. ಅದೇ, ಪುಟ - ೪೪

೧೨೨. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ, ಉಪಶೂನ್ಯ ಸಂಪಾದನೆ ಒಂದು ಅಧ್ಯಯನ, ಪುಟ - ೪೯

೧೨೩. ಅದೇ, ಪುಟ - ೪೯

೧೨೪. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ, ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದನಹಳ್ಳಿ ಬಸವಲಿಂಗ ಸ್ವಾಮಿಗಳು ಪುಟ - ೫೯

* ವಿವರಕ್ಕೆ ನೋಡಿ ವ್ಯಾಸಂಗ ತರಂಗ, ಪುಟ - ೬೦-೬೧

೧೨೫. ಡಾ. ಬಿ. ಆರ್. ಹಿರೇಮಠ : ವ್ಯಾಸಂಗ ತರಂಗ, ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದನಹಳ್ಳಿ ಬಸವಲಿಂಗ ಸ್ವಾಮಿಗಳು ಪುಟ - ೬೨

# ಅಧ್ಯಾಯ - ೪ :
# ಗ್ರಂಥ ಸಂಪಾದನೆ

**೪.೦ ಪ್ರವೇಶ :**

ಸಂಪಾದನೆಯು ಹೊಸಗನ್ನಡ ಸಾಹಿತ್ಯದಲ್ಲಿ ಬೆಳೆದು ಬಂದಿರುವ ಸಾಹಿತ್ಯ ರೂಪವಾಗಿದೆ. ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ಸೃಜನ ಮತ್ತು ಸೃಜನೇತರ ಆಧುನಿಕ ಕನ್ನಡ ಸಾಹಿತ್ಯದ ರೂಪಗಳು ರೂಪುಗೊಂಡವು. ಸೃಜನೇತರ ಸಾಹಿತ್ಯದಲ್ಲಿ ವಿಮರ್ಶೆ, ಸಂಶೋಧನೆಗಳೊಂದಿಗೆ ಗ್ರಂಥ ಸಂಪಾದನ ಶಾಸ್ತ್ರವು ಪ್ರಮುಖವಾಗಿದೆ. ಗ್ರಂಥ ಸಂಪಾದನಶಾಸ್ತ್ರ ಎನ್ನುವುದು ಪಾಶ್ಚಾತ್ಯರ ಪರಿಕಲ್ಪನೆ (The Art of Textual Criticism) ಇಂಗ್ಲೀಷಿನಲ್ಲಿರುವ ಖತ್ರೆಯವರ ಈ ಕೃತಿಯನ್ನು ಆಧಾರವಾಗಿರಿಸಿಕೊಂಡು ಡಾ. ಡಿ. ಎಲ್. ನರಸಿಂಹಾಚಾರ್ಯರು ಕನ್ನಡ ಗ್ರಂಥ ಸಂಪಾದನಶಾಸ್ತ್ರವನ್ನು ರೂಪಿಸಿದರು. ತದನಂತರ ಡಾ. ಎಂ.ಎಂ. ಕಲಬುರ್ಗಿಯವರು ಖತ್ರೆಯವರ ಮೂಲಕೃತಿಯನ್ನು ಹಾಗೂ ಅದರಿಂದ ಕನ್ನಡಕ್ಕೆ ಬಂದ ಡಿ.ಎಲ್.ಎನ್. ಅವರ ಕೃತಿಯನ್ನು ಆಧಾರವಾಗಿರಿಸಿಕೊಂಡು ಸಾಧ್ಯಂತವಾಗಿ ಅಧ್ಯಯನಿಸಿದರು. ಡಿ.ಎಲ್.ಎನ್. ಅವರ ಕೃತಿಯ ಮಿತಿಗಳನ್ನು ಗುರುತಿಸಿ ಕನ್ನಡಕ್ಕೆ ಒಗ್ಗುವಂತೆ ಕನ್ನಡದಲ್ಲಿ ಗ್ರಂಥ ಸಂಪಾದನ ಶಾಶ್ರವನ್ನು ಪುನರ್‌ರಚಿಸಿದರು. ಡಾ. ಎಂ. ಎಂ. ಕಲಬುರ್ಗಿಯವರು ಹೇಳಿರುವಂತೆ "ಡಾ. ಡಿ.ಎಲ್.ಎನ್.ರ ಗ್ರಂಥ ಸಂಪಾದನ ಶಾಸ್ತ್ರ ಒಂದು ಆದಿ ಪ್ರಯತ್ನ ನನ್ನದು ಅಭಿನವ ಪ್ರಯತ್ನ"[1]

**ಗ್ರಂಥ ಸಂಪಾದನೆ :**

ಗ್ರಂಥ ಸಂಪಾದನೆಯು ಇತ್ತೀಚೆಗೆ ವಿದ್ವಾಂಸರನ್ನು ಸೆಳೆದಿರುವ ಪ್ರಮುಖ ಕ್ಷೇತ್ರವಾಗಿದೆ. "ಕೈಬರಹ ಗ್ರಂಥಗಳನ್ನು ಹಸ್ತ ಪ್ರತಿಗಳೆಂದೂ ಕರೆಯುತ್ತಾರೆ. ಹಸ್ತಪ್ರತಿಗಳ ಆಧಾರದಿಂದ ಕವಿಪಾಠವನ್ನು ಕಂಡುಹಿಡಿಯುವ ವಿಧಾನವೇ ಗ್ರಂಥ ಸಂಪಾದನೆ"[2] ಎಂದು ವಾಯ್.ಸಿ. ಭಾನುಮತಿ ವ್ಯಾಖ್ಯಾನಿಸಿದ್ದಾರೆ. ಯಾವುದೇ ಒಂದು ಗ್ರಂಥವನ್ನು ಲೇಖಕನು ರಚಿಸಿದಂತೆ ಸಂಯೋಜನೆ ಮಾಡಿಕೊಡುವ ಕಾರ್ಯ ಅಥವಾ ಅದಕ್ಕೆ ಹತ್ತಿರವಾಗಿರುವಂತೆ ಮಾಡುವ ಸುವ್ಯವಸ್ಥಿತ ಕ್ರಿಯೆ ಗ್ರಂಥ ಸಂಪಾದನೆಯಾಗಿದೆ. ಸಾಹಿತ್ಯ ವಾಹಿನಿಯು ಕವಿ-ವಿಮರ್ಶಕ -ಸಹೃದಯ ಈ ಮೂರು ಪಥದಲ್ಲಿ ಉದಿಸಿ ಪ್ರವಹಿಸುತ್ತದೆ. ಇದರಲ್ಲಿ ಕವಿ ಸೃಜನ ವಿಮರ್ಶಕ, ವಿಮರ್ಶನ, ಸಹೃದಯ ರಸಸ್ವಾದನದ ನಿಷ್ಮರಾಗಿರುತ್ತಾರೆ. ಇಲ್ಲಿ ಒಬ್ಬನ ಸೃಷ್ಟಿ ಇನ್ನೊಬ್ಬನಿಗೆ ಅಸ್ತ್ರ ಹೀಗಾಗಿ ದೈಹಿಕವಾಗಿ ಅಳಿದು ಗ್ರಾಂಥಿಕವಾಗಿ ಉಳಿದ ಕವಿಯ ಅಳಿವು

ಉಳಿವು ವಿಮರ್ಶಕ ಮತ್ತು ಸಹೃದಯಿಗಳನ್ನು ಅವಲಂಬಿಸಿರುತ್ತದೆ. ಅಂದರೆ ಕವಿ ರಚಿಸಿದ ಕೃತಿ ನಿರ್ಲಕ್ಷ್ಯಕ್ಕೊಳಗಾದರೆ ನಿರ್ನಾಮವಾಗುತ್ತದೆ. ವ್ಯಾಸಂಗ ಮಾಡಿದಂತೆ ದೀರ್ಘಾಯುವಾಗುತ್ತದೆ.

"ಪ್ರಾಚೀನ ಕೃತಿಗಳು ಪ್ರಕೃತಿಯ ಪ್ರಕೋಪಕ್ಕೆ ತಾಂತ್ರಿಕ ಜನತೆಯ ಉದ್ದೇಶಿತ ಅನುದ್ದೇಶಿತ ವ್ಯತ್ಯಾಸಗಳಿಗೆ ಗುರಿಯಾಗಿ ವಿರೂಪಗೊಳ್ಳುವವು. ವ್ಯವಸ್ಥಿತ ವಿಧಾನಗಳನ್ನು ಅವಲಂಬಿಸಿ ವಿರೂಪವನ್ನು ಒರೆಸಿಹಾಕಿ ಅವುಗಳನ್ನು ಮತ್ತೆ ಮೂಲರೂಪಕ್ಕೆ ತಿರುಗಿಸಬೇಕು. ಶುದ್ಧಗೊಳಿಸಬೇಕು. ಈ ಶುದ್ಧೀಕರಣಕ್ರಿಯೆ ಗ್ರಂಥ ಸಂಪಾದನೆಯಾಗಿದೆ."[೩] ಈ ಎರಡೂ ಅಭಿಪ್ರಾಯಗಳು ಕನ್ನಡ ಗ್ರಂಥ ಸಂಪಾದನ ಶಾಸ್ತ್ರವನ್ನು ಸಮಗ್ರವಾಗಿ ಪರಿಚಯಿಸುತ್ತವೆ.

ಗ್ರಂಥ ಸಂಪಾದನೆಯ ಉದ್ದೇಶ ಒಬ್ಬ ಕವಿಯನ್ನು ನಾಡಿಗೆ ಪರಿಚಯಿಸುವುದು. ಆತನ ಸಾಹಿತ್ಯವನ್ನು ಜನಾಂಗಕ್ಕೆ ವಿವರಿಸುವುದಾಗಿದೆ. ಕಾಲನ ಹೊಡೆತಕ್ಕೆ ಸಿಕ್ಕು ಜರ್ಜರಿತವಾದ ಹಸ್ತಪ್ರತಿಯನ್ನು ಉಳಿಸುವುದು, ಕವಿಯನ್ನು ಬದುಕಿಸುವಂತೆ ಮಾಡುವುದು ಗ್ರಂಥ ಸಂಪಾದನೆಯ ಕಾರ್ಯವಾಗಿದೆ. "ಕವಿಯ ಉದ್ದೇಶವನ್ನು ಸಹೃದಯರಿಗೆ ತಿಳಿಸಲು ಪ್ರಯತ್ನಿಸುವ ಜವಾಬ್ದಾರಿ ಗ್ರಂಥ ಸಂಪಾದಕನ ಮುಖ್ಯ ಉದ್ದೇಶವಾಗಿದೆ. ಸಾಹಿತ್ಯ ದೇವತೆಯನ್ನು ಸಹೃದಯರಿಗೆ ಪರಿಚಯಿಸುವುದೇ ಗ್ರಂಥ ಸಂಪಾದನೆ. ಗ್ರಂಥ ಸಂಪಾದನೆಯ ಕಾರ್ಯ ಸಾಮಾನ್ಯವಾದುದಲ್ಲ, ಸಂಪಾದಕ ಕವಿ ಇಳಿದ ಆಳಕ್ಕೆ ಇಳಿಯಬೇಕು. ಅವನ ನೀತಿ -ರೀತಿ -ಪರಿಸರ ಹಾಗೂ ಕವಿಯ ಶೈಲಿಯನ್ನು ಹಿಡಿದು ಗ್ರಂಥ ಸಂಪಾದನೆಯು ಮತ್ತೊಮ್ಮೆ ಅಧ್ಯಯನಕ್ಕೆ ಒಳಪಡಿಸುತ್ತದೆ. ಪಂಡಿತ ವರ್ಗದವರಿಗೆ ಮೀಸಲಾದ ಸಾಹಿತ್ಯವನ್ನು ತಮ್ಮ ವಚನಗಳ ಮೂಲಕ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ರಚಿಸುವ ಸಾಹಿತ್ಯವನ್ನು ಕನ್ನಡಿಗರ ಮನೆ ಮನದವರೆಗೂ ಕರೆದೊಯ್ಯುವುದು ಇಂತಹ ಸಾಹಿತ್ಯ ಇಂದಿಗೂ ನಮಗೆ ದೊರೆಯುವಂತೆ ಮಾಡಿದ ಶ್ರೇಯಸ್ಸು ಈ ಗ್ರಂಥ ಸಂಪಾದನೆಗೆ ಸಲ್ಲುತ್ತದೆ."[೪] ಕನ್ನಡದಲ್ಲಿ ಹಲವಾರು ಮಹಾನ್ ಸಂಪಾದಕರು ಆಗಿಹೋಗಿದ್ದಾರೆ. ಪಂಡಿತ ಪರಂಪರೆ ಮಾಡಿರುವ ಕಾರ್ಯ ಅಗಾಧವಾಗಿದೆ. ಕರ್ನಲ್ ಮೆಕೆಂಜಿ, ಹರ್ಮನ್ ಮೊಗಲರ್, ರಾಬರ್ಟ ಕಾಲ್ಬರ್ಟ್, ಜೆ. ಎಫ್, ಫ್ಲೀಟ್, ಬಿ.ಎಲ್. ರೈಸ್, ಕಿಟೆಲ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರನ್ನು ಮೊದಲಗೊಂಡು ಡಿ.ಎಲ್.ಎನ್., ಆರ್. ನರಸಿಂಹಾಚಾರ್ಯ, ಎ.ಆರ್. ಕೃಷ್ಣಶಾಸ್ತ್ರಿ, ಫ.ಗು. ಹಳಕಟ್ಟಿ, ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಕೆ. ಜಿ. ಕುಂದಣಗಾರ, ಶಂಭಾ ಜೋಶಿ, ಬೆಟಗೇರಿ ಕೃಷ್ಣಶರ್ಮ, ಸೇಡಿಯಾಪು ಕೃಷ್ಣಭಟ್ಟ, ಸಿ.ಚ. ನಂದಿಮಠ, ಆ.ನೆ. ಉಪಾಧ್ಯೆ, ತೀ.ನಂ. ಶ್ರೀಕಂಠಯ್ಯ, ಎಲ್. ಬಸವರಾಜು, ಆರ್.ಸಿ. ಹಿರೇಮಠ., ಎಂ. ಚಿದಾನಂದಮೂರ್ತಿ, ಟಿ.ಜಿ. ವೆಂಕಟಾಚಲಶಾಸ್ತ್ರಿ, ಜಿ.ಶಂ ಪರಮಶಿವಯ್ಯ, ಹಂಪನಾಗರಾಜಯ್ಯ, ಡಾ. ಎಂ.ಎಂ. ಕಲಬುರ್ಗಿ, ಸೂರ್ಯಕಾಂತ ಕಾಮತ್, ವಿವೇಕ ರೈ, ದೇ ಜವರೇಗೌಡ, ಎಸ್ ವಿದ್ಯಾಶಂಕರ, ಎನ್. ಬಸವಾರಾಧ್ಯ. ಜಿ.ವಿ. ವೆಂಕಟಸುಬ್ಬಯ್ಯ ಮುಂತಾದ ಗ್ರಂಥ ಸಂಪಾದಕರ ಬಹು ದೊಡ್ಡ ಪಡೆ ಕನ್ನಡದಲ್ಲಿದೆ. ಕನ್ನಡ ಗ್ರಂಥ ಸಂಪಾದನಾ ಶಾಸ್ತ್ರದ ಇತಿಹಾಸವೇ

ರೋಚಕವಾಗಿದೆ. ಅಧ್ಯಯನದ ದೃಷ್ಟಿಯಿಂದ ನಾಲ್ಕು ಘಟಕಗಳಲ್ಲಿ ಇದನ್ನು ವಿಂಗಡಿಸುತ್ತಾರೆ. ನಾಲ್ಕನೇ ಘಟಕದಲ್ಲಿ ಬಿ. ವ್ಹಿ. ಶಿರೂರ, ವೀರಣ್ಣ ರಾಜೂರ, ಎನ್ ಶಿವಣ್ಣ, ಎಚ್. ದೇವೀರಪ್ಪ ಮುಂತಾದವರು ಬರುತ್ತಾರೆ. ಈ ಘಟ್ಟದಲ್ಲಿ ಡಾ. ಬಿ. ಆರ್. ಹಿರೇಮಠ ಅವರೂ ಕೂಡಾ ಬರುತ್ತಾರೆ.

ಡಾ. ಬಿ. ಆರ್. ಹಿರೇಮಠ ಅವರ ಸಂಪಾದನ ಕಾರ್ಯವು ಅನುಪಮವಾಗಿದೆ. ಡಾ. ಬಿ.ಆರ್. ಹಿರೇಮಠ ಅವರ ಸಂಪಾದನೆಯನ್ನು ಅಧ್ಯಯನ ಮಾಡುವುದೇ ಈ ಅಧ್ಯಾಯದ ಉದ್ದೇಶವಾಗಿದೆ. ಡಾ. ಬಿ. ಆರ್.ಹಿರೇಮಠ ಅವರ ಒಟ್ಟು ಸಂಪಾದನೆಯನ್ನು ಸ್ವತಂತ್ರ ಸಂಪಾದನೆ, ಇತರರೊಡನೆ ಸಂಪಾದನೆ, ಪತ್ರಿಕಾ ಸಂಪಾದನೆ ಎಂದು ಮೂರು ವಿಧವಾಗಿ ವಿಂಗಡಿಸಲಾಗಿದೆ.

**ಅ) ಸ್ವತಂತ್ರ ಸಂಪಾದನೆ :**

ಡಾ. ಬಿ. ಆರ್.ಹಿರೇಮಠ ಅವರದು ಸಂಪದಾನ ಕ್ಷೇತ್ರದಲ್ಲಿ ಬಹಳ ದೊಡ್ಡ ಹೆಸರು. ಇವರು ಇಮ್ಮಡಿ ಮುರಗಾ ಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು, ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ, ಅದ್ವೈತಾನಂದದ ವಚನಗಳು, ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯ ಸಂಪಾದನೆಯ ಸಾರಾಮೃತ, ಹರಿಹರನ ಭಕ್ತಿ ತರಂಗಿಣಿ, ವಚನ ಸಂಕಲನ ಸಂಪುಟ -೧, ವಚನ ಸಂಕಲನ ಸಂಪುಟ-೪, ಸುಖಸಂಪಾದನೆಯ ವಚನಗಳು, ಮಡಿವಾಳ ಮಾಚಿದೇವನ ವಚನಗಳು, ಸೋದೆ ಸದಾಶಿವರಾಯನ - ಕೃತಿಗಳು, ಸಂಕೀರ್ಣ ವಚನ (ಸಂಪುಟ-೩), ಸಂಕೀರ್ಣ ವಚನ ಸಂಪುಟ-೪ ಈ ಎಲ್ಲ ಕೃತಿಗಳನ್ನು ಪಾಂಡಿತ್ಯಪೂರ್ಣವಾಗಿ ಸಂಪಾದಿಸಿದ್ದಾರೆ. ಗ್ರಂಥ ಸಂಪಾದನ ಶಾಸ್ತ್ರ ಶಾಸ್ತ್ರೀಯ ಶಿಸ್ತಿನೊಂದಿಗೆ ಈ ಗ್ರಂಥಗಳು ಪ್ರಕಟಗೊಂಡಿವೆ.

ಸ್ವತಂತ್ರ ಸಂಪಾದನೆ ಅಲ್ಲದೆ ಸಿದ್ಧನಂಜೇಶ ಕೃತ ತೋಂಟಸಿದ್ಧೇಶ್ವರನ ಭಾವರತ್ನಾಭರಣ ಸ್ತೋತ್ರ, ಕೋಲ್ಹಾಪೂರ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿ ಹಸ್ತಪ್ರತಿ ಸೂಚಿ, ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಸೂಚಿ (ಸಂಪುಟ-೧), ಹೊಸಗನ್ನಡ ಸಾಹಿತ್ಯರೂಪಗಳು ಬಸವಣ್ಣನವರ ವಚನಗಳ ಸಮಾಲೋಕನ, ನಿಜದ ನೆಲೆ, ಸಾರಂಗಪ್ರಭೆ, ಕನ್ನಡ ಪ್ರಪಂಚ, ಆರ್. ಸಿ. ಹಿರೇಮಠ ನಾನು ಕಂಡಂತೆ. ಮುಂತಾದವುಗಳನ್ನು ಇತರರೊಂದಿಗೆ ಸಂಯುಕ್ತವಾಗಿ ಸಂಪಾದಿಸಿದ್ದಾರೆ.

ಸ್ವತಂತ್ರ ಸಂಪಾದನೆ ಸಂಯುಕ್ತ ಸಂಪಾದನೆಯಲ್ಲದೆ ಡಾ. ಬಿ.ಆರ್. ಹಿರೇಮಠ ಅವರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಮುಖವಾಣಿಯಾದ ಕರ್ನಾಟಕಭಾರತಿ, ವಿದ್ಯಾರ್ಥಿ ಭಾರತಿ, ತ್ರೈಮಾಸಿಕ ಪತ್ರಿಕೆಗಳನ್ನು ಸಂಪಾದಿಸಿದ್ದಾರೆ. ಶಿವಯೋಗ ಮಂದಿರದಿಂದ ಹೊರಡುವ ವೀರಶೈವ ವಿಶ್ವವಿದ್ಯಾಲಯದ ಸುಕುಮಾರ ತ್ರೈಮಾಸಿಕವನ್ನು ಸಂಪಾದಿಸಿಕೊಟ್ಟಿದ್ದಾರೆ. ಇದೂ ಅಲ್ಲದೆ, ಬಸವ ಪಥ, ಸ್ವಪ್ನಲೋಕ, ಪರಂಜ್ಯೋತಿ, ಸಾಧನೆ, ಸನ್ಮತಿ, ಹೇಮಕೂಟ, ಬಸವಜರ್ನಲ್, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಇವೇ ಮೊದಲಾದ ನಾಡಿನ ಸಾಹಿತ್ಯಿಕ, ಸಾಂಸ್ಕೃತಿಕ ಪತ್ರಿಕೆಗಳ ಸಲಹೆಗಾರರಾಗಿ, ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸಿದ್ದು ಅನುಪಮವಾಗಿದೆ.

ಡಾ. ಬಿ.ಆರ್. ಹಿರೇಮಠ ಅವರ ಒಟ್ಟು ಸಂಪಾದನೆಯನ್ನು ಅಧ್ಯಯನಕ್ಕನುಗುಣವಾಗಿ ವಚನಸಾಹಿತ್ಯ, ಶರಣಸಾಹಿತ್ಯ, ಸಂಕೀರ್ಣಸಾಹಿತ್ಯ ಎಂದು ಉಪ ಅಧ್ಯಾಯಗಳನ್ನಾಗಿ ಮಾಡಿಕೊಂಡು ಅನುಕ್ರಮಾಗಿ ಅಧ್ಯಯನಿಸಲಾಗುವುದು.

**೪ ಅ) ೧.೧. ವಚನ ಸಾಹಿತ್ಯ :**

**ಅದ್ವೈತಾನಂದದ ವಚನಗಳು :**

ಈ ಕೃತಿ ಗದುಗಿನ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದಿಂದ ಪ್ರಕಾಶನಗೊಂಡಿದೆ. ಈ ಕೃತಿಯು ೧೯೮೪ರಲ್ಲಿ ಪ್ರಪ್ರಥಮ ಬಾರಿಗೆ ಪ್ರಕಟವಾಗಿದೆ. ಇದರಲ್ಲಿ ನಿರಸನ ಸ್ಥಲ, ಭಕ್ತಸ್ಥಲ, ಮಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗೀ ಸ್ಥಲ, ಶರಣಸ್ಥಲ. ಸ್ವಯಾನೂ ಸಿದ್ಧಸ್ಥಲ, ಐಕ್ಯ ಸ್ಥಲ, ನಿರವಯ ಸ್ಥಲ ಮುಂತಾದ ಸ್ಥಲಗಳಿಗನುಗುಣವಾಗಿ ವಚನಗಳನ್ನು ಸಂಯೋಜಿಸಲಾಗಿದೆ. ಮುಖ್ಯವಾಗಿ ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ, ಅಮುಗೆದೇವ, ಅರಿವಿನ ಮಾರಿತಂದೆ, ಅಲ್ಲಮ ಪ್ರಭುದೇವ, ಅವಸರದ ರೇಚಣ್ಣ, ಆದಯ್ಯ, ಆಯ್ದಕ್ಕಿ ಮಾರಯ್ಯ, ಉರಿಲಿಂದ ಪೆದ್ದಿ, ಕೋಲ ಶಾಂತಯ್ಯ, ಗಣೇಶಮಸಣಯ್ಯ, ಗುಪ್ತ ಮಂಚಣ್ಣ, ಗೊಗ್ಗವ್ವೆ, ಗಟ್ಟಿವಾಳಯ್ಯ, ಚೆಂದಿಮರಸ, ಚೆನ್ನಬಸವಣ್ಣ, ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ, ಡಕ್ಕೆಯ ಬೊಮ್ಮಣ್ಣ, ತುರುಗಾಯಿ ರಾಮಣ್ಣ, ತೋಂಟದ ಸಿದ್ಧಲಿಂಗ, ದಾಸೋಹದ ಸಂಗಣ್ಣ, ನುಲಿಯ ಚಂದಯ್ಯ, ಪ್ರಸಾದಿ ಭೋಗಣ್ಣ, ಬಸವಣ್ಣ, ಬಾಲಸಂಗಯ್ಯ, ಬಹುರೂಪಿ ಚೌಡಯ್ಯ, ಬಿಬ್ಬಿ ಬಾಚಯ್ಯ, ಬೊಂತಾದೇವಿ, ಭಂಡಾರಿ ಶಾಂತರಸ, ಮಧುವಯ್ಯ, ಮನಸಂದ ಮಾರಿತಂದೆ, ಮನುಮುನಿ ಗುಮ್ಮಟದೇವ, ಮಡಿವಾಳ ಮಾಚಿದೇವ, ಮಾದಾರ ಧೂಳಯ್ಯ, ಮುಕ್ತಾಯಕ್ಕ, ಮೆರೆಮಿಂಡದೇವ, ಮೋಳಿಗೆ ಮಹಾದೇವಿ, ಮೋಳಿಗೆ ಮಾರಯ್ಯ, ರಾಯಸದ ಮಂಚಣ್ಣ, ಶಿವನಾಗಮಯ್ಯ, ಶಿವಲೆಂಕ ಮಂಚಣ್ಣ, ಸಕಳೇಶ ಮಾದರಸ, ಸಗರದ ಬೊಮ್ಮಯ್ಯ, ಸತ್ಯಕ್ಕ, ಸಿದ್ಧರಾಮ, ಸೊಡ್ಡಳ ಬಾಚರಸ, ಸ್ವತಂತ್ರ ಸಿದ್ಧಲಿಂಗೇಶ್ವರ, ಹಡಪದ ಅಪ್ಪಣ್ಣ, ಹಾವಿನಹಾಳ ಕಲ್ಲಯ್ಯ ಹೀಗೆ ೫೦ ಜನ ವಚನಕಾರರ ಒಟ್ಟು ೭೪೦ ವಚನಗಳಿವೆ.

ಡಾ. ಬಿ.ಆರ್. ಹಿರೇಮಠರು ಅದ್ವೈತಾನಂದರಾದ ವಚನಗಳನ್ನು ಸಂಕಲಿಸುತ್ತ ಷಟಸ್ಥಲ ತತ್ವವನ್ನೇ ಆಧಾರವಾಗಿಟ್ಟುಕೊಂಡು ಈ ಸಂಪುಟವನ್ನು ಸಂಕಲಿಸಿದ್ದಾರೆ. ಷಟ್‌ಸ್ಥಲವನ್ನೇ ತಳಹದಿಯಾಗಿಟ್ಟುಕೊಂಡು ಮತ್ತೆ ಆಂತರಿಕ ಸ್ಥಲಗಳ ಸಂಯೋಜನೆ ಮಾಡಿರುವುದು ತಿಳಿದುಬರುತ್ತದೆ. ಅದ್ವೈತಾನಂದದ ವಚನದ ಸಂಕಲನಕಾರರು ಭಕ್ತಸ್ಥಲದ ಪ್ರಾರಂಭದಲ್ಲಿ ವಿದ್ಯಾವಾದ ನಿರಸನ ಸ್ಥಲ, ಕರ್ಮಯೋಗ ನಿರಸನಸ್ಥಲ, ಕೈಲಾಸ ಭ್ರಾಂತಿ ನಿರಸನ ಸ್ಥಲ, ಬಂಧಮೋಕ್ಷ ನಿರಸನ ಸ್ಥಲ, ತಾಮಸ ನಿರಸನ ಸ್ಥಲ, ಭಿನ್ನಪೂಜಾ ನಿರಸನ ಸ್ಥಲ, ಇಷ್ಟಲಿಂಗ ಭ್ರಾಂತಿ ನಿರಸನ ಸ್ಥಲ, ಇಷ್ಟಲಿಂಗ ವಿಯೋಗ ನಿರಸನ ಸ್ಥಲ, ಭಿನ್ನಜ್ಞಾನ ನಿರಸನ ಸ್ಥಲಗಳನ್ನಾಗಿ ಸಂಯೋಜಿಸಲಾಗಿದೆ. ಡಾ. ಬಿ. ಆರ್. ಹಿರೇಮಠ

ಅವರು "ಇವುಗಳಿಗೆ ನಾವು ನಿರಸನ ಸ್ಥಲ ಎಂದು ಸಾಮೂಹಿಕ ಶೀರ್ಷಿಕೆ ಕೊಟ್ಟಿದ್ದೇನೆ. ನಿರಸನ ಸ್ಥಲಗಳ ಸಂಖ್ಯೆ ಬೇರೆ ಬೇರೆ ಸಂಕಲನಗಳಲ್ಲಿ ಹೆಚ್ಚು ಕಡಿಮೆ ಕಂಡುಬರುತ್ತದೆಯಾದರೂ, ಇಲ್ಲಿ ಶರಣ ಸ್ಥಲ ಹಾಗೂ ಐಕ್ಯ ಸ್ಥಲಗಳ ಮಧ್ಯ ಬರುವ 'ಸ್ವಯಾನು ಸಿದ್ಧಸ್ಥಲ' ಮಾತ್ರ ಇತರ ಯಾವ ವಚನ ಸಂಕಲನಗಳಲ್ಲಿಯೂ ಕಂಡುಬರುವುದಿಲ್ಲ. ಐಕ್ಯ ಸ್ಥಲದ ತರುವಾಯ ಬೇರೆ ಬೇರೆ ಸ್ಥಲಗಳು ಅನ್ಯ ಸಂಕಲನಗಳಲ್ಲಿ ಬರುವಂತೆ ಇಲ್ಲಿ ನಿರವಯ ಸ್ಥಲವನ್ನು ಕಲ್ಪಿಸಲಾಗಿದೆ. ಹೀಗಾಗಿ ನಾವು ಮಾಡಿಕೊಂಡ ನಿರಸನ ಸ್ಥಲವನ್ನೊಳಗೊಂಡು ಇದರಲ್ಲಿ ಒಟ್ಟು ಒಂಬತ್ತು ಸ್ಥಲಗಳಿವೆ. ಅದ್ವೈತಾನಂದದ ವಚನಗಳು ಸ್ಥಲ ಸಂಯೋಜನೆ ದೃಷ್ಟಿಯಿಂದ ವಿನೂತನತೆಯನ್ನು ಮೈಗೂಡಿಸಿಕೊಂಡ ಗ್ರಂಥವಾಗಿದೆ"[೫] ಎಂದು ಹೇಳಿರುವುದು ಈ ಸಂಕಲನದ ಹೊಸತನಕ್ಕೆ ಸಾಕ್ಷಿಯಾಗಿವೆ. ಸಾಮಾನ್ಯವಾಗಿ ವಚನಗಳನ್ನು ಷಟ್‌ಸ್ಥಲಗಳಲ್ಲಿ ಸಂಪಾದಿಸಿ ಪ್ರಕಟಿಸುವುದು ವಾಡಿಕೆ. ಇಲ್ಲಿ ಷಟ್‌ಸ್ಥಲದ ಜೊತೆಗೆ ಮತ್ತೆ ಮೂರು ಸ್ಥಲಗಳನ್ನು ಅಳವಡಿಸಿ ೯ ಸ್ಥಲಗಳನ್ನಾಗಿ ರೂಪಿಸಿರುವುದು ಗಮನಾರ್ಹವಾಗಿದೆ.

ಅದ್ವೈತಾನಂದ ಎಂಬ ಪದಕ್ಕೆ ಅರ್ಥವನ್ನು ವಿವರಿಸುತ್ತ ಅದರ ಮಹತ್ವವನ್ನು ಕೂಡ ಸಂಪಾದಕರು ವಿವರಿಸಿದ್ದಾರೆ. ಅದು ಹೀಗಿದೆ. ಅದ್ವೈತಾನಂದವೆಂದರೆ ಲಿಂಗಾಂಗ ಸಾಮರಸ್ಯವೆಂದೇ ಅರ್ಥ. ಈ ಲಿಂಗಾಂಗದ ಅದ್ವೈತದಿಂದ ಉಂಟಾಗುವ ಆನಂದ ಪ್ರತಿಪಾದನೆಯೇ ಈ ಸಂಕಲನದ ಗುರಿ. ಆದುದರಿಂದ ಹೆಸರು ಬೇರೆಯಾದರೂ ವೀರಶೈವ ಷಟ್‌ಸ್ಥಲ ಸಿದ್ಧಾಂತದ ಲಿಂಗಾಂಗಸಾಮರಸ್ಯ ತತ್ವ ಪ್ರತಿಪಾದನೆಯೇ ಈ ಸಂಕಲನದ ಪ್ರಮುಖ ಉದ್ದೇಶ. ಸಂಕಲನಕಾರನು ಈ ಉದ್ದೇಶ ಸಾಧನೆಯ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸಿದ್ದಾನೆ"[೬] ಎಂದು ಡಾ. ಬಿ.ಆರ್. ಅವರು ವಿವೇಚಿಸಿರುವುದು ಸಮಂಜಸವಾಗಿದೆ. ಅದ್ವೈತಾನಂದದ ಅರ್ಥ, ಲಿಂಗಾಂಗ ಸಾಮರಸ್ಯದ ತತ್ವ ಎರಡನ್ನೂ ಪರಸ್ಪರ ತೌಲನಿಕವಾಗಿ ಅಧ್ಯಯನ ಮಾಡಿ ಅರ್ಥ ವಿಶ್ಲೇಷಿಸಿರುವುದು ಸಂಪಾದಕರ ಆಳವಾದ ಅಧ್ಯಯನಕ್ಕೆ ನಿದರ್ಶನವಾಗಿದೆ. ಸಂಪಾದಕರು ಅಂಕಿತಪಲ್ಲಟವನ್ನು ಗುರುತಿಸಿದ್ದಾರೆ. ಹಾಗೆ ಉದಾಹರಣೆಗಳೊಂದಿಗೆ ಸ್ಪಷ್ಟಗೊಳಿಸಿದ್ದಾರೆ. ವಚನ ಸಂಕಲನದಲ್ಲಿ ಕಂಡುಬರುವ ಪುನರುಕ್ತಿ ವಚನಗಳನ್ನು ಶೋಧಿಸಿ ಉದಾಹರಣೆ ಸಹಿತವಾಗಿ ವಿವೇಚಿಸಿದ್ದಾರೆ. ಅದ್ವೈತಾನಂದದ ವಚನಗಳು ಗ್ರಂಥವನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರದ ತಾಳೆಗರಿ (ನಂ.೨೯) ಪ್ರತಿಯ ಸಹಾಯದಿಂದ ಸಂಪಾದಿಸಿಕೊಟ್ಟಿರುವುದನ್ನು ಸ್ಪಷ್ಟಪಡಿಸಿದ್ದಾರೆ. ಇದು ಏಕೈಕ ಪ್ರತಿ ಆಗಿರುವುದರಿಂದ ಅಗತ್ಯವಿದ್ದಲ್ಲಿ ಮಾಡಿದ ತಿದ್ದುಪಡಿಗಳನ್ನು ಕೌಂಸಿನಲ್ಲಿ ನೀಡಿದ್ದಾರೆ. ತಿದ್ದುಪಡಿಗಳಿಗೆ ಸಂವಾದಿಯಾದ ಮೂಲ ಪಾಠವನ್ನು 'ಮೂ' ಎಂಬ ಸಂಕೇತದಿಂದ ಸೂಚಿಸಿದ್ದಾರೆ. ಈ ಎಲ್ಲಾ ಅಂಶಗಳೂ ಗ್ರಂಥ ಸಂಪಾದನಾ ಶಾಸ್ತ್ರದ ಶಿಸ್ತಿಗೆ ಅನುಗುಣವಾಗಿವೆ. ಈ ಸಂಪಾದನ ಕೃತಿಗೆ ಅವಶ್ಯಕವಾಗಿ ಪ್ರಸ್ತಾವನೆ ಇದೆ. ಇದರಲ್ಲಿ ಈ ಕೃತಿಯ ಮಹತ್ವದ ಅಂಶಗಳನ್ನು ವಿವರಿಸಿದ್ದಾರೆ. ಪ್ರಕಟಣೆಯ ಕಾರ್ಯ ಕಾರಣಗಳನ್ನು ಕೂಡಾ

ವಿವರಿಸಿದ್ದಾರೆ. ಅನುಬಂಧವನ್ನು ಜೋಡಿಸಿದ್ದು, ಅನುಬಂಧ ಒಂದರಲ್ಲಿ ವಚನಕಾರರು ಅವರ ವಚನಾಂಕಿತ ಹಾಗೂ ಸಂಖ್ಯೆಗಳನ್ನು ದಾಖಲಿಸಿದ್ದಾರೆ. ಅನುಬಂಧ -೨ರಲ್ಲಿ ವಚನಗಳ ಅಕಾರಾದಿ ಪಟ್ಟಿಯನ್ನು ಹಾಗೂ ವಚನಗಳ ಸಂಖ್ಯೆಯನ್ನು ನಮೂದಿಸಿದ್ದಾರೆ. ಇವೆಲ್ಲ ತುಂಬ ಪರಿಶ್ರಮ ಬೇಡುವ ಕಾರ್ಯಗಳು. ಶ್ರಮ ಸಂಸ್ಕೃತಿಯಿಂದ ಬಂದ ಡಾ. ಬಿ. ಆರ್. ಹಿರೇಮಠ ಅವರು ತುಂಬ ಶ್ರದ್ಧೆಯಿಂದ ಹಾಗೂ ಅಷ್ಟೇ ನಿಷ್ಠೆಯಿಂದ ಪ್ರಸ್ತುತ ಕೃತಿಯನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ತುಂಬಾ ಮೌಲಿಕ ಗ್ರಂಥವಿದು. ಮುಂದಿನ ಅಧ್ಯಯನಕಾರರಿಗೆ ಇಲ್ಲಿರುವ ವಿಶೇಷ ಅಂಶಗಳು ಮಾರ್ಗದರ್ಶಿಯಾಗಿವೆ.

**೪.೧.೨. ವಚನ ಸಂಕಲನ ಸಂಪುಟ ೧ :**

ಇದು ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಇವರಿಂದ ೧೯೯೦ರಲ್ಲಿ ಪ್ರಥಮ ಮುದ್ರಣಗೊಂಡಿದೆ. ಈ ಮಠ ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನಾ ಯೋಜನೆಯ ಅಡಿಯಲ್ಲಿ ವೀರಶೈವ ಸಾಂಸ್ಕೃತಿಕ ಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತಿದೆ. ವಚನ ಸಂಕಲನ ಸಂಪುಟ -೧ರಲ್ಲಿ ಬಸವಸ್ತೋತ್ರದ ವಚನಗಳು, ಷಟ್‌ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನಗಳು, ಲಿಂಗ ಸಾವಧಾನದ ವಚನಗಳು, ನಿರಾಲಂಬ ಪ್ರಭುದೇವನ ವಚನಗಳು, ಜಂಗಮಸ್ಥಲದ ಆಚರಣೆಯ ನಿರ್ಣಯದ ವಚನಗಳು, ನಿರಸನದ ವಚನಗಳು, ಪರಂಜ್ಯೋತಿಯ ವಚನಗಳು, ಕುಸ್ತಿ ಆಗಮದ ವಚನಗಳು, ಚಿದ್ಭಸ್ಮಮಣಿ ಮಂತ್ರ ಮಹಾತ್ಮೆಯ ಸ್ಥಲದ ವಚನಗಳು, ನಿಜಗುರು ನಿರಾಲಂಬ ಪ್ರಭುವೆ ಅಂಕಿತದ ವಚನಗಳು, ನಂಜುಂಡಶಿವಾ ಅಂಕಿತದ ವಚನಗಳು, ಕಂಡಿತದ ವಚನಗಳು, ಗುಹೇಶ್ವರಯ್ಯನ ವಚನಗಳು ಎಂಬ ೧೩ ಭಾಗಗಳನ್ನು ಮಾಡಿಕೊಂಡು ಈ ವಚನಗಳನ್ನು ಸಂಯೋಜಿಸಿ ಪ್ರಸ್ತುತ ಗ್ರಂಥವನ್ನು ಸಂಪಾದಿಸಿಕೊಟ್ಟಿದ್ದಾರೆ. ಪ್ರಸ್ತುತ ವಚನ ಸಂಕಲನದ ಸಂಪುಟಕ್ಕೆ ಬರೆದಿರುವ ಪ್ರಸ್ತಾವನೆಯು ತುಂಬ ಮೌಲಿಕವಾಗಿದೆ. ಈ ೧೩ ಭಾಗಗಳಲ್ಲಿ ಒಟ್ಟು ೩೭೬ ವಚನಗಳು ಇವೆ. ೧೨ನೇ ಶತಮಾನದ ವಚನಕಾರರು ಅವರ ಆಂದೋಲನ ಪ್ರಯೋಗಶೀಲ ಮನಸ್ಸು, ಸಾಮಾಜಿಕ, ಸಾಹಿತ್ಯ ಕ್ಷೇತ್ರದ ಸಾಧನೆ ಮುಂತಾದವುಗಳನ್ನು ಆರಂಭದಲ್ಲಿ ವಿವರಿಸಿದ್ದಾರೆ. ವಚನಸಾಹಿತ್ಯದ ಉತ್ತರಾಧಿಕಾರಿಗಳಾಗಿ ಬಂದ ಹರಿಹರ, ರಾಘವಾಂಕ, ಭೀಮಕವಿಗಳು ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ರಗಳೆ, ಷಟ್ಪದಿಗಳನ್ನು ಕಟ್ಟಿಕೊಟ್ಟಿರುವುದನ್ನು ವಿವರಿಸಿದ್ದಾರೆ. ೧೩-೧೪ ನೇ ಶತಮಾನದಲ್ಲಿ ವಚನ ರಕ್ಷಣೆ ಹಾಗೂ ವಚನರಚನಾಕಾರ್ಯ ನಡೆದಿರುವುದನ್ನು ಗುರುತಿಸಿದ್ದಾರೆ. ಮುಂದೆ ವಿಜಯನಗರದ ಅರಸ ಪ್ರೌಢದೇವರಾಯ, ಆತನ ಮಂತ್ರಿಗಳಾದ ಲಕ್ಕಣ್ಣ ದಂಡೇಶ ಮತ್ತು ಜಕ್ಕಣಾಚಾರ್ಯರ ಕಾಲದ ವೀರಶೈವ ಸಾಹಿತ್ಯ ಪುನರುತ್ಥಾನಗೊಂಡದ್ದನ್ನು ನಿರೂಪಿಸಿದ್ದಾರೆ. ೧೭ನೇ ಶತಮಾನದ ಸಾರೋದ್ಧಾರ ಕಾರ್ಯ, ೧೫-೧೬ ನೇ ಶತಮಾನದ ನೂರೊಂದು ಮತ್ತು ಏಳುನೂರೊಂದು ವಿರಕ್ತರ ಕಾಲ ಶೂನ್ಯ

ಸಂಪಾದನೆ ರಚನೆ ಮತ್ತು ಪುನರ್ ರಚನೆ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಇದು ವಚನ ಸಾಹಿತ್ಯ ಇತಿಹಾಸದ ಒಂದು ಪಕ್ಷಿನೋಟವಾಗಿದೆ.

ಡಾ. ಬಿ. ಆರ್. ಅವರು ವಚನ ಸಾಹಿತ್ಯದ ಸಂರಕ್ಷಣಾ ಕಾರ್ಯ ಪುನರುತ್ಥಾನ ಯುಗ ಪುನರ್ ಸೃಷ್ಟಿಯುಗವನ್ನು ಪ್ರಸ್ತಾಪಿಸುತ್ತಾ "ವೀರಶೈವ ಸಾಹಿತ್ಯದ ಗಟ್ಟಿಯಾದ ಹಾಗೂ ವ್ಯವಸ್ಥಿತ ಕಾರ್ಯ ನಡೆದದ್ದು ಏಳುನೂರೊಂದು ವಿರಕ್ತರ ಕಾಲದಲ್ಲಿ ಈ ಏಳುನೂರೊಂದು ವಿರಕ್ತ ಸಮೂಹದ ನಾಯಕ ವ್ಯಕ್ತಿ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. ೧೬ನೆಯ ಶತಮಾನದಲ್ಲಿ ಅವತಾರವೆತ್ತಿದ ಸಿದ್ಧಲಿಂಗ ಶಿವಯೋಗಿಗಳು ವೀರಶೈವ ಧರ್ಮ, ಸಮಾಜ ಸಾಹಿತ್ಯ, ಸಂಸ್ಕೃತಿಗಳ ಸಂವರ್ಧಕರಾಗಿ, ಸಂರಕ್ಷಕರಾಗಿ ಶಿಖರ ಸದೃಶ ಕಾರ್ಯ ಮಾಡಿದರು. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯ ಪ್ರಶಿಷ್ಯರು ವೀರಶೈವ ಸೃಜನ, ಸಂಕಲನ, ಸಂಗ್ರಹ, ಸಂಪಾದನ, ವ್ಯಾಖ್ಯಾನ, ಸಾಹಿತ್ಯಕ್ಕೆ ನೀಡಿದ ಕೊಡುಗೆ ವಿಪುಲವೂ ವೈವಿಧ್ಯಪೂರ್ಣವೂ ಆದುದಾಗಿದೆ. ಏಳುನೂರೊಂದು ವಿರಕ್ತೋತ್ತರ ಯುಗದಲ್ಲಿ ವಚನ ಸಂಕಲನ ಸಂಗ್ರಹಗಳಿಗಿಂತ ವಚನದ ಸೃಷ್ಟಿಕಾರ್ಯ ವ್ಯಾಪಕವಾಗಿ ನಡೆಯಿತು."[೭] ಈ ಮಾತುಗಳು ವಚನಸಾಹಿತ್ಯದ ದ್ವಿತೀಯ ಘಟ್ಟದಲ್ಲಿ ಆದ ಸಂಕಲನ ಕಾರ್ಯವನ್ನು ಸಮರ್ಪಕವಾಗಿ ವಿವರಿಸುತ್ತದೆ.

ಪ್ರಸ್ತುತ ವಚನ ಸಂಕಲನ ಸಂಪುಟದಲ್ಲಿ ಏಳುನೂರೊಂದು ವಿರಕ್ತಯುಗ ಹಾಗೂ ಏಳುನೂರೊಂದು ವಿರಕ್ತೋತ್ತರ ಯುಗದಲ್ಲಿ ಹುಟ್ಟಿಕೊಂಡ ಬಸವಸ್ತೋತ್ರದ ವಚನಗಳು, ಷಟ್‌ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನಗಳು, ಲಿಂಗ ಸಾವಧಾನದ ವಚನಗಳು, ನಿರಾಲಂಬ ಪ್ರಭುದೇವನ ವಚನಗಳು, ಜಂಗಮಸ್ಥರದ ಆಚರಣೆಯ ನಿರ್ಣಯದ ವಚನಗಳು, ನಿರಸನದ ವಚನಗಳು, ಪರಂಜ್ಯೋತಿಯ ವಚನಗಳು, ಕುಸ್ತಿ ಆಗಮದ ವಚನಗಳು, ಚಿದ್ಭಸ್ಮ ಮಣಿ ಮಂತ್ರ ಮಹಾತ್ಮೆಯ ಸ್ಥಲದ ವಚನಗಳು, ನಿತ್ಯಗುರು ನಿರಾಲಂಬ ಪ್ರಭುವೆ ಅಂಕಿತದ ವಚನಗಳು, ನಂಜುಂಡ ಶಿವಾಯತದ ವಚನಗಳು, ಕಂಡಿತಕ ವಚನಗಳು, ಗುಹೇಶ್ವರ ವಚನಗಳನ್ನು ಇತ್ಯಾದಿಯಾಗಿ ೧೩ ವಚನ, ಸೃಜನ, ಸಂಕಲನ ಕೃತಿಗಳನ್ನು ಅಳವಡಿಸಿಕೊಂಡಿರುವುದನ್ನು ಅವುಗಳಿಗಿರುವ ಮೂಲವನ್ನು ವಿವರಿಸಿದ್ದಾರೆ. ಈ ಮೇಲೆ ಹೇಳಿದ ೧೩ ಭಾಗದ ವಚನಗಳಿಗೆ ಸೂಕ್ತ ವಿವರಣೆಗಳನ್ನು ನೀಡಿದ್ದಾರೆ. ಆಯಾಭಾಗದ ಆಶಯಗಳನ್ನು ಸಂಕ್ಷಿಪ್ತವಾಗಿ ಕಟ್ಟಿಕೊಟ್ಟಿದ್ದಾರೆ. ಅವುಗಳ ಕಾಲ, ವಚನಾಂಕಿತ, ಅರ್ಥ ಅವುಗಳ ಮಹತ್ವ ಐತಿಹಾಸಿಕ ಹಿನ್ನೆಲೆ ಸಾಂಸ್ಕೃತಿಕ ಸಂಗತಿಗಳನ್ನು ವಿವೇಚಿಸಿದ್ದಾರೆ. ಈ ವಚನ ಸಂಕಲನ ಸಂಪುಟ ಸಂಪಾದಿಸಲು ಬಳಸಿಕೊಂಡ ಹಸ್ತಪ್ರತಿಗಳನ್ನು ಅವು ದೊರೆತ ಸ್ಥಳಗಳನ್ನು ಅವುಗಳ ಆಕರ ಸಾಮಗ್ರಿಗಳನ್ನು ದಾಖಲಿಸಿದ್ದಾರೆ. ಇದು ಸಂಪಾದಕರ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ.

ವಚನ ಸಂಕಲನ ಸಂಪುಟ ಪ್ರಸ್ತಾವನೆ ಬಹು ಮುಖ್ಯವಾಗಿದ್ದು, ಇದನ್ನು ಅಧ್ಯಯನಿಸುವವರಿಗೆ ಸೂಕ್ತವಾದ ಪ್ರವೇಶ ಕಲ್ಪಿಸುತ್ತದೆ. ಗ್ರಂಥದುದ್ದಕ್ಕೂ ಸಂಪಾದಕರ ತಾಳ್ಮೆ ದಣಿಯವರಿಯದ ದುಡಿಮೆ,

ಸಾಹಿತ್ಯ ಶ್ರದ್ಧೆ, ಸಾಂಸ್ಕೃತಿಕ ಚಿಂತನೆ, ಗ್ರಂಥ ಸಂಪಾದಕನ ಜವಾಬ್ದಾರಿ ಎದ್ದು ಕಾಣಿಸುತ್ತದೆ. ಈ ಅಂಶಗಳು ಮುಂಬರುವ ಗ್ರಂಥ ಸಂಪಾದಕರಿಗೆ ಮಾರ್ಗದರ್ಶಿ ಸೂತ್ರವಾಗಿದೆ. ಗ್ರಂಥದ ಕೊನೆಗೆ ಅನುಬಂಧವಿದ್ದು ವಚನಗಳ ಅಕಾರತೆಯನ್ನು ಹಾಗೂ ಅವುಗಳ ಪುಟಸಂಖ್ಯೆಯನ್ನು ನೀಡಿದ್ದಾರೆ. ಇವೆಲ್ಲಾ ಕಾರ್ಯಗಳು ಗ್ರಂಥ ಸಂಪಾದನಶಾಸ್ತ್ರದ ಚೌಕಟ್ಟಿನಲ್ಲಿ ನಡೆದಿವೆ. ಡಾ. ಬಿ.ಆರ್. ಹಿರೇಮಠ ಅವರ ವಿದ್ವತ್ತಿಗೆ ಉಜ್ವಲ ಉದಾಹರಣೆಯಾಗಿವೆ.

**೪.೧.೩ ಸಂಕೀರ್ಣ ವಚನ ಸಂಪುಟ -೩ :**

ಸಮಗ್ರ ವಚನ ಸಂಪುಟ _ ಸಂಕೀರ್ಣ ವಚನ ಸಂಪುಟ -೦೩ ಕರ್ನಾಟಕ ಸರ್ಕಾರದ ಜನಪ್ರಿಯ ಆವೃತ್ತಿಯಲ್ಲಿ ಕರ್ನಾಟಕ ಘನ ಸರ್ಕಾರವು ಕನ್ನಡಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಈ ಪುಸ್ತಕವನ್ನು ಪ್ರಕಟಿಸಿದೆ. ಪ್ರಥಮ ಮುದ್ರಣ ೧೯೯೩ರಲ್ಲಿಯೂ, ದ್ವಿತೀಯ ಪರಿಷ್ಕೃತ ಮುದ್ರಣವು ೨೦೦೧ರಲ್ಲಿ ಹೊರಬಂದಿದೆ. ಇದರ ಪ್ರಧಾನ ಸಂಪಾದಕರು ಡಾ. ಎಂ.ಎಂ. ಕಲಬುರ್ಗಿಯವರಾಗಿದ್ದಾರೆ. ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಪಿ. ಕೃಷ್ಣಕುಮಾರ, ಡಾ. ಎಸ್. ವಿದ್ಯಾಶಂಕರ, ಡಾ. ಸಿ. ಶಿವಣ್ಣ, ಡಾ. ಕೆ. ಸಿ. ರಾಮಮೂರ್ತಿ, ಇವರು ಸಮಗ್ರ ವಚನ ಸಾಹಿತ್ಯ ಜನಪ್ರಿಯ ಆವೃತ್ತಿ ಪ್ರಕಟಣಾ ಯೋಜನೆಯ ಸದಸ್ಯರಾಗಿದ್ದಾರೆ. ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರು ಮುಖ್ಯ ಮಂತ್ರಿಗಳಾದ ಕಾಲಾವಧಿಯಲ್ಲಿ ಪ್ರಸ್ತುತ ಗ್ರಂಥವು ಪ್ರಕಟಿತವಾಗಿದೆ. ಇದನ್ನು ಡಾ. ಬಿ. ಆರ್. ಹಿರೇಮಠ ಅವರು ಸಂಪಾದಿಸಿದ್ದಾರೆ.

"ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳುವಳಿ ಒಂದು ಅಪೂರ್ವ ಘಟನೆ. ವಚನಗಳ ಸೃಷ್ಟಿ ಒಂದು ಅನನ್ಯ ಪ್ರಯೋಗ. ಸಮಾಜದ ಎಲ್ಲಾ ವರ್ಗ ಎಲ್ಲ ವರ್ಣಗಳ ಜನಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಗೊಂಡಿದ್ದ ವ್ಯಕ್ತಿ ಕಲ್ಯಾಣ ಮತ್ತು ಸಮಾಜ ಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ಈ ವಚನಗಳು ಜಾಗತಿಕ ಸಾಹಿತ್ಯದ ಮಹತ್ವಪೂರ್ಣ ಭಾಗವೆನಿಸಿವೆ. ಮೂಲತಃ ಜನರಿಂದ, ಜನರಿಗಾಗಿ ಹುಟ್ಟಿ, ಜನರ ಮಧ್ಯದಲ್ಲಿ ಬಾಳಿದ ಸಾಹಿತ್ಯವಾಗಿದೆ. ಹೀಗಾಗಿ ೧೨ರಿಂದ ೧೫ನೇ ಶತಮಾನಕ್ಕೆ ಬರುವಷ್ಟರಲ್ಲಿ ಅದಕ್ಕೆ ವಿಪುಲ ಭಿನ್ನ ಪಾಠಗಳು ಹುಟ್ಟಿಕೊಂಡು ಆಮೇಲೆ ಸಂಕಲನ ಸಂಪಾದನಾ ಕಾರ್ಯದಿಂದಾಗಿ, ಕೆಲವೊಮ್ಮೆ ಪ್ರಕ್ಷಿಪ್ತ ವಚನಗಳು ತಲೆಎತ್ತಿದವು. ಈ ಗೊಂದಲ ಕಾರಣವಾಗಿ ಕವಿ ಸಾಹಿತ್ಯಕ್ಕಿಂತ ವಚನಸಾಹಿತ್ಯ ಸಂಪಾದನ ಕಾರ್ಯ ತುಂಬ ಜಟಿಲ ಸ್ವರೂಪದ್ದಾಗಿದೆ."[೮] ಎಂಬ ಡಾ. ಎಂ.ಎಂ. ಕಲಬುರ್ಗಿಯವರ ಮಾತುಗಳು ವಚನ ಸಂಪಾದನೆಯ ಮಹತ್ವವನ್ನು ಎತ್ತಿ ಹೇಳುತ್ತವೆ. ಬಹುಶ್ರುತ ವಿದ್ವಾಂಸರಾದ ಡಾ. ಬಿ.ಕೆ. ಹಿರೇಮಠರವರು ಸಮಗ್ರ ವಚನ ಸಂಪುಟ ಸಂಪಾದಕರಾಗಿ ಗುರುತರವಾದ ಕಾರ್ಯ ನಿರ್ವಹಿಸಿದ್ದಾರೆ.

ಪ್ರಸ್ತುತ ಸಂಕೀರ್ಣ ವಚನ ಸಂಪುಟ-೩ರಲ್ಲಿ ಮೂವತ್ನಾಲ್ಕು ವಚನಕಾರರ ವಚನಗಳನ್ನು ಸಂಕಲಿಸಿ ಸಮರ್ಥವಾಗಿ ಸಂಪಾದಿಸಿಕೊಟ್ಟಿದ್ದಾರೆ. ಪಂಡಿತಾರಾಧ್ಯರ ವಚನ, ಉರದ ನಾಗಣ್ಣನ ವಚನ, ಪ್ರಸಾದಿ ಬೋಗಣ್ಣನ ವಚನ, ಪ್ರಸಾದಿ ಲೆಂಕ ಬಂಕಣ್ಣನ ವಚನ, ಬಹುರೂಪಿಚೌಡಯ್ಯನ ವಚನ, ಬಳ್ಳೇಶ ಮಲ್ಲಯ್ಯನ ವಚನ, ಬಾಚಿಕಾಯಕದ ಬಸವಣ್ಣನ ವಚನ, ಬಾಲಬೊಮ್ಮಣ್ಣನ ವಚನ, ಬಾಲಸಂಗಣ್ಣನ ವಚನ, ಬಾಹೂರ ಬೊಮ್ಮಣ್ಣನ ವಚನ, ಬಿಬ್ಬಿಬಾಚಯ್ಯನ ವಚನ, ಬೊಕ್ಕಸದ ಚಿಕ್ಕಣ್ಣನ ವಚನ, ಭರಿತಾರ್ಪಣದ ಚೆನ್ನಬಸವಣ್ಣನ ವಚನ, ಭಿಕಾರಿ ಭೀಮಯ್ಯನ ವಚನ, ಭೋಗಣ್ಣನ ವಚನ, ಮಡಿವಾಳ ಮಾಚಿದೇವನ ವಚನ, ಮಡಿವಾಳ ಮಾಚಿದೇವರ ಸಮಯಾಚಾರದ ಮಲ್ಲಿಕಾರ್ಜುನನ ವಚನ,ಮಧುವಯ್ಯನ ವಚನ, ಮನಸಂದ ಮಾರಿತಂದೆಯ ವಚನ, ಮನುಮುನಿಗುಮ್ಮಟದೇವನ ವಚನ, ಮರುಳ ಶಂಕರದೇವನ ವಚನ, ಮರುಳಸಿದ್ದೇಶ್ವರರ ವಚನ, ಮಲಹರ ಕಾಯಕದ ಚಿಕ್ಕದೇವಯ್ಯನ ವಚನ, ಮಲ್ಲಿಕಾರ್ಜುನ ಪಂಡಿತಾರಾಧ್ಯರ ವಚನ, ಮಹಾದೇವಿರಯ್ಯನ ವಚನ, ಮುಳಭಾವಿಯ ಸೋಮಣ್ಣನ ವಚನ, ಮಾದಾರ ಚನ್ನಯ್ಯನ ವಚನ, ಮಾದಾರ ಧೂಳಯ್ಯನ ವಚನ, ಮಾರುಡಿಗೆಯ ನಾಚಯ್ಯನ ವಚನ, ಮಾರೇಶ್ವರ ಒಡೆಯರ ವಚನ, ಮೆರೆಮಿಂಡಯ್ಯನ ವಚನ, ಮೇದಾರ ಕೇತಯ್ಯನ ವಚನ, ಮೈದುನ ರಾಮಯ್ಯನ ವಚನ, ಇವೇ ಮೂವತ್ನಾಲ್ಕು ವಚನಕಾರರ ೨೨೪ ವಚನಗಳು ಪ್ರಸ್ತುತ ಸಂಕಲನದಲ್ಲಿ ಸಂಪಾದನೆಗೊಂಡಿವೆ. ಪಂಡಿತಾರಾಧ್ಯರ ಒಂದು ವಚನ ಮೊದಲ್ಗೊಂಡು ಮೋಳಿಗೆ ಮಾರಯ್ಯನ ೮೨೦ ವಚನಗಳ ವ್ಯಾಪ್ತಿ ಇದೆ. ಸಮಗ್ರ ವಚನ ಸಂಪುಟದ ಎಂಟನೆಯ ಜನಪ್ರಿಯ ಆವೃತ್ತಿಯಾಗಿದ್ದು ಸಂಕೀರ್ಣ ವಚನ ಸಂಪುಟದ ಮೂರನೆಯ ಸಂಪಾದನ ಕೃತಿಯಿದು, ಇದರಲ್ಲಿ 'ಪ' ವರ್ಗದ ಅಕ್ಷರಗಳಿಂದ ಆರಂಭವಾಗುವ ಹೆಸರಿನ ೧೨ನೆ ಶತಮಾನದ ಎಲ್ಲ ವಚನಕಾರರನ್ನು ಅವರ ಎಲ್ಲ ವಚನಗಳನ್ನು ಸಮಾವೇಶಗೊಳಿಸಲಾಗಿದೆ. ಈ ಎಲ್ಲ ವಚನಕಾರರ ಸಂಕ್ಷಿಪ್ತವಾದ ಚರಿತ್ರೆ ಅವರ ವಚನಗಳಲ್ಲಿ ಕಂಡುಬರುವ ವಿಷಯ ಅವರ ವಚನಗಳ ವೈಶಿಷ್ಟ್ಯತೆ, ಸಾಮಾಜಿಕ ಅಂಶಗಳು, ಸಾಹಿತ್ಯಿಕ ಸಂಗತಿಗಳು ಮೊದಲಾದವುಗಳನ್ನು ಪರಿಚಯಿಸಿದ್ದಾರೆ. "ಮೇದರ ಕೇತಯ್ಯನ ವಚನಗಳು. ಗೌರೇಶ್ವರ ಅಂಕಿತದಲ್ಲಿವೆ. ಗೌರೆಗಯೇ ಎಂದರೆ ಬಿದಿರು ಕಾಯಕದವ. ಈತನು ಕಾಡಿಗೆ ಹೋಗಿ ತಂದ ಬಿದಿರಿನ ಮರ, ಬುಟ್ಟಿ, ತೊಟ್ಟಿಲುಗಳನ್ನು ಹೆಣೆಯುವ ಕಾಯಕ ಮಾಡುತ್ತಿದ್ದ ತನ್ನ ಅನೇಕ ವಚನಗಳಲ್ಲಿ ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ, ಗಟ್ಟಿವಾಳ ಮದ್ದಯ್ಯಾ, ಸಿದ್ಧರಾಮಯ್ಯ, ಮರುಳಶಂಕರದೇವ, ಮಡಿವಾಳ ಮಾಚಿದೇವ ಮೊದಲಾದ ಶಿವಶರಣರನ್ನು ಸ್ತುತಿಸುತ್ತಾನೆ. ತಾನು ಮಾಡುವ ಕಾಯಕದ ರೀತಿ ಅದರ ಮಹತ್ವ ಹಾಗೂ ಕಾಯಕದ ಮೂಲಕ ಪಡೆದ ಲಿಂಗಾಂಗ ಸಾಮರಸ್ಯಗಳನ್ನು ಕೇತಯ್ಯ ವಚನಗಳಲ್ಲಿ ವಿವರಿಸಿದ್ದಾನೆ. ಶಿವಭಕ್ತನಾದವನು ಸುಖವು ಸರಿ ದುಃಖವೂ ಸರಿ, ಉರಿಸಿರಿ ಉಭಯವು ಸರಿ ಎಂದು ಭಾವಿಸಬೇಕು. ಇಷ್ಟಲಿಂಗ ಕೆಳಗೆ ಬಿದ್ದರೆ ನಿಂದಿಸಿ ನುಡಿಯಬಾರದು. ಗುರು ಲಿಂಗ ಜಂಗಮಗಳಲ್ಲಿ ಬೇಧವಿಲ್ಲ.

ಶಿವಭಕ್ತನ ಅಂಗ ಕ್ರಿಯೆ ಲಿಂಗ ಕ್ರಿಯೆಗಳಾದ ಅರಿವಿನ ಆಚರಣೆ ಲಿಂಗಕ್ಕೆ ಅರ್ಪಿತವಾಗುತ್ತದೆ. ಕೇತಯ್ಯನ ವಚನಗಳಲ್ಲಿ ಲೋಕಾನುಭವ, ಶಿವಾನುಭವಗಳು ವ್ಯಕ್ತವಾಗಿರುತ್ತವೆ."[೯] ಹೀಗೆ ಒಬ್ಬ ವಚನಕಾರನ ಚರಿತ್ರೆ, ವಚನ ವಸ್ತು ವಿಷಯ, ಅವುಗಳ ವೈಶಿಷ್ಟ್ಯತೆ - ಮೊದಲಾದವುಗಳನ್ನು ಸಂಕ್ಷಿಪ್ತವಾಗಿ ಕಟ್ಟಿಕೊಟ್ಟಿದ್ದಾರೆ. ಈ ಸಂಕಲನದಲ್ಲಿ ಸಂಕಲನಗೊಂಡಿರುವ ಮೂವತ್ನಾಲ್ಕು ವಚನಕಾರರ ಕುರಿತಾಗಿಯೂ ಇದೇ ರೀತಿ ವಿವರಿಸಿದ್ದಾರೆ.

ಸಂಕೀರ್ಣ ವಚನ ಸಂಪುಟಕ್ಕೆ ಡಾ. ಬಿ.ಆರ್. ಹಿರೇಮಠವರು ಬರೆದಿರುವ ಪ್ರಸ್ತಾವನೆಯು ಸುದೀರ್ಘವಾಗಿದ್ದು ತುಂಬಾ ಮೌಲಿಕವಾಗಿದೆ. ವಚನಕಾರರ ವ್ಯಕ್ತಿತ್ವವನ್ನು ಅರಿಯಲು ವಚನಗಳನ್ನು ಅರ್ಥೈಸಿಕೊಳ್ಳಲು ಸಹಾಯವಾಗುತ್ತದೆ. ಓದುಗರಿಗೆ ಸೂಕ್ತ ಪ್ರವೇಶ ಲಭಿಸಿದರೆ ಅಧ್ಯಯನಶೀಲರಿಗೆ, ಒಳ್ಳೆಯ ಮಾರ್ಗದರ್ಶಿಯೂ ಆಗಿ ನಿಲ್ಲುತ್ತದೆ. ಸಾಮಾಜಿಕ, ಸಾಹಿತ್ಯಿಕ, ಧಾರ್ಮಿಕ, ಅನುಭಾವಿಕ, ಸಾಂಸ್ಕೃತಿಕ ಮುಂತಾದ ನೆಲೆಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ. ವಚನಗಳ ಆಳಕ್ಕಿಳಿದು ವಿಶ್ಲೇಷಿಸಿದ್ದಾರೆ. ಹೀಗಾಗಿ ಪ್ರಸ್ತಾವನೆಯು ಮಹತ್ವದ ಒಳನೋಟಗಳನ್ನು ಕಟ್ಟಿಕೊಡುತ್ತದೆ. ಪ್ರಸ್ತಾವನೆಯನ್ನು ಓದುವುದೇ ಒಂದು ಚೇತೋಹಾರಿ ಅನುಭವವಾಗಿದೆ. "ವಚನ ಸಾಹಿತ್ಯ ಕನ್ನಡ ಭಾಷೆಯಲ್ಲಿ ಕಣ್ಣು ತೆರೆದ ಅಪೂರ್ವ ಸೃಷ್ಟಿ, ಹನ್ನೆರಡನೇ ಶತಮಾನ ವೀರಶೈವ ಶರಣರ ಪ್ರಯೋಗ ಶೀಲ ಮನಸ್ಸಿನ ಅಮೃತ ಫಲವೆನಿಸಿದ ಈ ಸಾಹಿತ್ಯಕ್ಕೆ ಜನಪರತ್ವ ಕಾರಣವಾಗಿ ಜಾಗತಿಕ ಮಹತ್ವ ಸಲ್ಲುತ್ತದೆ."[೧೦] ಇದು ಡಾ. ಬಿ.ಆರ್. ಹಿರೇಮಠರ ಭಾಷಾ ಬಳಕೆಗೆ ಒಂದು ನಿದರ್ಶನವಾಗಿದೆ. "ವಚನಕಾರರು ಜನಪರ ಧೋರಣೆಗೆ ಅನುಗುಣವಾದ ಭಾಷೆ ಶಿಲ್ಪಗಳನ್ನು ರೂಪಿಸಿಕೊಳ್ಳಬೇಕಾಯ್ತು. ಇದರಿಂದ ಕನ್ನಡ ಸಾಹಿತ್ಯ ಹಳೆಗನ್ನಡ ಭಾಷೆ ಕೈಬಿಟ್ಟು ನಡುಗನ್ನಡ ಭಾಷೆಯನ್ನು ಬದಿಗಿರಿಸಿ ಚಂಪೂ ರೂಪವನ್ನು ತ್ಯಜಿಸಿ ವಚನರೂಪವನ್ನು ಮೈಗೂಡಿಸಿಕೊಂಡಿತು. ಸತ್ವ ದೃಷ್ಟಿಯಿಂದಲೂ ಮೊತ್ತದ ದೃಷ್ಟಿಯಿಂದಲೂ ಹಿರಿದಾಗಿದೆ"[೧೧] ಇದು ವಚನಕಾರರು ರೂಪಿಸಿಕೊಂಡ ಭಾಷೆಯ ಕುರಿತಾಗಿರುವ ವ್ಯಾಖ್ಯಾನವಾಗಿದೆ. ಡಾ. ಬಿ.ಆರ್. ಹಿರೇಮಠರವರು ಕೇವಲ ವಚನಗಳನ್ನು ಮಾತ್ರ ಸಂಪಾದಿಸಿಕೊಡದೆ ಭಾಷೆ, ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ಅಂಶಗಳನ್ನು ಕೂಡಾ ಜಿಜ್ಞಾಸೆಗೊಳಪಡಿಸಿದ್ದಾರೆ. ಇದು ಅವರ ಬಹುಶ್ರುತತ್ವಕ್ಕೆ ಸಾಕ್ಷಿಯಾಗಿದೆ.

"ಪ್ರಸ್ತುತ ಸಂಪುಟದಲ್ಲಿ ಸಮಾವೇಶಗೊಳ್ಳುವ ಎಲ್ಲ ವಚನಕಾರರ ಸಂಖ್ಯೆಯನ್ನು ನಿರ್ದಿಷ್ಟಗೊಳಿಸಿಕೊಳ್ಳುವುದು ಪ್ರತಿಯೊಬ್ಬ ವಚನಕಾರರ ರಚನೆಗಳನ್ನೊಳಗೊಂಡ ಆಕರಗಳನ್ನು ಸಾಧ್ಯವಾದಷ್ಟು ಒಂದೂ ಬಿಡದೆ ಪಟ್ಟಿಮಾಡುವುದು, ಹೀಗೆ ಪಟ್ಟಿ ಮಾಡಿದ ಪ್ರಕಟಿತ ಹಾಗೂ ಅಪ್ರಕಟಿತ ಆಕರಗಳಿಂದ ವಚನಗಳನ್ನು ಪ್ರತಿ ಮಾಡಿ ಸಂಗ್ರಹಿಸುವುದು ನಾವು ಮಾಡಿದ ಪ್ರಥಮ ಹಂತದ ಕೆಲಸ. ಈ ಸಂದರ್ಭದಲ್ಲಿ ಬಹುಪಾಲು ವಚನಗಳನ್ನು ಸಕಲಪುರಾತನರ ವಚನಗಳ ಕಟ್ಟಿನಿಂದಲೂ

ಉಳಿದವುಗಳನ್ನು ಅನ್ಯ ಪ್ರಾಚೀನ ಆಕರಗಳಿಂದಲೂ, ವಿವಿಧ ಪತ್ರಿಕೆಗಳಿಂದಲೂ ಪ್ರಕಟಿತ ಗ್ರಂಥಗಳಿಂದಲೂ ಪ್ರತಿಮಾಡಿಕೊಳ್ಳಲಾಗಿದೆ. ಇದರಿಂದ ಪ್ರತಿಯೊಂದು ವಚನಗಳಿಗಿರುವ ಸರ್ವ ಆಕರಗಳನ್ನು ಪಾಠಾಂತರಗಳನ್ನು ಗುರುತಿಸುವುದು ಸಾಧ್ಯವಾಯಿತು. ಪರಿಷ್ಕರಣ ದೃಷ್ಟಿಯಿಂದ ಇದು ಪ್ರಾಥಮಿಕ ಹಂತ ಎನ್ನಿಸಿದರೂ ಅತ್ಯಂತ ಮೂಲಭೂತ ಹಾಗೂ ಮಹತ್ವಪೂರ್ಣ ಕಾರ್ಯವಾಗಿದೆ. ಹೀಗೆ ಸಂಗ್ರಹಿಸಿದ ಸಂಯೋಜಿಸಿರುವ 'ವಚನ ಬ್ಯಾಂಕಿ'ನಲ್ಲಿರುವ ವಚನಗಳೊಂದಿಗೆ ಪರಿಶೀಲಿಸಿ, ಕೈಬಿಟ್ಟು ಹೋಗಿರಬಹುದಾದ ಆಕರ ಮತ್ತು ವಚನಗಳನ್ನು ಪ್ರತಿ ಮಾಡಿಕೊಂಡು ಸೇರಿಸಿಕೊಳ್ಳಲಾಯಿತು. ಈ ಪರಿಶೀಲನ ವಿಧಾನದಿಂದ ವಚನಗಳಿಗಿರುವ ಎಲ್ಲ ಆಕರಗಳನ್ನು ಗುರುತಿಸುವ, ವಚನಗಳ ಸಂಖ್ಯೆಯನ್ನು ನಿರ್ದಿಷ್ಟಪಡಿಸುವ ಕಾರ್ಯ ಇನ್ನೂ ಅಧಿಕೃತವಾಯಿತು, ಪರಿಪೂರ್ಣವಾಯಿತು."[೧೨] ಈ ಮಾತುಗಳು ಪ್ರಸ್ತುತ ಸಂಪಾದನಾ ಪರಿಷ್ಕರಣ ಕಾರ್ಯವನ್ನು ವಿವರಿಸುತ್ತವೆ. ಕನ್ನಡ ಗ್ರಂಥ ಸಂಪಾದನ ಶಾಸ್ತ್ರದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಎಲ್ಲ ಅಂಶಗಳನ್ನು ಈ ಗ್ರಂಥ ಸಂಪಾದನೆಯಲ್ಲಿ ಅಳವಡಿಸಿಕೊಂಡಿರುವುದನ್ನು ಗುರುತಿಸಬಹುದು. ಗ್ರಂಥಸಂಪಾದನೆಯ ಶಾಸ್ತ್ರೀಯ ಚೌಕಟ್ಟಿನಲ್ಲಿಯೇ ಅತ್ಯುತ್ತಮವೆನ್ನುವಂತೆ ಡಾ. ಬಿ. ಆರ್. ಅವರು ಸಂಕೀರ್ಣ ವಚನ ಸಂಪುಟವನ್ನು ಅರ್ಥಪೂರ್ಣವಾಗಿ ಸಂಪಾದಿಸಿದ್ದಾರೆ. ಅವರ ವಿದ್ವತ್ತು ಸತತ ಪರಿಶ್ರಮ, ಅಪಾರ ಶ್ರದ್ಧೆ, ಸಂಶೋಧನ ನಿಷ್ಠೆ, ಸಂಪಾದಕರ ಜವಾಬ್ದಾರಿ ಮುಂತಾದವುಗಳನ್ನು ಗ್ರಂಥದುದ್ದಕ್ಕೂ ಕಾಣಬಹುದು. ವಚನ ಸಂಪುಟದ ಸಂಪಾದನೆಯಿಂದಾಗಿ ಡಾ. ಬಿ. ಆರ್. ಹಿರೇಮಠ ಅವರು ಕನ್ನಡದ ಶ್ರೇಷ್ಠ ಗ್ರಂಥ ಸಂಪಾದಕರ ಸಾಲಿನಲ್ಲಿ ನಿಲ್ಲುತ್ತಾರೆ.

ಪ್ರಸ್ತುತ ವಚನ ಸಂಕೀರ್ಣ ಸಂಪುಟಕ್ಕೆ ಅನುಬಂಧಗಳನ್ನು ಜೋಡಿಸಲಾಗಿದೆ. ಕಠಿಣ ಪದಕೋಶ, ವಚನಗಳ ಅಕಾರಾದಿ, ಆಕರಗ್ರಂಥಗಳು ಹೀಗೆ ಮೂರು ಅನುಬಂಧಗಳಲ್ಲಿ ಮಾಹಿತಿಯನ್ನು ಕ್ರೋಢಿಕರಿಸಿದ್ದಾರೆ. ಕಠಿಣಪದಕೋಶವನ್ನು ಅಕಾರಾದಿಯಾಗಿ ಜೋಡಿಸಿರುವುದು ಕಂಡುಬರುತ್ತದೆ. ಕಠಿಣ ಪದಕೋಶವನ್ನು ನೀಡಿರುವುದರಿಂದ ಜನಸಾಮಾನ್ಯರು ವಚನಗಳನ್ನು ಅರಿಯಲು ವಚನದ ಆಂತರ್ಯವನ್ನು ಅರ್ಥೈಸಿಕೊಳ್ಳಲು ನೆರವಾಗುತ್ತದೆ. ವಚನಗಳನ್ನು ಅಕಾರಾದಿಯಲ್ಲಿ ನೀಡಿ ಅವುಗಳ ಸಂಖ್ಯೆಯನ್ನು ಅವುಗಳ ಮುಂದೆ ದಾಖಲಿಸಿರುವುದರಿಂದ ಆಯಾ ವಚನಗಳನ್ನು ತಕ್ಷಣ ಗುರುತಿಸಲು ಸಾಧ್ಯವಾಗುತ್ತದೆ. ಕೊನೆಗೆ ಆಕರಗ್ರಂಥಗಳನ್ನು ನೀಡಿದ್ದು ಅವು ಕೂಡಾ ಅಕಾರಾದಿಯಲ್ಲಿವೆ. ಆಕರ ಗ್ರಂಥಗಳನ್ನು ಸೂಚಿಸಿರುವುದು ಸಂಪಾದಕರ ಪ್ರಾಮಾಣಿಕತೆ ಬಹುಶಿಸ್ತೀಯ ಅಧ್ಯಯನಕ್ಕೆ ಮಾದರಿಯೆನಿಸಿದೆ.

ಪ್ರಸ್ತುತ ಸಂಕೀರ್ಣ ವಚನ ಸಂಪುಟವು ಸಮಗ್ರ ವಚನ ಸಂಪುಟ ಜನಪ್ರಿಯ ಆವೃತ್ತಿಯಲ್ಲಿ ಹೊರಬಂದಿದೆ. ಕರ್ನಾಟಕ ಸರಕಾರದ ನೆರವಿನೊಂದಿಗೆ ಕೃತಿ ಪ್ರಕಟಗೊಂಡಿದೆ. ಹೀಗಾಗಿ ಅಂದಿನ

ಕರ್ನಾಟಕದ ಘನವೆತ್ತ ಮುಖ್ಯಮಂತ್ರಿಗಳಾದ ಎಸ್. ಎಂ. ಕೃಷ್ಣ ಅವರ 'ಮುನ್ನುಡಿ' ಇದೆ. ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಮಾನನೀಯ ರಾಣಿ ಸತೀಶ ಅವರ 'ಭಿನ್ನಹ'ವಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಕೆ. ಸಿ. ರಾಮಮೂರ್ತಿ ಅವರ 'ನಿರ್ದೇಶಕರ ಮಾತು'ಗಳಿವೆ. ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ. ಮಲ್ಲೇಪುರಂ, ದಿ. ವೆಂಕಟೇಶರ 'ಪ್ರಕಾಶಕರ ಮಾತು'ಗಳಿವೆ. ಶತಮಾನದ ಸಂಶೋಧಕರೆನಿಸಿದ ಹಾಗೂ ಸಮಗ್ರ ವಚನ ಸಂಪುಟದ ಪ್ರಧಾನ ಸಂಪಾದನಕಾರರಾದ ಡಾ. ಎಂ.ಎಂ. ಕಲಬುರ್ಗಿ ಅವರ 'ಸಂಪಾದಕೀಯ'ವು ಪ್ರಸ್ತುತ ಗ್ರಂಥಕ್ಕೊಂದು ಕಿರೀಟವಿಟ್ಟಂತಾಗಿದೆ. ಅತ್ಯಂತ ಅಮೂಲ್ಯವಾದ ವಚನ ಸಂಪುಟವನ್ನು ಸಂಪಾದಿಸಿಕೊಟ್ಟಿರುವ ಡಾ. ಬಿ.ಆರ್. ಹಿರೇಮಠ ಅವರು ಸಮಸ್ತ ಕನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ.

**೪.೧.೪. ಸಂಕೀರ್ಣ ವಚನ ಸಂಪುಟ - ೪ :**

ಪ್ರಸ್ತುತ ಸಂಕೀರ್ಣ ವಚನ ಸಂಪುಟವು ಸಮಗ್ರ ವಚನ ಸಂಪುಟದ ಜನಪ್ರಿಯ ಆವೃತ್ತಿಯ ೯ನೆಯ ಸಂಪುಟವಾಗಿದೆ. ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತುತ ಕೃತಿಯನ್ನು ಪಾಂಡಿತ್ಯಪೂರ್ಣವಾಗಿ ಸಂಪಾದಿಸಿದ್ದಾರೆ. ಇದರಲ್ಲಿ ಒಟ್ಟು ೮೧ ವಚನಕಾರರ ವಚನಗಳನ್ನು ಸಂಕಲಿಸಿ ಸಂಪಾದಿಸಿಕೊಟ್ಟಿದ್ದಾರೆ. ಈ ಸಂಪುಟದಲ್ಲಿ ಒಟ್ಟು ೧೪೬೬ ವಚನಗಳಿರುವುದು ವಿಶೇಷವಾಗಿದೆ. ಕಾಂಡ -೧ರಲ್ಲಿ ೨೭ ವಚನಕಾರರ ವಚನಗಳ ಸಂಪಾದನೆ ಇದ್ದು ಕಾಂಡ -೨ರಲ್ಲಿ ಅಜ್ಞಾತ ಶರಣರ ೫೮ ವಚನಗಳ ಸಂಪಾದನೆ ಇದೆ. ಪ್ರಸ್ತುತ ವಚನ ಸಂಪುಟಕ್ಕೆ ವೀರಶೈವ ಪರಿಕಲ್ಪನೆಯ ಸ್ಥಲಗಳ ಬದಲಾಗಿ ಕಾಂಡವೆಂಬ ಪದವನ್ನು ಬಳಸಿರುವುದು ವೈಶಿಷ್ಟ್ಯಪೂರ್ಣ ಅಂಶವಾಗಿದೆ. ಕಾಂಡ -೧ರಲ್ಲಿ ರಕ್ಕಸಬೊಮ್ಮಿ ತಂದೆ, ರಾಯಸದ ಮಂಚಣ್ಣ, ರೇಚದ ಬಂಕಣ್ಣ, ಲದ್ದೆಯ ಸೋಮಯ್ಯ, ವಚನ ಭಂಡಾರಿ ಶಾಂತರಸ, ವರದ ಸಂಕಣ್ಣ, ವೀರಗೊಲ್ಲಾಳ, ವೀರಶಂಕರ ದಾಸಯ್ಯ, ವೇದಮೂರ್ತಿ ಸಂಗಣ್ಣ, ವೈದ್ಯ ಸಂಗಣ್ಣ, ಶಂಕರ ದಾಸಿಮಯ್ಯ. ಶಿವನಾಗಮಯ್ಯ, ಶಿವಲೆಂಕ ಮಂಚಣ್ಣ, ಸಂಗಮೇಶ್ವರದ ಅಪ್ಪಣ್ಣ, ಸಕಲೇಶ ಮಾದರಸ, ಸಗರದ ಬೊಮ್ಮಣ್ಣ, ಸತ್ತಿಗೆ ಕಾಯಕದ ಮಾರಯ್ಯ, ಸಿದ್ಧಾಂತಿ ವೀರ ಸಂಗಯ್ಯ, ಸುಂಕದ ಬಂಕಣ್ಣ, ಸೂಜಿಕಾಯಕದ ರಾಮಿತಂದೆ, ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣ, ಹಡಪದ ರೇಚಣ್ಣ, ಹಾವಿಹಾಳ ಕಲ್ಲಯ್ಯ, ಹುಂಜಿನ ಕಾಳಗದ ದಾಸಯ್ಯ, ಹೆಂಡದ ಮಾರಯ್ಯ, ಹೊಡೆಯಲ್ಲ ಬಂಕಣ್ಣ ಹೀಗೆ ಇಪ್ಪತ್ತೇಳು ವಚನಕಾರರ ೧೨೧೦ ವಚನಗಳನ್ನಲ್ಲದೆ ಅಜ್ಞಾತ ವಚನಗಳನ್ನು ಇಲ್ಲಿ ಅಳವಡಿಸಲಾಗಿದ್ದು ಅವರ ಅಂಕಿತಗಳ ವಿವರ ಹೀಗೆ ಹೇಳಿದ್ದಾರೆ.

ಅಖಂಡ ಮಂಡಲೇಶ್ವರ, ಅನುಗಲೇಶ್ವರ, ಅಪ್ರಮಾಣಗುಹೇಶ್ವರ, ಅಶ್ವಥರಾಮ, ಆನಂದಸಿದ್ಧೇಶ್ವರ, ಈಶ್ವರೀಯವರದ ಚೆನ್ನರಾಮ, ಏಕಾಂತವೀರ ಸೊಡ್ಡಳ, ಏಕೋರಾಮೇಶ್ವರ

ಲಿಂಗ, ಕಲ್ಲಯ್ಯ ದೇವರು, ಕುರುಂಗ ಲಿಂಗ, ರಾರ್ಗೇಶ್ವರ ಲಿಂಗ, ಗುರುವರದ ವಿರೂಪಾಕ್ಷ, ಗುರುವಿಶ್ವೇಶ್ವರ, ಗೊಹೇಶ್ವರಲಿಂಗದಲ್ಲಿ, ಪ್ರಭುವೇ ಸಾಕ್ಷಿಯಾಗಿ, ಬಸವಪ್ರಿಯ ಕೂಡಲ ಸಂಗಮದೇವ, ಚೆನ್ನರಾಮೇಶ್ವರ ಲಿಂಗ, ಜಂಗಮಲಿಂಗ ಪ್ರಭುವೆ, ಜ್ಯೋತಿ ಸಿದ್ಧೇಶ್ವರ, ತುಂಬೆಯಾತಲೆಯ ಮನಪ್ರಿಯ ಚೆನ್ನಬಂಕೇಶ್ವರ, ತ್ರೈಲೋಚನ ಮನೋಹರ, ಮಾಣಿಕೇಶ್ವರ ಲಿಂಗ, ತ್ರಿಲೋಚನ ಶಂಕರ ದೇವಧ್ವಜ ಮೃತ್ಯುಂಜಯ ಭಾವದೊಲ್ಲಭ, ಮುದ್ದನೂರೇಶ, ನಂಜುಂಡಶಿವ, ನಾಚೇಶ್ವರ, ನಿಃಕಳಂಕ ಚೆನ್ನಮಲ್ಲಿಕಾರ್ಜುನ ಪ್ರಭುವೆ, ನಿಃಕಳಂಕ ಚೆನ್ನ ಸೋಮೇಶ್ವರ, ನಿಜಗುರು ನಿರಾಲಂಬ ಪ್ರಭುವೆ, ನಿಜಗುರು ಶಾಂತಮಲ್ಲಿಕಾರ್ಜುನ, ನಿಜಮುಕ್ತಿರಾಮೇಶ್ವರ, ನಿರ್ಧನ ಪ್ರಿಯ ರಾಮೇಶ್ವರ, ನಿರಾಲಯ ನಿಜಗುರು ಶಾಂತೇಶ್ವರ, ನಿರಾಳಪ್ರಿಯ ಸೊಡ್ಡಳಯ್ಯ, ಬಸವಣ್ಣಪ್ರಿಯ ಧರ್ಮೇಶ್ವರ, ಭೀಮ ಬಂಕೇಶ್ವರ, ಮರ್ಕಾಟೇಶ್ವರ, ಮಹಾಘನಪ್ರಸಿದ್ಧ ಪ್ರಸನ್ನ ಸಂಗಮೇಶ್ವರ ಲಿಂಗ, ಮಹಾಲಿಂಗ ವೀರ ಮಾಹೇಶ್ವರ, ಮಹಾಲಿಂಗ ಶಶಿಮೌಳಿ ಸದಾಶಿವ, ವರದ ಸೋಮನಾಥ, ವಿಶ್ವಪತಿ ವಿಶ್ವನಾಥ, ವೈನಿಪುರದ ಸಂಗಮೇಶ್ವರ, ವೈದ್ಯನಾಥೇಶ್ವರ, ಶಂಭುಮಾರೇಶ್ವರ, ಶಾಂತವೀರೇಶ್ವರ, ಶ್ರೀಗುರುಪ್ರಭು ಮುನೀಶ್ವರ, ಶ್ರೀ ಬಸವಲಿಂಗ, ಶ್ರೀ ಮುಕ್ತಿರಾಮೇಶ್ವರ, ಸತ್ವಕರಂಡಮೂರ್ತಿ ಸದಾಶಿವಲಿಂಗ, ಸದ್ಗುರು ಪ್ರಿಯಶಿವ ಸಿದ್ಧರಾಮೇಶ್ವರ, ಸರ್ವೇಶ್ವರಲಿಂಗ, ಸಿದ್ಧಲಿಂಗಪ್ರಿಯ್ಯ ಬಸವಪ್ರಿಯ ಪ್ರಭುವೆ, ಸೋಮಭೀಮೇಶ್ವರಲಿಂಗ, ಹಾಟಕೇಶ್ವರಲಿಂಗ ಇವೇ ಮೊದಲಾಗಿ ೫೪ ವಚನಾಂಕಿತಗಳನ್ನುಳ್ಳ ಅಜ್ಞಾತ ವಚನಕಾರರ ವಚನಗಳು ಇಲ್ಲಿ ಸಂಪಾದಿತವಾಗಿವೆ. ಸಾಮಾನ್ಯವಾಗಿ ಅಜ್ಞಾತ ವಚನಕಾರರ ಒಂದೊಂದೇ ವಚನಗಳು ಲಭ್ಯವಾಗಿವೆ. ಕೆಲವರ ೪, ೧೭, ೨೮, ೪೧ ವಚನಗಳು ಲಭಿಸಿವೆ. ಇವೆಲ್ಲವುಗಳು ಅಕಾರಾದಿಯಾಗಿ ಸಂಯೋಜಿಸಲ್ಪಟ್ಟಿವೆ. ಕಾಂಡ ಒಂದರಲ್ಲಿ 'ರ' ಕಾರದಿಂದ ಆರಂಭವಾಗಿ 'ಹ' ಕಾರದ ವರೆಗಿನ ೨೭ ವಚನಕಾರರ ವಚನಗಳಲ್ಲಿ ಸಂಪಾದಿತಗೊಂಡಿವೆ. ಪ್ರಸ್ತಾವನೆಯಲ್ಲಿ ಸ್ಥಾವರ ಜಂಗಮದ ಜಿಜ್ಞಾಸೆ ಇದೆ. ವಚನಕಾರರ ಅಭಿವ್ಯಕ್ತಿ ಮಾಧ್ಯಮದ ಕುರಿತಾಗಿ ವಿವರಣೆ ಇದೆ.

"ಸ್ಥಾವರವಾಗಿದ್ದ ಕನ್ನಡ ನಾಡಿನ ಸಾಹಿತ್ಯ ಹಾಗೂ ಸಮಾಜಗಳನ್ನು ಜಂಗಮಗೊಳಿಸಿದವರು ೧೨ನೇ ಶತಮಾನದ ಶಿವಶರಣರು. ಸಕಲರಿಗೆ ಲೇಸನೇ ಬಯಸುವ ಮಾನವೀಯ ಮೌಲ್ಯಗಳ ಪುನರುತ್ಥಾನದ ಕಾರ್ಯದ ಪರಿಣಾಮವಾಗಿ ಸಮಾನತೆ, ಸಹೋದರತ್ವ, ಸ್ವಾತಂತ್ರ್ಯಗಳಿಂದ ಕೂಡಿದ ಮುಕ್ತ ಸಮಾಜದ ನಿರ್ಮಾಣ ಜನಪರ ಸಾಹಿತ್ಯ ಸೃಷ್ಟಿಯ ಕಾರ್ಯಗಳು ಸಾಕಾರಗೊಳ್ಳಲು ಸಾಧ್ಯವಾಯಿತು."[೧೨] ಈ ಮಾತುಗಳು ವಚನ ಸಾಹಿತ್ಯಕ್ಕೆ ಹೊಸ ವ್ಯಾಖ್ಯಾನ ನೀಡುತ್ತವೆ. "ಶಿವಶರಣರು ತಮ್ಮ ಪವಿತ್ರ ಧ್ಯೇಯಧೋರಣೆ ಅಭಿವ್ಯಕ್ತಿಗಾಗಿ ವಚನಸಾಹಿತ್ಯವನ್ನು ಮಾಧ್ಯಮವಾಗಿ ರೂಪಿಸಿಕೊಂಡರು. ಆದುದರಿಂದ ವಚನಗಳಲ್ಲಿ ಶಿವಶರಣರ ಆತ್ಮ ನಿರೀಕ್ಷಣೆ, ಸಮಾಜದ ವಿಡಂಬನೆ,

ನೀತಿ ಬೋಧನೆ, ತತ್ವ ಪ್ರತಿಪಾದನೆ, ಮೊದಲಾದ ವಿಚಾರಗಳು ವ್ಯಕ್ತವಾದವು"[೧೪] ಎನ್ನುವಲ್ಲಿ ವಚನಗಳ ಕಾರ್ಯ ವಚನಾಂದೋಲನದ ಆಶಯಗಳಿಲ್ಲಿ ವ್ಯಕ್ತವಾಗಿವೆ.

ಪ್ರಸ್ತಾವನೆಯಲ್ಲಿ ೨೭ ಜನ ವಚನಕಾರರ ಸಂಕ್ಷಿಪ್ತ ಚರಿತ್ರೆ ಅವರ ವಚನಗಳಲ್ಲಿ ನಿರೂಪಿತವಾದ ವಿಷಯ, ಆಯಾ ವಚನಕಾರರ ವಿಶಿಷ್ಟತೆ, ಅವರು ಪ್ರತಿಪಾದಿಸಿರುವ ಮೌಲ್ಯಗಳು ಸಾಮಾಜಿಕ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಡಾ. ಬಿ.ಆರ್. ಹಿರೇಮಠ ಅವರು ಸಂಕ್ಷಿಪ್ತವಾಗಿ ಕಟ್ಟಿಕೊಟ್ಟಿದ್ದಾರೆ. "ಪತ್ರಗಳನ್ನು ಮುಟ್ಟಿಸುವ ನಿಯೋಗಿಯಾಗಿದ್ದ ರಾಯಸದ ಮಂಚಣ್ಣನ ವಚನಗಳು ಜಾಂಭೇಶ್ವರ ಅಂಕಿತದಲ್ಲಿರುತ್ತವೆ. ಗುರುಕರುಣಿಸಿದ ಇಷ್ಟಲಿಂಗದ ಅರ್ಚನೆಯನ್ನು ಮರೆಯಬಾರದು. ಮನವಿಕಾರವಾಗುವ ಮೊದಲು ಮಹದಲ್ಲಿ ನಿಂತರೆ ಇಂದ್ರಿಯಂಗಳು ಏನೂ ಮಾಡಲಾರವು. ಅರಿವನ್ನು ಅರಿತು ಆಚರಿಸಬೇಕು. ಅರಿವು ಮರೆತರೆ ತಪ್ಪದೇ ಭವ ಮರುಕಳಿಸುತ್ತದೆ. ಕಾರಣ ಅಂಗದಲ್ಲಿರುವ ಲಿಂಗಯ್ಯನನ್ನು ಅರಿಯಬೇಕು. ಹೆಣ್ಣು, ಹೊನ್ನು, ಮಣ್ಣೆಂಬ ಬಲೆಗೆ ಸಿಲುಕಿ ಒದ್ದಾಡಬಾರದೆಂಬ ವಿವರಗಳು ರಾಯಸದ ಮಂಚಣ್ಣನ ವಚನಗಳಲ್ಲಿರುತ್ತವೆ. ಈತನ ವಚನಗಳು ಅರ್ಥಪೂರ್ಣ ಎನಿಸಿವೆ."[೧೫] ಈ ಮಾತುಗಳು ರಾಯಸದ ಮಂಚಣ್ಣ ವಚನಗಳಲ್ಲಿರುವ ಆಶಯವನ್ನು ಅನಾವರಣಗೊಳಿಸುತ್ತವೆ. ಹೀಗೆಯೆ ಇಪ್ಪತ್ತೇಳು ಜನ ವಚನಕಾರರ ವಚನಗಳ ಆಶಯವನ್ನು ಸಂಕ್ಷಿಪ್ತವಾಗಿ ವಿವೇಚಿಸಿದ್ದಾರೆ. ಈ ವಿವೇಚನೆಯು ಆಯಾ ವಚನಕಾರರನ್ನು ಅರಿಯಲು, ಅವರ ವಚನಗಳ ಅಂತರ್ಯವನ್ನು ತಿಳಿಯಲು ಅವರ ಮನೋಧರ್ಮವನ್ನು ಅರ್ಥೈಸಿಕೊಳ್ಳಲು ನೆರವಾಗುತ್ತವೆ. ಪ್ರಸ್ತುತ ಸಂಪುಟವನ್ನು ಓದಬಯಸುವ ಸಹೃದಯಿಗಳಿಗೆ ಪ್ರಸ್ತಾವನೆಯು ಪ್ರಶಸ್ತವಾದ ಪ್ರವೇಶವಾಗಿದೆ. ವ್ಯಾಸಂಗ ಕೈಗೊಳ್ಳಬಯಸುವವರಿಗೆ ಸೂಕ್ತವಾದ ಮಾರ್ಗದರ್ಶಿಯೂ ಕೂಡ ಆಗುತ್ತದೆ.

"ಪ್ರಸ್ತಾವನೆಯಲ್ಲಿ ಪರಿಷ್ಕರಣದ ಕುರಿತಾಗಿ ವಿವರಿಸುತ್ತ - ಪ್ರಾಚೀನವೆನಿಸಿದ ಯೋಗ್ಯವಾದ ಮತ್ತು ಅಧಿಕೃತ ಆಕರದ ವಚನವನ್ನು ಇಲ್ಲಿ ಮೂಲವೆಂದು ಇಟ್ಟುಕೊಂಡು ಅವಶ್ಯವೆನಿಸಿದಲ್ಲಿ ಭಿನ್ನ ಪಾಠಗಳಿಂದ ಪಾಠವನ್ನು ಪರಿಷ್ಕರಿಸಲಾಗಿದೆ. ಈ ಪ್ರಸಂಗದಲ್ಲಿ ಪ್ರಕ್ಷಿಪ್ತವಾಗಿರಬಹುದಾದ ವಚನಗಳನ್ನು ಕೈಬಿಡಲಾಗಿದೆ"[೧೬] ಎಂದು ಹೇಳಿರುವುದು ಸಮಂಜಸವಾಗಿದೆ. ಗ್ರಂಥ ಸಂಪಾದನಾಶಾಸ್ತ್ರಕ್ಕೆ ಅನುಗುಣವಾಗಿದೆ.

ಒಂದು ಗ್ರಂಥ ಸಂಪಾದಿಸುವಾಗ ಎದುರಾಗುವ ಸಮಸ್ಯೆಗಳು ಹಲವಾರು. ಎಡರು ತೊಡರುಗಳನ್ನು ಬಿಡಿಸಿಕೊಂಡು ಕವಿಯ ಮೂಲ ಪಠ್ಯವನ್ನು ಅಥವಾ ಅದಕ್ಕೆ ಹತ್ತಿರವಾದ ಪಠ್ಯವನ್ನು ಕಟ್ಟಿ ಕೊಡುವುದು ಸಂಪಾದಕರ ಗುರುತರ ಜವಾಬ್ದಾರಿಯಾಗಿರುತ್ತದೆ. ಪಾಠ ಪರಿಷ್ಕರಣ ಸಂದರ್ಭದಲ್ಲಿ ಡಾ. ಬಿ.ಆರ್. ಹಿರೇಮಠ ಅವರು ಅನುಸರಿಸಿದ ಕ್ರಮ ಸ್ವಾಗತಾರ್ಹವಾಗಿದೆ. "ವಚನಕಾರರ ಹಾಗೂ ಅಂಕಿತಗಳ ನಾಮಸಾದೃಶ್ಯದಿಂದಾಗಿ ವಚನಗಳ ಅಂಕಿತಪಲ್ಲಟ ಕ್ರಿಯೆ ತೀರ ಸಹಜವಾಗಿ ನಡೆದಿದೆ.

ಹೀಗಾಗಿ ಹಡಪದ ಅಪ್ಪಣ್ಣನ ವಚನಗಳು, ಹಡಪದ ಅಪ್ಪಣ್ಣನ ಹೆಸರಿನಿಂದಲೂ ಸಿಗುತ್ತವೆ. ಇಷ್ಟೇ ಅಲ್ಲ ಬಸವಣ್ಣ, ಅಕ್ಕನಾಗಮ್ಮನವರ ವಚನಗಳು ಸಂಗಮೇಶ್ವರ ಅಪ್ಪಣ್ಣನ ಅಂಕಿತ- ಹೆಸರಿನಲ್ಲಿಯೂ ದೊರಕುತ್ತವೆ. 'ಸಂಗಮೇಶ್ವರನ ಅಪ್ಪಣ್ಣನ ವಚನಗಳು' ಹೆಸರಿನ ಅಡಿಯಲ್ಲಿ 'ಬಸವಪ್ರಿಯ ಕೂಡಲಚೆನ್ನಸಂಗಮದೇವ' ಎಂಬ ಅಂಕಿದೊಡನೆ ಸಿಗುವುದರಿಂದ ಈ ಅಂಕಿತದ ವಚನಗಳನ್ನು ಸಂಗಮೇಶ್ವರ ಅಪ್ಪಣ್ಣನ ವಚನಗಳೆಂದು ಗುರುತಿಸಲಾಗಿದೆ. ಹಡಪದ ಅಪ್ಪಣ್ಣನ ವಚನಾಂಕಿತ 'ಬಸವಪ್ರಿಯ ಕೂಡಲ ಚೆನ್ನಬಸವಣ್ಣ' ಎಂಬುದೆಂದು ಈತನ ವಚನವೊಂದರಿಂದಲೇ ಗೊತ್ತಾಗುತ್ತದೆ. ಹೀಗಿದ್ದರೂ ಈ ವಚನಕಾರರ ವಚನಗಳು 'ಬಸವಪ್ರಿಯ ಕೂಡಲ ಚೆನ್ನಸಂಗನ ಬಸವಣ್ಣ', 'ಬಸವಪ್ರಿಯ ಕೂಡಲ ಸಂಗಮದೇವ' - ಈ ಮೂರು ಮುದ್ರಿಕೆಯ ವಚನಕಾರರು ಯಾರೂ ಇಲ್ಲದಿರುವುದರಿಂದ ಇವುಗಳನ್ನು ಹಡಪದ ಅಪ್ಪಣ್ಣನ ವಚನಗಳೆಂದು ಪರಿಗಣಿಸಲಾಗಿದೆ. ಹೀಗಿದ್ದರೂ ಹಡಪದ ಅಪ್ಪಣ್ಣ ಹಾಗೂ ಸಂಗಮೇಶ್ವರ ಅಪ್ಪಣ್ಣರ ವಚನಗಳಲ್ಲಿ ಕೆಲವಾದರೂ ಅಂಕಿತ ಅದಲು ಬದಲಾಗಿರುವ ಸಾಧ್ಯತೆಯಿದೆ. ಸುಂಕದ ಬಸವಣ್ಣನ ವಚನಾಂಕಿತ ಚೆನ್ನಬಂಕೇಶ್ವರ ಲಿಂಗ ಆದರೆ 'ಚೆನ್ನ ಬಂಕನಾಥ', 'ಸಂಗಪ್ರಿಯ ಚೆನ್ನಬಂಕೇಶ್ವರ', 'ವೀರ ಬಂಕೇಶ್ವರ' ಅಂಕಿತದಲ್ಲಿಯೂ ಈ ವಚನಕಾರನ ವಚನಗಳು ಲಭಿಸುತ್ತವೆ. ಆದುದರಿಂದ ಈ ಎಲ್ಲ ಮುದ್ರಿಕೆಗಳ ವಚನಗಳನ್ನು ಸುಂಕದ ಬಂಕಣ್ಣನ ವಚನಗಳೆಂದೇ ಪರಿಭಾವಿಸಲಾಗಿದೆ."[೧೭] ಇದರಲ್ಲಿ ಪರಿಷ್ಕರಣ ಕಾರ್ಯದಲ್ಲಿ ಎದುರಾದ ಸಮಸ್ಯೆಗಳು ಅವುಗಳನ್ನು ಪರಿಹರಿಸಿಕೊಂಡ ವಿಷಯಗಳನ್ನು ವಿವರಿಸಿದ್ದಾರೆ. "ವಿವರವಾದ ಪರಿಶೀಲನೆ ತಲಸ್ಪರ್ಶಿಯಾದ ಅಧ್ಯಯನಗಳ ಮೂಲಕ ಪುನರುಕ್ತವಾಗಿರುತ್ತವೆ, ಸಹೃದಯರು ಈ ಎರಡರಲ್ಲಿ ಒಂದನ್ನು ಕೈ ಬಿಡಬೇಕೆಂದು ಬಿನ್ನವಿಸುತ್ತೇವೆ."[೧೮] ಈ ಮಾತುಗಳಲ್ಲಿ ಗ್ರಂಥ ಸಂಪಾದಕರ ಸೌಜನ್ಯ ಪ್ರಾಮಾಣಿಕತೆಯು ಸ್ಪಷ್ಟಪಡಿಸುತ್ತದೆ.

ಪ್ರಸ್ತುತ ಸಂಪುಟ ದ್ವಿತೀಯ ಆವೃತ್ತಿಯನ್ನು ಪಡೆಯುವ ಭಾಗ್ಯ ಕಂಡಿತು. ಮೊದಲ ಆವೃತ್ತಿಯಲ್ಲಿರುವ ದೋಷಗಳನ್ನು ಇದರಲ್ಲಿ ಸರಿಪಡಿಸಿಕೊಂಡಿರುವುದನ್ನು ಕಾಣುತ್ತೇವೆ. ಡಾ. ಬಿ.ಆರ್. ಹಿರೇಮಠ ಅವರೇ ದಾಖಲಿಸಿರುವಂತೆ - "ಪ್ರಸ್ತುತ ವಚನ ಸಂಪುಟದ ಪ್ರಥಮ ಆವೃತ್ತಿಯಲ್ಲಿ ಉಳಿದುಕೊಂಡಿದ್ದ ಮುದ್ರಣದೋಷಗಳನ್ನು ತಿದ್ದಿ ಸರಿಪಡಿಸಲಾಗಿದೆ. ಎಲ್ಲ ವಚನಗಳನ್ನು ಮತ್ತೊಮ್ಮೆ ಕೂಲಂಕುಷವಾಗಿ ಪರಿಶೀಲಿಸಿ, ಲಿಪಿಪಾಠಗಳನ್ನು, ಅರ್ಥದೋಷಗಳನ್ನು ಪರಿಷ್ಕರಿಸಿ, ಶುದ್ಧ ಪಾಠವನ್ನು ಇಟ್ಟುಕೊಳ್ಳಲಾಗಿದೆ. ಪುನರುಕ್ತಿ ವಚನಗಳ ಸಾಮ್ಯ, ಅನ್ಯ ವಚನಕಾರರ ವಚನಗಳನ್ನು ಸೇರ್ಪಡಿಸಿ ಸೂಕ್ಷ್ಮವಾಗಿ ಅವಲೋಕಿಸಿ ಸಮರ್ಪಕವೆನಿಸಿದವುಗಳನ್ನು ಮಾತ್ರ ಅಳವಡಿಸಿಕೊಳ್ಳಲಾಗಿದೆ. ಪ್ರಥಮ ಆವೃತ್ತಿಯ ಅನುಬಂಧದಲ್ಲಿಯ ವಚನಗಳನ್ನು ಆಯಾ ವಚನಗಳಲ್ಲಿಯೆ ಸೇರಿಸಲಾಗಿದೆ. ಹಲವು ವಚನಗಳ ಚರಣ ವಿನ್ಯಾಸವನ್ನು ಸರಿಪಡಿಸಲಾಗಿದೆ."[೧೯] ಈ ಮಾತುಗಳು ಸಂಪಾದಕರ ಜವಾಬ್ದಾರಿ

ಮತ್ತು ಶ್ರಮಸಂಸ್ಕೃತಿಯನ್ನು ಪರಿಚಯಿಸುತ್ತವೆ. ಗ್ರಂಥದ ಕೊನೆಗೆ ಅನುಬಂಧಗಳನ್ನು ಅಳವಡಿಸಲಾಗಿದೆ. ಕಠಿಣ ಪದಕೋಶ, ವಚನಗಳ ಅಕಾರಾದಿ, ಅವುಗಳ ಪುಟ ಸಂಖ್ಯೆ ನೀಡಲಾಗಿದೆ. ಕೊನೆಯಲ್ಲಿ ಆಕರ ಗ್ರಂಥಗಳ ಪಟ್ಟಿಯನ್ನು ಒದಗಿಸಲಾಗಿದೆ. ಪರಿಪೂರ್ಣ ಗ್ರಂಥ ಸಂಪಾದನೆಗೊಂದು ಸಾಕ್ಷಿಯಾಗಿ ಸಂಕೀರ್ಣ ವಚನ ಸಂಪುಟ ನಿಲ್ಲುತ್ತದೆ.

**೪.೦.೫. ಸುಖ ಸಂಪಾದನೆಯ ವಚನಗಳು :**

ಪ್ರಸ್ತುತ ಸುಖ ಸಂಪಾದನೆಯ ವಚನಗಳು ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠವು ಪ್ರಕಟಿಸಿದೆ. ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟಣಾ ಮಾಲೆಯ ೨೪ನೇ ಕೃತಿಯಾಗಿ ಇದು ಬೆಳಕು ಕಂಡಿದೆ. ಡಾ. ಬಿ.ಆರ್. ಹಿರೇಮಠ ಅವರು ಈ ಕೃತಿಯನ್ನು ಸ್ವತಂತ್ರವಾಗಿ ಸಂಪಾದಿಸಿಕೊಟ್ಟಿದ್ದಾರೆ. ಪ್ರಸ್ತುತ ಕೃತಿಯು ೧೯೮೦ರಲ್ಲಿ ಪ್ರಕಟವಾಗಿದ್ದು ೧೧೦ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಈ ಗ್ರಂಥಕ್ಕೆ ಡಾ. ಬಿ.ಆರ್. ಹಿರೇಮಠ ಅವರು ಸುದೀರ್ಘವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಇದರಲ್ಲಿ ಕನ್ನಡನಾಡು, ವೀರಶೈವ ಜನಾಂಗ, ವಚನ ಸಾಹಿತ್ಯದ ಕುರಿತಾಗಿ ಅರ್ಥವತ್ತಾದ ಮಾತುಗಳಿವೆ. ೧೨ನೇ ಶತಮಾನದ ತರುವಾಯ ಸುಮಾರು ೧೫ ನೇ ಶತಮಾನದ ಹೊತ್ತಿಗೆ ಕನ್ನಡ ಸಾಹಿತ್ಯದಲ್ಲಿ ಹಲವಾರು ಶೂನ್ಯ ಸಂಪಾದನೆಗಳು ಪ್ರಕಟವಾದವು. ಅಲ್ಲಮಪ್ರಭುವನ್ನು ಕೇಂದ್ರವಾಗಿರಿಸಿಕೊಂಡು ವಿವಿಧ ವಚನಕಾರರ ವಚನಗಳನ್ನು ಸಂವಾದ ರೂಪದಲ್ಲಿ ಅಳವಡಿಸಿಕೊಂಡು ಗ್ರಂಥ ಸಂಪಾದನೆ ಮಾಡಿದ್ದು ವಿಶೇಷವಾಗಿದೆ. ಇದಕ್ಕೆ ಕನ್ನಡ ಸಾಹಿತ್ಯದಲ್ಲಿ ಮೂಡಿ ಬಂದಿರುವ ಹಲವಾರು ಶೂನ್ಯಸಂಪಾದನೆಯ ಮಾದರಿಯಲ್ಲಿಯೇ ಮೂಡಿ ಬಂದಿವೆ. "ಈ ಗ್ರಂಥದ ಅಂತ್ಯದಲ್ಲಿ ಬರುವ 'ಈ ವಚನಗಳು ಶೂನ್ಯಸಂಪಾದನೆಗೆ ಸೇರಿಸಲಿಲ್ಲದ ವಚನವೆಂದು ನಾವು ಕವಳಿಕರಿಸಿ ಸೇರಿಸಿದೆವು. ಸುಖ-ಸಂಪಾದನ ಮಾತ್ರವಾಗಿ ಅದನೊಪ್ಪುಗೊಂಬುವುದು' ಎಂಬ ಮಾತುಗಳು ಈ ಅಂಶವನ್ನು ಇನ್ನಷ್ಟು ಖಚಿತಗೊಳಿಸುತ್ತವೆ. ೫ ಶೂನ್ಯಸಂಪಾದನೆಯ ತರುವಾಯವೇ ಕೃತಿ ಆಕಾರ ಪಡೆದಿರುವುದು ಮೇಲಿನ ಮಾತುಗಳಿಂದಲೇ ವಿದಿತವಾಗುತ್ತದೆ. ಹೀಗಾಗಿ ಈ ಕೃತಿಯ ಕಾಲ ೧೫-೧೬ನೆಯ ಶತಮಾನವೆಂದು ನಿರ್ಧರಿಸಬಹುದು."[೨೦]

ಈ ಮಾತುಗಳು ಕನ್ನಡದಲ್ಲಿ ಈ ವರೆಗೆ ಬಂದಿರುವ ೫ ಶೂನ್ಯಸಂಪಾದನೆಗಳ ಆಳವಾದ ಅಧ್ಯಯನವಿರುವುದು ಸಮಗ್ರವಾದ ಪರಿಚಯವಿರುವುದು ವಿದಿತವಾಗಿದೆ. ೫ ಸಂಪಾದನೆಗಳಿಗಿಂತ ಇದು ವಿಭಿನ್ನವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಹಾಗೆ ಇದರ ಕಾಲವನ್ನೂ ಕೂಡ ಸಂಪಾದಕರು ಸ್ಪಷ್ಟಪಡಿಸಿರುವುದನ್ನು ಕಾಣುತ್ತೇವೆ. ಈ ಅಂಶಗಳು ಗ್ರಂಥ ಸಂಪಾದಕರ ಪರಿಣಿತ ಮತಿಗೆ ನಿದರ್ಶನವಾಗಿದೆ.

ಸುಖ ಸಂಪಾದನೆಯ ಈ ವಚನಗಳು ಶೂನ್ಯಸಂಪಾದನೆಗೆ ಸೇರಿಸಲಿಲ್ಲದ ವಚನಗಳೆಂದು ಹೇಳಿ 'ನಾವು ಕವಳಿಕರಿಸಿ ಸೇರಿಸಿದೆವು. ಸುಖ ಸಂಪಾದನೆ ಮಾತ್ರವಾಗಿ ಅದನೊಪ್ಪುಗುಂಬುದು' ಎಂದು ವಿವರಿಸಿ, ಮುಂದುವರೆದು - 'ಈ ಮರ್ತ್ಯ ಸಂಬಾಳ ದೇವರ ಮೇಲಿನ ಕೃಪೆಯಿಂದ' ಎಂಬ ಗ್ರಂಥಾಂತ್ಯದ ಹೇಳಿಕೆಯಿಂದ ಚಿಟ್ಟಿಗ, ವಿರಕ್ತ ಕಂಪಾಳ ದೇವರು 'ಸುಖ ಸಂಪಾದನೆಯ ವಚನಗಳು ಗ್ರಂಥದ ಸಂಪಾದನೆಯ ಮಾದರಿಯಲ್ಲಿಯೇ ಸಂಪಾದಿಸಿದ್ದರೂ ಸುಖ ಸಂಪಾದನೆ ಎಂದು ಹೆಸರಿಸಿದುದರ ಔಚಿತ್ಯ ಅರ್ಥವಾಗುವುದಿಲ್ಲ."[೨೧] ಈ ಮಾತುಗಳಲ್ಲಿ ೨ ಅಂಶ ಸ್ಪಷ್ಟವಾಗಿವೆ. (ಒಂದು) ಚಿಟ್ಟಿಗ ವಿರಕ್ತ ಕಂಬಾಳ ಸಂಪಾದಕನೆಂಬುದು (ಎರಡು) ಗ್ರಂಥ ಶೂನ್ಯಸಂಪಾದನೆಯ ಮಾದರಿಯಲ್ಲಿದ್ದರೂ ಸುಖ ಸಂಪಾದನೆ ಎಂದು ಹೆಸರಿಸಿರುವುದನ್ನು ಪ್ರಶ್ನಿಸಿದ್ದು, ಅನುಕ್ರಮವಾಗಿ ಒಂದರಲ್ಲಿ ಸಂಶೋಧನೆ, ಸಂಶೋಧನಾ ಪ್ರಜ್ಞೆಯನ್ನು ಇನ್ನೊಂದರಲ್ಲಿ ವಿಮರ್ಶಾ ಗುಣವನ್ನು ಗುರುತಿಸಬಹುದು.

ಸಂಪಾದನೆಯ ವಚನಗಳು ಮತ್ತು ಸುಖ ಸಂಪಾದನೆಯ ವಚನಗಳು ಎರಡರ ಪರಿವಿಡಿಯನ್ನು ಪ್ರಸ್ತಾವನೆಯಲ್ಲಿ ನೀಡಿ ಪರಸ್ಪರ ಹೋಲಿಸಿ ಚರ್ಚಿಸಿದ್ದಾರೆ. ಪ್ರಸ್ತುತ ಕೃತಿಯಲ್ಲಿ ಪ್ರಭುದೇವರ, ಬಸವಣ್ಣನ ಸುಖ ಸಂಪಾದನೆಯ ವಚನಗಳು (೧ರಿಂದ ೨೮=೨೮) ಪ್ರಭುದೇವ ಚೆನ್ನಬಸವರಾಜದೇವರ ಸಂಪಾದನೆಯ ವಚನಗಳು (೨೯ ರಿಂದ ೩೬ =೮), ಪ್ರಭುದೇವರ ಕೂಡೆ ಮಡಿವಾಳಯ್ಯ ಮೋಳಿಗಯ್ಯ ಸಿದ್ಧರಾಮಯ್ಯಗಳ ಸಂಪಾದನೆಯ ವಚನಗಳು (೩೭ ರಿಂದ ೬೨ =೨೫) ಪ್ರಭುದೇವ ಮರುಳಶಂಕರ ದೇವ ಬಸವಣ್ಣನವರ ಸಂಪದಾನೆಯ ವಚನಗಳು (೬೨ ರಿಂದ ೭೧ = ೧೦) ಪ್ರಭುದೇವರು ಮಹಾದೇವಿಯಕ್ಕಗಳ ಸಂಪಾದನೆಯ ವಚನಗಳು (೭೨ ರಿಂದ ೮೯=೧೮), ಗಟ್ಟಿವಾಳಯ್ಯಗಳ ಸಮಯ ಸಮೂಹದ ಸಂಪಾದನೆಯ ವಚನಗಳು. (೯೦ ರಿಂದ ೧೨೭), ಆಯ್ದಕ್ಕಿ ಮಾರಯ್ಯಗಳ ವಚನಗಳು (೧೭೭ ರಿಂದ ೧೯೭=೨೧), ಆಯ್ದಕ್ಕಿ ಮಾರಯ್ಯಗಳ ಸತಿ ಲಕ್ಕಮ್ಮಗಳ ಸಂಪಾದನೆಯ ವಚನ (೧೯೮ರಿಂದ ೨೧೩=೧೬) ಆಯ್ದಕ್ಕಿ ಮಾರಯ್ಯಗಳೊಡನೆ ಪ್ರಭುದೇವ ಬಸವಣ್ಣನವರ ಉತ್ತರ ಪ್ರತ್ಯುತ್ತರ (೨೨೬ರಿಂದ ೨೩೪=೧೨) ಅಂಬಿಗರ ಚೌಡಯ್ಯಗಳ ಸಂಪಾದನೆಯ ವಚನಗಳು (೨೩೫ರಿಂದ ೩೪೯=೧೦೫) ಹೀಗೆ ೧೨ ಅಧ್ಯಾಯದಲ್ಲಿ ಒಟ್ಟು ೩೪೯ ವಚನಗಳು ಸಂಕಲಿತಗೊಂಡಿವೆ. "ಸಂಪಾದನೆಯ ವಚನಳಲ್ಲಿಯ ಘಟ್ಟಿವಾಳಯ್ಯನ 'ಬಲ್ಲ ವಿರಕ್ತಂಗೆ ಗೆಲ್ಲ ಸೋಲದ....' (ಸ.ಪು.ವ. -I, ೧೨೦) 'ಮುನ್ನವೆ ಆಚಾರಕ್ಕೆ ಹೊರಗು ....' (ಸ. ಪು.ವ. -I. ೧೨೨) ಎಂಬ ವಚನಗಳು "ಸುಖಸಂಪಾದನೆಯ ವಚನಗಳು" ಸ್ವತಂತ್ರ ಕೃತಿಯಲ್ಲಿ ಎರಡು ವಚನಗಳಾಗಿ ನಿಂತಿರುವುದನ್ನು ಕಾಣುತ್ತೇವೆ. ಹೀಗೆ ಅನೇಕ ವಚನಗಳು ಒಂದು ವಚನವಾಗಿಯೂ ಒಂದೇ ವಚನ ಅನೇಕ ವಚನಗಳಾಗಿ ಮಾರ್ಪಟ್ಟಿರುವುದು ವಚನ ಸಾಹಿತ್ಯದಲ್ಲಿ 'ಸಹಜಕ್ರಿಯೆ' ಎನ್ನುವಂತೆ ಕಂಡುಬರುತ್ತದೆ."[೨೨] ಈ ಮಾತುಗಳಲ್ಲಿ ಸಂಪಾದನೆಯ ವಚನಗಳು ಮತ್ತು ಸುಖಸಂಪಾದನೆಯ ವಚನಗಳು ಎರಡೂ ಕೃತಿಗಳ ತಲಸ್ಪರ್ಶಿ ಅಧ್ಯಯನವಿದೆ. ಅಷ್ಟೇ ಅಲ್ಲದೆ ಪರಸ್ಪರ ತೌಲನಿಕ ಅಧ್ಯಯನವಿದೆ. ಇದು ಸಂಪಾದಕರ ಆಳವಾದ ಅಧ್ಯಯನವಾಗಿದೆ.

ವಚನಸಾಹಿತ್ಯದಲ್ಲಿ ಆದ ಅಂಕಿತ ಪಲ್ಲಟ, ವಚನಗಳ ರೂಪಾಂತರ, ಮೂಲ ವಚನಗಳಿಗೆ ಹೆಚ್ಚಿನ ಸಾಲು ಸೇರಿಸಿರುವುದು, ಇಲ್ಲವೆ ಅಲ್ಲಲ್ಲಿ ಕೆಲವು ಮಾರ್ಪಾಡುಗಳಾಗಿರುವುದು ಮುಂತಾದ ಅಂಶಗಳನ್ನು ಸಂಪಾದಕರು ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. "ಮೂಲ ವಚನಗಳು ಸಂಪಾದನಕಾರ ಅಥವಾ ಲಿಪಿಕಾರರ ಮೂಲಕ ತಮ್ಮ ರೂಪಗಾತ್ರವನ್ನು ಹಿಗ್ಗಿಸಿಕೊಂಡಿವೆ. ಇನ್ನೂ ಕೆಲವು ಸಲ ವಚನಗಳ ರೂಪಗಾತ್ರಗಳು ಕುಗ್ಗಿರುವ ಸಾಧ್ಯತೆಯೂ ಇದೆ. ಸುಖಸಂಪಾದನೆಯ ವಚನಗಳು ಶೂನ್ಯಸಂಪಾದನೆಯಲ್ಲಿ ಸಮಾವೇಶಗೊಳ್ಳದ (೧೦೦ಕ್ಕೆ ೭೦ ರಷ್ಟು) ವಚನಗಳುಳ್ಳ ಸಂಪಾದನಾ ಕೃತಿಯಾಗಿದೆ. ಇದನ್ನು ಉಪ ಸಂಪಾದನೆ ಅಥವಾ ಪೂರಕ ಶೂನ್ಯಸಂಪಾದನೆ ಎಂದು ಕರೆಯಬಹುದು. ಗದುಗಿನ ಜಗದ್ಗುರು ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ಹಸ್ತಪ್ರತಿ ಭಾಂಡಾರದ ಒಂದನೂರ ಎಂಭತ್ನಾಲ್ಕು/ ಇಪ್ಪತ್ತೊಮ್ಮರನೆಯ ನಂಬರಿನ ಹಸ್ತಪ್ರತಿಯೊಂದರಲ್ಲಿ ಈ ಕೃತಿ ಇದೆ. ಏಕೈಕ ಹಸ್ತಪ್ರತಿಯಾದ ಇದರ ಆಧಾರದಿಂದ ಪ್ರಸ್ತುತ ಕೃತಿಯನ್ನು ಪರಿಷ್ಕರಿಸಲಾಗಿದೆ."[೨೩] ಈ ಮೇಲಿನ ಮಾತುಗಳಲ್ಲಿ ಲಿಪಿಕಾರ ಮತ್ತು ಸಂಪಾದನಾಕಾರರ ಕಾರ್ಯ ವಿವರಗಳಿವೆ. ಉಪ ಶೂನ್ಯ ಸಂಪಾದನೆ, ಪೂರಕ ಶೂನ್ಯ ಸಂಪಾದನೆ ಎಂದು ಪ್ರಸ್ತುತ ಗ್ರಂಥವನ್ನು ಕರೆಯಬಹುದಾಗಿದೆ ಎಂದು ಸೂಚಿಸಿದ್ದಾರೆ. ಹಸ್ತಪ್ರತಿ ದೊರೆತ ಸ್ಥಳ, ಏಕೈಕ ಹಸ್ತಪ್ರತಿ ಮುಂತಾದ ವಿವರಗಳನ್ನು ಪ್ರಸ್ತಾಪಿಸಿದ್ದು ಗ್ರಂಥ ಸಂಪಾದಕನ ಹೊಣೆಗಾರಿಕೆ ಮತ್ತು ಶಾಸ್ತ್ರೀಯ ಶಿಸ್ತಿನ ಚೌಕಟ್ಟಿಗೆ ಅನುಗುಣವಾಗಿದೆ.

ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತುತ ಸುಖ ಸಂಪಾದನೆಯ ವಚನಗಳು ಗ್ರಂಥಕ್ಕೆ ಬರೆದಿರುವ ಪ್ರಸ್ತಾವನೆಯು ತುಂಬಾ ಮಹತ್ವದ್ದಾಗಿದ್ದು ಕೃತಿಯನ್ನು ಓದುವವರಿಗೆ ಮಾರ್ಗದರ್ಶಿಯಾಗಿದೆ. ಗ್ರಂಥ ಸಂಪಾದಕರಿಗೆ ಮಾರ್ಗದರ್ಶಿಯಾಗಿದೆ. ಇನ್ನು ಗ್ರಂಥದ ಕೊನೆಗೆ ಅನುಬಂಧಗಳಿವೆ. ಸುಖ ಸಂಪಾದನೆ - ಶೂನ್ಯ ಸಂಪಾದನೆ - ಸಂಪಾದನೆಯ ವಚನಗಳ ತೌಲನಿಕ ವಿವರಣೆ ಇದೆ. ಇದರಲ್ಲಿ ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯ ಸಂಪಾದನೆ, ಹಲಗೆ ದೇವರ ಶೂನ್ಯಸಂಪಾದನೆ, ಗುಮ್ಮಳಾಪುರದ ಸಿದ್ಧಲಿಂಗಯ್ಯ ಶೂನ್ಯಸಂಪಾದನೆ ಗೋಳೂರು ಸಿದ್ಧಣ್ಣಾರ್ಯರ ಶೂನ್ಯಸಂಪಾದನೆ ಮತ್ತು ಸಂಪಾದನೆಯ ವಚನಗಳು (ಸಕಲ ಪುರಾತನರ ವಚನಗಳು) ಇವೈದು ಕೃತಿಗಳ ಪರಸ್ಪರ ತೌಲನಿಕ ಅಧ್ಯಯನವಿದೆ ಹಾಗೂ ಸುಖಸಂಪಾದನೆಯ ವಚನಗಳು ಆಯಾ ಗ್ರಂಥಗಳಲ್ಲಿ ಬಂದಿರುವುದನ್ನು ದಾಖಲುಗೊಳಿಸಿದ್ದಾರೆ. ಇದು ತುಂಬಾ ಪರಿಶ್ರಮ, ದಣಿವರಿಯದ ದುಡಿಮೆ, ಸಂಶೋಧನೆಯ ಶ್ರದ್ಧೆ, ಅಧ್ಯಯನದ ನಿಷ್ಠೆ ಇವುಗಳಿಂದ ಮಾತ್ರ ಸಾಧ್ಯವಿದೆ. ಈ ಎಲ್ಲ ಅಂಶಗಳು ಡಾ. ಬಿ.ಆರ್. ಹಿರೇಮಠ ಅವರಲ್ಲಿ ಇರುವುದಕ್ಕೆ ಈ ಕೃತಿಯೇ ಆಧಾರವಾಗಿದೆ.

ಅನುಬಂಧ ಎರಡರಲ್ಲಿ ವಚನಗಳ ಅಕಾರಾದಿ ಇದೆ. ವಚನ, ವಚನಕಾರರು, ವಚನಗಳ ಸಂಖ್ಯೆ ಹಾಗೂ ಪುಟಸಂಖ್ಯೆ ಅನುಬಂಧ ಮೂರರಲ್ಲಿ ವಚನಕಾರರು, ವಚನಾಂಕಿತಗಳು ವಚನ ಸಂಖ್ಯೆಗಳ ವಿವರಣೆ ಇದೆ. ಈ ಎಲ್ಲ ಅಂಶಗಳು ಒಂದು ಶ್ರೇಷ್ಠ ಗ್ರಂಥ ಸಂಪಾದನೆಗೆ ನಿದರ್ಶನ ಒದಗಿಸುತ್ತವೆ.

**೪:೧:೬ ಮಡಿವಾಳ ಮಾಚಿದೇವನ ವಚನಗಳು :**

ಪ್ರಸ್ತುತ ಮಡಿವಾಳ ಮಾಚಿದೇವನ ವಚನಗಳು ಕೃತಿಯನ್ನು ಡಾ. ಬಿ.ಆರ್. ಹಿರೇಮಠ ಅವರು ಸ್ವತಂತ್ರವಾಗಿ ಸಂಪಾದಿಸಿದ್ದಾರೆ. ಹುಬ್ಬಳ್ಳಿಯ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ ಮೂರುಸಾವಿರ ಮಠವು ಈ ಕೃತಿಯನ್ನು ಪ್ರಕಟಿಸಿದೆ. ಹುಬ್ಬಳ್ಳಿಯ ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ರಜತಮಹೋತ್ಸವದ ಸವಿನೆಪಿನ ಸಂಪುಟವಾಗಿ ಇದು ಹೊರಬಂದಿದೆ. ೧೯೮೬ರಲ್ಲಿ ಪ್ರಕಟವಾದ ಈ ಕೃತಿಯು ಮೂರುಸಾವಿರ ಮಠ ಗ್ರಂಥಮಾಲೆಯ ೨೪೯ನೆಯ ಕೃತಿಯಾಗಿದೆ. ಇದರಲ್ಲಿ ೬೦ ಪುಟಗಳಿವೆ.

ಮಡಿವಾಳ ಮಾಚಿದೇವ ೧೨ನೇ ಶತಮಾನದ ಪ್ರಮುಖ ಶಿವಶರಣರಲ್ಲಿ ಒಬ್ಬ. ಮಾಚಿದೇವನು ಕ್ರಿ. ಶ ೧೧೫೬ರ ತರುವಾಯ ದೇವರ ಹಿಪ್ಪರಗಿಯಿಂದ ಕಲ್ಯಾಣಕ್ಕೆ ಬಂದನು. ಮಾಚಿದೇವನು ಕಲ್ಯಾಣದಲ್ಲಿ ಶಿವಶರಣರ ಬಟ್ಟೆ ತೊಳೆಯುವ ಕಾಯಕವನ್ನು ಕೈಗೊಂಡಿದ್ದನು. ಶಿವಶರಣರ ಮನದ ಮೈಲಿಗೆಯನ್ನು ಹಸನುಗೊಳಿಸುವ ಕಾರ್ಯ ಕೈಗೊಂಡನೀತ. ಬಸವಣ್ಣನವರ ಅರಮನೆ, ಮಹಾಮನೆ, ಅನುಭವಮಂಟಪ ಮುಂತಾದೆಡೆಗಳಲ್ಲಿ ನಿತ್ಯವೂ ನಡೆಯುತ್ತಿದ್ದ ಕಾಯಕ ಮತ್ತು ದಾಸೋಹಗಳು ಬಸವಣ್ಣನವರ ಭವ್ಯ ವ್ಯಕ್ತಿತ್ವ ಮಾಚಿದೇವನ ಮೇಲೆ ಪ್ರಭಾವ ಬೀರಿದವು. ಮಾಚಿದೇವನ ಹಲವಾರು ವಚನಗಳಲ್ಲಿ ಬಸವಣ್ಣ ತುಂಬಿಕೊಂಡಿದ್ದಾನೆ. 'ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ' 'ಎನ್ನ ತನು ಶುದ್ಧವಾಯಿತು ಬಸವಣ್ಣನ ಶುದ್ಧ ಪ್ರಸಾದವ ಕೊಂಡೆನಾಗಿ' ಅಲ್ಲದೆ ಅನೇಕ ವಚನಗಳಲ್ಲಿ ಮಾಚಿದೇವ ವೀರವ್ರತಕ್ಕೆ ಖ್ಯಾತಿವೆತ್ತಿದ ಮಡಿವಾಳ ಮಾಚಿದೇವನ ೧೦೧ ವಚನಗಳು ಈ ಕೃತಿಯಲ್ಲಿವೆ. ಆರಂಭದಲ್ಲಿ ಮೂಜಗಂ ಅವರ ಶ್ರೀವಾಣಿ ಇದ್ದು ೧೨ ಶ.ದ ವಚನ ಚಳುವಳಿಯ ಸಿಂಹಾವಲೋಕನವಿದೆ.

ಡಾ. ಬಿ. ಆರ್. ಹಿರೇಮಠ ಅವರು ಪ್ರಸ್ತುತ ಮಡಿವಾಳ ಮಾಚಿದೇವನ ವಚನಗಳನ್ನು ಸಂಪಾದಿಸಿ ಬಹು ಮುಖ್ಯವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ವಚನಾಂದೋಲನ ಶಿವಶರಣರ ವ್ಯಕ್ತಿತ್ವ ವಿವರಿಸುತ್ತ ಮಡಿವಾಳ ಮಾಚಿದೇವನ ಭವ್ಯ ವ್ಯಕ್ತಿತ್ವವನ್ನು ಸೊಗಸಾಗಿ ನಿರೂಪಿಸಿದ್ದಾರೆ. "ಮಡಿವಾಳ ಮಾಚಿದೇವರ ಜೀವನದಲ್ಲಿ ಜರುಗಿದ ಘಟನೆಗಳು ಅನೇಕ. ಅವುಗಳಲ್ಲಿ ಬಿಜ್ಜಳನು ಕಳಿಸಿದ ಮದ್ದಾನೆಯನ್ನು ಮರ್ದಿಸಿದುದು, ಬಸವಣ್ಣನವರ ಅಹಂಕಾರ ನಿರಸನ ಮಾಡಿದುದು, ನುಲಿಯ ಚೆಂದಯ್ಯನಿಗೆ ಇಷ್ಟಲಿಂಗದ ಅವಶ್ಯಕತೆಯನ್ನು ತಿಳಿಸಿ ಹೇಳಿದುದು - ಇವು ಅತ್ಯಂತ ಪ್ರಮುಖವಾದವುಗಳಾಗಿರುತ್ತವೆ."[೨೪] ಈ ಮಾತುಗಳು ಮಡಿವಾಳ ಮಾಚಿದೇವನ ವ್ಯಕ್ತಿತ್ವದ ದರ್ಶನ ಮಾಡಿಸುತ್ತವೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರು ಸಿದ್ಧರಾಮನನ್ನು ಮನದುಂಬಿ ಕೊಂಡಾಡಿರುವ ವಚನಗಳನ್ನು ಸಂಪಾದಕರು

ಉಲ್ಲೇಖಿಸಿದ್ದು ಸಮಯೋಚಿತವಾಗಿದೆ. ಮಡಿವಾಳ ಮಾಚಿದೇವ ತನ್ನ ಕಾಯಕ ನಿಷ್ಠೆ, ನಡೆ-ನುಡಿ ಸಾಮರಸ್ಯ, ಪರಿಶುದ್ಧ ಬುದುಕು, ಸತ್ಯ ನಿಷ್ಠುರತೆಗಳ ಮೂಲಕ ಅಲ್ಪಾವಧಿಯಲ್ಲಿಯೇ ಮಹಾಮನೆಯ ಮಹಾನ್‌ಜ್ಯೋತಿಯಾಗಿ ಪ್ರಜ್ವಲಿಸಿದ. ಮರುಳ ಶಂಕರದೇವ, ನುಲಿಯ ಚೆಂದಯ್ಯ ಮೊದಲಾದವರು ಕೂಡಾ ಮಾಚಿದೇವರನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ. ಬಸವಣ್ಣನವರ ಸಮಕಾಲೀನ ಶಿವಶರಣರು ಮಡಿವಾಳ ಮಾಚಿದೇವನನ್ನು ಪ್ರಶಂಸಿಸಿರುವುದು ಆತನ ದಿವ್ಯ ವ್ಯಕ್ತಿತ್ವದ ಮಹೋನ್ನತಿಯ ಪರಿಚಯವಾಗುತ್ತದೆ.

"ಕಲ್ಯಾಣ ಕ್ರಾಂತಿಯ ತರುವಾಯ ಶರಣರ ಹಾಗೂ ಶರಣ ಸಾಹಿತ್ಯದ ರಕ್ಷಣೆ ಭಾರ ಹೊತ್ತವರು ಚೆನ್ನಬಸವಣ್ಣ ಮತ್ತು ಮಡಿವಾಳ ಮಾಚಿದೇವ. ಇವರಿಬ್ಬರ ಸಮರ್ಥ ನೇತೃತ್ವದಲ್ಲಿ ಶರಣ ಸಮೂಹ ಕಲ್ಯಾಣದಿಂದ ಹೊರಟು ಕಲಬುರ್ಗಿ, ಬಿಜಾಪುರ, ತೋರಗಲ್ಲು, ಗೊಡಚಿ, ಕಾದರೊಳ್ಳಿ, ಅಂಬಡಗಟ್ಟಿ, ಮುರಗೋಡ ಮಾರ್ಗವಾಗಿ ಉಳುವಿಯ ಮಹಾಮನೆಯನ್ನು ಮುಟ್ಟಿ ಅಲ್ಲಿ ಆಶ್ರಯ ಪಡೆಯಿತು. ಆದರೆ ಮಾಚಯ್ಯನವರು ಮಾತ್ರ ಮಾರ್ಗದಲ್ಲಿಯೇ ವೈರಿಗಳೊಡನೆ ಹೋರಾಡಿ ಲಿಂಗೈಕ್ಯರಾದರು. ಮುರಗೋಡ ಹತ್ತಿರದ ಕಾರಿಮನೆ ಇವರ ಲಿಂಗೈಕ್ಯ ಸ್ಥಳವೆಂದು ಜನರು ಹೇಳುತ್ತಾರೆ. ಅಮ್ಮಿನಭಾವಿ, ಧಾರವಾಡ, ಮುಳಗುಂದ. ಗದಗ ಗ್ರಾಮಗಳಲ್ಲಿ ಮಾತ್ರ ದೊರೆತ ಮಾಚಿದೇವನ ವಿಗ್ರಹಗಳು ವೀರನಿಷ್ಠೆಯ ಈ ಶರಣ, ಶರಣ ಸಂಕುಲದೊಂದಿಗೆ ಇತ್ತಕಡೆ ಬಂದಿದ್ದನ್ನು ಇನ್ನಷ್ಟು ಗಟ್ಟಿಗೊಳಿಸಿಕೊಡುತ್ತವೆ. ಮಡಿವಾಳ ಮಾಚಿದೇವನು ಕೇವಲ ಶರಣನಾಗಿರದೆ ವಚನಕಾರನೂ ಆಗಿದ್ದ. ಈತ ರಚಿಸಿದ ನಾಲ್ಕುನೂರಕ್ಕೂ ಮಿಕ್ಕಿದ ವಚನಗಳು ಲಭ್ಯವಾಗಿವೆ. ಕಲಿದೇವರ ದೇವ, ಕಲಿದೇವ ಎಂಬುದು ಈತನ ವಚನಗಳ ಅಂಕಿತವಾಗಿದೆ."[೨೫] ಸಂಪಾದಕರ ಈ ಮಾತುಗಳು ಮಾಚಿದೇವನ ಧೀರ ವ್ಯಕ್ತಿತ್ವ. ಆತ ಕೈಗೊಂಡ ಮಹೋನ್ನತ ಕಾರ್ಯ, ಆತನ ಐಕ್ಯ ಹಾಗೂ ಆತನ ವಚನಗಳ ಸಂಖ್ಯೆ ವಿಷಯಗಳನ್ನು ನಿರೂಪಿಸುತ್ತವೆ.

ಮಡಿವಾಳ ಮಾಚಿದೇವನ ವಚನಗಳು ವಿಭಿನ್ನವಾಗಿವೆ. "ಪ್ರತಿಯೊಬ್ಬ ಮನುಷ್ಯ ಶಿವಜ್ಞಾನ ಶಿವಭಕ್ತಿಗಳನ್ನು ತಿಳಿದುಕೊಳ್ಳಬೇಕಾದುದು ತೀರ ಅವಶ್ಯ. ಇವುಗಳ ಪರಿಜ್ಞಾನವಿಲ್ಲದ ಮಾನವನ ಬದುಕು ಅತ್ಯಂತ ಹೀನವಾದುದು. ಮಾನವನ ಒಡಲು ವ್ಯರ್ಥವಾಗಿ ಸವೆಯಬಾರದು. ಶಿವನನ್ನು ಅರಿಯುವುದಕ್ಕೆ, ಒಲಿಸುವುದಕ್ಕೆ ಅದನ್ನು ಸಜ್ಜುಗೊಳಿಸಬೇಕಾದುದು ನಮ್ಮ ಆದ್ಯ ಕರ್ತವ್ಯ. ಶಿವನನ್ನು ಅರಿಯದ ಒಡಲಿದ್ದರೆ ಅದು ನಿರುಪಯುಕ್ತವೆಂದು ತನ್ನ ವಚನದಲ್ಲಿ ಪ್ರತಿಪಾದಿಸಿದ್ದಾನೆ. ಗುರುಸೇವೆ, ಲಿಂಗಪೂಜೆ, ಜಂಗಮ ದಾಸೋಹಗಳನ್ನು ಆಚರಿಸಿದ ಮಾಚಯ್ಯನು ಅವುಗಳನ್ನು ಜನತೆಯಲ್ಲಿ ಅನುಷ್ಠಾನಗೊಳ್ಳುವಂತೆ ಪ್ರೇರೇಪಿಸದೆ ಶಿವಭಕ್ತರಾದವರು ಅನ್ಯದೈವಗಳನ್ನು ಪೂಜಿಸಬಾರದು. ಸ್ಥಾವರ ಲಿಂಗ ಪೂಜೆ ಮಾಡಬಾರದು."[೨೬] ಮುಂತಾದವು ಮಡಿವಾಳ ಮಾಚಿದೇವನ ವಚನಗಳ ಆಶಯವಾಗಿದೆ ಎಂದು ಸಂಪಾದಕರು ವಿವರಿಸಿದ್ದಾರೆ.

ಮಾಚಿದೇವನ ವಚನಗಳಲ್ಲಿ ಕೆಲವು ವಾಚ್ಯವಾಗಿದ್ದರೆ ಕೆಲವು ಸೂಚ್ಯವಾಗಿವೆ. ಮತ್ತೆ ಕೆಲವು ಅರ್ಥಪೂರ್ಣವೂ, ನೀತಿ ಬೋಧಕವೂ, ಸಾಹಿತ್ಯಾಯುಕ್ತವೂ ಆಗಿವೆ. ಆತನ ವಚನಗಳಲ್ಲಿ ನಾಣ್ಣುಡಿಗಳು ಹೇರಳವಾಗಿ ಬಳಕೆಯಾಗಿವೆ ಎಂಬುದನ್ನು ಆಧಾರ ಸಹಿತವಾಗಿ ನಿರೂಪಿಸಿದ್ದಾರೆ. ಸಂಪಾದಕರ ಪ್ರಸ್ತಾವನೆಯು ಅತ್ಯಮೂಲ್ಯವಾಗಿದ್ದು ವಚನಾಂದೋಲನ, ಶರಣಸಂಸ್ಕೃತಿ, ಮಾಚಿದೇವನ ವ್ಯಕ್ತಿತ್ವ, ಆತನ ವಚನ ರಚನೆ, ವಚನಗಳ ಆಶಯ ಮೊದಲಾದ ಅಂಶಗಳನ್ನು ಸಾರವತ್ತಾಗಿ ಚಿತ್ರಿಸಿದ್ದಾರೆ. ಹಲವಾರು ಹೊಸ ಅಂಶಗಳು ಈ ಪ್ರಸ್ತಾವನೆಯಲ್ಲಿವೆ. ಇದು ಸಂಶೋಧನೆಗೆ - ಸಂಶೋಧನೆಯಾಗಿ, ವಿಮರ್ಶೆಗೆ ವಿಮರ್ಶೆಯಾಗಿ ನಿಂತುಕೊಳ್ಳುವ ಬರಹವಾಗಿದೆ. ಮಡಿವಾಳ ಮಾಚಿದೇವನ ಅಧ್ಯಯನಕಾರರಿಗೆ ಇದೊಂದು ಕೈದೀವಿಗೆಯಾಗಿದೆ. "ಮಾಚಿದೇವನ ವಚನಗಳ ಅಧ್ಯಯನದಿಂದ ಅವನೊಬ್ಬ ವಿದ್ವಾಂಸ, ಅನುಭಾವಿ, ಕಾಯಕ ಜೀವಿ, ಸಮಾಜ ಸುಧಾರಕನೆಂಬುದು ವಿದಿತವಾಗುತ್ತದೆ. ಸಾಹಿತ್ಯ ಗುಣಗಳಿಂದ ಕೂಡಿದ ಈ ವಚನಗಳ ಅಧ್ಯಯನದ ಮೂಲಕ ಪ್ರಸ್ತುತ ಸಮಾಜದ ನಡೆನುಡಿಗಳು ನೆರವಾಗುವ ಸಾಧ್ಯತೆ ಇದೆ."[೨೨] ಈ ಮಾತುಗಳು ಮಾಚಿದೇವನ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ. ಸಮಕಾಲೀನ ಸಮಾಜಕ್ಕೆ ದಿಕ್ಸೂಚಿಯಾಗಬಲ್ಲವು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಇದೊಂದು ಜನಪ್ರಿಯ ಆವೃತ್ತಿಯಾಗಿದೆ. ಈ ಕೃತಿಯಲ್ಲಿ ಅನುಬಂಧಗಳಿಲ್ಲ. ಕಠಿಣ ಪದಗಳ ಅರ್ಥಕೋಶ ವಚನಗಳ ಅಕಾರಾದಿಯನ್ನು ನೀಡಲು ಸಾಧ್ಯವಾಗಿದ್ದರೆ ಮತ್ತಷ್ಟು ಉಪಯುಕ್ತ ಗ್ರಂಥವಾಗಬಹುದಿತ್ತು.

**೪.೨.೦ ಶರಣ ಸಾಹಿತ್ಯ :**

**೪.೨.೧ ಸಂಪಾದನೆಯ ಸಾರಾಮೃತ :**

ಡಾ. ಬಿ. ಆರ್. ಹಿರೇಮಠ ಅವರು ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿ ಸಂಗ್ರಹಿತ ಸಂಪಾದನೆಯ ಸಾರಾಮೃತವನ್ನು ಸಂಪಾದಿಸಿ ಕೊಟ್ಟಿದ್ದಾರೆ. ಶರಣ ಸಾಹಿತ್ಯ ಗ್ರಂಥ ಸಂಪಾದನೆಯು ಒಂದು ಮಾದರಿಯಾಗಿದೆ. ಇದನ್ನು ವೀರಶೈವ ಅಧ್ಯಯನ ಸಂಸ್ಥೆಯು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಪ್ರಕಾಶನವು ಪ್ರಕಟಿಸಿದೆ. ಈ ಗ್ರಂಥವು ೧೯೮೮ರಲ್ಲಿ ಸಂಪಾದನೆಗೊಂಡಿದೆ. ಕ್ರಿ.ಶ. ೧೬೭೫ರಲ್ಲಿದ್ದ ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯು ಸಂಪಾದನೆಯ ಸಾರಾಮೃತವನ್ನು ಶೂನ್ಯಸಂಪಾದನೆಯ ಆಧಾರದ ಮೇಲೆ ಸಂಗ್ರಹಿಸಿದ್ದಾರೆ. "ಶೂನ್ಯ ಸಂಪಾದನೆಯನ್ನು ಇಡಿಯಾಗಿ ಅಧ್ಯಯನ ಮಾಡುವುದು ಬಹಳಷ್ಟು ಶ್ರಮದಾಯಕವಾದುದೆಂಬ ಭಾವನೆ ಜನರಲ್ಲಿ ಕ್ರಮೇಣ ಮೂಡತೊಡಗಿರುವುದರಿಂದಾಗಲಿ, ವೀರಶೈವಧರ್ಮ ತತ್ವಗಳು ಜನರಿಗೆ ಸಂಕ್ಷಿಪ್ತ ರೂಪದಲ್ಲಿ ತಿಳಿಸಿ ಹೇಳುವ ಉದ್ದೇಶ ಉದ್ದೀಪನ ಗೊಂಡುದರಿಂದಾಗಲಿ, ಈ ಸಂಗ್ರಹ ಕೃತಿ ರಚಿತವಾಗಿರುವ ಸಾಧ್ಯತೆ ಇದೆ."[೨೮] ಈ ಮಾತು ಸಂಪಾದನೆಯ ಸಾರಾಮೃತ ಕೃತಿಯ ಹಿನ್ನೆಲೆಯನ್ನು ವಿವರಿಸುತ್ತದೆ.

ಇದರಲ್ಲಿ ೨೦ ಜನ ವಚನಕಾರರ ವಚನಗಳನ್ನಾಯ್ದು ಸಂಕಲಿಸಲಾಗಿದೆ. ಇದರಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ, ಮಾಯಾವಿಡಂಬನ ಸ್ಥಲ, ಗುರುಕರುಣ ಸ್ಥಲ, ಭಕ್ತಿ ಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿಸ್ಥಲ, ಶರಣ ಸ್ಥಲ, ಐಕ್ಯ ಸ್ಥಲ, ಪ್ರಭುದೇವರ ಸ್ವಲೀಲಾನಂದ ಭಕ್ತಸ್ಥಲ ಇವೇ ಮೊದಲಾದ ೧೨ ಸ್ಥಲಗಳಲ್ಲಿ ೨೦ ವಚನಕಾರರ ಒಟ್ಟು ೨೨೦ ವಚನಗಳನ್ನು ಸಂಯೋಜಿಸಿಕೊಟ್ಟಿದ್ದಾರೆ. ಪ್ರಸ್ತುತ ಕೃತಿಯಲ್ಲಿ ಮುಕ್ತಾಯಕ್ಕ, ಸಿದ್ಧರಾಮಯ್ಯ, ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು, ಮರುಳ ಶಂಕರದೇವರು, ಮಡಿವಾಳಯ್ಯಗಳು ಆಯ್ದಕ್ಕಿ ಮಾರಯ್ಯ, ಮೋಳಿಗಯ್ಯ, ನುಲಿಯ ಚಂದಯ್ಯ, ಗಟ್ಟಿವಾಳಯ್ಯ, ಮಹಾದೇವಿಯಕ್ಕ ಮುಂತಾದವರ ವಚನಗಳನ್ನು ಕ್ರೋಢೀಕರಿಸಲಾಗಿದೆ. ಬಸವೇಶ ಚೆನ್ನಬಸವೇಶಂಗೆ ಅನುಗ್ರಹ ಮಾಡಿದ ಪ್ರಸಂಗ ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂದರ್ಭ, ಆಯ್ದಕ್ಕಿ ಮಾರಯ್ಯ, ನುಲಿಯ ಚಂದಯ್ಯ, ಗಟ್ಟಿವಾಳಯ್ಯ, ಮಡಿವಾಳ ಮಾಚಯ್ಯ ಮುಂತಾದವರು ಅನುಭವ ಮಂಟಪದಲ್ಲಿ ವ್ಯಕ್ತಪಡಿಸಿದ ಪ್ರಸಂಗ, ಸಿದ್ಧರಾಮಯ್ಯನ ಗುರುಕರುಣ ಪ್ರಸಂಗ, ಪ್ರಭುದೇವರ ಪೂಜಾಸ್ತುತಿ ಪ್ರಸಂಗ, ಕಲ್ಯಾಣಕ್ಕೆ ಮಹಾದೇವಿಯಕ್ಕನ ಆಗಮನದ ಪ್ರಸಂಗ, ಪ್ರಭುದೇವರು ದೇಶಾಂತರ ಹೋಗಿ ಬಂದ ಸಂದರ್ಭ, ಪ್ರಭುದೇವರು ಶೂನ್ಯ ಸಿಂಹಾಸನವೇರಿದ ಸಂದರ್ಭ, ಪ್ರಭುದೇವರ ಆರೋಗಣೆಯ ಸಂದರ್ಭ, ಶರಣರ ಅವಸಾನ ಪರಾಂಬರಿಕೆ, ಗೋರಕ್ಷ ಮತ್ತು ಎಲ್ಲ ಗಣಂಗಳ ಐಕ್ಯ (ಮುಖಾಮುಖಿ) ಮುಂತಾದ ಸಂಪಾದನೆಯು ಇದರಲ್ಲಿ ಸಮಾವೇಶಗೊಂಡಿದೆ.

ಸಂಪಾದನೆಯ ಸಾರಾಮೃತವು ಶೂನ್ಯಸಂಪಾದನೆಯ ಕೃತಿಯ ಸಂಗ್ರಹವಾಗಿದೆ. ವೀರಶೈವ ಸಂಕಲನ, ಸಂಪಾದನ, ವ್ಯಾಖ್ಯಾನ ಕಾರ್ಯದ ಜೊತೆ ಜೊತೆಗೆ ವಚನ ಸಂಪಾದನಕೃತಿಯನ್ನು ಸಂಗ್ರಹಗೊಳಿಸಿರುವ ಸಾಧ್ಯತೆ ಇದೆ. "ಈ ಸಂಪಾದನೆಯ ಸಾರಾಮೃತ ಕೃತಿಯ ಮೂಲಕ ಪ್ರಪ್ರಥಮ ಸಲ ತಿಳಿದು ಬರುತ್ತದೆ. ಈ ಕೃತಿ ವೀರಶೈವ ಸಂಪಾದನಾ ಗ್ರಂಥದ ಮೊಟ್ಟಮೊದಲ ಸಂಗ್ರಹ ಕೃತಿ ಎಂಬ ಕೀರ್ತಿಗೆ ಪಾತ್ರವಾದುದಾಗಿದೆ."[೨೯] ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತಾವನೆಯಲ್ಲಿ ಹೇಳಿರುವ ಮಾತುಗಳು ಸಂಪದಾನೆಯ ಸಾರಾಮೃತದ ಐತಿಹಾಸಿಕ ಮಹತ್ವವನ್ನು ದಾಖಲಿಸಿವೆ.

ಸಂಪಾದನೆಯ ಸಾರಾಮೃತ ಕೃತಿಯು ಶೂನ್ಯಸಂಪಾದನೆಯ ಸಂಗ್ರಹ ನಿಜವೆಂದರೂ, ಅಂದು ಯಾವ ಶೂನ್ಯಸಂಪಾದನೆಯ ಸಂಗ್ರಹವೆಂಬುದನ್ನು ಕೃತಿಕಾರ ಸ್ಪಷ್ಟಪಡಿಸಿಲ್ಲ. "ನಾಲ್ಕು ಶೂನ್ಯಸಂಪಾದನೆ (ಶಿವ ಗಣ ಪ್ರಸಾದಿ ಮಹಾದೇವಯ್ಯ ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗ ದೇವ, ಗೋಳೂರು ಸಿದ್ಧವೀರಣ್ಣ)ಗಳ ತಲಸ್ಪರ್ಶಿಯಾದ ಪರಿಶೀಲನೆಯಿಂದ ಸಂಪಾದನೆಯ ಸಾರಾಮೃತವು ಗೋಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆಯ ಸಂಗ್ರಹವೆಂಬುದು ಖಚಿತವಾಗುತ್ತದೆ."[೩೦] ಈ ಮಾತುಗಳು ಡಾ. ಬಿ.ಆರ್. ಹಿರೇಮಠರ ವಚನಗಳ ತಲಸ್ಪರ್ಶಿ ಅಧ್ಯಯನ ನಾಲ್ಕು ಶೂನ್ಯಸಂಪಾದನೆಯ ತೌಲನಿಕ

ಅಧ್ಯಯನವನ್ನು ತಿಳಿಸುತ್ತದೆ. "ಶೂನ್ಯ ಸಂಪಾದನೆಯ ಈ ಸಂಗ್ರಹಕಾರ್ಯ ಆರಂಭಿಸಿದ ಪ್ರಥಮಾಚಾರ್ಯ ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ. ಶಿವಗಣ ಪ್ರಸಾದಿ ಮಹಾದೇವಯ್ಯ, ಶೂನ್ಯ ಸಂಪಾದನೆಯ 'ಶಿಲ್ಪ'ವನ್ನು ಕಂಡರಿಸಿದವರಲ್ಲಿ ಮೊದಲಿಗನೆನಿಸಿಕೊಂಡರೆ ಕಟ್ಟಿಗೆಹಳ್ಳಿ ಸ್ವಾಮಿಯು ಶೂನ್ಯಸಂಪಾದನೆಯ ಸಂಗ್ರಹ ಶಿಲ್ಪ ರೂಪಿಸಿದವರಲ್ಲಿ ಪ್ರಥಮನೆನಿಸಿಕೊಳ್ಳುತ್ತಾನೆ"[೩೧]ಎನ್ನುವಲ್ಲಿ ಶಿವಗಣ ಪ್ರಸಾದಿ ಮಹಾದೇವಯ್ಯ ಹಾಗೂ ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯ ಸಂಗ್ರಹ ಕೃತಿ ಎರಡನ್ನು ಮುಖಾಮುಖಿಯಾಗಿಸಿ ಪರಸ್ಪರ ಹೋಲಿಸಿ ತೌಲನಿಕವಾಗಿ ಅಧ್ಯಯನಿಸಿ ಎರಡೂ ಕೃತಿಗಳ ವೈಶಿಷ್ಟ್ಯತೆಗಳನ್ನು ವಿವರಿಸಿರುವುದು ಮಹತ್ತರವಾದ ಅಂಶವಾಗಿದೆ. ಅದೂ ಅಲ್ಲದೆ ಎರಡೂ ಕೃತಿಗಳ ಸ್ಥಲಗಳು, ಸಂಪಾದನೆಗಳು, ವಚನಗಳ ಸಂಖ್ಯೆಯನ್ನು ವಿವರಿಸುವ ಕೋಷ್ಟಕವನ್ನು ಕೂಡಾ ಸಿದ್ಧಪಡಿಸಿದ್ದಾರೆ. ಇದು ತುಂಬಾ ಪರಿಶ್ರಮದ ಕೆಲಸ. ಅದನ್ನು ಡಾ. ಬಿ.ಆರ್. ಹಿರೇಮಠ ಅವರು ಯಶಸ್ವಿಯಾಗಿ ನಿಭಾಯಿಸಿದ್ದಾರೆ. "ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯು ಸಂಪಾದನೆಯ ಸಾರಾಮೃತದ ಎಲ್ಲ ವಚನಗಳಿಗೆ ವ್ಯಾಖ್ಯಾನಗಳನ್ನು ಸಂಗ್ರಹಿಸಿ ಸೇರಿಸಿದ್ದಾರೆ. ಶೂನ್ಯಸಂಪಾದನೆಯ ಸಂಗ್ರಹ ಕೃತಿ ವಚನ ಮತ್ತು ವ್ಯಾಖ್ಯಾಗಳಿಂದ ಕೂಡಿರುತ್ತದೆ. ಸಂಪಾದನೆಯ ಸಾರಾಮೃತದಲ್ಲಿಯ ೧೮೧ ವಚನಗಳಿಗೆ ಮಾತ್ರ ಲಿಂಗಲೀಲಾ ವಿಲಾಸಚಾರಿತ್ರ್ಯ (ಕಲ್ಲುಮಠದ ಪ್ರಭುದೇವ ೧೪೩೦), ಪ್ರಭುದೇವರ ಟೀಕಿನ ವಚನಗಳು (ಮಹಾಲಿಂಗದೇವ ೧೪೨೫), ಸಕಲ ಪುರಾತನರ ಬೆಡಗಿನ ವಚನಗಳ ಟೀಕೆ (ಸಿಂಗಳದ ಸಿದ್ಧಬಸವರಾಜದೇವ, ೧೬೦೦) ಹಾಗೂ ಬಸವಣ್ಣನವರ ಟೀಕಿನ ವಚನಗಳು (ಗುರುಬಸವರಾಜದೇವ ೧೬೫೦) ಕೃತಿಗಳಲ್ಲಿಯ ವ್ಯಾಖ್ಯಾನಗಳನ್ನು ಬಳಸಿಕೊಳ್ಳಲಾಗಿದೆ."[೩೨] ಡಾ. ಬಿ. ಆರ್. ಹಿರೇಮಠ ಅವರು ತುಂಬಾ ಪರಿಶ್ರಮದಿಂದ ಮೂಲ ಆಕರಗಳನ್ನು ಪರಿಶೀಲಿಸಿದ್ದಾರೆ. ಇದು ಅವರ ವ್ಯಾಪಕವಾದ ಓದು, ವಿಸ್ತೃತವಾದ ಅಧ್ಯಯನ, ಆಳವಾದ ಚಿಂತನ ಮಂಥನಗಳಿಗೆ ಪುರಾವೆಯನ್ನೊದಗಿಸುತ್ತದೆ.

ಉಪಲಬ್ಧವಿರುವ ವ್ಯಾಖ್ಯಾನಗಳನ್ನು ಗುರುತಿಸುವುದರ ಜೊತೆಗೆ ಕೆಲವು ವಚನಗಳಿಗೆ ಮೂಲ ಆಕರ ಸಿಗದಿರುವುದನ್ನು ಪ್ರಸ್ತಾಪಿಸಿದ್ದಾರೆ. "ಕಟ್ಟಿಗೆಹಳ್ಳಿ ಸಿದ್ಧಲಿಂಗ ಸ್ವಾಮಿಯು ಇಲ್ಲಿಯ ೪೯ ವಚನಗಳಿಗಿರುವ ಈ ವ್ಯಾಖ್ಯಾನಗಳನ್ನು ಯಾವ ಮೂಲ ಆಕರದಿಂದ ತೆಗೆದುಕೊಂಡಿದ್ದಾನೆಂಬುದರ ಮಾಹಿತಿ ಸಿಗುವುದಿಲ್ಲ. ಇವು ಇಲ್ಲಿಯವರೆಗೆ ಲಭ್ಯವಿರುವ ಯಾವ (ವಚನ) ವ್ಯಾಖ್ಯಾನ ಗ್ರಂಥಗಳಲ್ಲಿಯೂ ಕಾಣಸಿಗುವುದಿಲ್ಲ"[೩೩] ಎಂದಿರುವುದು ಸಂಪಾದಕರ ಜವಾಬ್ದಾರಿ ಸಂಶೋಧಕನ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ. ಹೀಗೆ ಮೂಲ ಆಕರ ಲಭಿಸದಿರುವ ವಚನದ ಆರಂಭದ ಸಾಲು, ವಚನಕಾರರ ಹೆಸರು, ವಚನದ ಸಂಖ್ಯೆ ಮುಂತಾದವನ್ನು ದಾಖಲುಗೊಳಿಸಿದ್ದಾರೆ. ಇದು ಶ್ರಮ ಸಂಸ್ಕೃತಿಯ ಫಲವಾಗಿದೆ. ಸಂಗ್ರಹಕಾರ ಬೇರೆ ಮೂಲಗಳಿಂದ ಸಂಗ್ರಹಿಸಿದ ವ್ಯಾಖ್ಯಾನಗಳಿಗೆ ಕೆಲವು ಸಲ ಹೆಚ್ಚಿನ ಭಾಗ ಸೇರಿಸಿ ಅವುಗಳನ್ನು ಬೆಳೆಸಿದ್ದಾನೆ, ಕೆಲವು ಸಲ ಲೋಪಗೊಳಿಸಿದ್ದಾನೆ. ಡಾ.

ಬಿ.ಆರ್. ಹಿರೇಮಠ ಅವರು ವಚನ ವ್ಯಾಖ್ಯಾನಗಳ ಮೂಲ ಲಭಿಸಿಲ್ಲವೆಂದು ಹೇಳಿರುವ ವಿಚಾರವನ್ನು ಜಿಜ್ಞಾಸೆ ಮಾಡಿದಾಗ ಕಟ್ಟಿಗೆ ಹಳ್ಳಿ ಸಿದ್ಧಲಿಂಗ ಸ್ವಾಮಿಯೇ ಸ್ವತಃ ಬರೆದಿರುವ ಸಾಧ್ಯತೆ ಇದೆ. ಅದಕ್ಕಾಗಿಯೇ ಯಾವ ಆಕರಗ್ರಂಥಗಳಲ್ಲಿಯೂ ಲಭಿಸದಿರುವುದಕ್ಕೆ ಕಾರಣವಾಗಿರುವ ಸಾಧ್ಯತೆ ಇದೆ.

ಬಸವಣ್ಣನವರ ಟೀಕಿನ ವಚನಗಳು ಸಂಪಾದನೆಯ ಸಾರಾಮೃತ ಪ್ರಭುದೇವರ ಟೀಕಿನ ವಚನಗಳು ಲಿಂಗಲೀಲಾ ವಿಲಾಸ ಚಾರಿತ್ರ್ಯ ಮುಂತಾದವುಗಳ ವಿಶೇಷತೆಗಳನ್ನು ಡಾ. ಬಿ.ಆರ್. ಹಿರೇಮಠ ಅವರು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಈ ಮುಂಚೆ ಬಂದಿರುವ ನಾಲ್ಕು ಶೂನ್ಯ ಸಂಪಾದನೆಗಳೊಂದಿಗೆ ಪ್ರಸ್ತುತ ಸಂಪಾದನೆಯ ಸಾರಾಮೃತವನ್ನು ಮುಖಾಮುಖಿಯಾಗಿಸಿ ಇದರ ವಿಶೇಷತೆಯನ್ನು ಗುರುತಿಸಿದ್ದಾರೆ. ಅಷ್ಟೇ ಅಲ್ಲ ಸಾರಾಮೃತ ಎಂಬ ಪದಕ್ಕೆ ಸಂಗ್ರಹರೂಪ, ವ್ಯಾಖ್ಯಾನ ರೂಪ ಎಂದು ಅರ್ಥೈಸಿದ್ದಾರೆ. "ಆದ್ದರಿಂದ ಆರಂಭದಲ್ಲಿ ಸಾರಾಮೃತ ಪದವನ್ನು ಹೊಂದಿದ ಕೃತಿಗಳು ಮೇಲಿನ ರೂಪ ಅರ್ಥದಲ್ಲಿಯೇ ಇದ್ದುದನ್ನು ಸ್ಪಷ್ಟವಾಗಿ ಗುರುತಿಸುತ್ತೇವೆ. ಹೀಗೆ 'ಸಾರಾಮೃತ' ಪದ ಸಂಗ್ರಹ ಹಾಗೂ ವ್ಯಾಖ್ಯಾನಗಳುಳ್ಳ ಕೃತಿಗೆ ಮಾತ್ರ ಅನ್ವಯಿಸುವಂತಹದಾಗಿದೆ."[೩೪] ಇಲ್ಲಿ ಸಾರಾಮೃತವೆಂಬ ಪದವು ಪಾರಿಭಾಷಿಕ ಪದವಾಗಿ ಬಳಕೆಯಾಗಿರುವುದನ್ನು ಡಾ. ಹಿರೇಮಠ ಅವರು ಗುರುತಿಸಿದ್ದಾರೆ.

ಸಂಪಾದನೆಯ ಸಾರಾಮೃತವನ್ನು ಏಕೈಕ ಹಸ್ತಪ್ರತಿಯ ಸಹಾಯದಿಂದ ಪರಿಷ್ಕರಿಸಿ ಗ್ರಂಥ ಸಂಪಾದಿಸಿದರುವುದನ್ನು ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತಾಪಿಸಿದ್ದಾರೆ. ಕೊನೆಯಲ್ಲಿ ಅನುಬಂಧವೆಂದು ಹೇಳದಿದ್ದರೂ ಅನುಬಂಧದ ಮಾದರಿಯಲ್ಲಿಯೇ ವಚನಗಳ ಕ್ರಮಾನುಕ್ರಮಣಿಕೆ ಸ್ಥಲಗಳಿಗೆ ಅನುಗುಣವಾಗಿ ಜೋಡಿಸಿಕೊಟ್ಟಿದ್ದಾರೆ. ಮತ್ತೆ ವಚನಗಳ ಅಕ್ಷರಾನುಕ್ರಮಣಿಕೆಯಲ್ಲಿ ವಚನಗಳ ಅಕಾರಾದಿಯನ್ನು ವಚನಗಳ ಸಂಖ್ಯೆಯನ್ನು ದಾಖಲಿಸಿದ್ದಾರೆ. ವಚನಗಳಿಗೆ ಕಠಿಣ ಪದ ಕೋಶಗಳನ್ನು ಕಟ್ಟಿಕೊಟ್ಟಿದ್ದರೆ. ಈ ಗ್ರಂಥ ಸಂಪಾದನೆ ಇನ್ನೂ ಮೌಲಿಕವಾಗಬಹುದಿತ್ತು.

**೪.೨.೨. ಹರಿಹರನ ಭಕ್ತಿ ತರಂಗಿಣಿ :**

ಹರಿಹರನ ಭಕ್ತಿತರಂಗಿಣಿಯು ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿರುವ ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಮತ್ತೊಂದು ಗ್ರಂಥ ಸಂಪಾದನೆಯಾಗಿದೆ. ಇದನ್ನು ಧಾರವಾಡದ ಅನುರಾಧಾ ಪ್ರಕಾಶನವು ಪ್ರಕಟಿಸಿದೆ. ಹರಿಹರನ ಭಕ್ತಿ ತರಂಗಿಣಿಯು ಕರ್ನಾಟಕ ವಿಶ್ವವಿದ್ಯಾಲಯದ ಬಿ.ಎ. ಭಾಗ ಒಂದು ಅವಶ್ಯಕ ಪತ್ರಿಕೆಗೆ (೧೯೮೭-೮೮ರಿಂದ ೧೯೯೧-೯೨ ರವರೆಗೆ) ಪಠ್ಯಪುಸ್ತಕವೆಂದು ನಿಗದಿಯಾಗಿರುವದು ಇದರ ವಿಶೇಷತೆಯಾಗಿದೆ. ಪ್ರಸ್ತುತ ಕೃತಿಯಲ್ಲಿ ಇಳೆಯಾಂಡಗುಡಿಮಾರನ ರಗಳೆ, ಮಾದಾರ ಚೆನ್ನಯ್ಯನ ರಗಳೆ, ಅಮರ ನೀತಿಯ ರಗಳೆ, ಬೇಡರ ಕಣ್ಣಪ್ಪನ ರಗಳೆ, ಕಾರಿಕಾಲಮ್ಮೆಯ ರಗಳೆ ಇವೇ ಮೊದಲಾದ ೫ ರಗಳೆಗಳನ್ನು ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿದ್ದಾರೆ.

ಇದು ವಿದ್ಯಾರ್ಥಿಗಳು ಅಧ್ಯಯನಿಸುವ ಪಠ್ಯಪುಸ್ತಕವಾಗಿರುವುದರಿಂದ ಇದರಲ್ಲಿ ಅಡಿಟಿಪ್ಪಣಿಗಳಿಲ್ಲ. ವಿಭಿನ್ನ ಪಾಠ ಸೂಚಿಗಳಿಲ್ಲ. ಜನಪ್ರಿಯ ಆವೃತ್ತಿಯಂತಿದೆ. ಡಾ. ಬಿ.ಆರ್ ಹಿರೇಮಠ ಅವರು ಎಷ್ಟು ವಿದ್ವತ್‌ಪೂರ್ಣವಾಗಿ, ಪಾಂಡಿತ್ಯಪೂರ್ಣವಾಗಿ ಗ್ರಂಥ ಸಂಪಾದನೆ ಕೈಗೊಳ್ಳುತ್ತಾರೋ ಹಾಗೆ ವಿದ್ಯಾರ್ಥಿಗಳ ಹಿನ್ನೆಲೆಯಲ್ಲಿ ತುಂಬ ಸರಳ ಹಾಗೂ ಜನಪ್ರಿಯ ಸಂಪಾದನೆಯನ್ನು ಅಷ್ಟೇ ಲೀಲಾಜಾಲವಾಗಿ ನಿಭಾಯಿಸುತ್ತಾರೆ. ಪಂಡಿತ ಮಂಡಲಿಗೂ, ವಿದ್ಯಾರ್ಥಿ ಸಮುದಾಯಕ್ಕೂ ಏಕ ಕಾಲಕ್ಕೆ ತಲುಪಬಲ್ಲ ಸವ್ಯಸಾಚಿಗಳಿವರು.

ಪ್ರಸ್ತುತ ಹರಿಹರನ ಭಕ್ತಿ ತರಂಗಿಣಿಗೆ ಮೌಲಿಕವಾದ ಪ್ರಸ್ತಾವನೆ ಇದೆ. ಆರಂಭದಲ್ಲಿ ವಚನಾಂದೋಲನ ಶರಣ ಸಾಹಿತ್ಯದ ಕುರಿತಾಗಿ ಪರಿಚಯವಿದೆ. ಮಹಾಕವಿ ಹರಿಹರನನ್ನು ಆತನ ಕಾಲ, ದೇಶ, ಕೃತಿ, ಕೃತಿಸಂಖ್ಯೆ, ಕೃತಿಯ ವಸ್ತು, ಗುರುಪರಂಪರೆ, ಶಿಷ್ಯ ಸಮುದಾಯ ಮುಂತಾದವನ್ನು ಸ್ಥೂಲವಾಗಿ ಪರಿಚಯಸಿದ್ದಾರೆ. ಹರಿಹರ ಗುರುಪರಂಪರೆಯೊಂದನ್ನು ಬಿಟ್ಟು ಉಳಿದ ಸಂಗತಿಗಳನ್ನು ವೈಯಕ್ತಿಕ ವಿಷಯಗಳನ್ನು ತನ್ನ ಕೃತಿಯಲ್ಲಿ ಹೇಳಿಲ್ಲ. ಆದರೆ ಪದ್ಮರಾಜ ಪುರಾಣ, (ಪದ್ಮಣಾಂಕ) ಚೆನ್ನಬಸವಪುರಾಣ (ವಿರೂಪಾಕ್ಷ ಪಂಡಿತ) ರಾಘವಾಂಕ ಚಾರಿತ್ರ್ಯ, ಗುರುರಾಜ ಚಾರಿತ್ರ್ಯ (ಸಿದ್ಧನಂಜೇಶ) ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ (ಶಾಂತಲಿಂಗದೇಶಿಕ) ಮೊದಲಾದ ವೀರಶೈವ ಕೃತಿಗಳಲ್ಲಿ ಚಿತ್ರಿತವಾದ ಹರಿಹರನ ಜೀವನ ಚರಿತ್ರೆಗೆ ಸಂಬಂಧಿಸಿದ ಅಂಶಗಳನ್ನು ಕ್ರೋಢೀಕರಿಸಿ ಹರಿಹರನ ಸ್ಥೂಲ ಪರಿಚಯ ನೀಡಿದ್ದಾರೆ. ಕೃತಿ ಪರಿಚಯವೆಂಬ ಉಪ ಶೀರ್ಷಿಕೆಯಲ್ಲಿ ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾ ಶತಕ, ಮುಡಿಗೆಯ ಅಷ್ಟಕ ಹಾಗೂ ಶಿವಭಕ್ತರ ಪುರಾತನ ಹಾಗೂ ನೂತನ ರಗಳೆಗಳು, ಪುಷ್ಪ ರಗಳೆ ಮುಂತಾದ ಹರಿಹರ ವಿರಚಿತ ಕೃತಿಗಳ ಯಾದಿಯನ್ನು ನೀಡಿದ್ದಾರೆ.

ಪ್ರಸ್ತುತ ಹರಿಹರನ ಭಕ್ತಿ ತರಂಗಿಣಿಯಲ್ಲಿ ಸಂಪಾದನೆಗೊಂಡ ಇಳೆಯಾಂಡ ಗುಡಿಮಾರನ ರಗಳೆ, ಮಾದಾರ ಚೆನ್ನಯ್ಯನ ರಗಳೆ, ಅಮರನೀತಿಯ ರಗಳೆ, ಬೇಡರ ಕಣ್ಣಪ್ಪನ ರಗಳೆ ಹಾಗೂ ಕಾರಿಕಾಲಮ್ಮೆಯ ರಗಳೆ ಮೊದಲಾದವುಗಳನ್ನು ಪರಿಚಯಿಸಿದ್ದಾರೆ. ರಗಳೆಯ ವಸ್ತು ಕಾವ್ಯ ನಾಯಕ ನಡೆಯುವ ಸ್ಥಳ. ರಗಳೆಯ ಆಶಯ ಕಾವ್ಯದ ಮೂಲಕ ಕವಿ ಕಟ್ಟಿಕೊಡುವ ಸಂದೇಶ ವಿದ್ಯಾರ್ಥಿಗಳಿಗೆ ಲಭಿಸುವ ಮಾರ್ಗದರ್ಶನ ಮುಂತಾದವುಗಳನ್ನು ಸ್ಥೂಲವಾಗಿ ವಿವರಿಸಿದ್ದಾರೆ. ಪ್ರಸ್ತಾವನೆಯು ೨೪ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ವಿದ್ಯಾರ್ಥಿಗಳು ಆಯಾ ರಗಳೆಗಳನ್ನು ಅರ್ಥೈಸಿಕೊಳ್ಳಲು ಕಥಾಸಾರವನ್ನು ಅರಿತುಕೊಳ್ಳಲು ತುಂಬಾ ಸಹಾಯಕವಾಗಿದೆ.

ರಗಳೆಗಳ "ಆರಂಭ ಅಂತ್ಯಗಳಲ್ಲಿ ಒಂದೊಂದು ಕಂದಪದ್ಯ ಅಥವಾ ವೃತ್ತವಿದೆ. ಶಿವಪುರ ಅಲ್ಲೊಬ್ಬ ಶಿವಭಕ್ತ ಅವನ ನಿಯಮ ಶಿವ ಪರೀಷೆ ಶಿವಭಕ್ತನ ಗೆಲುವು, ಶಿವ ಭಕ್ತನ ಕೈಲಾಸಾಗಮನ, ಶಿವಭಕ್ತನನ್ನು ಶಿವ ಕೊಂಡಾಡುವುದು, ಶಿವಭಕ್ತನಿಗೆ ಗಣಪದವಿ- ಇದು ಹರಿಹರನ ರಗಳೆಗಳ ಸಾಮಾನ್ಯ

ಶಿಲ್ಪ. ಶಿಲ್ಪದ ದೃಷ್ಟಿಯಿಂದ ರಗಳೆಗಳು ಒಂದೇ ರೀತಿಯಾಗಿದ್ದರೂ ಶಿವಭಕ್ತರು ಕೈಗೊಂಡ ವೃತ್ತಿ, ಹಿಡಿದ ನೇಮ, ತೋರಿದ ನಿಷ್ಠೆ, ಶಿವ ಒಡ್ಡಿದ ಭಕ್ತಿ ಪರೀಕ್ಷೆ, ಪರೀಕ್ಷೆಯಲ್ಲಿ ಭಕ್ತ ಪಡೆದ ಗೆಲುವುಗಳಲ್ಲಿ ವೈವಿಧ್ಯತೆ ಇದೆ. ವಿನೂತನತೆ ಇದೆ."[೩೫] ಈ ಮಾತುಗಳು ಪ್ರಸ್ತುತ ರಗಳೆಯ ರಚನಾ ರೀತಿಗೆ ಮಾದರಿಯಾಗಿವೆ.

ಶರಣ ಸಾಹಿತ್ಯದ ಸಂದರ್ಭದಲ್ಲಿ ಮಹಿಳೆಯರಿಗಿರುವ ಸ್ಥಾನಮಾನಗಳನ್ನು ಗುರುತಿಸುವ ಹಿನ್ನೆಲೆಯಲ್ಲಿ ಕಾರಿಕಾಲಮ್ಮೆ ರಗಳೆ ನಿದರ್ಶನವಾಗಿ ನಿಲ್ಲುತ್ತದೆ. ಕಾಲ, ದೇಶ, ಲಿಂಗಭೇದಗಳನ್ನು ಮೀರಿ ಶರಣ ವ್ರತದಿಂದ ಪರಿಪೂರ್ಣವಾಗಿದೆ ಎಂಬುದನ್ನು ಕಾರಿಕಾಲಮ್ಮೆ ರಗಳೆ ಪ್ರಚುರಪಡಿಸಿದೆ.

"ಹರಿಹರನದು ಶಿವದರ್ಶನ, ಶಿವಕವಿ ಹರಿಹರನಿಗೆ ಸರ್ವವೂ ಶಿವಮಯ, ಶಿವಪುರ ಈತನ ಲೋಕಾನುಭವ ಅಪಾರವಾದುದು. ತನ್ನ ಬದುಕನ್ನು ಲೋಕಾನುಭವದಿಂದ ಶಿವಾನುಭವಕ್ಕೆ ತಿರುಗಿಸಿಕೊಂಡವ ಹರಿಹರ, ಹೀಗಾಗಿ ಈತನ ರಗಳೆಗಳಲ್ಲಿ ಲೋಕಾನುಭವ -ಶಿವಾನುಭವಗಳೆರಡೂ ಸಮಾವೇಶವಾಗಿರುತ್ತವೆ. ಹರಿಹರ ರಗಳೆಗಳ ರಚನೆಯ ಮೂಲಕ ಜನಮನ ತಿದ್ದುವ ಲೋಕ ಶಿಕ್ಷಣ ಕಾರ್ಯ ಮಾಡಿದ್ದಾನೆ"[೩೬] ಎಂಬ ಹೇಳಿಕೆ ವೈಶಿಷ್ಟ್ಯತೆಗಳಿಂದ ಕೂಡಿದೆ.

"ಒಟ್ಟಿನಲ್ಲಿ ಮಾನವನು ತನ್ನ ಬದುಕಿನಲ್ಲಿ, ಭಾವದಲ್ಲಿ, ವೃತ್ತಿಗಳಲ್ಲಿ ಶಿವಭಕ್ತರ ಜೀವನನಿಷ್ಠೆ, ಶಿವಭಕ್ತಿ, ಕಷ್ಟಸಹಿಷ್ಣುತೆ, ಮನೋಸ್ಥೈರ್ಯ, ತ್ಯಾಗಗುಣ, ಸಮರ್ಪಣಾಭಾವ, ನಿರಹಂಕಾರ, ನಿರ್ಮೋಹ ಹಾಗೂ ನಿರಾಡಂಬರಗಳನ್ನು ಮೈಗೂಡಿಸಿಕೊಳ್ಳಬೇಕೆಂಬ ಹಂಬಲ ಹರಿಹರನದಾಗಿದೆ"[೩೭] ಎನ್ನುವಲ್ಲಿ ಹರಿಹರನ ಸಾಹಿತ್ಯ ರಚನಾ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿದ್ದು ಕಂಡುಬರುತ್ತದೆ.

**೪.೩.೦ : ಸಂಕೀರ್ಣ ಸಾಹಿತ್ಯ :**

ಡಾ. ಬಿ.ಆರ್. ಹಿರೇಮಠರು ಶಾಸನ ಸಾಹಿತ್ಯ. ಹಸ್ತಪ್ರತಿ ಶಾಸ್ತ್ರ, ವಚನ ಸಾಹಿತ್ಯ, ಶರಣ ಸಾಹಿತ್ಯ ಮುಂತಾದವುಗಳ ಕುರಿತಾಗಿ ಗ್ರಂಥ ಸಂಪಾದನೆ ಮಾಡಿದ್ದಾರೆ. ಇವುಗಳಲ್ಲದೆ ಇನ್ನುಳಿದ ಕೆಲವು ಇತರ ಕೃತಿಗಳನ್ನು ಸಂಪಾದಿಸಿದ್ದಾರೆ. ಇಮ್ಮಡಿ ಚಿಕ್ಕ ಭೂಪಾಲ ಸಾಂಗತ್ಯ, ಇಮ್ಮಡಿ ಮುರಘಾ ಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು ಮತ್ತು ಸೋದೆಯ ಸದಾಶಿವರಾಯರ ಕೃತಿಗಳು ಇವುಗಳನ್ನು ಕೂಡಾ ಸಂಪಾದಿಸಿಕೊಟ್ಟಿದ್ದಾರೆ. ಅಧ್ಯಯನದ ಅನುಕೂಲಕ್ಕಾಗಿ ಇವುಗಳನ್ನು ಸಂಕೀರ್ಣ ಸಾಹಿತ್ಯವೆಂದು ವಿಭಾಗಮಾಡಿಕೊಂಡು ಪ್ರಸ್ತುತ ಉಪ ಅಧ್ಯಾಯದಲ್ಲಿ ವಿವೇಚಿಸಲಾಗುವುದು.

**೪.೩.೧ : ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ :**

ಇದನ್ನು ಡಾ. ಬಿ.ಆರ್. ಹಿರೇಮಠರು ಸಂಪಾದಿಸಿದ್ದಾರೆ. ಇದು ಧಾರವಾಡ ಮುರಘಾಮಠದ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥ ಮಾಲೆಯಲ್ಲಿ ಪ್ರಕಟಿತವಾಗಿದೆ. ಇಮ್ಮಡಿ ಚಿಕ್ಕ ಭೂಪಾಲ ಸಾಂಗತ್ಯವು ೧೯೭೭ರಲ್ಲಿ ಪ್ರಕಟವಾಗಿದ್ದು, ೪೪೨ ಪುಟಗಳ ವ್ಯಾಪ್ತಿಯಲ್ಲಿರುತ್ತದೆ. ಪ್ರಸ್ತುತ

ಕೃತಿಯಲ್ಲಿ ಸಲಹು ಮಹಾಗುರು ಚೆನ್ನಮಲ್ಲೇಶ, ಆ ನಾಡು ಸೊಗಡೆ ನಾಕಕೆ ಜೋಡು, ಆ ಪೊಳಲ ವೈಭವವೇನೆಂಬೆ, ಇಮ್ಮಡಿ ಚಿಕ್ಕಭೂಪಗೆ ಪಡೆಗಾಣೆನವನಿಪರೊಳಗೆ, ಜಾಣತೋಟೇಂದ್ರನ ರಾಣಿಯ ಬಣ್ಣಿಸಲಳವೆ, ತೋಟೇಂದ್ರ ನಡೆದ ಬೇಟೆಗೆಂದು, ಸದ್ಗುರುರಾಯ ಪರಮಾನಂದದೆ ಕುವರಿಗಿಂತೆಂದ, ಎಳಸಿ ಬಸಂತ ನೈತಂದ, ಬೆಳದಿಂಗಳು ನಾಡೆ ರಂಜಿಪುರು, ಜಯ ಜಯ ಶಂಕರ ದುರಿತ ಭಯಂಕರ, ಪರತತ್ವಎನಿಸಿತು ಜಂಗಮವು, ಜಯ ವನಿತೆಯನು ಮೆಚ್ಚಿಸಿಕೊಂಬುದೆಂದಾದಪುದೋ ಅದೇ ಬಂದುದು ದಾಳಿ, ಹಿಡಿದರು ಸೊಕ್ಕಿದಾನೆಯನು, ಶಿವನೋಳೆಂದಿದನಾಕುವರ, ಕುಮಾರ ಮಾತಾಡೋ ಎನ್ನೊಡನೆ, ಮೇಳೆಶ್ವರ ಹರಿಸಿ ಸೇಸಿಯನಿಟ್ಟನೊಸೆದು ಇವೇ ಮೊದಲಾದ ೧೭ ಶೀರ್ಷಿಕೆಗಳಡಿ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯವು ರಚಿತಗೊಂಡಿದೆ. ಇದೊಂದು ಸುಂದರ ಹಾಗೂ ಬಂಧುರ ಕಾವ್ಯವಾಗಿದೆ. "ಸಾಹಿತ್ಯವೆಂದರೆ ಕೇವಲ ರಸದ ತರಂಗವೆಂಬುದರ ಜೊತೆ ಬದುಕಿನ ಅಂತರಂಗವೆಂಬ ಭಾವನೆ ಇತ್ತೀಚೆಗೆ ಬೆಳೆಯುತ್ತಲಿದೆ. ಇದಕ್ಕೆ ಉದಾಹರಣೆ ಎನಿಸುವ ರಾಜಕೀಯ ಮತ್ತು ಸಾಮಾಜಿಕ ಅಂಶಗಳನ್ನು ಒಳಗೊಂಡ ಕೃತಿಗಳು ಕನ್ನಡದಲ್ಲಿ ಹಲವು ಸಂಖ್ಯೆಯಲ್ಲಿ ಸಿಗುತ್ತವೆ. ಇವುಗಳ ಕಡೆಗೆ ನಾವು ಲಕ್ಷವಹಿಸಿಬೇಕಿದೆ. ಪ್ರಕಟಿಸಬೇಕಾದ ಕೃತಿಗಳಲ್ಲಿ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯವು ಒಂದು"[೩೮] ಎಂಬುದು ಗಮನಾರ್ಹವಾಗಿದೆ.

ಡಾ. ಬಿ.ಆರ್. ಹಿರೇಮಠ ಅವರು ಪ್ರಸ್ತುತ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯವನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ಈ ಗ್ರಂಥದ ಪೀಠಿಕೆ ಸುದೀರ್ಘವಾಗಿದ್ದು. ೫೩ ಪುಟಗಳಷ್ಟು ವ್ಯಾಪ್ತಿಯನ್ನು ಒಳಗೊಂಡಿದೆ. ಇದರಲ್ಲಿ ೧) ವೀರಶೈವ ಅರಸು ಮನೆತನಗಳು, ೨) ಮಹಾನಾಡ ಪ್ರಭುಗಳು, ೩) ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ, ೪) ಕಥಾಸಾರ ಇದೆ. ವೀರಶೈವ ಅರಸು ಮನೆತನಗಳನ್ನು ಕುರಿತು ವಿವರಿಸುತ್ತ, "ವೀರಶೈವ ಧರ್ಮ ತಲೆ ಎತ್ತಿ ನಿಂತುದು ಕಲ್ಯಾಣ ಚಾಲುಕ್ಯ ಮತ್ತು ಕಲಚೂರಿ ಸಾಮ್ರಾಜ್ಯಗಳ ಅಸ್ತೋದಯದ ಸಂದರ್ಭದಲ್ಲಿ ಈ ಎರಡೂ ಮನೆತನಗಳಿಗೆ ಸಂಬಂಧಿಸಿದ ಸುಗ್ಗಲೆ, ಕೊಂಡಗುಳಿ ಕೇಶಿರಾಜ, ಬಸವಣ್ಣ, ಚೆನ್ನಬಸವಣ್ಣ, ಸೊಡ್ಡಳ ಬಾಚರಸರನ್ನು ಬಿಟ್ಟರೆ ಸಿಮ್ಮಲಿಗೆ ಚೆಂದಿಮರಸ, ಚಾಲುಕ್ಯ ವಂಶದ ಬ್ರಹ್ಮಯ್ಯ, ಕಲ್ಲುಕುರಿಕೆಯ ಸಕಲೇಶ ಮಾದರಸ, ಪಟ್ಟದ ಕಲ್ಲಿನ ಅನಿಮಿಷ ರಾಜರಂತಹ ಒಳನಾಡಿನ ಅರಸರು. ಮೋಳಿಗೆಯ ಮಾರಯ್ಯ, ಮಾಂಡವ್ಯಪುರದ ಬೊಂತಾದೇವಿಯರಂತಹ ಹೊರನಾಡಿನ ಅರಸರು, ಜಗದೇವ, ಮಲ್ಲಿ ಬೊಮ್ಮಣ್ಣ, ರಾಯಸದ ಮಂಚಣ್ಣರಂತಹ ಅಧಿಕಾರಿಗಳು ವೀರಶೈವ ಮತೀಯರೆಂದು ಅನೇಕ ಕನ್ನಡ ಕೃತಿಗಳು ತಿಳಿಸುತ್ತವೆ. ಇವರ ತರುವಾಯ ಕುರುಗೋಡದ ಸಿಂದ ಮತ್ತು ಗೋವೆಯ ಕದಂಬ ಅರಸರಲ್ಲಿ ಕೆಲವರು ವೀರಶೈವದ ಪರಮಭಕ್ತರಾಗಿ ಕಾಣಿಸಿಕೊಳ್ಳುತ್ತಾರೆ"[೩೯] ಎಂದು ವೀರಶೈವ ಅರಸುಮನೆತನಗಳ ಪೂರ್ವೇತಿಹಾಸವನ್ನು ಡಾ. ಬಿ.ಆರ್. ಹಿರೇಮಠರು ದಾಖಲುಗೊಳಿಸಿದ್ದಾರೆ. ಕುರುಗೋಡದ ಸಿಂಧರು, ಗೋವೆಯ ಕದಂಬರು, ಕಲ್ಯಾಣ ಚಾಲುಕ್ಯರ ತರುವಾಯ ಉತ್ತರ ಕರ್ನಾಟಕದಲ್ಲಿ ಆಳಿದ ದೇವಗಿರಿ

ಯಾದವರು, ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರು ಚಕ್ರವರ್ತಿಗಳಾಗಿದ್ದರೆಂಬುದನ್ನು ಶಾಸನ ಕಾವ್ಯಗಳ ಆಧಾರದಿಂದ ಸ್ಪಷ್ಟಪಡಿಸುತ್ತಾರೆ.*

"ಹೊಯ್ಸಳ ನರಸಿಂಹ ಬಲ್ಲಾಳನ ಮಂತ್ರಿ ಕೆರೆಯ ಪದ್ಮರಸ, ಕೆರೆಯ ಪದ್ಮರಸನ ಸೋದರ ಮಾವ ಗೌರಪದಣ್ಣ ನಾಯಕರು ಪರಮ ವೀರಶೈವರು. ಶಾಸನದ ಭೈರವ ರಾಜ ಇದೇ ಕಾಲಕ್ಕೆ ಆಗಿ ಹೋಗಿರಬಹುದಾದ ವೀರಶೈವ ಅರಸು. ಇವೆಲ್ಲ ವೀರಶೈವದ ಉದಯಕ್ಕೆ ಮೊದಲು ಅಸ್ತಿತ್ವಕ್ಕೆ ಬಂದಿದ್ದ ಅರಸು ಮನೆತನಗಳು. ವೀರಶೈವ ತಲೆದೋರಿದ ತರುವಾಯ ಅಸ್ತಿತ್ವಕ್ಕೆ ಬಂದ ಅರಸು ಮನೆತನದವರೆಂದರೆ ವಿಜಯನಗರ. ಈ ನಾಡಿನ ಹೊಸ ರಾಜಕೀಯ ಸಂಘಟನೆಗೆ ಆಸರೆ ಅನಿವಾರ್ಯವಾಗಿದ್ದಿತ್ತೆಂಬುದರ ನಿದರ್ಶನವೆಂಬಂತೆ ಈ ರಾಜವಂಶ ವೀರಶೈವದ ಆವರಣದಲ್ಲಿ ಹುಟ್ಟಿ ಬೆಳೆಯಿತು. ಪ್ರೌಢದೇವರಾಯನಂತಹ ಚಕ್ರವರ್ತಿ, ಲಕ್ಕಣ್ಣ -ಜಕ್ಕಣ್ಣರಂತಹ ಮಂತ್ರಿಗಳು ಅಪ್ಪಟ ವೀರಶೈವರಾಗಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ."[೪೦] ಇದರಲ್ಲಿ ವೀರಶೈವ ಉದಯದ ಪೂರ್ವ ಮತ್ತು ವೀರಶೈವ ಉದಯಾನಂತರದ ಅರಸುಮನೆತನಗಳನ್ನು ವಿವರಿಸಿದ್ದಾರೆ

"ವಿಜಯನಗರ ಸಾಮ್ರಾಜ್ಯದ ಪತನಾನಂತರ ಕೆಳದಿ ಮತ್ತು ಮೈಸೂರು ಅರಸು ಮನೆತನಗಳಲ್ಲಿ ವೀರಶೈವ ಮತವು ಪಲ್ಲವಿಸಿತು. ಮೈಸೂರು ವೀರಶೈವದ ಕೃಪೆಯನ್ನು ಕಡೆಗಣಿಸದೆ ಬೆಳೆದರೆ, ಕೆಳದಿ ನೇರವಾಗಿ ವೀರಶೈವ ಮನೆತನವೆ ಆಗಿತ್ತೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಈ ವರೆಗೆ ವಿವೇಚಿಸಿದ್ದು ಸಾಮ್ರಾಜ್ಯ ಪರಂಪರೆಯ ಮುಖ್ಯವಾಹಿನಿ ಅದರಷ್ಟೇ ಮುಖ್ಯವಾದವು ಉಪವಾಹಿನಿ. ವೀರಶೈವರದು ಮುಖ್ಯವಾಹಿನಿಗಿಂತ ಉಪವಾಹಿನಿ ರೂಪದಲ್ಲಿ ಕರ್ನಾಟಕ ರಾಜಕೀಯ ಕ್ಷೇತ್ರಕ್ಕೆ ಸಂದ ಕಾಣಿಕೆ ಅಪೂರ್ವವಾದುದು. ಕರ್ನಾಟಕದ ದೊಡ್ಡ ಜನಾಂಗವನ್ನು ಪ್ರತಿನಿಧಿಸುವ ಇವರು ಅಲ್ಲಲ್ಲಿ ರಾಜಕೀಯ ಕರ್ಣಧಾರತ್ವವನ್ನು ವಹಿಸಿದ್ದರು"[೪೧] ಎಂದು ಹೇಳಿ ಅವುಗಳ ವಿವರವನ್ನು ಒದಗಿಸಿದ್ದಾರೆ.

ವೀರಶೈವ ಸಾಮ್ರಾಜ್ಯದ ರಾಜರು, ಪಾಳೆಗಾರರ ತರುವಾಯ ಬರುವವರೆಂದರೆ ಮಹಾನಾಡ ಪ್ರಭುಗಳು ಇಂಥ ಪ್ರಭುವರ್ಗದಲ್ಲಿ ಎದ್ದು ಕಾಣುವ ರಾಜಮನೆತನವೆಂದರೆ ಮಹಾನಾಡ ಪ್ರಭುಗಳದು ಎಂದು ಹೇಳುತ್ತ ಪೀಠಿಕೆಯ ಎರಡನೇ ಭಾಗದಲ್ಲಿ ಮಹಾನಾಡ ಪ್ರಭುಗಳ ಬಗ್ಗೆ ವಿಸ್ತೃತವಾಗಿ ಚರ್ಚಿಸಿದ್ದಾರೆ. ತಮ್ಮ ಅಭಿಪ್ರಾಯದ ಸಮರ್ಥನೆಗಾಗಿ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದ ಭಾಗಗಳನ್ನು ಉಲ್ಲೇಖಿಸಿದ್ದಾರೆ. ಕೆಲವೆಡೆ ಶಾಸನಗಳನ್ನು ಬಳಸಿಕೊಂಡು ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. ಪೀಠಿಕೆಯ ಮೂರನೆಯ ಭಾಗವು ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯದ ಕುರಿತಾಗಿದೆ. ಇದರಲ್ಲಿ ಕವಿ ಪರಿಚಯ, ಟೀಕಾಕರ್ತ ಮಲ್ಲಿಕಾರ್ಜುನ, ಬಸವಪುರಾಣದ ಟೀಕು, ರಾಮಾಯಣ ಸಾರ ವ್ಯಾಖ್ಯಾನ, ಭಾರತ ಸಾರ ವ್ಯಾಖ್ಯಾನ, ಬ್ರಹ್ಮ ತರ್ಕಸ್ತವದ ಕನ್ನಡದ ಟೀಕು. ಪಂಚಸೂಕ್ತಿ ವ್ಯಾಖ್ಯಾನ, ಆದಿತ್ಯ ಸ್ತೋತ್ರದ ವ್ಯಾಖ್ಯಾನ, ಶಿವಕರ್ಣಾಮೃತ ಕರ್ನಾಟಕ ವ್ಯಾಖ್ಯಾನ,

ಅಮೃತೇಶ್ವರ ಭಾಷ್ಯ, ಚೆನ್ನಮಲ್ಲೇಶ್ವರ ಶತಕದ ಕರ್ತೃ ಮಲ್ಲಿಕಾರ್ಜುನ, ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದ ಕರ್ತೃ ಮಲ್ಲಿಕಾರ್ಜುನ ಮುಂತಾದ ಉಪಶೀರ್ಷಿಕೆಗಳಡಿಯಲ್ಲಿ ಆಯಾ ವಿಷಯಗಳನ್ನು ತುಂಬಾ ವಿವರವಾಗಿ ಪರಿಚಯಿಸಿದ್ದಾರೆ. "ಕವಿ ಆಸ್ಥಾನಕ್ಕೆ ಭೂಷಣಂ ಎಂದು ನಮ್ಮ ರಾಜರು ವಿನಾಶ್ರಯಂ ನ ಶೋಭಂತೆ ಪಂಡಿತಾ ವನಿತಾ ಲತಾಹಾಃ" ಎಂದು ನಮ್ಮ ಕವಿಗಳು ನಂಬಿದ್ದರು. ಪ್ರಾಚೀನ ಕನ್ನಡ ಸಾಹಿತ್ಯ, ರಾಜಾಶ್ರಯದಲ್ಲಿ ಬೆಳೆದು ಬಂದಿತ್ತು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ಮೊದಲಾದ ಚಕ್ರವರ್ತಿಗಳಲ್ಲದೆ ಸಾಮಂತರು, ಪಾಳೇಗಾರರು ಈ ಪರಂಪರೆಯನ್ನು ಪಾಲಿಸಿಕೊಂಡು ಬಂದರು. ಇದಕ್ಕೆ ಮಹಾನಾಡ ಪ್ರಭುಗಳು ಅಪವಾದವಲ್ಲ."[೪೨] ಹೀಗೆ ಸುದೀರ್ಘ ಪೀಠಿಕೆಯನ್ನು ಹಾಕಿ ಇಮ್ಮಡಿ ಚಿಕ್ಕಭೂಪಾಲ, ತೋಂಟದ ರಾಯ ಮತ್ತು ಸಪ್ಪೇಂದ್ರ ಮುಂತಾದವರ ಆಳ್ವಿಕೆಯಲ್ಲಿದ್ದ ಆಸ್ಥಾನ ಕವಿಗಳನ್ನು ಹೆಸರಿಸಿದ್ದಾರೆ. ಸ್ವತಃ ಸಪ್ಪೇಂದ್ರನೇ ಕವಿಯಾಗಿದ್ದರೆ ತೋಂಟದರಾಯನಿಂದ ವಿರಕ್ತ ತೋಂಟದಾರ್ಯನು ಪೂಜಿತನಾಗಿದ್ದಾನೆ. ಮಲ್ಲಿಕಾರ್ಜುನ ಎಂಬ ಹೆಸರಿನಲ್ಲಿ ಅನೇಕ ಕೃತಿಗಳಿಂದು ಲಭಿಸಿವೆ. ಇಂಥ ಸಾಹಿತ್ಯಿಕ ಪರಿಸರದಲ್ಲಿ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯವು ರಚನೆಯಾಯಿತು. ಇದರ ಕರ್ತೃ ಮಲ್ಲಿಕಾರ್ಜುನನ ಕುರಿತಾಗಿ ವಿಸ್ತೃತವಾಗಿ ಚರ್ಚಿಸಿದ್ದಾರೆ.

ಕವಿ ಪರಿಚಯದ ತರುವಾಯ ಕೃತಿಯನ್ನು ಪರಿಚಯಿಸಿದ್ದಾರೆ. "ಹಸ್ತಪ್ರತಿಯ ಮೇಲೆ 'ಕಾಳಗದ ವೀರವರ ತೋಂಟದ ರಾಯನ ಸಾಂಗತ್ಯ' ಎಂದು ಒಳಗೆ ಕರ್ಣರಸಾಯನವೆಂದು ಈ ಕೃತಿ ನಾಮದ ಬಗೆಗೆ ಸೂಚನೆಗಳು ದೊರೆಯುತ್ತವೆ. ಆದರೆ ಕೃತಿಯುದ್ದಕ್ಕೂ ಮಗ ತೋಂಟದ ರಾಯನಿಗಿಂತ ತಂದೆ ಇಮ್ಮಡಿ ಚಿಕ್ಕಭೂಪಾಲನ ವಿಷಯವೇ ಪ್ರಧಾನವಾಗಿರುವದರಿಂದ ಅಭ್ಯಾಸಿಯೊಬ್ಬನಿಟ್ಟ 'ಕಾಳಗದ ವೀರವರ ತೋಂಟದರಾಯನ ಸಾಂಗತ್ಯ' ಎಂಬ ಹೆಸರನ್ನು ಕೈ ಬಿಡಬೇಕಾಯಿತು. ಇನ್ನು ಕವಿಯೇ ಅಲ್ಲಲ್ಲಿ 'ಕರ್ಣರಸಾಯನ' ಎಂದು ಕರೆದಿದ್ದರೂ ಅದು ಕಾವ್ಯಾಂಶದ ಘನತೆಯನ್ನು ಸಾರುವ ದ್ವಿತೀಯ ನಾಮವೆನಿಸುತ್ತದೆ"[೪೩] ಎಂದು ಹೇಳಿ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದ ೯ ಪದ್ಯಗಳನ್ನು ಉಲ್ಲೇಖಿಸಿ ಸ್ವತಃ ಕವಿಯೇ ಹೇಳಿರುವುದರಿಂದ ತಾವು ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯವೆಂಬ ಹೆಸರನ್ನು ಸ್ವೀಕರಿಸಿರುವುದಾಗಿ ಸಂಪಾದಕರು ಸ್ಪಷ್ಟಪಡಿಸಿರುತ್ತಾರೆ.

ಕೃತಿಯ ಮಹತ್ವವನ್ನು ವಿವರಿಸುತ್ತ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ ಇತಿಹಾಸ ಕೃತಿಯಾಗಿ ಕಾವ್ಯ ಕೃತಿಯಾಗಿ ತುಂಬಾ ಬೆಲೆ ಪಡೆಯುತ್ತದೆ ಎಂದು ವ್ಯಾಖ್ಯಾನಿಸಿದ್ದಾರೆ. ಕಾವ್ಯದಲ್ಲಿ ಬರುವ ಸ್ಥಳನಾಮ, ವ್ಯಕ್ತಿ ನಾಮ, ರಾಜಕೀಯ ಸಂಘರ್ಷ, ನಿರ್ಮಿಸಿದ ದೇವಾಲಯ, ನಂಬಿದ ಮೌಲ್ಯ ಮೊದಲಾದವುಗಳು ೧೬ನೇ ಶ. ದ ಪಾಳೆಗಾರರ ಪರಿವಾರ ಮತ್ತು ರಾಜ ಪರಿಸರ ಸ್ಪಷ್ಟ ಚಿತ್ರವನ್ನು ಒದಗಿಸುತ್ತವೆ ಎಂದು ಅಭಿಪ್ರಾಯಪಡುತ್ತಾರೆ. "ಒಂದು ಕಾವ್ಯದ ಉತ್ಕೃಷ್ಟತೆ ಕವಿ ಕಂಡದ್ದು ಏನು ? ಕಂಡರಿಸಿದ್ದು ಹೇಗೆ? ಎಂಬ ಅಂಶಗಳನ್ನು ಅವಲಂಬಿಸಿರುತ್ತದೆ. ಈ ಎರಡೂ ಕ್ರಿಯೆಗಳು ಸಮ

ಪ್ರಮಾಣದಲ್ಲಿ ಮೇಳವಿಸಿದರೆ ಮಾತ್ರ ಕಾವ್ಯಕ್ಕೆ ಜೀವಂತಿಕೆ ಪ್ರಾಪ್ತವಾಗುತ್ತದೆ. ಮಲ್ಲಿಕಾರ್ಜುನ ಈ ದರ್ಶನ ಪ್ರದರ್ಶನಗಳ ಪ್ರಜ್ಞೆಯುಳ್ಳ ಕವಿ ಆದರೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯಂತೆ ಕಾಲಧರ್ಮಕ್ಕನುಗುಣವಾಗಿ ಬಂದ ಬೇಟೆ, ವೇಶ್ಯಾವಾಟಿಕೆ, ವಸಂತ ಋತು, ಲಿಂಗಾರ್ಚನೆ, ಜಂಗಮಾರ್ಚನೆ, ಗುರುಬೋಧೆ ಮುಂತಾದ ಅಷ್ಟಾದಶವರ್ಣನೆ, ನೀತಿಬೋಧೆ ಭಾಗಗಳು ಎಷ್ಟೇ ಸುಂದರವಾಗಿದ್ದರೂ ಈ ಕೃತಿಯ ಸಾವಯವ ಶಿಲ್ಪಕ್ಕೆ ಭಂಗ ತಂದಿವೆ."[೪೪] ಈ ಅಂಶಗಳು ಕಾವ್ಯದ ವೈಶಿಷ್ಟ್ಯತೆಯನ್ನು ಅದರ ಹೆಚ್ಚುಗಾರಿಕೆಯನ್ನು ವಿವರಿಸುತ್ತವೆ. ಆದರೆ ಕೆಲವೊಮ್ಮೆ ಆ ಹೆಚ್ಚುಗಾರಿಕೆಗಳೆ ತಮ್ಮಷ್ಟಕ್ಕೆ ಮಿತಿಯಾಗುತ್ತವೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಇಲ್ಲಿ ಕವಿಯ ಬಗ್ಗೆ ಎಷ್ಟೇ ಪ್ರೀತಿ ಇದ್ದರೂ ಕಾವ್ಯದ ಬಗ್ಗೆ ಎಂತಹದೇ ಗೌರವ ಇದ್ದರೂ ಅದರ ಅರೆ ಕೊರೆಗಳನ್ನು ಗುರುತಿಸುವುದು, ಮಿತಿಗಳನ್ನು ವಿವರಿಸುವುದು. ಇದು ಸಂಪಾದಕರ ಸಮತೂಕದ ನಿಲುವಿಗೆ ಸಾಕ್ಷಿಯಾಗಿದೆ. ಭಾರತೀಯ ಕಾವ್ಯ ಮಿಮಾಂಸಕರು ಹೇಳುವ ಮಾನಸಿಕ ದೂರವನ್ನಿಲ್ಲಿ ಗುರುತಿಸಬಹುದು.

ಶೃಂಗಾರ ರಸದ ಸಂದರ್ಭದಲ್ಲಿ ಐದು ಪ್ರಯೋಗಗಳನ್ನು ಉದಾಹರಿಸಿದ್ದಾರೆ. ದೇಶಿಯು ಸಮೃದ್ಧವಾಗಿ ಬಳಕೆಯಾಗಿತ್ತೆಂಬುದನ್ನು ತಿಳಿಸಲು ೧೭ ಪ್ರಯೋಗಗಳನ್ನು ಉಲ್ಲೇಖಿಸಿದ್ದಾರೆ. ದೇಶಿ ಮಟ್ಟು ಎನಿಸಿದ ಸಾಂಗತ್ಯದಲ್ಲಿ ತುಂಬಾ ಸೊಗಸಾಗಿ ಸಾಗಿಕೊಂಡು ರಚನೆಗೆ ಕಸುವನ್ನು, ಕ್ರಾಂತಿಯನ್ನು ಪೂರೈಸುತ್ತವೆ. ಕಲ್ಪನಾ ರಮ್ಯತೆ ರಚನಾ ಕೌಶಲಗಳಿಂದಾಗಿ ಕರ್ಣರಸಾಯನವೆಂಬ ಹೆಸರು ಕಾವ್ಯಕ್ಕೆ ಒಪ್ಪುತ್ತದೆ ಎಂದು ಸೂಚಿಸುತ್ತಾರೆ. ಶರಣರ ವಚನ, ಸರ್ವಜ್ಞನ ತ್ರಿಪದಿ, ರತ್ನಾಕರವರ್ಣಿಯ ಭರತೇಶ ವೈಭವದ ಪ್ರಭಾವಕ್ಕೊಳಗಾಗಿದ್ದರೂ ಅರಗಿಸಿಕೊಂಡು ಸ್ವತಂತ್ರ ಕಾವ್ಯವನ್ನು ಕಟ್ಟಿದ್ದಾನೆಂದು ವ್ಯಾಖ್ಯಾನಿಸಿದ್ದಾರೆ. ಚರಿತ್ರೆಯ ದೃಷ್ಟಿಯಿಂದ ಕುಮಾರಾಮನ ಸಾಂಗತ್ಯ ಕವಿತ್ವದ, ಉತ್ಕೃಷ್ಟತೆಯಿಂದ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಬಹುದೊಡ್ಡ ಬೆಲೆ ಪಡೆಯುತ್ತವೆ. ಅಂದರೆ ಸಾಹಿತ್ಯ ಕವಿಗಳ ಸಾಲಿನಲ್ಲಿ ಮಲ್ಲಿಕಾರ್ಜುನ ರತ್ನಾಕರವರ್ಣಿಗೆ ದ್ವಿತೀಯ, ಮಿಕ್ಕವರಿಗೆ ಅದ್ವಿತೀಯ' ಎಂದು ವಿಶ್ಲೇಷಿಸಿರುವುದು ಸಮುಚಿತವಾಗಿದೆ.

ಈ ಪೀಠಿಕೆಯಲ್ಲಿ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದ ಛಂದಸ್ಸಿನ ಕುರಿತಾಗಿಯೇ ಡಾ. ಬಿ.ಆರ್. ಹಿರೇಮಠ ಅವರು ಜಿಜ್ಞಾಸೆಗೈದಿದ್ದಾರೆ. ಸಾಂಗತ್ಯದ ಮೊದಲ ಘಟ್ಟ, ಎರಡನೆಯ ಘಟ್ಟ ವಿವರಿಸಿ ಗಣಗಳನ್ನು ವಿಂಗಡಿಸಿ ಪ್ರಸ್ತಾರ ಹಾಕಿದ್ದಾರೆ. ದ್ವಿತ್ಯಾಕ್ಷರ ಪ್ರಾಸದ ಸಾಂಗತ್ಯಗಳನ್ನು ಚರ್ಚಿಸುತ್ತಾರೆ. ಒಳಪ್ರಾಸ ಹಾಗೂ ಅಂತ್ಯಪ್ರಾಸಗಳ ಕುರಿತಾಗಿ ವಿವರಿಸಿದ್ದಾರೆ. "ಪ್ರಸ್ತುತ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಒಳಪ್ರಾಸವಿಲ್ಲದ ಸಾಂಗತ್ಯವೆನಿಸಿ ಮೋಹನ ತರಂಗಿಣಿ, ಭರತೇಶ ವೈಭವ, ಹದಿಬದೆಯ ಧರ್ಮಗಳ ಸಾಲಿನಲ್ಲಿ ನಿಲ್ಲುತ್ತದೆ. ........ ಸಹಜತೆ, ಸೊಬಗು ಛಂದೋ ಪ್ರಭುತ್ವವನ್ನು ಸೂಚಿಸುತ್ತವೆ. ಸಾಮಾನ್ಯ ಕಾವ್ಯದಂತೆ ಲಯದ ತಂತಿಯಲ್ಲಿ ಪದಗಳು ಪವಣಿಕೆಯಾಗುತ್ತ ಹೋಗದೆ ಭಾವಭಾಷೆಯಲ್ಲಿ ಹೆಪ್ಪುಗಟ್ಟುತ್ತ ನಡೆದ ರೀತಿ ಅನೇಕ ಕಡೆ ಓದುಗನ ಅನುಭವಕ್ಕೆ ಬರುತ್ತದೆ"[೪೫]

ಎಂದು ಹೇಳುವಲ್ಲಿ ಕನಕದಾಸರ ಮೋಹನ ತರಂಗಿಣಿ, ರತ್ನಾಕರ ವರ್ಣಿಯ ಭರತೇಶ ವೈಭವ, ಸಂಚಿಹೊನ್ನಮ್ಮನ ಹರಿಬದೆಯ ಧರ್ಮ ಮುಂತಾದ ಸಾಹಿತ್ಯ ಕೃತಿಗಳೊಂದಿಗೆ ಪ್ರಸ್ತುತ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯವನ್ನು ಪರಸ್ಪರ ತೌಲನಿಕವಾಗಿ ಹೋಲಿಸಿ ವಿಶ್ಲೇಷಿಸದಿರುವುದು ಅಂತರ್ ಶಿಸ್ತೀಯ ಅಧ್ಯಯನಕ್ಕೆ ಸಾಕ್ಷಿಯಾಗಿದೆ.

ಪೀಠಿಕೆಯ ನಾಲ್ಕನೇ ಭಾಗವು ಕಥಾಸಾರವಾಗಿದೆ. ಇದರಲ್ಲಿ 'ಸಲಹು ಮಹಾಗುರು ಚೆನ್ನಮಲ್ಲೇಶದಿಂದ ಆರಂಭಗೊಂಡು ಬೋಳೇಶ್ವರ ಹರಿಸಿ ಸೇಸೆಯಲ್ಲಿದ್ದನೆಸೆದು' ಎನ್ನುವಲ್ಲಿಗೆ ಒಟ್ಟು ೧೭ ಅಧ್ಯಾಯಗಳು ಕೃತಿಯ ಆಶಯವನ್ನು, ಅವುಗಳ ಸಾರವನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಕೃತಿಯ ಕೊನೆಯಲ್ಲಿ ಅನುಬಂಧವನ್ನು ಅಳವಡಿಸಿದ್ದಾರೆ. ಪದ್ಯಗಳ ಅಕಾರಾದಿ, ಕಠಿಣ ಪದಕೋಶ, ನಾಮಕೋಶ ಹಾಗೂ ಒಪ್ಪೋಲೆ ಇವುಗಳನ್ನು ಅನುಕ್ರಮವಾಗಿ ಒಂದರಿಂದ ನಾಲ್ಕರ ವರೆಗಿನ ಅನುಬಂಧದಲ್ಲಿ ಕಟ್ಟಿಕೊಟ್ಟಿದ್ದಾರೆ. ಸಾಮಾನ್ಯವಾಗಿ ಪದ್ಯಗಳ ಅಕಾರಾದಿ ಪದಕೋಶ ಕೊಡುವುದು ವಾಡಿಕೆ. ಆದರೆ ಪ್ರಸ್ತುತ ಗ್ರಂಥದಲ್ಲಿ ನಾಮ ಕೋಶವನ್ನು ಅನುಬಂಧದಲ್ಲಿ ಕೊಟ್ಟಿರುವುದು ವಿಶೇಷತೆಯಾಗಿದೆ. ನಾಮಕೋಶದಲ್ಲಿ ಮತ್ತೆ ವ್ಯಕ್ತಿ ನಾಮ, ಗ್ರಂಥ ನಾಮ, ಸ್ಥಳನಾಮವೆಂದು ವಿಭಜಿಸಿಕೊಂಡಿರುವುದು ಹೆಚ್ಚುಗಾರಿಕೆಯಾಗಿದೆ. ಇವೆಲ್ಲ ಅಂಶಗಳು ಶ್ರೇಷ್ಠ ಸಂಪಾದಕನೋರ್ವನ ಶ್ರಮ ಸಂಸ್ಕೃತಿಗೆ ಸಾಕ್ಷಿಯಾಗಿವೆ.

**೪.೩.೨. : ಇಮ್ಮಡಿ ಮುರಗಾ ಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು :**

ಪ್ರಸ್ತುತ ಕೃತಿಯು ಶಿವಮೊಗ್ಗೆಯ ಮಲೆನಾಡ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ಮುರುಘರಾಜೇಂದ್ರ ಸಂಸ್ಥಾನ ಮಠ ಆನಂದಪುರಂ ಪ್ರಕಾಶನ ಸಂಸ್ಥೆಯಿಂದ ಪ್ರಕಟವಾಗಿದೆ. ೧೯೮೮ರಲ್ಲಿ ಪ್ರಪ್ರಥಮವಾಗಿ ಪ್ರಕಟವಾಗಿರುವ ಈ ಕೃತಿ ಒಟ್ಟು ೯೬ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದರಲ್ಲಿ ಯೋಗಕಲಾಪಸಾರ, ಮುರಗಾ ಸ್ವಾಮಿಗಳು ನಿರೂಪಿಸಿದ ನಾಂದ್ಯ, ಶಬ್ದ ರತ್ನಾಕರ, ಕೊರವಂಜಿ ಕಟ್ಟಳೆ ಹಾಗೂ ಹಾಡುಗಳು ಎಂಬ ಐದು ಪ್ರಕಾರಗಳು ಸಂಕಲಿತಗೊಂಡಿದ್ದು ಇದೊಂದು ಸ್ವತಂತ್ರ ಸಂಪಾದನ ಗ್ರಂಥವಾಗಿದೆ. ಪ್ರಸ್ತಾವನೆಯು ಸುದೀರ್ಘವಾಗಿದ್ದು ಇಮ್ಮಡಿ ಮುರಗಾ ಗುರುಸಿದ್ಧ ಶಿವಯೋಗಿಗಳ ಪರಂಪರೆ, ವೀರಶೈವ ಸಾಹಿತ್ಯದ ಪರಂಪರೆ, ಅವರ ಕೃತಿಗಳ ಸ್ವರೂಪ, ವಿಷಯ, ವಿನ್ಯಾಸ ಮುಂತಾದವುಗಳ ಸುದೀರ್ಘವಾದ ವಿವರಣೆ ಇದೆ. "ಈ ಸಂಪುಟದಲ್ಲಿಯ ಇಮ್ಮಡಿ ಮುರಗಾ ಗುರುಸಿದ್ಧರ ಐದು ಕೃತಿಗಳು ವೀರಶೈವ ಲಘು ಸಾಹಿತ್ಯಪ್ರಕಾರಕ್ಕೆ ಸೇರಿದವುಗಳಾಗಿರುತ್ತವೆ. ಇಮ್ಮಡಿ ಮುರಗಾ ಗುರುಸಿದ್ಧರು ಹಾಡಿ (ಸ್ವರ ವಚನ)ನಂತಹ ಸಣ್ಣ ಗಾತ್ರದ ಕೃತಿಯನ್ನು ಆಲಾಸ್ಯಪುರಾಣ, ಸ್ಕಂದ ಪುರಾಣ, ಶಿವರಹಸ್ಯಗಳಂತಹ ದೊಡ್ಡ ಗಾತ್ರದ ಕೃತಿಗಳನ್ನು ರಚಿಸಿರುವುದು ಇವರ ಸಾಹಿತ್ಯಿಕ ಸಾಹಸಕ್ಕೆ ನಿದರ್ಶನವೆನಿಸಿದೆ. ವೀರಶೈವ ಧರ್ಮ ತತ್ವಗಳು ಸಾಮಾನ್ಯರಿಗೂ ತಿಳಿಯಲೆಂಬ ಉದ್ದೇಶದಿಂದ

ಸರಳ ನಿರೂಪಣಾ ವಿಧಾನವನ್ನು ಇಮ್ಮಡಿ ಮುರಘಾ ಗುರುಸಿದ್ಧರು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಹೀಗಾಗಿ ಈ ಕೃತಿಗಳು ಸರಾಗವಾಗಿ ಓದಿಸಿಕೊಂಡು ಹೋಗುತ್ತವೆ. ಜೊತೆಗೆ ಕವಿಯ ಉದ್ದೇಶವನ್ನು ನೇರವಾಗಿ ಹೃದಯಕ್ಕೆ ಮುಟ್ಟಿಸುತ್ತವೆ. ಇದರಿಂದ ಈ ಕವಿಗೂ ಕೃತಿಗಳಿಗೂ ಜನಪ್ರಿಯತೆ ಪ್ರಾಪ್ತವಾಗಿದೆ."[೪೬] ಈ ಮಾತುಗಳು ಪ್ರಸ್ತುತ ಕೃತಿಯ ಪ್ರವೇಶಕ್ಕೆ ನೆರವಾಗುತ್ತವೆ. ಪ್ರಸ್ತುತ ಕೃತಿಯ ಯೋಗ ಕಲಾಪ ಸಾರವು ಭಾಮಿನಿಷಟ್ಪದಿ ಛಂದಸ್ಸಿನಲ್ಲಿದ್ದು ಒಟ್ಟು ಐದು ಪಟಲಗಳಿವೆ. ಮೊದಲ ಪಟಲದಲ್ಲಿ ಹನ್ನೊಂದು, ಎರಡನೆಯ ಪಟಲದಲ್ಲಿ ಇಪ್ಪತ್ತೆರಡು, ಮೂರನೆಯ ಪಟಲದಲ್ಲಿ ಮೂವತ್ತೊಂದು, ನಾಲ್ಕನೆಯ ಪಟಲದಲ್ಲಿ ಮೂವತ್ತೊಂದು, ಐದನೆ ಪಟಲದಲ್ಲಿ ಮೂವತ್ತೇಳು ಹೀಗೆ ಒಟ್ಟು ಪಟಲಗಳು ಸೇರಿ ಒಂದನೂರ ಇಪ್ಪತ್ತೆಂಟು ಭಾಮಿನಿ ಷಟ್ಪದಿಗಳಿರುತ್ತವೆ. ಮೊದಲ ಪಟಲದ ಅಂತ್ಯದಲ್ಲಿ ಬರುವ 'ಇದು ನಿಖಿಳ ಶಿವಯೋಗ ಸಂಕುಲ' ಎಂಬ ಪದ್ಯ ಮುಂದಿನ ನಾಲ್ಕು ಪಟಲಗಳ ಅಂತ್ಯದಲ್ಲಿ ಬರುತ್ತದೆ. ಈ ಪುನರಾವರ್ತಿಯನ್ನು ಬಿಟ್ಟು ಒಟ್ಟು ಷಟ್ಪದಿಗಳ ಸಂಖ್ಯೆ ಮೇಲೆ ತಿಳಿಸಿದಂತೆ ೧೨೮ ಆಗಿದೆ. ಪ್ರತಿಯೊಂದು ಪಟಲದ ಆರಂಭದಲ್ಲಿ ಬರುವ ಪಲ್ಲದಲ್ಲಿ ಆಯಾ ಪಟಲದಲ್ಲಿ ಬರುವ ಸೂಚನೆ ಇದೆ. ಇದರಲ್ಲಿ ವೀರಶೈವ ಶಿವಯೋಗದ ಸ್ವರೂಪ ಹಾಗೂ ಅದರ ಮಹತ್ವ ಮತ್ತು ಆಚರಣೆಯ ವಿಧಿ ವಿಧಾನಗಳನ್ನು ಶಿವ ಪಾರ್ವತಿಯರ ಸಂಭಾಷಣಾ ರೂಪದಲ್ಲಿ ವಿವರಿಸಲಾಗಿದೆ.

ಮುರಗಾ ಸ್ವಾಮಿಗಳು ನಿರೂಪಿಸಿದ 'ನಾಂದ್ಯ'ದಲ್ಲಿ ಒಟ್ಟು ೨೪ ಷಟ್ಪದಿಗಳಿವೆ. ಮೊದಲ ಒಂದರಿಂದ ಹತ್ತು ವಾರ್ಧಕ ಷಟ್ಪದಿಗಳಿದ್ದರೆ ಹನ್ನೊಂದರಿಂದ ಇಪ್ಪತ್ತು ಪರಿವರ್ಧಿನಿ ಷಟ್ಪದಿ ಬಳಕೆಯಾಗಿದೆ. ಇಪ್ಪತ್ತೊಂದರಿಂದ ಇಪ್ಪತ್ನಾಲ್ಕರಲ್ಲಿ ಭಾಮಿನಿ ಷಟ್ಪದಿ ಹೀಗೆ ನಾಂದ್ಯದಲ್ಲಿ ವಾರ್ಧಕ, ಪರಿವರ್ಧಿನಿ ಹಾಗೂ ಭಾಮಿನಿ ಷಟ್ಪದಿ ಛಂದಸ್ಸಿನ ಬಳಕೆಯಾಗಿದೆ. "ಇಲ್ಲಿಯ ಪ್ರತಿಯೊಂದು ಷಟ್ಪದಿಗೂ ಅಜ್ಞಾತ ಕರ್ತೃ ಬರೆದ ಪ್ರತಿಪದಾಂತ ಟೀಕೆ ಇದೆ. 'ಇಷ್ಟಲಿಂಗ ನಾಂದ್ಯ' ಎಂಬುದು ಈ ಕೃತಿಯ ಇನ್ನೊಂದು ಹೆಸರು. ತನ್ನ ಗುರು ಮುರುಗಾ ಶಾಂತವೀರನನ್ನು ಮತ್ತು ಶಿವನನ್ನು ಅತ್ಯಂತ ಭಕ್ತಿಯಿಂದ ಸ್ತುತಿಸಲಾಗಿದೆ"[೪೭] ಎಂಬ ಮಾತುಗಳು ನಾಂದ್ಯವನ್ನು ಅರ್ಥಪೂರ್ಣವಾಗಿ ಪರಿಚಯಿಸುತ್ತವೆ.

ಶಬ್ದ ರತ್ನಾಕರವು ಕನ್ನಡದ ನಿಘಂಟು ಕೃತಿಯಾಗಿದೆ. ಇದು ಕಂದ ಪದ್ಯದಲ್ಲಿದ್ದು. ಶಬ್ದಾರ್ಥ ಕೋಶವಾಗಿದೆ. ಇದರಲ್ಲಿ ಒಟ್ಟು ಮೂವತ್ತು ಕಂದಪದ್ಯಗಳಿದ್ದು ೧೬ ಪುಟಗಳಿಗೆ ಸಮಾನಾರ್ಥ, ಸಂವಾದಿ ಅರ್ಥ, ಹಲವು ಬಗೆಯ ಅರ್ಥ ಸಾಧ್ಯತೆಗಳನ್ನು ವಿವರಿಸಲಾಗಿದೆ. ಪ್ರತಿಯೊಂದು ಕಂದ ಪದ್ಯವು 'ಶಬ್ದಾಗಮದೊಳ್' ಎಂಬ ಪದ ಸಮುಚ್ಚಯದಿಂದ ಮುಕ್ತಾಯವಾಗುತ್ತದೆ. ಶಬ್ದ ರತ್ನಾಕರವು ಮಹಾಕವಿ ರನ್ನನ ರನ್ನಕಂದನಿಘಂಟು ಮಾದರಿಯಲ್ಲಿ ರಚಿತವಾಗಿದೆ ಎಂದು ಗುರುತಿಸಬಹುದು. ಡಾ. ಬಿ.ಆರ್. ಹಿರೇಮಠ ಅವರು ಇದನ್ನು ಪಾಂಡಿತ್ಯಪೂರ್ಣವಾಗಿ ಸಂಪಾದಿಸಿಕೊಟ್ಟಿದ್ದಾರೆ.

'ಕೊರವಂಜಿ ಕಟ್ಟಳೆ' ವಿಶೇಷ ನಿರೂಪಣೆಯ ಕೃತಿಯಾಗಿದೆ. ಗದ್ಯ ಹಾಗೂ ಪದ್ಯಗಳನ್ನು ಇದರಲ್ಲಿ ಬಳಸಲಾಗಿದೆ. ವೀರಶೈವ ಧರ್ಮ ತತ್ವಗಳನ್ನು ದೇವಲೋಕದ ಕೊರವಂಜಿಯ ಮೂಲಕ ಕಣಿ (ಶಕುನ)ಹೇಳುವ ರೀತಿಯಲ್ಲಿ ಜನಪದ ಮಾಧ್ಯಮವನ್ನು ಅರ್ಥಗರ್ಭಿತವಾಗಿ ಕವಿ ಬಳಸಿದ್ದಾರೆ.

ಹಾಡುಗಳು, ಸ್ವರವಚನಗಳಾಗಿವೆ. ಇದರಲ್ಲಿ ಗುರುಸ್ತುತಿ, ಗುರುಲೀಲೆಗಳಿಗೆ ಆದ್ಯತೆ ನೀಡಲಾಗಿದೆ. ಭಕ್ತಿಯೇ ಮುಖ್ಯವಾಗಿ ಕವಿ ತನ್ನ ಭಕ್ತಿ ಭಾವದ ಮಡುವಿನಲ್ಲಿ ಓದುಗರನ್ನು ಕರೆದೊಯ್ಯುತ್ತಾನೆ. ದೇಶಿಕೋತ್ತಮ ಅಂಕಿತಗಳಲ್ಲಿ ೧೩ ಹಾಡುಗಳು ಸಿಗುತ್ತವೆ. ಕವಿಯ ಅಂಕಿತ ಶಿವಲಿಂಗ, ಶಿವಲಿಂಗೇಶ, ಮುರಿಗೇಂದ್ರ, ಮುರಿಗೇಶ, ಮುರಿಗೆದೇವ, ಶಾಂತಲಿಂಗ ಎಂದು ಬೇರೆ ಬೇರೆಯಾಗಿರುವುದು ಕಂಡುಬರುತ್ತದೆ.

ಪ್ರಸ್ತಾವನೆಯಲ್ಲಿ ಈ ಎಲ್ಲ ಅಂಶಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದು ಕೃತಿಯನ್ನು ಅರ್ಥೈಸಿಕೊಳ್ಳಲು ಓದುಗರಿಗೆ ತುಂಬಾ ನೆರವಾಗುತ್ತದೆ. ಅನುಬಂಧದಲ್ಲಿ ಪದ್ಯಗಳ ಅಕಾರಾದಿ ಇದ್ದು ಪ್ರತಿಯೊಂದು ಕೃತಿಯ ಪದ್ಯಗಳ ಅಕಾರಾದಿಯನ್ನು ಪ್ರತ್ಯೇಕವಾಗಿ ನೀಡಿರುವುದು ವಿಶೇಷವಾಗಿದೆ. ಪದ್ಯದ ಸಂಖ್ಯೆ, ಪುಟ ಸಂಖ್ಯೆ ಸೂಚಿಸಿರುವುದು ಅಭ್ಯಾಸಿಗಳಿಗೆ ತುಂಬಾ ಅನುಕೂಲವಾಗುತ್ತದೆ. ಪ್ರಸ್ತುತ ಕೃತಿಯು ಗ್ರಂಥ ಸಂಪಾದನ ಶಾಸ್ತ್ರದ ಚೌಕಟ್ಟಿನೊಳಗಡೆ ಸಂಪಾದನೆಗೊಂಡ ಅಮೂಲ್ಯ ಕೃತಿಯಾಗಿದೆ. ಇಲ್ಲಿ ಕೊಟ್ಟಿರುವ ಅಡಿಟಿಪ್ಪಣಿಗಳು ವಿವಿಧ ಹಸ್ತಪ್ರತಿಗಳನ್ನು ಬಳಸಿಕೊಂಡಿರುವುದಕ್ಕೆ ಆಧಾರವನ್ನು ಒದಗಿಸುತ್ತವೆ. ಶಬ್ದ ರತ್ನಾಕರವನ್ನು ೧೮೮೩ರಲ್ಲಿ ಬೆಂಗಳೂರಿನಿಂದ ಪ್ರಕಟವಾಗಿದ್ದರೂ ಗದುಗಿನ ತೋಂಟರಾದ್ಯ ಸಂಸ್ಥಾನ ಮಠದ ಹಸ್ತಪ್ರತಿ ಆಧಾರದಿಂದ ಪರಿಷ್ಕರಿಸಲಾಗಿದೆ. ಹಾಗೇ ಇನ್ನುಳಿದವುಗಳನ್ನು ಪರಿಷ್ಕರಿಸುವಾಗ ಶ್ರೀ ಜಗದ್ಗುರು ಮುರುಗರಾಜೇಂದ್ರ ಸಂಸ್ಥಾನ ಮಠ ಆನಂದಪುರಂ ಶಿವಮೊಗ್ಗ ಹಾಗೂ ಗದುಗಿನ ತೋಂಟದಾರ್ಯಮಠದ ಹಸ್ತಪ್ರತಿ ಭಾಂಡಾರದ ಲಭ್ಯವಿರುವ ಆಯಾ ಕೃತಿಗಳ ಹಸ್ತಪ್ರತಿಯನ್ನು ಬಳಸಿಕೊಂಡು ಸಂಪಾದಿಸಿರುವುದಾಗಿ ಪ್ರಸ್ತಾವನೆಯಲ್ಲಿ ಸಂಪಾದಕರು ನಿವೇದಿಸಿದ್ದಾರೆ. ಈ ಎಲ್ಲಾ ಅಂಶಗಳು ಶ್ರೇಷ್ಠ ಗ್ರಂಥ ಸಂಪಾದನೆಯನ್ನು ಮಾದರಿಯಾಗಿ ಡಾ. ಬಿ.ಆರ್. ಹಿರೇಮಠರ ಸ್ವತಂತ್ರ ಸಂಪಾದನೆಯಲ್ಲಿ ಇಮ್ಮಡಿ ಮುರಗಾಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು ಇದಕ್ಕೆ ಪ್ರಮುಖ ಸ್ಥಾನವಿದೆ. "ಇಲ್ಲಿಯವರೆಗೆ ಇಮ್ಮಡಿ ಮುರುಗಾ ಗುರುಸಿದ್ಧರ ಐದು ಕೃತಿಗಳು ಲಭಿಸಿವೆ. ಇವರು ರಚಿಸಿದ ಕೃತಿಗಳ ಸಂಖ್ಯೆ ಇಷ್ಟೇ ಎಂದು ನಿರ್ದಿಷ್ಟವಾಗಿ ಹೇಳಲು ಬರುವಂತಿಲ್ಲ. ಮಲೆನಾಡ ಪ್ರದೇಶದಲ್ಲಿ ಕೈಕೊಳ್ಳುವ ಹಸ್ತಪ್ರತಿ ಪರಿವೀಕ್ಷಣಾ ಕಾರ್ಯದಿಂದ ಇವರ ಇನ್ನೂ ಅಧಿಕ ಕೃತಿಗಳು ಲಭಿಸುವ ಸಾಧ್ಯತೆ ಇದೆ. ವಿದ್ವಾಂಸರು ಇವೆಲ್ಲವುಗಳನ್ನು ಗುರುತಿಸುವ, ಪರಿಷ್ಕರಿಸುವ, ಪ್ರಕಟಿಸುವ ಕಾರ್ಯ ಕೈಗೊಳ್ಳಬೇಕಾಗಿದೆ. ಇದಲ್ಲದೆ 'ಶಿವಲಿಂಗ' ಅಂಕಿತದಲ್ಲಿ ಬರೆದ ಹಾಡುಗಳು ಬಿಡಿಬಿಡಿಯಾಗಿ ಸಿಗುತ್ತಿದ್ದು ಇವೆಲ್ಲವುಗಳನ್ನು ಒಂದೆಡೆ ಸಂಗ್ರಹಿಸುವ ಕೆಲಸವು ನಡೆಯಬೇಕಾಗಿದೆ."[೪೮] ಈ ಮಾತುಗಳು ಮುಂದೆ ಸಂಶೋಧನೆ ಕೈಗೊಳ್ಳುವವರಿಗೆ ಮಾರ್ಗದರ್ಶಿಯಾಗಿವೆ.

**೪.೩.೩ ಸೋದೆಯ ಸದಾಶಿವರಾಯನ ಕೃತಿಗಳು :**

ಸೋದೆಯ ಸದಾಶಿವರಾಯನ ಕೃತಿಗಳು ಡಾ. ಬಿ.ಆರ್. ಹಿರೇಮಠರು ಸ್ವತಂತ್ರವಾಗಿ ಸಂಪಾದಿಸಿದ ಮತ್ತೊಂದು ಗ್ರಂಥವಾಗಿದೆ. ಇದನ್ನು ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠವು ಪ್ರಕಟಿಸಿದೆ. ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಗ್ರಂಥ ಪ್ರಕಟಣಾ ಮಾಲೆಯ ೪೬ನೇ ಕೃತಿಯಾಗಿ ೧೯೯೫ರಲ್ಲಿ ಹೊರಬಂದಿದೆ. ಸ್ವರವಚನಗಳು, ಸಮಸ್ಯಾ ಪೂರ್ಣವೃತ್ತ ಕಂದ, ರಾಗಮಾಲಿಕೆ, ಪಂಚವಿಂಶತಿ ಲೀಲೆಯ ರಗಳೆ, ತ್ರಿವಿಧಿ ಉಳುವೆಯ ಮಹಾತ್ಮೆ, ಜೋಗುಳ ಪದಗಳು, ನವರಸ ಜಕ್ಕಾಣಿ, ಪಂಚವಿಂಶತಿ ಲೀಲೆಯ ಚಾವಡಿ, ಪಂಚವಿಂಶತಿ ಲೀಲೆಗಳ ಮೂಲ ಪದ್ಯಗಳು, ಚಾವಡಿ ಭಿಕ್ಷಾಟನ ಲೀಲೆಯ ಕಂದ. ಖಡ್ಗ ಪ್ರಬಂಧ, ಮಂಗಲಾಷ್ಟಕ, ಕಂದಪದ್ಯ, ಪ್ರಭುಲಿಂಗಲೀಲೆಯ ಚಾವಡಿ, ಮಹಾಚದುರಂಗಲಕ್ಷಣ, ಕಲಕೇತಯ್ಯಗಳ ಲಕ್ಷಣ ಇವೇ ಮೊದಲಾದ ೧೮ ಕೃತಿಗಳನ್ನು ಪ್ರಸ್ತುತ ಗ್ರಂಥ ಸಂಪಾದನೆಯಲ್ಲಿ ಡಾ. ಬಿ.ಆರ್. ಹಿರೇಮಠರು ಅಳವಡಿಸಿಕೊಂಡಿದ್ದಾರೆ. ಇದೂ ಅಲ್ಲದೆ ಅನುಬಂಧದದಲ್ಲಿ ಸದಾಶಿವ ನೀತಿ, ನಂದೀಶ್ವರನ ಅಷ್ಟಕಗಳು, ಸ್ವರವಚನಗಳು, ಮತ್ತೆ ಮೂರು ಕೃತಿಗಳನ್ನು ಕಟ್ಟಿಕೊಟ್ಟಿದ್ದಾರೆ. "ಬಹಳ ಜನರಿಗೆ ಪ್ರಾಚೀನ ಶ್ರೇಷ್ಠ ಕೃತಿಗಳು ಮಾತ್ರ ಪ್ರಕಟವಾಗಬೇಕೆಂಬ ಭಾವನೆ ಇದೆ. ಆದರೆ ಪ್ರತಿಯೊಂದು ಕೃತಿಗೆ ತನ್ನದೆ ಆದ ಬೆಲೆ ಇರುವುದರಿಂದ ಎಲ್ಲ ಗ್ರಂಥಗಳನ್ನು ಪ್ರಕಟಿಸುವುದೆ ಯೋಗ್ಯ ಉಪಕ್ರಮ. ಹೊಸಗನ್ನಡ ನವೋದಯ ಕಾಲದಲ್ಲಿ ಸಾಹಿತ್ಯವನ್ನು ಸೌಂದರ್ಯ ದೃಷ್ಟಿಯಿಂದ ನೋಡುವ ದೃಷ್ಟಿ ಬೆಳೆದು ಅದರ ಉಳಿದ ಮುಖಗಳಾದ ಸಂಸ್ಕೃತಿ, ಭಾಷೆ, ಛಂದಸ್ಸು, ಸಮಾಜ, ಜಾನಪದ ಇತ್ಯಾದಿಗಳು ತೀರ ಲಕ್ಷಿತವಾಗಿವೆ. ಇದನ್ನು ಮನಗಂಡು ಸಮಸ್ತ ಕೃತಿಗಳನ್ನು ಪ್ರಕಟಿಸಲು ಮುಂದಾಗಿದೆ"[೯] ಎಂದು ಪ್ರಕಾಶಕರು ಪ್ರಸ್ತುತ ಕೃತಿ ಪ್ರಕಟಣೆಯ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ.

ಡಾ. ಬಿ.ಆರ್. ಹಿರೇಮಠ ಅವರು ಸೋದೆ ಸದಾಶಿವರಾಯನ ಕೃತಿಗಳು ಪುಸ್ತಕವನ್ನು ಸಂಪಾದಿಸಿ ಅದಕ್ಕೆ ತುಂಬಾ ಮೌಲಿಕವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಆರಂಭ ದಲ್ಲಿ ರಾಜಾಶ್ರಯ, ಸಾಹಿತ್ಯ ಪೋಷಣೆ, ಸಾಹಿತ್ಯ ಪರಂಪರೆ ಮುಂತಾದವುಗಳನ್ನು ವಿವರಿಸಿದ್ದಾರೆ. ತದನಂತರ ಸ್ವಾದಿ ಅರಸು ಮನೆತನದ ಇತಿಹಾಸವನ್ನು ಚಿತ್ರಿಸಿದ್ದಾರೆ. "ವಿಜಯನಗರ ಅರಸರಿಗೆ ಆಧೀನವಾಗಿಯೂ, ಆಮೇಲೆ ಸ್ವತಂತ್ರವಾಗಿಯೂ ರಾಜ್ಯಭಾರ ನಡೆಸಿದ ಪ್ರಾಚೀನ ಕರ್ನಾಟಕದ ವೀರಶೈವ ಅರಸು ಮನೆತನಗಳಲ್ಲಿ ಸ್ವಾದಿಯೂ ಒಂದಾಗಿದೆ. ಈ ಅರಸುಮನೆತನ ೧೫ನೇ ಶತಮಾನದ ಆರಂಭದಲ್ಲಿ ಉದಯಗೊಂಡಿತು. ಸೋದೆ ಇದರ ರಾಜಧಾನಿಯಾಗಿತ್ತು. ಈ ಅರಸು ಮನೆತನದ ರಾಜರು, ನಾಯಕ, ನಾಡಪ್ರಭು, ಒಡೆಯ, ಮಹಿಪಾಲ, ಮಹಾಪ್ರಭು, ಭೂಪಾಲ, ಜಮೀನುದಾರ ಹೆಸರುಗಳಿಂದ ಪ್ರಸಿದ್ಧರಾಗಿದ್ದರು. ಕ್ರಿ. ಶ. ೧೭೬೩ರಿಂದ ಇಂದಿನವರೆಗೆ ಈ ಅರಸುಮನೆತನದ ವಂಶಜರು ಗೋವಾದ ಬಾಂದೇವಾಡಿಯಲ್ಲಿ

ವಾಸವಾಗಿದ್ದಾರೆ. ಪಶ್ಚಿಮ ಕರ್ನಾಟಕದ ಸ್ವಾದಿಯಲ್ಲಿ ಸುಮಾರು ೩೫೦ವರ್ಷಗಳ ವರೆಗೆ ರಾಜ್ಯಭಾರ ಮಾಡಿದ ಸೋದೆಯ ಅರಸು ಮನೆತನ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ಹಾಗೂ ಶಿಲ್ಪಸಂಗೀತ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಅಪಾರವಾಗಿವೆ."[೫೦] ಈ ಮಾತುಗಳಲ್ಲಿ ಸೋದೆಯ ಅರಸು ಮನೆತನದ ಇತಿಹಾಸ ಹರಳುಗಟ್ಟಿದೆ.

ಸೋದೆಯ ಸದಾಶಿವರಾಯ ತನ್ನ ಮನೆತನದ ಮೂಲ ಪುರುಷರ ಬಗೆಗೆ ವಿವರವಾಗಿ ದಾಖಲಿಸಿದ್ದಾನೆ. ಸ್ವತಃ ಅರಸನೇ ತನ್ನ ಮನೆತನದ ಮೂಲವನ್ನು ವಿವರಿಸಿರುವುದು ವಿಶೇಷವಾಗಿದೆ. ಆತನ ವಿವರಣೆ ಹೆಚ್ಚು ವಿಶ್ವಾಸಾರ್ಹವಾಗಿದ್ದು, ಪ್ರಾಮಾಣಿಕವೂ ಆಗಿರುವುದರಿಂದ ಇತಿಹಾಸ ದಾಖಲೆಗೆ ಆಕರ ಸಾಮಗ್ರಿ ಎನಿಸಿದೆ. ಸೋದೆಯ ಒಂದನೆಯ ಸದಾಶಿವರಾಯನ ಕೃತಿಗಳ ಆಧಾರದ ಮೇಲಿಂದ ಆ ಅರಸು ಮನೆತನವನ್ನು ಡಾ. ಬಿ. ಆರ್. ಅವರು ಕಟ್ಟಿಕೊಟ್ಟಿದ್ದಾರೆ. ವೆಂಕಟಪತಿ ಸೋದೆಯ ಅರಸು ಮನೆತನದ ಮೂಲ ಪುರುಷ ಈತ ಚಂದ್ರ ಕುಲದವ ತೊಂಡವಾನ ಚಕ್ರವರ್ತಿಯ ಸೋಮವಂಶಜ. ಒಂದನೆಯ ರಾಮಚಂದ್ರ, ಒಂದನೆಯ ವಜ್ರ ಒಡೆಯರು ಮೂಲ ಪುರುಷ ವೆಂಕಟಪತಿಯ ಮಕ್ಕಳು. ಒಂದನೆಯ ವಜ್ರ ಒಡೆಯರ ಮಗ ದೇವರಾಜ. ದೇವರಾಜನ ತರುವಾಯ ಭೈರರಸ ಸೋದೆಯನ್ನಾಳುತ್ತಾನೆ. ಈ ಐದು ಅಂಶಗಳು ಸದಾಶಿವ ರಾಮನ ಕೃತಿಯಲ್ಲಿ ದಾಖಲುಗೊಂಡಿವೆ. "ಸೋದೆಯ ಅರಸು ಮನೆತನದ ಮೂಲಪುರುಷರ ಕುರಿತು ಮರಾಠಿ ಬಖೈರು ಶಿವಚರಿತ್ರ ಸಾಹಿತ್ಯ ತಿಳಿಸುವ ವಿವರಗಳಿಗೂ ಸದಾಶಿವರಾಯ ದಾಖಲಿಸಿದ ಅಂಶಗಳಿಗೂ ಬಹಳಷ್ಟು ಸಮಾನವಾದ ಅಂಶಗಳಿವೆ. ಹೀಗಾಗಿ ಸೋದೆಯ ಸದಾಶಿವರಾಯ ನೀಡುವ ಈ ವಿವರಗಳನ್ನು ಮರಾಠಿ ಬಖೈರು ಶಿವಚರಿತ್ರ ಸಾಹಿತ್ಯಗಳು ಪುಷ್ಟಿಕರಿಸುತ್ತವೆ. ಆದ್ದರಿಂದ ಸೋದೆಯ ಸದಾಶಿವರಾಯ ಈ ಅರಸುಮನೆತನದ ಮೂಲವನ್ನು ಕುರಿತು ವಿವರಿಸುವ ವಿಷಯಗಳು ವಾಸ್ತವ ಹಾಗೂ ಅಧಿಕೃತವಾದವುಗಳೆಂಬುದು ಸ್ಪಷ್ಟವಾಗುತ್ತದೆ."[೫೧] ಇಲ್ಲಿ ಗ್ರಂಥ ಸಂಪಾದಕರಾದ ಡಾ. ಬಿ. ಆರ್. ಹಿರೇಮಠ ಅವರು ಸದಾಶಿವರಾಯ ಹೇಳಿದ ಸಂಗತಿಗಳನ್ನು ಒರೆಗೆ ಹಚ್ಚಿ ನೋಡಲು ಮರಾಠಿ ಬಖೈರು ಮತ್ತು ಶಿವ ಚರಿತ್ರ ಸಾಹಿತ್ಯಗಳನ್ನು ಮುಖಾಮುಖಿಯಾಗಿಸಿರುವುದು ಕುತೂಹಲಕ್ಕೆ ಕಾರಣವಾಗಿದೆ. ಈ ತೌಲನಿಕ ಅಧ್ಯಯನದಿಂದ ವಾಸ್ತವ ಸಂಗತಿಗಳನ್ನು ನೈಜ ಸಂಗತಿಗಳನ್ನು, ತಿಳಿಯುವುದಾಗಿದೆ. ತೌಲನಿಕ ಅಧ್ಯಯನ ಆಳವಾದ ವಿದ್ವತ್ತು ಅಪಾರವಾದ ಪರಿಶ್ರಮ ಮತ್ತು ಬಹುಶೃತತೆಯನ್ನು ಬಯಸುತ್ತದೆ. ಈ ಎಲ್ಲಾ ಅಂಶಗಳು ಇಲ್ಲಿ ಮುಪ್ಪುರಿಗೊಂಡಿವೆ. ಡಾ. ಬಿ.ಆರ್. ಹಿರೇಮಠ ಅವರು ಸೋದೆ ಅರಸು ಮನೆತನದ ವಂಶಾವಳಿಯನ್ನು ರೇಖಾಚಿತ್ರದ ಮೂಲಕ ಕಟ್ಟಿಕೊಟ್ಟಿದ್ದಾರೆ. ಸ್ವಾದಿ ಅರಸು ಮನೆತನದವರು ತಮ್ಮ ಸಮಕಾಲೀನ ಅರಸರಾದ ವಿಜಯನಗರ, ಬೀಳಗಿ, ಕೆಳದಿ, ಆದಿಲ್‌ಶಾಹಿ, ಮರಾಠರ ಮತ್ತು ಮೊಘಲರೊಂದಿಗೆ ರಾಜಕೀಯ ಸಂಬಂಧವನ್ನು ಹೊಂದಿದ್ದರು. ಕರಾವಳಿ

ಪ್ರದೇಶದಲ್ಲಿ ವ್ಯಾಪಾರ ಚಟುವಟಿಕೆಗಳಲ್ಲಿ ನಿರತರಾಗಿದ್ದ ಪೋರ್ಚುಗೀಜ ಇಂಗ್ಲೀಷರೊಂದಿಗೆ ರಾಜಕೀಯ ವಾಣಿಜ್ಯ ಸಂಬಂಧಗಳನ್ನು ಕೂಡಾ ಏರ್ಪಡಿಸಿಕೊಂಡಿರುವ ಸಂಗತಿ ಕುತೂಹಲಕಾರಿಯಾಗಿದೆ. ಈ ಅಂಶವನ್ನು ಸಂಪಾದಕರು ತಮ್ಮ ಪ್ರಸ್ತಾವನೆಯಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ.* ಇಷ್ಟು ಸುದೀರ್ಘ ಇತಿಹಾಸ ಪರಿಚಯಿಸುತ್ತ ಪೀಠಿಕೆ ಹಾಕಿ ಕವಿಯನ್ನು ಪರಿಚಯಿಸುತ್ತಾರೆ.

"ಸ್ವಾದಿ ಅರಸು ಮನೆತನ ಆಳರಸರಲ್ಲಿ ಅತ್ಯಂತ ಪ್ರಸಿದ್ಧನಾದವನೆಂದರೆ ಒಂದನೆಯ ಸದಾಶಿವರಾಯ. (ಕ್ರಿ.ಶ. ೧೬೭೪ರಿಂದ ೧೬೯೮) ಶಿವಭಕ್ತ ದುರಂಧರನೆನಿಸಿದ ಈತ ವ್ಯವಹಾರ ಚತುರನೂ ದಕ್ಷ ಆಡಳಿತಗಾರನೂ ಪ್ರಜಾಪರಿಪಾಲಕನೂ ಆಗಿದ್ದ. ಇದಲ್ಲದೆ ಸ್ವತಃ ಕವಿಯು ಸಂಗೀತಗಾರನೂ ಆಗಿ ಕನ್ನಡ ಸಾಹಿತ್ಯ ಸಂಗೀತ ಕ್ಷೇತ್ರಕ್ಕೆ ಮೌಲಿಕ ಕೊಡುಗೆಯನ್ನು ನೀಡಿದ್ದಾನೆ. ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಆರಾಧಕನೂ, ಸಂರಕ್ಷಕನೂ ಆಗಿದ್ದ ಸದಾಶಿವರಾಯ ರಾಜರ್ಷಿ, ಶರಣಧರ್ಮದ ಸನ್ಮಾರ್ಗದಲ್ಲಿ ಮುನ್ನಡೆದು ತನ್ನ ಬದುಕಿನಲ್ಲಿ ಶರಣ ಸಿದ್ಧಾಂತವನ್ನು ಅಳವಡಿಸಿಕೊಂಡಿದ್ದ ಶರಣ ಜೀವನವನ್ನು ನಡೆಸಿದ ಸದಾಶಿವರಾಯ ಶಿವಕವಿ, ಭಕ್ತ ಕವಿ, ಅನುಭಾವಿ ಕವಿ."[೫೨] ಈ ರೀತಿಯಾಗಿ ಕವಿಯ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ.

ಕವಿಯನ್ನು ಪರಿಚಯಿಸಿದ ನಂತರ ಆತನ ಕೃತಿಗಳನ್ನು ಒಂದೊಂದಾಗಿ ಪರಿಚಯಿಸಿದ್ದಾರೆ. ಸದಾಶಿವನೀತಿಯೊಂದೆ ಸದಾಶಿವರಾಯನ ಕೃತಿ ಎಂದು ಇಲ್ಲಿಯವರೆಗೆ ಭಾವಿಸಲಾಗಿತ್ತು. ಆತನ ಉಳಿದ ಸಾಹಿತ್ಯ ಕೃತಿಗಳ ಪರಿಚಯವಾಗಲಿ, ಸಂಖ್ಯೆಯಾಗಲಿ, ಸತ್ವವಾಗಲಿ ಇಲ್ಲಿಯವರೆಗೆ ಯಾರಿಗೂ ಗೊತ್ತಿರಲಿಲ್ಲ. ಅದನ್ನು ಪ್ರಪ್ರಥಮವಾಗಿ ಡಾ. ಬಿ.ಆರ್. ಅವರು ಸಂಶೋಧಿಸಿಕೊಟ್ಟಿದ್ದಾರೆ. ಅವರ ಮಾತುಗಳಲ್ಲಿಯೇ ಹೇಳುವುದಾದರೆ ' ಇತ್ತೀಚೆಗೆ ಲಭಿಸಿದ ಅಪೂರ್ವ ತಾಳೆಗರಿ ಕೃತಿ ಈತನ ೧೮ ಹೊಸ ಸಾಹಿತ್ಯ ಕೃತಿಗಳನ್ನು ಪ್ರಥಮ ಬಾರಿಗೆ ತಿಳಿಸಿಕೊಡುತ್ತದೆ. ವೀರಶೈವ ಅರಸನೊಬ್ಬನ ಹೆಸರಿನಲ್ಲಿ, ಅದೂ ಇತಿಹಾಸಕಾರರ ಉಪೇಕ್ಷೆಯಿಂದ ಅಜ್ಞಾತವಾಗಿಯೇ ಉಳಿದಿರುವ ಅರಸು ಮನೆತನದ ರಾಜನ ಹೆಸರಿನಲ್ಲಿ ಅಧಿಕ ಸಂಖ್ಯೆಯ ಹೊಸ ಕೃತಿಗಳು ಒಂದೇ ಹಸ್ತಪ್ರತಿ ಕಟ್ಟಿನಲ್ಲಿ ಲಭಿಸುತ್ತಿರುವುದು ವಿಶೇಷವೆಂದೇ ಹೇಳಬೇಕು. ಇದು ಇತ್ತೀಚಿನ ಗಮನಾರ್ಹ ಹಾಗೂ ಬೆಲೆಯುಳ್ಳ ಶೋಧವೆನಿಸಿದೆ. ಈ ಮೂಲಕ ಸ್ವಾದಿ ಅರಸು ಮನೆತನದ ರಾಜಕೀಯ, ಧಾರ್ಮಿಕ, ಸಂಗೀತ ಹಾಗೂ ಸಾಹಿತ್ಯಿಕ ವಿಷಯಗಳನ್ನು ಕುರಿತು ಹಲವಾರು ಹೊಸ ಅಂಶಗಳು ಪ್ರಪ್ರಥಮವಾಗಿ ಬೆಳಕು ಕಾಣುತ್ತಲಿವೆ. ಇದು ಅಪೂರ್ವ ಚಾರಿತ್ರಿಕ ದಾಖಲೆಯಾಗಿದೆ."[೫೩] ಈ ಮಾತುಗಳು ಪ್ರಸ್ತುತ ಗ್ರಂಥ ಸಂಪಾದನೆಯ ಮಹತ್ವವನ್ನು ಸಾರಿ ಹೇಳುತ್ತವೆ.

ಸದಾಶಿವರಾಯನ ಸ್ವರವಚನಗಳಲ್ಲಿ "ಶೃಂಗಾರ ಹಾಗೂ ಭಕ್ತಿಭಾವಗಳೇ ವಿಶೇಷವಾಗಿವೆ. ಇದಲ್ಲದೆ ಆತ್ಮನಿವೇದನೆ, ಧರ್ಮ-ಮೋಕ್ಷ, ಸಂಸಾರ-ಸಂಕಷ್ಟ, ನೀತಿ -ಬೋಧೆ, ಭರತನಾಟ್ಯ-ಸಂಗೀತ,

ಸ್ತ್ರೀ ಸಮಾಜ, ಸಮಾಜ ವಿಮರ್ಶೆ, ಶಿವನಮಹಾತ್ಮೆ, ಶಿವಸ್ತುತಿ, ಶಿವಶರಣರ ಸ್ತೋತ್ರ, ಗುರುಸ್ತುತಿ, ಪಾರ್ವತಿ ಸ್ತುತಿ, ಮಧುಕೇಶ್ವರ ಸ್ತುತಿ, ಮುರಗಾ ಶಾಂತವೀರ ಇಮ್ಮಡಿ ಮುರಗಾ ಗುರುಸಿದ್ಧೇಶ್ವರ ಸ್ತುತಿ, ಕಾಳಹಸ್ತಿ ನಿರ್ವಾಣೇಶನ ಸ್ತುತಿ, ಸಮಕಾಲೀನ ರಾಜಕೀಯ ಘಟನೆ ಅರಸು ಮನೆತನದ ಅಧಿಕಾರಿ ವರ್ಗ, ಸೋದೆಯರಾಜರ ರಾಜಕೀಯ ಸಂಘರ್ಷ ಮೊದಲಾದ ಹಲವಾರು ಮಹತ್ವದ ವಿಷಯಗಳನ್ನೊಳಗೊಂಡ ಸ್ವರವಚನಗಳು ಐತಿಹಾಸಿಕ ಮಹತ್ವವನ್ನು ಪಡೆದಿವೆ."[೫೪] ಈ ಮಾತುಗಳು ಸ್ವರವಚನಗಳ ವಸ್ತು ವಿಷಯಗಳನ್ನು ವಿವರಿಸುತ್ತವೆ. ಹೀಗೆಯೇ ಆತನ ಇನ್ನಿತರ ಕೃತಿಗಳನ್ನು ಕೂಡ ಸ್ಥೂಲವಾಗಿ ಸಂಪಾದಕರು ಪರಿಚಯಿಸಿದ್ದಾರೆ. ಈ ಪರಿಚಯ ಓದುಗರಿಗೆ ಪ್ರಶಸ್ತವಾದ ಪ್ರವೇಶವನ್ನು ಒದಗಿಸುತ್ತದೆ. ಗ್ರಂಥದ ಅಧ್ಯಯನಶೀಲರಿಗೆ ಸೋದೆಯ ಸದಾಶಿವರಾಯನ ಸಮಸ್ತ ಕೃತಿಗಳ ಪಕ್ಷಿನೋಟವನ್ನು ಕಟ್ಟಿಕೊಡುತ್ತದೆ. ಸದಾಶಿವರಾಯನು ಶಿವಭಕ್ತಿ ಸಾಹಿತ್ಯವನ್ನು ನಿರ್ಮಿಸಿದ ಚತುರ್‌ಭಾಷಾ ವಿಷಾರದನು, ಸಾಹಿತ್ಯ ಕೋವಿದನು, ಸಂಗೀತಜ್ಞನೂ, ಗಾಯಕನೂ, ದಾರ್ಶನಿಕನೂ, ಚಾರಿತ್ರಿಕ ಸಂಗತಿಗಳ ನಿರೂಪಕನೂ. ವೀರಶೈವ ಸಂಸ್ಕೃತಿಯ ಪ್ರಸಾರಕನೂ, ಮಾನವೀಯ ಮೌಲ್ಯಗಳ ಪ್ರತಿಪಾದಕನೂ, ಸಮಾಜ ಸುಧಾರಕನೂ ಧರ್ಮ ರಕ್ಷಕನೂ ಆಗಿದ್ದಾನೆಂಬ ಅಂಶವನ್ನು ಡಾ. ಬಿ. ಆರ್. ಹಿರೇಮಠರು ಸಾಧಾರಗಳೊಂದಿಗೆ ನಿರೂಪಿಸಿದ್ದಾರೆ.

"ಸೋದೆಯ ಸದಾಶಿವರಾಯನ ಕೃತಿಗಳು ಸಾಹಿತ್ಯಕ್ಕೆ ಸಾಹಿತ್ಯವಾಗಿ, ಶಾಸ್ತ್ರಕ್ಕೆ ಶಾಸ್ತ್ರವಾಗಿ, ಇತಿಹಾಸಕ್ಕೆ ಇತಿಹಾಸವಾಗಿ, ಸಂಸ್ಕೃತಿಗೆ ಸಂಸ್ಕೃತಿಯಾಗಿ ನಿಂತುಕೊಂಡಿವೆ" ಎಂಬುದನ್ನು ಗುರುತಿಸಬಹುದು. "ಸದಾಶಿವರಾಯನ ಕೃತಿಗಳಲ್ಲಿ ಕಂದ, ವೃತ್ತ, ರಗಳೆ, ದ್ವಿಪದಿ, ಷಟ್ಪದಿ, ಶ್ಲೋಕ, ಗದ್ಯ ಬಳಕೆಯಾಗಿರುತ್ತವೆ. ಹೀಗೆ ಛಂದೋ ಪ್ರಕಾರ ಮತ್ತು ಸಾಹಿತ್ಯ ಪ್ರಕಾರಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಈ ಅವಧಿಯಲ್ಲಿ ಸ್ವರವಚನ ಸಾಹಿತ್ಯ ಅಧಿಕ ಪ್ರಮಾಣದಲ್ಲಿದೆ. ರಾಗಮಾಲಿಕೆ, ನವರಸ, ಜಕ್ಕಿಣಿ, ಸಮಸ್ಯಾಪೂರ್ಣ ವೃತ್ತ, ಕಂದ, ಖಡ್ಗ, ಪ್ರಬಂಧಗಳಂತಹ ಸಂಗೀತ ಪ್ರಧಾನವಾದ ವಿಶಿಷ್ಟ ಹಾಗೂ ನೂತನ ಪ್ರಯೋಗಶೀಲ ಕೃತಿಗಳೂ ಹೊರಬಂದವು. ಉಳವೆಯ ಮಹಾತ್ಮೆಯಂತಹ ಶುದ್ಧ ಚಾರಿತ್ರಿಕ ಕಾವ್ಯ, ಪ್ರಭುಲಿಂಗ ಲೀಲೆಯ ಚಾವಡಿಯಂತಹ ಸೂತ್ರದ ಗೊಂಬೆಯಾಟದ ದೃಶ್ಯಕಾವ್ಯ, ಮಹಾ ಚದುರ ಚದುರಂಗ ಲಕ್ಷಣದಂಥ ಮನರಂಜನೆಯ ಆಟದ ಕೃತಿ, ಸದಾಶಿವ ನೀತಿಯಂತಹ ನೀತಿ ಸಾಹಿತ್ಯ ಗ್ರಂಥ ಪಂಚವಿಂಶತಿ ಲೀಲೆ. ಭಿಕ್ಷಾಟನ ಲೀಲೆ ಅಷ್ಟಕಗಳಂತಹ ಸ್ತೋತ್ರ ಸಾಹಿತ್ಯ ಕೃತಿಗಳು ರಚನೆಗೊಂಡುದು ಒಂದು ವಿಶೇಷವೆಂದೇ ಹೇಳಬೇಕು. ಹೀಗೆ ಸದಾಶಿವರಾಯನ ಕೃತಿಗಳಲ್ಲಿ ಪ್ರಯೋಗಶೀಲತೆಗಳು ದಟ್ಟವಾಗಿ ಕಂಡುಬರುತ್ತವೆ."[೫೫] ಈ ಮಾತುಗಳು ಸೋದೆ ಸದಾಶಿವರಾಯನ ಕೃತಿಗಳ ಸಮಗ್ರ ದರ್ಶನವನ್ನು ಮಾಡಿಸುತ್ತವೆ. ಹಾಗೂ ಸಂಪಾದಕರು ಸೋದೆ ಸದಾಶಿವರಾಯನ ಸಾಹಿತ್ಯದೊಂದಿಗೆ ನಡೆಸಿದ ಅನುಸಂಧಾನವನ್ನು ವಿವರಿಸುತ್ತವೆ.

ಪರಿಷ್ಕರಣ ಕಾರ್ಯದಲ್ಲಿ ತಾವು ಗ್ರಂಥ ಸಂಪಾದನೆಗೆ ಆಯ್ದುಕೊಂಡ ತಾಡೋಲೆ ಲಭಿಸುವ ಸ್ಥಳ ತಾಡೋಲೆಯ ವೈಶಿಷ್ಟ್ಯತೆಗಳನ್ನು ವಿವರಿಸಿದ್ದಾರೆ. ಹಸ್ತಪ್ರತಿ ಕಟ್ಟಿನಲ್ಲಿರುವ ಕ್ರಮದಂತೆಯೇ ಯಥಾವತ್ತಾಗಿ ಇಲ್ಲಿಯ ಕೃತಿಗಳನ್ನು ಜೋಡಿಸಲಾಗಿದೆ. ಈ ಕಟ್ಟಿನ ಅಂತ್ಯದಲ್ಲಿ ಲಿಪಿಕಾರನ ಪ್ರಶಸ್ತಿಯಾಗಲಿ, ಪ್ರತಿ ಮಾಡಿದ ಮಿತಿಯಾಗಲಿ ಇರುವುದಿಲ್ಲ. ಇದರಿಂದ ಇವು ಸದಾಶಿವರಾಯನ ಸಮಗ್ರ ಕೃತಿಗಳಲ್ಲವೆಂಬುದು ವಿದಿತವಾಗುತ್ತದೆ. ಈ ಕೃತಿಗಳಲ್ಲಿರುವ ಭಾಷಿಕ ದೋಷಗಳನ್ನು ತಿದ್ದುವುದರೊಂದಿಗೆ ಅವಶ್ಯವೆನಿಸಿದಲ್ಲಿ ಪಾಠ ಪರಿಷ್ಕರಣ ಮಾಡಲಾಗಿದೆ. ಪರಿಷ್ಕರಣದ ಪ್ರಯತ್ನ ಮಾಡಿದರೂ ಅನೇಕ ಕಡೆ ಅರ್ಥವಾಗದ ಪಾಠಗಳು ಹಾಗೆಯೇ ಉಳಿದಿವೆ. ಈ ಹಸ್ತಪ್ರತಿ ಕಟ್ಟಿನಲ್ಲಿಲ್ಲದ ಈಗಾಗಲೇ ಪ್ರಕಟಗೊಂಡಿರುವ ಇದೇ ಕವಿಯ ಸದಾಶಿವ ನೀತಿ, ನಂದೀಶ್ವರ ಅಷ್ಟಕಗಳು, ಸ್ವರ ವಚನಗಳನ್ನು ಅನುಬಂಧದಲ್ಲಿ ಸೇರಿಸಿಕೊಳ್ಳಲಾಗಿದೆ"[೫೬] ಈ ಮಾತುಗಳು ಪರಿಷ್ಕರಣ ಕಾರ್ಯವನ್ನು ವಿವರಿಸುತ್ತವೆ.

ಪ್ರಸ್ತುತ ಕೃತಿಯು ತುಂಬಾ ಮೌಲಿಕವಾದ ಗ್ರಂಥ ಸಂಪಾದನೆಯಾಗಿದೆ. ಕಳೆದುಹೋದ ಕವಿಯೋರ್ವನ ೧೮ ಸಾಹಿತ್ಯ ಕೃತಿಗಳನ್ನು ಸಂಶೋಧಿಸಿ ಸಂಕಲಿಸಿ ಸಂಪಾದಿಸಿಕೊಟ್ಟ ಶ್ರೇಯಸ್ಸು ಡಾ. ಬಿ.ಆರ್. ಹಿರೇಮಠ ಅವರಿಗೆ ಸಲ್ಲುತ್ತದೆ. ಸೋದೆ ಸದಾಶಿವರಾಯನ ಕೃತಿಗಳು ಕನ್ನಡ ಸಾಹಿತ್ಯಕ್ಕೆ ಒಂದು ಮಹತ್ವದ ಸೇರ್ಪಡೆಯಾಗಿದೆ. ಕೃತಿಯುದ್ದಕ್ಕೂ ಸಂಪಾದಕರ ಶಾಸ್ತ್ರೀಯ ಶಿಸ್ತು, ಸಾಸಂಸ್ಕೃತಿಕ ಹೊಣೆಗಾರಿಕೆ, ಸಾಹಿತ್ಯಪ್ರೀತಿ, ಸಾಮಾಜಿಕ ಕಾಳಜಿ, ಇತಿಹಾಸ ಪ್ರಜ್ಞೆ ಎದ್ದು ಕಾಣುತ್ತದೆ. ತುಂಬಾ ಮಹತ್ವದ ಕೃತಿಯನ್ನು ಸಂಪಾದಿಸಿಕೊಟ್ಟ ಡಾ. ಬಿ.ಆರ್. ಅವರು ಕನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಆ ಕೃತಿಯನ್ನು ಓದುವುದೇ ಒಂದು ಚೇತೋಹಾರಿ ಅನುಭವವಾಗಿದೆ.

**ಬ) ಇತರರೊಡನೆ ಸಂಪಾದನೆ**

**೪.೧.೧. ಶಾಸನ ಸಾಹಿತ್ಯ :**

ಸಂಪಾದನ ಕಾರ್ಯ ಅತ್ಯಂತ ಜವಾಬ್ದಾರಿಯುತವೂ, ಗುರುತರವೂ ಆದುದಾಗಿದೆ. ಕನ್ನಡದಲ್ಲಿ ಶ್ರೇಷ್ಠ ಸಂಪಾದಕರ ಮಹಾಪರಂಪರೆಯೇ ಇದೆ. ಅದರಲ್ಲಿ ಡಾ. ಬಿ. ಆರ್. ಹಿರೇಮಠವರು ಒಬ್ಬರಾಗಿದ್ದಾರೆ. ಸಂಪಾದನೆಯಲ್ಲಿ ಸ್ವತಂತ್ರ ಸಂಪಾದನೆ, ಸಂಯುಕ್ತ ಸಂಪಾದನೆ, ಜಂಟಿ ಸಂಪಾದನೆ ಇತ್ಯಾದಿಯಾಗಿ ಗ್ರಂಥಗಳನ್ನು ಶೋಧಿಸಿ, ಸಂಕಲಿಸಿ, ಸಂಪಾದಿಸಿ ಕೊಟ್ಟವರುಂಟು. ಅಧ್ಯಯನಕ್ಕೆ ಅನುಕೂಲವಾಗುವಂತೆ ನಾವು ಡಾ. ಬಿ.ಆರ್. ಹಿರೇಮಠರ ಒಟ್ಟು ಸಂಪಾದನಾ ಕೃತಿಗಳನ್ನು ಸ್ವತಂತ್ರ ಸಂಪಾದನೆ ಇತರರೊಡನೆ ಸಂಪಾದನೆ ಎರಡು ರೀತಿಯಲ್ಲಿ ವಿಭಜಿಸಿಕೊಂಡಿರುವುದುಂಟು. ಸ್ವತಂತ್ರ ಸಂಪಾದನೆಯು ಈಗಾಗಲೇ ಪರಿಶೀಲಿಸಲಾಗಿದೆ. ಇದೀಗ ಈ ಉಪ ಅಧ್ಯಾಯದಲ್ಲಿ ಇತರರೊಡನೆ ಸಂಪಾದಿಸಿದ ಕೃತಿಗಳನ್ನು ವಿವೇಚಿಸಲಾಗುವುದು.

ಯಡ್ರಾಮಿ ಶಾಸನಗಳು ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ, ಕೊಲ್ಲಾಪುರದ ಲಕ್ಷ್ಮೀ ಸೇನ ಭಟ್ಟಾರಕ ಜಿನ ಬಸದಿಯ ಹಸ್ತಪ್ರತಿ ಸೂಚಿ, ಸಾರಂಗ ಪ್ರಭೆ, ಸಿದ್ಧನಂಜೇಶ ಕೃತ ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ ಸೋತ್ರ, ನಿಜದ ನೆಲೆ, ಡಾ. ಆರ್.ಸಿ. ಹಿರೇಮಠ ನಾವು ಕಂಡಂತೆ, ಕನ್ನಡ ಪ್ರಪಂಚ, ಹಚ್ಚೇವು ಕನ್ನಡದ ದೀಪ ಮುಂತಾದವುಗಳು ಇತರರೊಂದಿಗೆ ಸಂಪಾದಿಸಿದ ಕೃತಿಗಳಾಗಿವೆ.

**೪.೧.೨ ಮುದನೂರ ಶಾಸನಗಳು :**

ಪ್ರಸ್ತುತ ಕೃತಿಯನ್ನು ಡಾ. ಬಿ.ಆರ್. ಹಿರೇಮಠ ಮತ್ತು ಹನುಮಾಕ್ಷಿ ಗೋಗಿಯವರು ಸಂಯುಕ್ತವಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಹುಬ್ಬಳ್ಳಿ ನವನಗರ ಶಿವಚಂದ್ರ ಪ್ರಕಾಶನದಿಂದ ೧೯೯೪ರಲ್ಲಿ ಪ್ರಕಟಿತವಾದ ಕೃತಿಯಿದು. ಒಟ್ಟು ೮೮ ಪುಟಗಳಲ್ಲಿ ಈ ಕೃತಿಯು ಅಡಕವಾಗಿದೆ. ಪ್ರಸ್ತುತ ಕೃತಿಯನ್ನು ಸುಪ್ರಸಿದ್ಧ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿಯವರಿಗೆ ಅರ್ಪಿಸಲಾಗಿದೆ. ಸಂಪಾದಕರು ತಮ್ಮ ನಿವೇದನೆಯಲ್ಲಿ "ಮುದನೂರು, ಯಡ್ರಾಮಿ, ಕಡಕಲ್ಲ, ಬೈಚಬಾಳ, ಕೆಂಭಾವಿ ಮುಂತಾದ ಗ್ರಾಮಗಳಲ್ಲಿ ಶಾಸನ ಹಸ್ತಪ್ರತಿಗಳ ಪರಿವೀಕ್ಷಣ ಸಂಗ್ರಹಣ ಕಾರ್ಯ ಕೈಗೊಂಡೆವು. ಇದರ ಫಲವಾಗಿ ಮುದನೂರು, ಯಡ್ರಾಮಿಗಳಲ್ಲಿಯೇ ನಮಗೆ ಮೂವತ್ತೈದು ಶಿಲಾಶಾಸನಗಳು ದೊರೆತವು. ಎಲ್.ಡಿ. ಬಾರ್ನೋಟ್ ಅವರು ಸೂಚಿಸಿರುವ ಜೇಡರ ದಾಸಿಮಯ್ಯನ ಉಲ್ಲೇಖವಿರುವ ಶಾಸನ ಮಾತ್ರ ಈಗ ಮುದನೂರು ಗ್ರಾಮದಲ್ಲಿ ಕಂಡುಬರುವುದಿಲ್ಲ. ಇದಲ್ಲದೆ ಮೇಕ್ಯಾಂಜಿ ಸಂಗ್ರಹದಲ್ಲಿ ಮುದನೂರು ಗ್ರಾಮದ ಒಂದು ಶಾಸನವಿದೆ. ಪರಿವೀಕ್ಷಣ ಸಮಯದಲ್ಲಿ ಇದು ನಮ್ಮ ಕಣ್ಣಿಗೆ ಬೀಳಲಿಲ್ಲ ಹೀಗಾಗಿ ಮೇಕ್ಯಾಂಜಿ ಸಂಗ್ರಹದ ಈ ಶಾಸನವನ್ನು ಇಲ್ಲಿ ಸೇರಿಸಿಕೊಳ್ಳಲಾಗಿದೆ. ಶಾಸನಗಳನ್ನು ಒಟ್ಟಾರೆಯಾಗಿ ಅಭ್ಯಸಿಸಿ ಇವುಗಳಿಂದ ತಿಳಿದುಬರುವ ವಿವರಗಳನ್ನು ಇಲ್ಲಿ ನಿರೂಪಿಸಲಾಗಿದೆ."[೫೭] ಈ ಮಾತುಗಳು ಪ್ರಸ್ತುತ ಕೃತಿಯ ದರ್ಶನ ಮಾಡಿಸುತ್ತವೆ.

ಮುದನೂರು ಗ್ರಾಮವು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಗರ ೩೦೦ ಅಥವಾ ೫೦೦ರ ರಾಜಕೀಯ ವಿಭಾಗಗಲ್ಲಿ ಸಮಾವೇಶವಾಗಿದ್ದಿತು. ಇಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಯಾದ ಆರನೆಯ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ಐದು ಶಾಸನಗಳು ಭೂಲೋಕಮಲ್ಲ ,ಓಮೇಶ್ವರನ ಆಳ್ವಿಕೆಯನ್ನು ಹೇಳುವ ಎರಡು ಶಾಸನಗಳು ಇಮ್ಮಡಿ ಜಗದೇಕಮಲ್ಲನ ಎರಡು ಶಾಸನಗಳು ತ್ರೈಲೋಕ್ಯಮಲ್ಲ ಮೂರನೆಯ ತೈಲಪನ ಒಂದು ಶಾಸನ, ಕಳಚೂರಿ ಬಿಜ್ಜಳ, ಸೋವಿದೇವ ಹಾಗೂ ಆಹವನಲ್ಲನ ಒಂದು ಶಾಸನ ಸಿಂಗಣನ ಎರಡು ಶಾಸನಗಳು ದೊರೆತಿವೆ, ಎಲ್ಲ ಶಾಸನಗಳು ಮುದನೂರು ಗ್ರಾಮದಲ್ಲಿ ದೊರೆತಿರುವುದು ವಿಶೇಷವಾಗಿದೆ. ಈ ಶಾಸನಗಳ ಆಧಾರದ ಮೇಲಿಂದ

ಈ ಪ್ರದೇಶವನ್ನು ಕಲ್ಯಾಣ ಚಾಲುಕ್ಯರು, ಕಳಚೂರಿಗಳು ಹಾಗೂ ಯಾದವ, ಸಿಂಗಣ ಅರಸು ಮನೆತನಗಳುಆಳಿದ ಸ್ಥಳವೆಂಬುದು ಸ್ಪಷ್ಟವಾಗುತ್ತದೆ. ಎಲ್ಲಾ ಮಾಹಿತಿಯನ್ನು ಶಾಸನಗಳು ವಿವರಿಸುತ್ತವೆ. ಈ ಶಾಸನಗಳ ವಸ್ತು ವಿಷಯಗಳು ಅವುಗಳ ವೈಶಿಷ್ಟ್ಯವನ್ನು ಈ ಪ್ರದೇಶವನ್ನು ಆಳಿದ ಅರಸರ ಹೆಸರುಗಳನ್ನು ಅವರ ಕಾಲ, ಆಳ್ವಿಕೆಯ ಅವಧಿ, ಮಧ್ಯಕಾಲೀನ ಕರ್ನಾಟಕದ ತೆರಿಗೆಗಳು, ಪ್ರಮುಖ ವಾಣಿಜ್ಯ ಕೇಂದ್ರ, ಸುಪ್ರಸಿದ್ಧ ವರ್ತಕರು ವರ್ತಕ ಸಂಘಗಳು ಮೊದಲಾದವುಗಳನ್ನು ಸಂಪಾದಕರು ವಿವರಿಸಿದ್ದಾರೆ. ಮುದನೂರಿನಲ್ಲಿ ದೊರೆಯುವ ೧೮ ಶಾಸನಗಳು ಗದ್ಯದಲ್ಲಿವೆ. (ಚಿಕ್ಕ ಮುದನೂರಿನಲ್ಲಿ ಒಂಬತ್ತು ಹಿರೇ ಮುದನೂರಿನಲ್ಲಿ ಒಂಬತ್ತು ಒಟ್ಟು ಹದಿನೆಂಟು) "ಮಹಾಜನರು ಮಂಡಲೇಶ್ವರರು, ಮಹಾಮಂಡಲೇಶ್ವರರು ಹಾಗೂ ಅವರ ಸತಿಯರನ್ನು ಪ್ರಶಸ್ತಿ ಗದ್ಯದಲ್ಲಿ ವರ್ಣಿಸಲಾಗಿದೆ. ಈ ಪ್ರಶಸ್ತಿ ಗದ್ಯದ ಬಂಧ ಮನೋಹರವೂ ಬಂಧುರವೂ ಆಗಿದೆ. ಒಟ್ಟಿನಲ್ಲಿ ಈ ಶಾಸನಗಳ ಅಧ್ಯಯನದಿಂದ ಮುದನೂರು ಗ್ರಾಮ ಕಲ್ಯಾಣದ ಚಾಲುಕ್ಯರ ಅವಧಿಯಿಂದ ಯಾದವರ ಕಾಲದವರೆಗೆ ಅಗ್ರಹಾರವಾಗಿ, ಲಕುಲೀಶ ಪಾಶುಪತ ಶೈವದ ನೆಲೆಯಾಗಿ, ವಾಣಿಜ್ಯ ಕೇಂದ್ರವಾಗಿ ಕಂಗೊಳಿಸಿದ ವಿಷಯ ಸ್ಪಷ್ಟವಾಗುತ್ತದೆ."[೫೮] ಸಂಪಾದಕರು ಶಾಸನಗಳು ಲಭಿಸಿದ ಸ್ಥಳ, ಅವುಗಳ ಮಹತ್ವ, ಶಾಸನದಲ್ಲಿರುವ ವಿಷಯ ಮೊದಲಾದ ಅಂಶಗಳನ್ನು ೧೮ ಶಾಸನಗಳಿಗೆ ಸಂಬಂಧಿಸಿದಂತೆ ವಿವರಿಸಿದ್ದಾರೆ. ಮುಂದೆ ಶಾಸನದ ಪಠ್ಯವನ್ನು ಯಥಾವತ್ತಾಗಿ ಕಟ್ಟಿಕೊಟ್ಟಿದ್ದಾರೆ.

ಶಾಸನಗಳ ಪರಿವೀಕ್ಷಣ ಕಾರ್ಯ ಅತ್ಯಂತ ಪರಿಶ್ರಮದ್ದು. ಮೊದಲು ಶಾಸನಗಳ ಶೋಧ ಅನಂತರ ಶಾಸನಗಳ ಓದು, ತದನಂತರ ಅಲ್ಲಿರುವ ಪಾಠ ವಿಷಯದ ಬಗೆಗೆ ಲಕ್ಷ್ಯವಹಿಸಬೇಕಾಗುತ್ತದೆ. ಈ ಕಠಿಣ ಕಾರ್ಯಕ್ಕೆ ಕೈಹಾಕಿದವರ ಸಾಹಸ ಮೆಚ್ಚುವಂತಹದು, ಶಾಸನ ಅಧ್ಯಯನ, ಅಭಿರುಚಿ, ಆಸಕ್ತಿ ಪರಿಶ್ರಮಗಳನ್ನು ಬಯಸುತ್ತದೆ. ಈ ಕಾರ್ಯವನ್ನು ಡಾ. ಬಿ.ಆರ್. ಹಿರೇಮಠವರು ಸಮರ್ಥವಾಗಿ ನಿರ್ವಹಿಸಿದ್ದಾರೆ. "ಶಾಸನಗಳಲ್ಲಿ ಉಕ್ತವಾಗಿರುವ ಆಡಳಿತ ವಿಭಾಗ, ತೆರಿಗೆ ಭೂಮಾಪನ, ವರ್ತಕರ ವಿವಿಧ ಸಂಘ, ವಿದ್ಯಾಕೇಂದ್ರ ನಾಣ್ಯ ಮುಂತಾದವುಗಳನ್ನು ಹೇಳಲಾಗಿದೆ[೫೯] ಎಂದು ಡಾ. ಬಿ. ವಿ. ಮಲ್ಲಾಪುರ ಹೇಳಿರುವುದು ಪ್ರಸ್ತುತ ಕೃತಿಯ ಅಂತಸತ್ವವನ್ನು ಹೇಳುತ್ತದೆ.

**೪.೧.೩. ಯಡ್ರಾಮಿ ಶಾಸನಗಳು ;**

ಪ್ರಸ್ತುತ ಗ್ರಂಥದ ಮತ್ತೊಂದು ಬಹುಮುಖ್ಯ ಭಾಗವೆಂದರೆ ಯಡ್ರಾಮಿ ಶಾಸನಗಳದ್ದು ಯಡ್ರಾಮಿಯಲ್ಲಿ ಲಭಿಸಿದ ಶಾಸನಗಳನ್ನಿಲ್ಲಿ ಸಂಶೋಧಿಸಿ ಸಂಕಲಿಸಿ ಸಂಪಾದಿಸಿ ಕೊಡಲಾಗಿದೆ. ಯಡ್ರಾಮಿಯಲ್ಲಿ ಕಲ್ಯಾಣ ಚಾಲುಕ್ಯ ೬ನೆಯ ವಿಕ್ರಮಾದಿತ್ಯನ ಎರಡು ಶಾಸನಗಳು, ಇಮ್ಮಡಿ ಜಗದೇಕ ಮಲ್ಲನ ಒಂದು ಶಾಸನ, ಮುಮ್ಮಡಿ ತೈಲಪನ ನಾಲ್ಕು ಶಾಸನಗಳು, ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ

ಮತ್ತೆ ಆರು ಶಾಸನಗಳು, ಕಳಚೂರಿ ಸೋವಿದೇವನ ಎರಡು ಶಾಸನಗಳು ಹೀಗೆ ಒಟ್ಟು ೧೫ ಶಾಸನಗಳು ಲಭ್ಯವಾಗಿದ್ದು ಅವುಗಳನ್ನು ಡಾ. ಬಿ.ಆರ್. ಹಾಗೂ ಡಾ. ಹನುಮಾಕ್ಷಿ ಗೋಗಿ ಅವರು ಸಂಪಾದಿಸಿಕೊಟ್ಟಿದ್ದಾರೆ.

ಸಂಪಾದಕರ ನಿವೇದನೆಯಲ್ಲಿ ಯಡ್ರಾಮಿ ಹೆಸರಿನ ನಿಷ್ಪತ್ತಿಯನ್ನು ವಿವರಿಸುತ್ತ ಅದರ ಐತಿಹಾಸಿಕ ಭೌಗೋಳಿಕ ಹಿನ್ನೆಲೆಯನ್ನು ಚರ್ಚಿಸಿದ್ದಾರೆ. ಯಡ್ರಾಮಿ ಗ್ರಾಮವು ದಕ್ಷಿಣವಾರಣಾಸಿ ಯಟಿರಾಮಿ ತೀರ್ಥವೆಂದು ಕರೆಯಿಸಿಕೊಂಡಿರುವುದನ್ನು ಸ್ಪಷ್ಟಪಡಿಸುತ್ತಾರೆ. ಈ ಯಡ್ರಾಮಿಯ ೧೫ ಶಾಸನಗಳ ಅಧ್ಯಯನದ ಹಂತದಲ್ಲಿ ಶಾಸನಗಳಲ್ಲಿ ದಾಖಲಾಗಿರುವ ರಾಜ ಮನೆತನಗಳು, ಶೈವ ಧರ್ಮದ ಪರಂಪರೆಯ ಲಕುಲೀಶ ಪಾಶುಪತಗಳ ವಿವರಣೆ, ದಾನ ಧರ್ಮಗಳ ಪ್ರಸ್ತಾಪ ಬರುತ್ತದೆ. ಇಂಥ ವಿಶಿಷ್ಟಕಾರ್ಯವನ್ನು ಶ್ರಮ, ಶ್ರದ್ಧೆ, ಆಸಕ್ತಿಯಿಂದ ಕೈಗೊಂಡಿರುವುದು ಡಾ. ಬಿ.ಆರ್. ಹಿರೇಮಠರ ಶ್ರಮ ಸಂಸ್ಕೃತಿಗೆ ಮತ್ತೊಂದು ನಿದರ್ಶನವಾಗಿದೆ. ಈ ಶಾಸನಗಳನ್ನು ಪರಿವೀಕ್ಷಿಸಿದಾಗ ರಾಜರು, ರಾಜವಂಶಗಳು, ಮಂಡಲಾಧೀಶ್ವರರು, ಮಹಾಮಂಡಲಾಧೀಶ್ವರರು, ಕಲ್ಯಾಣ ಚಾಲುಕ್ಯ ಅರಸರು, ಕಳಚೂರಿ ಅರಸರು ಈ ಪ್ರದೇಶವನ್ನು ಆಳುತ್ತಿದ್ದ ಸಂಗತಿ ಸ್ಪಷ್ಟವಾಗಿದೆ. ಸಂಪಾದಕರು ತಮ್ಮ ನಿವೇದನೆಯಲ್ಲಿ ೧೫ ಶಾಸನಗಳ ವಸ್ತು ವಿಷಯ, ಶಾಸನಗಳ ಆಶಯ, ಶಾಸನಗಳ ಸಂದೇಶ ಹಾಗೂ ಅವುಗಳ ಮಹತ್ವವನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. ಈ ನಿವೇದನೆಯು ಇತಿಹಾಸಕ್ಕೆ ಇತಿಹಾಸ, ಶಾಸನ ಸಾಹಿತ್ಯಕ್ಕೆ ಶಾಸನ ಸಾಹಿತ್ಯವಾಗಿ, ಸಂಸ್ಕೃತಿ ನಿಷ್ಠ ಅಧ್ಯಯನಕ್ಕೆ ಪೂರಕವಾಗಿದೆ. ಸಂಪಾದಕದ್ವಯರ ಕಾರ್ಯ ಅಭಿನಂದನೀಯವಾಗಿದೆ. ಈ ಶಾಸನಗಳ ಅಧ್ಯಯನದಿಂದ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುತ್ತದೆ. ನಿವೇದನೆಯ ತರುವಾಯ ೧೫ ಶಾಸನಗಳ ಪಠ್ಯವನ್ನು ಪರಿಷ್ಕರಿಸಿ ಸಂಪಾದಿಸಿಕೊಟ್ಟಿದ್ದಾರೆ.

'ಯಡ್ರಾಮಿ' ಎಂಬುದು ವಿಶಿಷ್ಠವಾದ ಚರಿತ್ರೆಯುಳ್ಳ ಊರು. ಭಾರತದ ದಕ್ಷಿಣ ಭಾಗಕ್ಕಿರುವ ವೀರಶೈವ ತೊಟ್ಟಿಲೆನಿಸಿದ ಆಂಧ್ರಪ್ರದೇಶ, ತಮಿಳುನಾಡು, ಕರ್ನಾಟಕಗಳಲ್ಲಿ ವೀರಶೈವರು ಇರುವುದಕ್ಕಿಂತ ಮೊದಲು ಲಕುಲೀಶ ಪಾಶುಪತ ಶೈವರು ನೆಲೆಸಿ ತಮ್ಮ ಪ್ರಾಬಲ್ಯದಿಂದ ಅನೇಕ ರಾಜಮನೆತನಗಳ ಸ್ಥಾಪನೆಗೆ ಪ್ರೇರಣೆ ನೀಡಿದ್ದರು. ಹಲವು ರಾಜಮನೆತನಗಳು ಇವರಿಗಾಗಿ ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಮಠಗಳನ್ನು ನಿರ್ಮಿಸಿ ದಾನ ಧರ್ಮಗಳನ್ನು ಮಾಡಿರುವ ಸಂಗತಿ ತಿಳಿದು ಬರುತ್ತದೆ. ಇವರಲ್ಲಿ ಅನೇಕರ ಪ್ರಭಾವದಿಂದ ಪುನೀತವಾದ ಲಕುಲೀಶ ಪಾಶುಪತ ಶೈವದ ಯಳಮೇಲ ಸಿಂಹಪರ್ಷನ್ಮಂಡಲಿಯ ಮಲಯಾಳ ಪಂಡಿತದೇವ ಮತ್ತು ಅವನ ಶಿಷ್ಯರು ಪ್ರಶಿಷ್ಯರು ಯಡ್ರಾಮಿಯನ್ನು ತಮ್ಮ ಕೇಂದ್ರವಾಗಿಸಿಕೊಂಡು ಕಾರ್ಯ ನಿರ್ವಹಿಸುತ್ತಿದ್ದರು. ಇವೇ ಮೊದಲಾದ ಅಂಶಗಳು ಯಡ್ರಾಮಿಯ ೧೫ ಶಾಸನಗಳಲ್ಲಿ ಬಂದಿವೆ.

"ಶಾಸನಗಳ ಆಧಾರದಿಂದ ಸಂಶೋಧನೆ ಕೈಗೊಳ್ಳುವವರಿಗೆ ಇಲ್ಲಿಯ ಶಾಸನಗಳು ಅಮೂಲ್ಯ ಆಕರ ಸಾಮಗ್ರಿಯನ್ನು ಒದಗಿಸುತ್ತವೆ. ಹೀಗಾಗಿ ಈ ಕೃತಿಗೆ ಸಂಶೋಧನಾ ಕ್ಷೇತ್ರದಲ್ಲಿ ವಿಶೇಷ ಮನ್ನಣೆ ಇದೆ"[೬೦] ಎಂದು ಡಾ. ಬಿ.ವಿ. ಮಲ್ಲಾಪುರ ಅವರು ಹೇಳಿರುವುದು ಪ್ರಸ್ತುತ ಕೃತಿಯ ಮಹತ್ವಕ್ಕೆ ನಿದರ್ಶನವಾಗಿದೆ.

ಈ ಕೃತಿಯ ಕೊನೆಗೆ ಅನುಬಂಧ ರೂಪದಲ್ಲಿ ನಾಮ ಸೂಚಿ ಇದೆ. ಈ ನಾಮ ಸೂಚಿಯಲ್ಲಿ ಮೊದಲನೆಯ ಅಂಕಿ ಶಾಸನ ಸಂಖ್ಯೆಯನ್ನು, ಎರಡನೆಯ ಅಂಕಿ ಶಾಸನದ ಸಾಲನ್ನು ಸೂಚಿಸುತ್ತದೆ. ನಾಮ ಸೂಚಿಯು ತುಂಬಾ ಉಪಯುಕ್ತವಾಗಿದ್ದು ಅಧ್ಯಯನಕ್ಕೆ ಯೋಗ್ಯವಾಗುವ ಸಂಶೋಧನಾತ್ಮಕ ಅಂಶಗಳನ್ನು ಒಳಗೊಂಡಿದೆ. ಶಾಸ್ತ್ರೀಯ ಸಂಪಾದನೆ ಗ್ರಂಥ ಸಂಪಾದಕ ಜವಾಬ್ದಾರಿ ಸಾಂಸ್ಕೃತಿಕ ನಿಷ್ಠೆ ಮುಂತಾದವುಗಳನ್ನಿಲ್ಲಿ ಕಾಣುತ್ತೇವೆ.

**೪.೨.೦ : ಹಸ್ತಪ್ರತಿ :**

ಶಾಸನಗಳನ್ನು ಇತರರೊಂದಿಗೆ ಸಂಪಾದಿಸಿಕೊಟ್ಟಂತೆ ಡಾ. ಬಿ. ಆರ್. ಹಿರೇಮಠ ಅವರು ಹಸ್ತಪ್ರತಿಯನ್ನು ಇತರರೊಂದಿಗೆ ಸಂಯುಕ್ತವಾಗಿ ಸಂಪಾದಿಸಿಕೊಟ್ಟಿದ್ದಾರೆ. ಅದರಲ್ಲಿ ಕೊಲ್ಹಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಮಠದ ಹಸ್ತಪ್ರತಿ ಸೂಚಿ ಹಾಗೂ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಇವೆರಡು ಕೃತಿಗಳನ್ನು ಡಾ. ಬಿ. ಆರ್. ಹಿರೇಮಠ ಅವರು ಡಾ. ಎಂ. ಎಂ. ಕಲಬುರ್ಗಿಯವರೊಂದಿಗೆ ಸಂಯುಕ್ತವಾಗಿ ಸಿದ್ಧಪಡಿಸಿಕೊಟ್ಟಿದ್ದಾರೆ. ಇವುಗಳೆರಡನ್ನೂ ಈಗ ಅನುಕ್ರಮವಾಗಿ ವಿವೇಚಿಸಬಹುದಾಗಿದೆ.

**೪.೨.೧ : ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಮಠದ ಹಸ್ತಪ್ರತಿ ಸೂಚಿ :**

ನೆರೆಯ ಮಹಾರಾಷ್ಟ್ರ ರಾಜ್ಯದಲ್ಲಿರುವ ಕೊಲ್ಹಾಪುರವು ಒಂದು ಕಾಲಕ್ಕೆ ಅಖಂಡ ಕರ್ನಾಟಕದ ಭಾಗವಾಗಿದ್ದಿತು. ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು ಮೊದಲಾದ ಸಾಮ್ರಾಟರ ಆಡಳಿತಕ್ಕೆ ಕೊಲ್ಹಾಪುರವು ಒಳಗಾಗಿತ್ತು. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗ ದೇವನು ಕೊಲ್ಹಾಪುರದ ಮಹಾಲಕ್ಷ್ಮೀಗೆ ಬಲಗೈ ಕಿರುಬೆರಳನ್ನು ಕೊಟ್ಟು ರಕ್ತ ತರ್ಪಣಗೈದ ಸಂಗತಿಯು ಕೊಲ್ಹಾಪುರದ ಶಾಸನ ಒಂದರಲ್ಲಿ ದಾಖಲೆಗೊಂಡಿದೆ. ಪ್ರಜಾಪಕ್ಷಪಾತಿಯಾದ ಸಾಮ್ರಾಟ ತನ್ನ ಸಾಮ್ರಾಜ್ಯದಲ್ಲಿ ಬರಗಾಲ ಬಿದ್ದಾಗ ಅದರ ನಿವಾರಣಾರ್ಥವಾಗಿ ಪಂಡಿತಮಂಡಲಿಯ ಸೂಚನೆ, ಜೋತಿಷಿಗಳ ಆಶಯದ ಮೇರೆಗೆ ತನ್ನ ಬಲಗೈ ಕಿರುಬೆರಳನ್ನು ಲಕ್ಷ್ಮೀದೇವಿಗೆ ಅರ್ಪಿಸಿದ ಸಂಗತಿ ಚರಿತ್ರಾರ್ಹವಾಗಿದೆ. ಹಾಗೆ ಕೊಲ್ಹಾಪುರವನ್ನು ಕನ್ನಡ ಅರಸುಮನೆತನದವರಾದ ಶಿಲಾಹಾರರು ಆಳಿದ ಅಂಶ ಶಾಸನಗಳಲ್ಲಿ

ವ್ಯಕ್ತವಾಗಿದೆ. ಹೀಗೆ ಒಂದು ಕಾಲಕ್ಕೆ ಕನ್ನಡ ಪ್ರದೇಶವೇ ಆಗಿದ್ದ ಕೊಲ್ಹಾಪುರ ಒಂದು ಸಾಂಸ್ಕೃತಿಕ ಕೇಂದ್ರವಾಗಿಯೂ ಪ್ರಸಿದ್ಧಿಗೊಂಡಿತ್ತು. ೧೦ನೆ ಶತಮಾನದ ನಂತರ ಜೈನರು ತಮ್ಮ ಧರ್ಮ ಭಾಷೆಯಾದ ಪ್ರಾಕೃತವನ್ನು ಬಿಟ್ಟು ಕನ್ನಡದಲ್ಲಿ ಸಾಹಿತ್ಯ ರಚನೆಗೆ ಶ್ರೀಕಾರ ಹಾಕಿದರು. ಜನರಾಡುವ ಭಾಷೆಯಲ್ಲಿ ತಮ್ಮ ಧರ್ಮ ಶಾಸ್ತ್ರದ ತತ್ವಗಳನ್ನು ವಿವರಿಸಿದರು. ಮುಂದಿನ ಜನಾಂಗಕ್ಕೆ ತಿಳಿಸುವುದರ ಪ್ರಯುಕ್ತವಾಗಿ ಜೈನಧರ್ಮ ಸಾರವನ್ನು ಹಸ್ತಪ್ರತಿಗಳಲ್ಲಿ ಕಾಯ್ದಿರಿಸಿದರು. ಜೈನ ಕವಿಗಳ ಸಾಹಿತ್ಯವನ್ನು ಕೂಡಾ ನಕಲುಗೊಳಿಸಿ ತಮ್ಮ ಬಸದಿಗಳಲ್ಲಿ ಕಾಯ್ದಿಡುವ ಮುಂದಿನ ಜನಾಂಗಕ್ಕೆ ಬಳುವಳಿಯಾಗಿ ಸಾಗಿಸುವ ಕಾರ್ಯವನ್ನು ಜೈನ ಬಸದಿಗಳು ನಿರ್ವಹಿಸಿದುವು. ಕೆಲವೆಡೆ ಹಸ್ತಪ್ರತಿ ಭಂಡಾರಗಳೇ ಸೃಷ್ಟಿಯಾದವು. ಅವುಗಳಲ್ಲಿ ಕೊಲ್ಹಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯು ಒಂದಾಗಿದೆ. ಇಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಪ್ರಾಕೃತ ಮತ್ತು ಕನ್ನಡ ಹಸ್ತಪ್ರತಿಗಳ ಹೇರಳ ಭಾಂಡಾರವಿದೆ. ಈ ಅಂಶವನ್ನು ಮನಗಂಡ ಡಾ. ಎಂ.ಎಂ. ಕಲಬುರ್ಗಿ, ಡಾ. ಬಿ. ಆರ್. ಹಿರೇಮಠ ಅವರು ಕೊಲ್ಹಾಪುರ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಗೆ ಭೆಟ್ಟಿಯಿತ್ತು, ಕ್ಷೇತ್ರ ಕಾರ್ಯ ಕೈಗೊಂಡರು. ಆ ಬಸದಿಯಲ್ಲಿರುವ ಒಟ್ಟು ಕನ್ನಡ ಹಸ್ತ ಪ್ರತಿಗಳು ಖೊರೆ ಕಾಗದಗಳು ಮುಂತಾದವನ್ನು ಸಂಗ್ರಹಿಸಿ ವಿಸ್ತೃತವಾದ ಅಧ್ಯಯನ ಕೈಗೊಂಡರು. ಪ್ರಾಚೀನ ಉಪಲಬ್ಧ ಕೃತಿಗಳು ನಕಲು ಕೃತಿಗಳನ್ನು ಅಧ್ಯಯನಿಸಿದರು. ಮಹಾಕವಿ ಪಂಪನ ಪುರಾಣ, ಚಾವುಂಡರಾಯನ ತ್ರಿಷಷ್ಟಿ ಶಲಾಕಾಪುರುಷ ಆದಿಪುರಾಣ, ನಯಸೇನನ ಧರ್ಮಾಮೃತ, ಕರ್ಣಪಾರ್ಯನ ನೇಮಿ ಜಿನೇಶ ಸಂಗತಿ ಮತ್ತು ಯೋಗಾಮೃತ ಮುಂತಾದ ಅಮೂಲ್ಯ ಕೃತಿಗಳ ಹಸ್ತಪ್ರತಿಗಳು ಲಭ್ಯವಾದವು.

ಕನ್ನಡ ಸಾಹಿತ್ಯದಲ್ಲಿ ಈ ವರೆಗೆ ಬೆಳಕಿಗೆ ಬಾರದಿರುವ ಕೆಲವು ಹೊಚ್ಚಹೊಸ ಕೃತಿಗಳೂ ಕೂಡಾ ಲಭಿಸಿದವು. ಇದರಲ್ಲಿ ಶಂಖ ಜಿನೇಶ್ವರ ಉದ್ಭವಿಸಿದ ಪ್ರಸಂಗ, ವಜ್ರಭಟ್ಟನ ವೀರಾವಳಿ, ಮಹಾಕವಿ ರನ್ನನ ರನ್ನ ನಿಘಂಟು (ರನ್ನ ಕಂದ), ಹಸ್ತಿಮಲ್ಲನ ಪೂರ್ವ ಪುರಾಣ ಮುಂತಾದವುಗಳ ಪೂರ್ಣ ಪಠ್ಯಗಳು ಲಭಿಸಿದ್ದು ಭಾಗ್ಯವಿಶೇಷ, ಸಾಂಗತ್ಯ, ಹಾಡು, ಸ್ತೋತ್ರ ಸಾಹಿತ್ಯಕ್ಕೆ ಸಂಬಂಧಪಟ್ಟ ಜೈನಧರ್ಮದ ಸಾಹಿತ್ಯರಾಶಿ ಅಪಾರ ಪ್ರಮಾಣದಲ್ಲಿ ಮೊಟ್ಟ ಮೊದಲ ಬಾರಿಗೆ ಬಳಕಿಗೆ ಬಂತು. ಅಖಂಡ ೧೫ ದಿನಗಳ ಕ್ಷೇತ್ರ ಕಾರ್ಯದ ಪರಿಣಾಮವಾಗಿ ಈ ಹೊಸ ಶೋಧ ಅನ್ವೇಷಣೆಯಾಯಿತು. ಡಾ. ಬಿ.ಆರ್. ಹಿರೇಮಠರು ಈ ಹಸ್ತಪ್ರತಿಗಳನ್ನು ಆಧರಿಸಿಯೇ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಮಠದ ಹಸ್ತಪ್ರತಿ ಭಂಡಾರದ ಲಿಪಿಕಾರರು ಎಂಬ ಲೇಖನವನ್ನು ರಚಿಸಿದರು. ಮುಂದೆ ಇದೇ ಪ್ರೇರಣೆಯಾಗಿ ಕನ್ನಡ ಹಸ್ತಪ್ರತಿ ಲಿಪಿಕಾರರು ಪ್ರಶಸ್ತಿಗಳು ಎಂಬ ಸ್ವತಂತ್ರ ಸಂಶೋಧನಾ ಗ್ರಂಥವನ್ನು ಕೂಡ ಶ್ರೀಯುತರು ಪ್ರಕಟಿಸಿದರು. ಕೊಲ್ಹಾಪುರ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿ ಭಂಡಾರದ ಕ್ಷೇತ್ರ ಕಾರ್ಯ ಪರಿವೀಕ್ಷಣೆ ಅಧ್ಯಯನಗಳ ಫಲವಾಗಿ ಈ ಕೃತಿ ರೂಪಗೊಂಡಿತು. ಡಾ.

ಎಂ.ಎಂ. ಕಲಬುರ್ಗಿ, ಡಾ. ಬಿ.ಆರ್. ಹಿರೇಮಠ ಡಾ. ಎಸ್. ವ್ಹಿ. ಅಯ್ಯನಗೌಡರ ಮೂವರೂ ಸೇರಿ ಸಂಯುಕ್ತವಾಗಿ ಈ ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗದಿಂದ ೧೯೮೮ರಲ್ಲಿ ಪ್ರಕಟಿತವಾಗಿದೆ. ೩೫ ಪುಟಗಳ ಪುಟ್ಟ ಕೃತಿ ಇದು. ಈ ಕೃತಿಗೆ ಡಾ. ಎಂ. ಎಂ. ಕಲಬುರ್ಗಿಯವರ ಮೌಲಿಕ ಪ್ರಸ್ತಾವನೆ ಇದೆ. ಇದರಲ್ಲಿ ಹಸ್ತಪ್ರತಿಯ ಮಹತ್ವ ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣಾ ಕಾರ್ಯ ಅವುಗಳ ಮಹತ್ವ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಡಾ. ಬಿ. ಆರ್. ಹಿರೇಮಠ ಅವರು ಸೂಚಿ ಶಿಲ್ಪದಲ್ಲಿ ಪ್ರಸ್ತುತ ಕೃತಿಯ ವಿವರಗಳನ್ನು ನೀಡಿದ್ದಾರೆ. ಕೊಲ್ಹಾಪುರ ಲಕ್ಷ್ಮೀಸೇನ ಬಸದಿಯಲ್ಲಿರುವ ವೈಶಿಷ್ಟ್ಯತೆಗಳನ್ನು, ಹಸ್ತಪ್ರತಿಯಲ್ಲಿ ಲಭ್ಯವಿರುವ ಸಾಹಿತ್ಯ ಸಾಮಗ್ರಿಯನ್ನು ವಿವಿಧ ಬಗೆಯ ಹಸ್ತಪ್ರತಿಗಳನ್ನು ಅವುಗಳ ಮಾದರಿಯನ್ನು ಓದುಗರಿಗೆ ಒದಗಿಸಿದ್ದಾರೆ. ಸೂಚಿ ರಚನಾಕಾರ್ಯ ಅತ್ಯಂತ ಕಷ್ಟಕರವಾದದ್ದು. ಅಪಾರ ಪರಿಶ್ರಮವನ್ನು ಬಯಸುವಂತಹದ್ದು. ಹಸ್ತಪ್ರತಿ ವಾಚನ ಪರಿಣತಿ, ಆಸಕ್ತಿ, ಕಾರ್ಯೋತ್ಸಾಹ, ಛಲ ಮತ್ತು ಬಲಗಳನ್ನು ಬಯಸುವಂತಹದ್ದು ಪ್ರಸ್ತುತ ಕೃತಿಯ ಹಿಂದೆ ಸಂಪಾದಕ ತ್ರಯರ ಅಪಾರ ಪರಿಶ್ರಮವಿದೆ. ಹಸ್ತಪ್ರತಿ ಅಧ್ಯಯನಕಾರರಿಗೆ ಇದೊಂದು ಮಾರ್ಗ ಸೂಚಿಯಾಗಿದೆ.

**೪.೨.೨ : ಕನ್ನಡ ಅಧ್ಯಯನ ಪೀಠದ ಹಸ್ತ ಪ್ರತಿ ಸೂಚಿ :**

ಪ್ರಸ್ತುತ ಹಸ್ತಪ್ರತಿ ಸೂಚಿಯನ್ನು ಡಾ. ಬಿ. ಆರ್. ಹಿರೇಮಠ ಅವರು ಸಂಪಾದಿಸಿದ್ದಾರೆ. ಡಾ. ಎಂ.ಎಂ. ಕಲಬುರ್ಗಿಯವರು ಇದರ ಪ್ರಧಾನ ಸಂಪಾದಕರು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪ್ರಸಾರಾಂಗವು ಪ್ರಸ್ತುತ ಕೃತಿಯನ್ನು ಪ್ರಕಟಿಸಿದೆ. ೧೯೯೨ರಲ್ಲಿ ಪ್ರಥಮ ಬಾರಿಗೆ ಪ್ರಕಟವಾದ ಈ ಕೃತಿಯು ೩೩೪ ಪುಟಗಳನ್ನು ಒಳಗೊಂಡಿದೆ. ಡಾ. ಎಂ. ಎಂ. ಕಲಬುರ್ಗಿ, ಡಾ. ಬಿ. ಆರ್. ಹಿರೇಮಠ ಈರ್ವರೂ ಸಂಶೋಧಕ ಪ್ರಭೃತಿಗಳ ಸಂಯುಕ್ತಸಂಪಾದನಾ ಕೃತಿ ಇದು. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರಕ್ಕೆ ಕೈದಿವೀಗೆಯಾಗಿದೆ. ಪ್ರಸ್ತಾವನೆಯಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು "ಹಸ್ತಪ್ರತಿಗಳು ನಮ್ಮ ಸಂಸ್ಕೃತಿಯ ನಿಧಿಯೂ ಹೌದು. ಪ್ರತಿನಿಧಿಯೂ ಹೌದು. ರಾಜ್ಯದ ಒಳಹೊರಗಿನ ಅನೇಕ ಮಠ ಮಂದಿರಗಳಲ್ಲಿ ಮತ್ತು ಅಭ್ಯಾಸಪ್ರಿಯ ವ್ಯಕ್ತಿಗಳ ವಶದಲ್ಲಿರುವ ಇವು ಇಂದು ವಾಚನ ದೂರ ವಸ್ತುಗಳಾಗಿ ಉಪೇಕ್ಷೆಗೆ ಗುರಿಯಾಗಿವೆ. ಕೆಲವೆಡೆ ದೇವರ ಜಗಲಿಯ ಮೇಲೆ ಪೂಜಾ ಸಾಮಗ್ರಿಗಳಾಗಿ ನೀರು ಗಂಧಗಳಿಂದ ಕೊಳೆಯುತ್ತಲಿವೆ. ಇವುಗಳ ರಕ್ಷಣೆ ನಮ್ಮ ಪರಮ ಕರ್ತವ್ಯ. ಕನ್ನಡ ವಿಭಾಗ ಈ ಕರ್ತವ್ಯವನ್ನು ಕೈಗೆತ್ತಿಕೊಂಡು ಪ್ರಾಚೀನ ಹಸ್ತಪ್ರತಿ ಸಂಗ್ರಹಕಾರ್ಯವನ್ನು ಪ್ರಾರಂಭಿಸಿತು. ........ಸಾಹಿತ್ಯ, ಶಾಸ್ತ್ರ, ತತ್ವ ಇತ್ಯಾದಿಗಳಿಗೆ ಸಂಬಂಧಪಟ್ಟ ಈ ಹಸ್ತಪ್ರತಿಗಳ ವಿಷಯ ವೈವಿಧ್ಯ ಅನೇಕ ಅಭ್ಯಾಸಿಗರನ್ನು ತನ್ನತ್ತ ಆಕರ್ಷಿಸಿದೆ. ಹೀಗಾಗಿ ಇವುಗಳನ್ನು ಆಧರಿಸಿ ಕನ್ನಡ ಅಧ್ಯಯನ ಪೀಠ

ಈ ವರೆಗೆ ನೂರಾರು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದೆ."[೬೧] ಈ ಮಾತುಗಳು ಹಸ್ತಪ್ರತಿಯ ಮಹತ್ವ ಕನ್ನಡ ಅಧ್ಯಯನ ಪೀಠದ ಕಾರ್ಯವೈಖರಿ ಮೊದಲಾದವುಗಳನ್ನು ಸೊಗಸಾಗಿ ಪರಿಚಯಿಸುತ್ತದೆ. ಪ್ರಸ್ತುತ ಕೃತಿಯಲ್ಲಿ ಅಂಬಿಗರ ಚೌಡಯ್ಯನ ವಚನಗಳಿಂದ ಆರಂಭವಾಗಿ ಹಿರಿಯ ಮಂತ್ರ ಗೋಪ್ಯದ ಟೀಕೆಯವರೆಗೆ ಒಟ್ಟು ೩೫೪ ಹಸ್ತಪ್ರತಿಗಳ ಪರಿಚಯವಿದೆ. ಪ್ರತಿಯೊಂದರಲ್ಲಿ ಆದಿ, ಅಂತ್ಯ, ವಿಷಯ, ವಿಶೇಷ ಮೊದಲಾದ ವಿವರಗಳಿವೆ. ಆರಂಭದಲ್ಲಿ ತಾಡೋಲೆ, ಕಾಗದ ಪತ್ರ, ಗರಿಗಳ ಸಂಖ್ಯೆ, ಅವುಗಳ ಉದ್ದ ಅಗಲ, ಒಟ್ಟು ಸಂಖ್ಯೆ ಅವುಗಳ ಕಾಲ ಹಸ್ತಪ್ರತಿಗಳಲ್ಲಿರುವ ಒಟ್ಟು ಸಾಲು ಮುಂತಾದ ಮಹತ್ವದ ಅಂಶಗಳು ದಾಖಲುಗೊಂಡಿವೆ. ಆದಿಯಲ್ಲಿ ಇಷ್ಟದೇವರ ಸ್ತುತಿ, ಅಂತ್ಯದಲ್ಲಿ ಸಮಾಪ್ತಿ ವಿಷಯ ವಿಭಾಗದಲ್ಲಿ 'ವೀರಶೈವ ಧರ್ಮ ಹಾಗೂ ಸಮಾಜವನ್ನು ಕುರಿತು ಮಾಹಿತಿ ಇದೆ. 'ವಿಶೇಷ'ದಲ್ಲಿ ಸಮಗ್ರ ಅಕ್ಷರ ಸಾಧಾರಣವಾಗಿರುತ್ತವೆ.* ಇದೇ ಮಾದರಿಯನ್ನು ಇಲ್ಲಿ ಎಲ್ಲ ಹಸ್ತಪ್ರತಿ ಸೂಚಿಗೆ ಅನ್ವಯಿಸಲಾಗಿದೆ. "ಸೂಚಿ ರಚನೆ ಸಂತೋಷದ ಕೆಲಸವಲ್ಲ ಬೇಸರ ಶ್ರಮದ ಕೆಲಸ. ಸ್ಪಷ್ಟವಾದ ಅಕ್ಷರಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಓದುವುದು, ಅಸ್ತವ್ಯಸ್ತ ಗರಿಗಳನ್ನು ಹೊಂದಿಸುವುದು. ಹಸ್ತಪ್ರತಿಯಲ್ಲಿಯ ವಿಷಯವನ್ನು ಗುರುತಿಸುವುದು. ಮೇಲಾಗಿ ಯಾಂತ್ರಿಕವಾಗಿ ಸೂಚಿ ವಿವರಗಳನ್ನು ಸಂಗ್ರಹಿಸುವುದು - ಇಷ್ಟೆಲ್ಲಾ ಶ್ರಮಗಳ ನಡುವೆ ಸಹನೆ ಕಳೆದುಕೊಳ್ಳದಿದ್ದರೆ ಮಾತ್ರ ಈ ಕಾರ್ಯ ಯಶಸ್ವಿ ಪಡೆಯುತ್ತದೆ"[೬೨] ಎಂಬ ಡಾ. ಕಲಬುರ್ಗಿಯವರ ಮಾತುಗಳು ಹಸ್ತಪ್ರತಿ ಸೂಚಿಯ ಕಷ್ಟಸಾಧ್ಯ ಕಾರ್ಯವನ್ನು ಪರಿಚಯಿಸುತ್ತವೆ.

ಹಸ್ತಪ್ರತಿಯಿಂದ ಕಷ್ಟಪಟ್ಟು ಎತ್ತಿ ಬರೆದ ಬಿಡಿ ವಿವರಗಳು ಸೂಚಿ ಕಾರ್ಯವನ್ನು ಪೂರ್ಣಗೊಳಿಸುವುದಿಲ್ಲ. ಅಲ್ಲಲ್ಲಿ ತಪ್ಪಿ ಉಳಿದುಕೊಂಡು ಬಂದ ದೋಷಗಳನ್ನು ದೂರಗೊಳಿಸುವುದು ಏಕರೂಪತೆಯನ್ನು ಸಾಧಿಸುವುದು, ಶಾಸ್ತ್ರೀಯವಾಗಿ ಸಂಯೋಜಿಸುವುದು, ಕೊನೆಗೆ ಸೂಚಿ ಶಿಲ್ಪವನ್ನು ಕಟ್ಟಿಕೊಡುವುದು ತುಂಬಾ ಪರಿಶ್ರಮದ ಕಾರ್ಯವಾಗಿದೆ. ಪ್ರಸ್ತುತ ಗ್ರಂಥಕ್ಕೆ ಡಾ. ಬಿ. ಆರ್. ಹಿರೇಮಠ ಅವರು ಸೂಚಿ ಶಿಲ್ಪವನ್ನು ರಚಿಸಿಕೊಟ್ಟಿದ್ದಾರೆ.

ಸೂಚಿಶಿಲ್ಪದ ಕುರಿತಾಗಿ ವಿವರಿಸುತ್ತ ಡಾ. ಬಿ. ಆರ್. ಹಿರೇಮಠ ಅವರು -"ವಿಜ್ಞಾನ ಮರ್ಯಾದೆ ಪಡೆದ ಸೂಚಿ ಸಾಹಿತ್ಯದ ಒಂದು ಅಂಗ, ಹಸ್ತ ಪ್ರತಿಸೂಚಿ, ಇವುಗಳಲ್ಲಿ ವಿವರಣಾತ್ಮಕ ಹಸ್ತಪ್ರತಿಸೂಚಿ ತುಂಬಾ ಉಪಯುಕ್ತವಾದುದು. ಇದನ್ನು ಮನಗಂಡು ಒಂದು ನೂರು ಕಟ್ಟುಗಳ ಒಂದು ಸಂಪುಟದಂತೆ ಒಂದು ಸಾವಿರ ಕಟ್ಟುಗಳ ಹತ್ತು ಸಂಪುಟವನ್ನು ಸಿದ್ಧಪಡಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಈ ಸಾವಿರ ಕಟ್ಟುಗಳಲ್ಲಿ ಸೇರಿಕೊಂಡಿರುವ ಸಂಸ್ಕೃತ ಕೃತಿಗಳನ್ನು ಇಲ್ಲಿ ಕೈಬಿಡಲಾಗಿದ್ದು, ಅವುಗಳಿಗಾಗಿಯೇ ಪ್ರತ್ಯೇಕ ಸಂಪುಟವನ್ನು ರಚಿಸಲು ಯೋಜಿಸಲಾಗಿದೆ"[೬೩] ಎಂದು ಹಸ್ತಪ್ರತಿ ಸೂಚಿ ಯೋಜನೆಯನ್ನು ಡಾ. ಬಿ. ಆರ್. ಅವರು ವಿವರಿಸಿದ್ದಾರೆ. ಇಲ್ಲಿಯವರೆಗೆ ಪ್ರಕಟವಾಗಿರುವ ನಾಡಿನ ಎಲ್ಲ ಹಸ್ತಪ್ರತಿ ಸೂಚಿಗಳನ್ನು ಸಾದ್ಯಂತವಾಗಿ ಅಧ್ಯಯನಿಸಿ ಅವುಗಳಲ್ಲಿರುವ ಮಿತಿಯನ್ನು ಅರಿತು

ಪ್ರಸ್ತುತ ಹಸ್ತಪ್ರತಿ ಸೂಚಿಯು ಸರ್ವ ಸಮರ್ಪಕವಾಗುವಂತೆ ಯೋಜಿಸಲಾಗಿದೆ. "ಹಸ್ತಪ್ರತಿಯ ಒಡೆತನ ಲಭಿಸಿದ ಸ್ಥಳ ಈ ಕಟ್ಟಿನಲ್ಲಿರುವ ಕೃತಿಗಳ ಸಂಖ್ಯೆ ಈ ಕಟ್ಟಿನಲ್ಲಿರುವ ಇತರ ಕೃತಿಗಳಿಗಾಗಿ ನೋಡಿ _ ತಾ:ಪ್ರ ಕಾ:ಪ್ರ ಅವು ಈ ಸೂಚಿ ರಚನೆಯಲ್ಲಿ ನಾವು ಅಳವಡಿಸಿಕೊಂಡ ಅಂಶಗಳಾಗಿರುತ್ತವೆ."[೬೪] ಇಲ್ಲಿ ಡಾ. ಬಿ. ಆರ್. ಹಿರೇಮಠ ಅವರು ಸೂಚಿಶಿಲ್ಪದ ಸಂಯೋಜನೆಯನ್ನು ವಿವರಿಸಿದ್ದಾರೆ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ (ಸಂಪುಟ-೧) ತುಂಬಾ ಬೆಲೆಯುಳ್ಳ ಕೃತಿಯಾಗಿದೆ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರದಲ್ಲಿರುವ ಹಸ್ತಪ್ರತಿಗಳ ಕುರಿತಾಗಿ ಸಮಗ್ರವಾದ ಮಾಹಿತಿಯನ್ನು ನೀಡುತ್ತದೆ. "ಸೂಚಿ ರಚನಾ ಕಾರ್ಯ ಅತ್ಯಂತ ಪರಿಶ್ರಮದಾಯಕವಾಗಿದ್ದು ಹಸ್ತಪ್ರತಿ ಪರಿಚಯ, ವಾಚನದ ಪರಿಣಿತಿ, ಆಸಕ್ತಿ ಮುಂತಾದವುಗಳು ಮಹತ್ತರವಾದ ಪಾತ್ರ ವಹಿಸುತ್ತವೆ."[೬೫] ಪ್ರಧಾನ ಸಂಪಾದಕರಾದ ಡಾ. ಎಂ. ಎಂ. ಕಲಬುರ್ಗಿಯವರು ಸಂಪಾದಕರಾದ ಡಾ. ಬಿ. ಆರ್. ಹಿರೇಮಠ ಅವರು ಪದೇ ಪದೇ ಪರಿಶ್ರಮವನ್ನು, ಶ್ರಮ ಸಂಸ್ಕೃತಿಯನ್ನು ಪ್ರಸ್ತಾಪಿಸಿದ್ದಾರೆ. ಇವೆರಡರ ವಕ್ತಾರರೇ ಆಗಿರುವ ಈ ಈರ್ವರೂ ವಿದ್ವಾಂಸರು ಸೂಚಿಸಿರುವ ಮಾತುಗಳು ತುಂಬಾ ಜವಾಬ್ದಾರಿಯುತವಾದವುಗಳು. ಗಂಭೀರವಾದ ಅಧ್ಯಯನ ಕೈಗೊಳ್ಳುವವರಿಗೆ ಅಪಾರ ತಾಳ್ಮೆ, ಸಂಯಮ, ಕಷ್ಟ ಸಹಿಷ್ಣುತೆಗಳನ್ನು ಒಳಗೊಂಡವರು ಮಾತ್ರ ಕೈಗೊಳ್ಳಬಹುದಾದ ಕಾರ್ಯವಿದಾಗಿದೆ. ಒಟ್ಟಿನಲ್ಲಿ ಮೌಲಿಕ ಗ್ರಂಥ ಸಂಪಾದನೆ ಮಾಡಿರುವ ಇಬ್ಬರೂ ವಿದ್ವಾಂಸರ ಕಾರ್ಯ ಸಾಫಲ್ಯಗೊಂಡಿದೆ.

**೪.೩.೦ ವಚನ ಸಾಹಿತ್ಯ :**

ಹಸ್ತಪ್ರತಿ ಸೂಚಿಗಳನ್ನು ಇತರರೊಂದಿಗೆ ಸಂಪಾದಿಸಿಕೊಟ್ಟಿರುವಂತೆ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಸಾರಂಗ ಪ್ರಭೆ, ಬಸವಣ್ಣನವರ ವಚನಗಳ ಸಮಾಲೋಕನ, ವಚನ ಸಂಕಲನ ಸಂಪುಟ ೪ ಇವುಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ.

**೪.೩.೧ ಸಾರಂಗ ಪ್ರಭೆ :**

ಶಿವಶರಣರ ಕನಸಿನ ಕೂಸಾಗಿ ಬೆಳೆದ ವೀರಶೈವ ಮಠಗಳು ಶರಣರು ನಡೆದ ದಾರಿಯಲ್ಲಿ ಹೆಜ್ಜೆಯಿಡುತ್ತ ಕಾಯಕ, ದಾಸೋಹ ತತ್ವಗಳನ್ನು ಅಳವಡಿಸಿಕೊಂಡು ಬೆಳೆದು ಸಾಮಾಜಿಕ ಧಾರ್ಮಿಕ ಪ್ರಗತಿಯನ್ನು ಸಾಧಿಸುವಲ್ಲಿ ಮುಂಚೂಣಿಯಲ್ಲಿವೆ. ಅಂತಹ ಮಠಗಳಲ್ಲಿ ಸಿಂದಗಿಯ ಮಠವೂ ಹೊರತಾದುದಲ್ಲ. ಈ ಮಠದ ಕಾರ್ಯ ವೈಖರಿಗೆ ಕಾರಣೀಭೂತರಾದ ಮಠಾಧೀಶರ ಪರಂಪರೆಯನ್ನು ಅನುಲಕ್ಷಿಸಿದಾಗ ಸಾಮಾಜಿಕ ಸುಧಾರಣೆಯ ಹಂತದಲ್ಲಿ ಬಹಳಷ್ಟು ಸಾಧನೆಗೈದ ಸಂಗತಿ ತಿಳಿದುಬರುತ್ತದೆ. ವೀರಶೈವ ಮಠಗಳು ನಾಡಿನುದ್ದಗಲಕ್ಕೂ ಅಪಾರವಾದ ಸಾಹಿತ್ಯ ಸೇವೆಗೈದಿವೆ.

ನಾಡಿನ ಮುಂಚೂಣಿಯಲ್ಲಿರುವ ತುಮಕೂರು ಸಿದ್ಧಗಂಗಾ ಮಠ, ಬೆಳಲೂರಿನ ಸರ್ಪಭೂಷಣ ಮಠ, ಸುತ್ತೂರು ಮಠ, ಗದುಗಿನ ತೋಂಟದಾರ್ಯ ಮಠ, ಬೆಳಗಾವಿಯ ನಾಗನೂರು ಮಠ, ಇಳಕಲ್ಲದ ಮಹಾಂತ ಶಿವಯೋಗಿಗಳ ಮಠ. ಬಾಗಲಕೋಟೆಯ ಚರಂತಿ ಮಠ, ಗುಲಬರ್ಗದ ಶರಣಬಸವೇಶ್ವರ ಮಠ, ಬೀದರದ ಭಾಲ್ಕಿ ಪಟ್ಟದ್ದೇವರ ಮಠ, ಬಳ್ಳಾರಿಯ ಹೇಮ ಸಿಂಹಾಸನ ಪೀಠ ಮೊದಲಾದವು ನಾಡಿನ ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಪಾರವಾದ ಕೊಡುಗೆಯನ್ನು ಸಲ್ಲಿಸಿವೆ. ಸುಂದರ ಸಮಾಜವನ್ನು, ಸುಸಂಸ್ಕೃತ ಜನಾಂಗವನ್ನು, ಸಮೃದ್ಧ ನಾಡನ್ನು ಕಟ್ಟಿ ಬೆಳೆಸುವಲ್ಲಿ ಕರ್ನಾಟಕದ ಮಠಗಳ ಪಾತ್ರ ಹಿರಿದಾಗಿದೆ. ಅಂತಹ ಮಠಗಳಲ್ಲಿ ಸಿಂದಗಿಯ ಸಾರಂಗಮಠವೂ ಒಂದಾಗಿದೆ. ಪೂಜ್ಯಶ್ರೀ ಪ್ರಭು ಸಾರಂಗದೇವ ಶಿವಾಚಾರ್ಯ ಸ್ವಾಮೀಜಿಯವರದು ಅದ್ಭುತವಾದ ವ್ಯಕ್ತಿತ್ವ. "ಐತಿಹಾಸಿಕ ಪರಂಪರೆಯನ್ನು, ಸಾಂಸ್ಕೃತಿಕ ಸಂಪನ್ನತೆಯನ್ನು, ಧಾರ್ಮಿಕ ಮಹತ್ವವನ್ನು ಪಡೆದ ಸಾರಂಗಮಠವು ವೀರಶೈವ ಸಂಸ್ಕೃತಿಯ ಪ್ರಸಾರದಲ್ಲಿ ಮಹತ್ತರ ಕಾರ್ಯಮಾಡಿದೆ." ಸಾರಂಗಮಠದ ಸಾಧನೆಗೆ ಮುಖ್ಯಕಾರಣ ಪೂಜ್ಯಶ್ರೀಗಳು. ಸಾರಂಗಮಠದ ಶ್ರೀಗಳಾಗಿ ಬಂದ ಪ್ರಭು ಸಾರಂಗದೇವರು ಶೈಕ್ಷಣಿಕ ಸಮ್ಮೇಳನ, ವಿಚಾರ ಸಂಕಿರಣ, ಸಾಹಿತ್ಯಗೋಷ್ಠಿ. ಚಿಂತನಗೋಷ್ಠಿ, ಜಿಲ್ಲಾ ಸಾಹಿತ್ಯ ಸಮ್ಮೇಳನ, ಕ.ವಿ.ವಿ. ವ್ಯಾಪ್ತಿಯ ಕನ್ನಡ ಪ್ರಾಧ್ಯಾಪಕ ಪರಿಷತ್ತಿನ ಸಮಾವೇಶ ಮುಂತಾದ ಹತ್ತು ಹಲವು ಸಾಂಸ್ಕೃತಿಕ ಚಟುವಟಿಕೆಗಳಿಂದ ಕನ್ನಡ ನಾಡಿನ ಇತಿಹಾಸದಲ್ಲಿ ಅನನ್ಯವಾದ ಸ್ಥಾನವನ್ನು ಪಡೆದಿದ್ದಾರೆ. ಪೂಜ್ಯ ಶ್ರೀ ಪ್ರಭುಸಾರಂಗದೇವರು ಶಿವಾಚಾರ್ಯರ ದ್ವಾದಶ ಪಟ್ಟಾಧಿಕಾರ ಮಹೋತ್ಸವದ ನಿಮಿತ್ಯವಾಗಿ 'ಸಾರಂಗ ಪ್ರಭೆ' ಎಂಬ ಗೌರವಾಭಿನಂದನ ಗ್ರಂಥವನ್ನು ಸಲ್ಲಿಸಲಾಯಿತು. ಅದರ ಪ್ರಧಾನ ಸಂಪಾದಕರು ಡಾ. ಬಿ. ಆರ್. ಹಿರೇಮಠ ಅವರು.

'ಸಾರಂಗ ಪ್ರಭೆ'ಯನ್ನು ಸಿಂದಗಿಯ ಸಾರಂಗಮಠದ ಶ್ರೀ ಚೆನ್ನವೀರ ಸ್ವಾಮಿಗಳ ಪ್ರತಿಷ್ಠಾನವು ಪ್ರಕಟಿಸಿದೆ. ೨೦೦೨ ರಲ್ಲಿ ಪ್ರಕಟವಾದ ಸಾರಂಗಪ್ರಭೆಯು ೩೨೪ ಪುಟಗಳನ್ನುಳ್ಳ ಭವ್ಯ ಹಾಗೂ ಬೃಹತ್ ಗ್ರಂಥವಾಗಿದೆ. ಡಾ. ಬಿ.ಆರ್. ಹಿರೇಮಠರು ಪ್ರಧಾನ ಸಂಪಾದಕರಾಗಿಯೂ ಡಾ. ಜಿ.ಎಂ. ಹೆಗಡೆ ಮತ್ತು ಪ್ರೊ. ವಿ.ಡಿ. ವಸ್ತ್ರದ ಅವರು ಉಪಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಭಾಗ ಒಂದರಲ್ಲಿ ಪೂಜ್ಯ ಶ್ರೀಗಳ ವ್ಯಕ್ತಿತ್ವ, ಸಾಧನೆ, ಶ್ರೀಮಠದ ಪರಂಪರೆಯ ಪರಿಚಯವಿದೆ. ಇದರಲ್ಲಿ ೯ ಲೇಖನಗಳಿವೆ. ಭಾಗ ೨ ರಲ್ಲಿ ಬಸವಣ್ಣನವರ ವಚನಗಳ ಸಮಾಲೋಕನವಿದೆ. ಇದರಲ್ಲಿ ವಿವಿಧ ವಿದ್ವಾಂಸರು ಬರೆದ ೩೨ ಮೌಲಿಕ ಲೇಖನಗಳು ಬಸವಣ್ಣನವರ ವಚನಗಳ ವಿಶ್ಲೇಷಣೆಗಾಗಿ ಮೀಸಲಾಗಿವೆ.

ಭಾಗ ಒಂದರಲ್ಲಿ ಪ್ರೊ. ಚೆನ್ನಪ್ಪ ಕಟ್ಟಿ, ಪೂಜ್ಯ ಶ್ರೀ ಚೆನ್ನವೀರ ಮಹಾಸ್ವಾಮಿಗಳು, ಪ್ರೊ. ಬಿ.ಎಂ. ಬಿರಾದಾರ- ಪೂಜ್ಯ ಶ್ರೀ ಪ್ರಭು ಸಾರಂಗದೇವ ಶಿವಾಚಾರ್ಯರು, ಪ್ರೊ. ನಾಗೇಶ ರಾಮಪೂರ-

ಪೂಜ್ಯ ಶ್ರೀ ಪ್ರಭು ಸಾರಂಗದೇವ ಶಿವಾಚಾರ್ಯ ಕೆಲವು ಚಿಂತನೆಗಳು, ಡಾ. ಎಸ್. ಎಮ್. ಚಾಂದಕವಟೆ - ಪೂಜ್ಯ ಶ್ರೀಗಳ ಹನ್ನೆರಡು ವರ್ಷಗಳ ಸಾಧನೆ ಕುರಿತಾಗಿ, ಡಾ.ಎಂ.ಎಂ. ಪಡಶೆಟ್ಟಿ - ಸದ್ವಿಚಾರ ಗೋಷ್ಠಿ ಒಂದು ಅವಲೋಕನ, ಪ್ರೊ. ಎಸ್.ಜಿ. ಹಿರೇಮಠ - ಸಾರಂಗ ಶ್ರೀಗಳು - ನುಡಿಚಿತ್ರಗಳು, ಶ್ರೀಶೈಲ ಬಿ. ಹಿರೇಮಠ -ಸಾರಂಗಮಠ ಹಾಗೂ ಸಾರಂಗದೇವ ಚಾರಿತ್ರಿಕ ದಾಖಲೆಗಳು, ಪ್ರೊ. ಬಿ.ಎಂ. ಬಿರಾದಾರ ಸಿಂದಗಿ ಸಾರಂಗಮಠದ ಪರಂಪರೆ ಮುಂತಾದ ಲೇಖನಗಳು ಈ ಭಾಗದಲ್ಲಿದ್ದು ಪರಮ ಪೂಜ್ಯರ ಭವ್ಯ ವ್ಯಕ್ತಿತ್ವ, ಅವರ ವೈಶಿಷ್ಟ್ಯಯುತವಾದ ಸಾಧನೆ ಹಾಗೂ ಶ್ರೀಮಠದ ಸಮೃದ್ಧ ಪರಂಪರೆಯನ್ನು ಕಟ್ಟಿಕೊಡುತ್ತವೆ.

ಭಾಗ ಎರಡರಲ್ಲಿ ಬಸವಣ್ಣನವರ ವಚನಗಳ ವಿವೇಚನೆ, ವಿಶ್ಲೇಷಣೆ ಇದೆ. ಡಾ. ಆರ್.ಸಿ. ಹಿರೇಮಠ ಹಾಗೂ ದೇ. ಜವರೇಗೌಡ, ಡಾ. ಸಿದ್ಧಯ್ಯ ಪುರಾಣಿಕ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಕೀರ್ತಿನಾಥ ಕುರ್ತಕೋಟಿ ಮುಂತಾದ ಪ್ರಭೃತಿಗಳ ಅತ್ಯಮೂಲ್ಯ ಲೇಖನಗಳಿವೆ. ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ವೀರಣ್ಣ ದಂಡೆ, ಡಾ. ಬಸವರಾಜ ಸಬರದ, ಡಾ. ಓ.ಎಲ್. ನಾಗಭೂಷಣ ಸ್ವಾಮಿ, ಡಾ. ಗಿರಡ್ಡಿ ಗೋವಿಂದರಾಜ, ಡಾ. ಎಸ್. ವಿದ್ಯಾಶಂಕರ ಮುಂತಾದ ಸುವಿಖ್ಯಾತ ವಿಮರ್ಶಕರ ಒಳನೋಟಗಳನ್ನೊಳಗೊಂಡ ಲೇಖನಗಳಿವೆ. ಚೆನ್ನವೀರ ಕಣವಿ, ಸಾ.ಸಿ. ಮರುಳಯ್ಯ, ಬಿ.ಎ. ಸನದಿ, ಪ್ರೊ.ಸುಜನಾ ಮುಂತಾದವರು ಕವಿವರ್ಯರ ಚಿಂತನೆಗಳಲ್ಲಿ ಚೆಲ್ಲುವರೆದಿವೆ. ಡಾ. ಎಂ.ಎಂ. ಕಲಬುರ್ಗಿ, ಡಾ. ಚಿದಾನಂದಮೂರ್ತಿ, ಡಾ. ಸಂಗಮೇಶ ಸೌದತ್ತಿಮಠ, ಡಾ. ತಾಳ್ತಜೆ ವಸಂತಕುಮಾರ, ಡಾ. ಬಿ.ವ್ಹಿ. ಮಲ್ಲಾಪೂರ ಮುಂತಾದ ಸುವಿಖ್ಯಾತ ಸಂಶೋಧಕರ ಜಿಜ್ಞಾಸೆಯನ್ನೊಳಗೊಂಡ ಲೇಖನಗಳಿವೆ. ಪ್ರೊ. ಆರ್. ರಾಚಪ್ಪ, ಪ್ರೊ. ಜಿ.ಎನ್. ಹಿರೇಮಠ, ಡಾ. ಎ. ಮುರಿಗೆಪ್ಪ, ಡಾ. ಬಸವರಾಜ ಜಗಜಂಪಿ ಮುಂತಾದ ವಿದ್ವಾಂಸರ ಲೇಖನಗಳು ಇದರಲ್ಲಿವೆ. ಡಾ. ವಿಜಯಾ ಸುಬ್ಬರಾವ, ಡಾ. ಡಿ. ಮಂಗಳಾ ಇಬ್ಬರು ಮಹಿಳಾ ಚಿಂತಕಿಯರ ಸೂಕ್ಷ್ಮ ಒಳನೋಟಗಳನ್ನೊಳಗೊಂಡ ಲೇಖನಗಳಿವೆ. ಹೀಗೆ ಒಟ್ಟು ೩೨ ವಿದ್ವಾಂಸರು ಬಸವಣ್ಣನವರ ವಚನಗಳ ವೈವಿಧ್ಯಪೂರ್ಣ ವಿಚಾರಗಳನ್ನು ನಿರೂಪಿಸಿದ್ದಾರೆ. ಬಸವಣ್ಣನವರ ವಚನಗಳಲ್ಲಿ ವಿಶ್ವಸಂದೇಶ, ಆಧುನಿಕ ಸಮಸ್ಯೆಗಳಿಗೆ ಬಸವ ಸಂದೇಶವೇ ಪರಿಹಾರ, ಬಸವಣ್ಣನರ ವಚನಗಳಲ್ಲಿ ದುರಂತ ಪ್ರಜ್ಞೆ - ಬದುಕುವ ಪ್ರಜ್ಞೆ, ಬಸವಣ್ಣ ಮತ್ತು ಸ್ತ್ರೀ ಪರ ನಿಲುವುಗಳು, ಬಸವಣ್ಣನವರ ವಚನಗಳು ಹಾಗೂ ಸ್ತ್ರೀ ವಾದ, ಬಸವಣ್ಣನವರ ಸಸ್ಯ ಸಂಬಂಧವಾದ ಸೂಕ್ತಿಗಳು, ಬಸವಣ್ಣನವರ ಜಾನಪದ ಪ್ರಜ್ಞೆ, ಬಸವಣ್ಣನವರ ವಚನಗಳಲ್ಲಿ ದಲಿತ ಬಂಡಾಯ ಪ್ರಜ್ಞೆ, ಬಸವಣ್ಣನವರ ವಚನಗಳಲ್ಲಿ ರಾಚನಿಕ ವಿನ್ಯಾಸ, ಬಸವಣ್ಣನವರ ವಚನಗಳಲ್ಲಿ ಭಾಷಾ ಪ್ರಯೋಗ, ಬಸವಣ್ಣನವರ ವಚನಗಳಲ್ಲಿ ಪ್ರಾಣಿ ರೂಪಕ, ಬಸವಣ್ಣನವರ ವಚನಗಳಲ್ಲಿ ಒಳ ರೂಪಿಕೆಗಳು ಮೊದಲಾದ ಲೇಖನಗಳು ಹೊಚ್ಚ ಹೊಸತಾಗಿವೆ, ಇಲ್ಲಿರುವ

ಹಲವಾರು ಲೇಖನಗಳು ಬಸವಣ್ಣನವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಅನಾವರಣಗೊಳಿಸಿವೆ. ಕೆಲವು ಲೇಖನಗಳಲ್ಲಿ ಬಸವಣ್ಣನವರ ವಿಚಾರಗಳ ಹಲವಾರು ಮಗ್ಗಲುಗಳು ಬಿಚ್ಚಿಕೊಂಡಿವೆ. ಸಾರಂಗಪ್ರಭೆಯು ಸಾಂದರ್ಭಿಕ ಗ್ರಂಥವಾಗಿದ್ದರೂ ಬಸವಣ್ಣನವರ ವ್ಯಕ್ತಿತ್ವ ಹಾಗೂ ಚಿಂತನೆಗಳ ಜಿಜ್ಞಾಸೆ ಇರುವುದು ವೈಶಿಷ್ಟ್ಯವಾಗಿದೆ. ಡಾ. ಬಿ.ಆರ್. ಹಿರೇಮಠ ಅವರು ತುಂಬಾ ಅರ್ಥಪೂರ್ಣವಾಗಿ ಸಂಪಾದಿಸಿಕೊಟ್ಟಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ "ಬಸವಣ್ಣನವರ ವಚನ ವಿಮರ್ಶೆ ಕಳೆದ ಶತಮಾನದುದ್ದಕ್ಕೂ ಸಾಗಿಬಂದಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತಬಂಡಾಯ ಸಾಹಿತ್ಯ ಚಳುವಳಿಯ ಸಂದರ್ಭಗಳಲ್ಲಿ ವಚನ ವಿಮರ್ಶೆ ವಿವಿಧ ಮುಖವಾಗಿ ನಡೆದಿದೆ. ಬಸವಣ್ಣನವರ ವಚನಗಳ ವಿಮರ್ಶೆಗೆ ದೊಡ್ಡ ಇತಿಹಾಸವಿದೆ. ವಿಭಿನ್ನ ಆಯಾಮಗಳಿವೆ. ನಾಡಿನ ವೀರಶೈವ ವಿದ್ವಾಂಸರು ಮಾತ್ರವಲ್ಲ ಎಲ್ಲ ವರ್ಗದ ವಿಮರ್ಶಕರು ಬಸವಣ್ಣನವರ ವಚನಗಳ ವಿಮರ್ಶೆಯನ್ನು ವ್ಯಾಪಕವಾಗಿ ಒರೆಗಲ್ಲಿಗೆ ಹಚ್ಚಿ ಅದರ ಮಾಣಿಕ್ಯ ಪ್ರಭೆಯನ್ನು ವಿವೇಚಿಸಲು ಮುಂದಾಗಿದ್ದಾರೆ. ಕನ್ನಡದಲ್ಲಿ ಬಂದ ಬಸವಣ್ಣನವರ ವಚನಗಳ ವಿಮರ್ಶೆಯ ಈ ಲೇಖನಗಳು ವಿಭಿನ್ನ ದೃಷ್ಟಿಕೋನಗಳನ್ನು ಹಾಗೂ ಅವುಗಳ ಬಹುಮುಖ ಅರ್ಥ ಪ್ರಪಂಚವನ್ನು ವಿಷದಪಡಿಸುತ್ತವೆ"[೬೬] ಎಂದು ಸಂಪಾದಕೀಯದಲ್ಲಿ ಹೇಳಿರುವ ಮಾತುಗಳು ನೈಜವಾಗಿವೆ. ಸಾರಂಗ ಪ್ರಭೆಯು ಮಹೋನ್ನತ ಗ್ರಂಥವಾಗಿ, ಮೌಲಿಕ ಸಾಹಿತ್ಯವಾಗಿ, ವಚನ ಜಿಜ್ಞಾಸೆ ಕೃತಿಯಾಗಿ, ಗೌರವಾಭಿನಂದನೆ ಗ್ರಂಥವಾಗಿ ಗಮನವನ್ನು ಸೆಳೆಯುತ್ತದೆ. ಇದರ ಒಂದೇ ಒಂದು ಕೊರತೆ ಎಂದರೆ ಸಂಪಾದಕರ ಲೇಖನವೇ ಇಲ್ಲದಿರುವುದು. ಗೌರವ ಸಂಪಾದಕರ ಹಾಗೂ ಸಂಪಾದಕರ ಲೇಖನಗಳು ಇದರಲ್ಲಿ ಸಮಾವೇಶಗೊಂಡಿದ್ದರೆ ಕೃತಿಯ ವೈವಿಧ್ಯತೆ ಇನ್ನಷ್ಟು ಹೆಚ್ಚುತ್ತಿತ್ತು. ಹೀಗಿದ್ದಾಗ್ಯೂ ಸಾರಂಗ ಪ್ರಭೆಯ ಮಹತ್ವ ಕಡಿಮೆಯಾಗುವುದಿಲ್ಲ. ತಾವು ಹಿಂದೆ ನಿಂತು ಉಳಿದವರನ್ನು ಬೆಳಕಿಗೆ ತಂದು ಬಸವಣ್ಣನವರ ವಿಚಾರಧಾರೆಯನ್ನು ನಾಡಿನ ತುಂಬ ಬೆಳಗಿಸುವಂತೆ ಮಾಡಿರುವುದು ಡಾ. ಬಿ.ಆರ್. ಹಿರೇಮಠ ಅವರ ಸೌಜನ್ಯಶೀಲ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

**೪.೩.೨. ಬಸವಣ್ಣನವರ ವಚನಗಳ ಸಮಾಲೋಕನ:**

ಪ್ರಸ್ತುತ ವಚನಸಾಹಿತ್ಯ ಕುರಿತಾಗಿರುವ ಗ್ರಂಥವನ್ನು ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿದ್ದಾರೆ. ಸಿಂದಗಿಯ ಪೂಜ್ಯ ಶ್ರೀ ಪ್ರಭುಸಾರಂಗದೇವ ಶಿವಾಚಾರ್ಯ ದ್ವಾದಶ ಪಟ್ಟಾಧಿಕಾರ ಮಹೋತ್ಸವದ ನಿಮಿತ್ಯವಾಗಿ ಪ್ರಕಟವಾದ ಕೃತಿ ಇದು. ಡಾ. ಬಿ.ಆರ್. ಹಿರೇಮಠ ಅವರು ಪಾಂಡಿತ್ಯಪೂರ್ಣವಾಗಿ ಸಂಪಾದಿಸಿದ್ದಾರೆ. ಸಿಂದಗಿಯ ಸಾರಂಗ ಮಠದ ಶ್ರೀ ಚೆನ್ನವೀರ ಸ್ವಾಮೀಜಿ ಪ್ರತಿಷ್ಠಾನವು ಪ್ರಸ್ತುತ ಗ್ರಂಥವನ್ನು ಪ್ರಕಟಿಸಿದೆ. ಕ್ರಿ.ಶ. ೨೦೦೨ರಲ್ಲಿ ಪ್ರಕಟವಾದ ಕೃತಿಯು ೪೬೩ ಪುಟಗಳನ್ನು ಒಳಗೊಂಡಿದೆ. ಬಸವಣ್ಣನವರ ವಚನಗಳ ಸಮಾಲೋಕನವನ್ನು ಡಾ. ಹಿರೇಮಠ ಅವರು ಪ್ರಧಾನ ಸಂಪಾದರಕರಾಗಿಯೂ ಜಿ.ಎಮ್. ಹೆಗಡೆ ಮತ್ತು ವ್ಹಿ.ಡಿ. ವಸ್ತ್ರದ ಸಹ ಸಂಪಾದಕರಾಗಿಯೂ

ಸಂಪಾದಿಸಿ ಕೊಟ್ಟಿದ್ದಾರೆ. ಇದರಲ್ಲಿ ಡಾ. ಆರ್.ಸಿ. ಹಿರೇಮಠ ಅವರ ಬಸವಣ್ಣನವರ ವಚನಗಳಲ್ಲಿ ವಿಶ್ವ ಸಂದೇಶ, ಡಾ. ದೇ. ಜವರೇಗೌಡ ಇವರ ಆಧುನಿಕ ಸಮಸ್ಯೆಗಳಿಗೆ ಬಸವ ಸಂದೇಶದ ಪರಿಹಾರ, ಡಾ. ಎನ್. ಚಿದಾನಂದ ಮೂರ್ತಿಯವರ ಬಸವಣ್ಣನವರ ವಚನಗಳು, ಡಾ. ಚೆನ್ನವೀರ ಕಣವಿಯವರ ಬಸವಣ್ಣನವರ ವಚನಗಳಲ್ಲಿ ಸಾಹಿತ್ಯಿಕ ಮೌಲ್ಯ ಹಾಗೂ ಪ್ರೊ. ಕೀರ್ತಿನಾಥ ಕುರ್ತಕೋಟಿಯವರ ಬಸವಣ್ಣನವರ ವಚನಗಳ ಅಭಿವ್ಯಕ್ತಿ, ಡಾ. ಜಿ.ಎಸ್. ಶಿವರುದ್ರಪ್ಪನವರ ಬಸವಣ್ಣನವರು ಮತ್ತು ರಾಜತ್ವ, ಡಾ. ಸಿ.ಎನ್. ಹಿರೇಮಠರ ಬಸವಣ್ಣನವರ ವಚನಗಳಲ್ಲಿ ಮಾನವೀಯತೆ, ಸಿದ್ಧಯ್ಯ ಪುರಾಣಿಕ ಅವರು ಬಸವಣ್ಣನವರ ವಚನಗಳಲ್ಲಿ ದುರಂತ ಪ್ರಜ್ಞೆ - ಬದುಕುವ ಪ್ರತಿಜ್ಞೆ, ಡಾ. ವಿಜಯಾ ಸುಬ್ಬರಾವ ಅವರ ಬಸವಣ್ಣ ಮತ್ತು ಸ್ತ್ರೀ ಪರ ನಿಲುವುಗಳು, ಡಾ. ಡಿ. ಮಂಗಳ ಪ್ರಿಯದರ್ಶಿನಿ ಅವರ ಬಸವಣ್ಣನವರ ವಚನಗಳು ಹಾಗೂ ಸ್ತ್ರೀ ವಾದ, ಡಾ. ಸಾ.ಸಿ. ಮರುಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ, ಡಾ. ಪಿ.ವಿ. ನಾರಾಯಣ ಅವರ ಬಸವಣ್ಣವರ ವಚನಗಳಲ್ಲಿ ಸ್ಥಾವರ - ಜಂಗಮ ಪರಿಕಲ್ಪನೆ, ಪ್ರೊ. ಆರ್. ರಾಚಪ್ಪನವರ ಬಸವಣ್ಣನವರ ದೃಷ್ಟಿಯಲ್ಲಿ ಬೇಕು - ಬೇಡಗಳು, ಬಿ.ಜಿ.ಎಲ್. ಸ್ವಾಮಿಯವರ ಬಸವಣ್ಣನವರ ಸಸ್ಯಸಂಬಂಧವಾದ ಸೂಕ್ತಿಗಳು, ಡಾ. ವೀರಣ್ಣ ದಂಡೆಯವರ ಬಸವಣ್ಣನವರ ಜಾನಪದ ಪ್ರಜ್ಞೆ, ಡಾ. ಬಸವರಾಜ ಸಬರದ ಅವರ ಬಸವಣ್ಣನವರ ವಚನಗಳಲ್ಲಿ ದಲಿತ ಬಂಡಾಯ ಪ್ರಜ್ಞೆ, ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ಬಸವಣ್ಣನವರ ವಚನಗಳಲ್ಲಿ ತತ್ವದರ್ಶನ, ಡಾ. ತಾಳ್ತಜೆ ವಸಂತಕುಮಾರ ಅವರ ಬಸವಣ್ಣನವರ ವಚನಗಳಲ್ಲಿ ಆತ್ಮಶೋಧನೆ, ಡಾ. ಬಿ.ವ್ಹಿ. ಮಲ್ಲಾಪೂರ ಅವರ ಬಸವಣ್ಣನವರ ವಚನಗಳಲ್ಲಿ ಪರಮಾತ್ಮನ ಪರಿಕಲ್ಪನೆ, ಡಾ. ಎಂ.ಎಂ.ಕಲಬುರ್ಗಿಯವರ ಬಸವಣ್ಣನವರ ೯ ವಚನಗಳು, ಓ.ಎಲ್. ನಾಗಭೂಷಣಸ್ವಾಮಿಯವರ ಬಸವಣ್ಣನವರ ೨ ವಚನಗಳು : ಹೊಳೆದ ಅರ್ಥ, ಬಿ.ಎ. ಸನದಿ ಅವರ ಬಸವಣ್ಣನವರ ಇಲ್ಲಿ ಸಲ್ಲುವವರು ವಿವೇಚನೆ, ಡಾ. ಎಸ್.ಆರ್. ಸಿದ್ಧಲಿಂಗಪ್ಪನವರ ಬಸವಣ್ಣನವರ ಒಂದು ವಚನ ವಿವೇಚನೆ, ಪ್ರೊ. ಎಂ. ವ್ಹಿ. ಗಣಾಚಾರಿಯವರ ವಚನದಲ್ಲಿ ನಾಮಾಮೃತ ತುಂಬಿ ವಿನ್ಯಾಸ ವಿಶ್ಲೇಷಣೆ, ಅ.ರಾ. ಮಿತ್ರ ಅವರ ಬಸವಣ್ಣನವರ ಐದು ವಚನಗಳ ವಿಮರ್ಶೆ, ಡಾ. ಬಸವರಾಜ ಜಗಜಂಪಿಯವರ ಬಲ್ಲಿದರೊಡನೆ ಬವರವಾದಡೆ ಗೆಲುವುಂಟು, ಸೋಲುಂಟು : ಒಂದು ವಿವೇಚನೆ, ಡಾ. ಗಿರಡ್ಡಿ ಗೋವಿಂದರಾಜ ಅವರ ಬಸವಣ್ಣನವರ ವಚನಗಳು ರಾಚನಿಕ ವಿನ್ಯಾಸ, ಡಾ. ಸಂಗಮೇಶ ಸೌದತ್ತಿಮಠ ಅವರ ಬಸವಣ್ಣನವರ ವಚನಗಳಲ್ಲಿ ಭಾಷಾ ಪ್ರಯೋಗ, ಡಾ. ಎ, ಮುರಗೆಪ್ಪ ಅವರ ಬಸವಣ್ಣನವರ ವಚನಗಳಲ್ಲಿ ಭಾಷಾ ಪ್ರಯೋಗ. ಡಾ. ಕೆ. ಕೃಷ್ಣಮೂರ್ತಿಯವರ ಬಸವಣ್ಣನವರ ವಚನಗಳಲ್ಲಿ ರಸತತ್ವ, ಡಾ. ಎಸ್. ವಿದ್ಯಾಶಂಕರ ಅವರ ಬಸವಣ್ಣನವರ ಉಪಮಾಲೋಕ, ಡಾ. ಎಸ್.ವ್ಹಿ. ಪರಮೇಶ್ವರಭಟ್ ಅವರ ಬಸವಣ್ಣನವರ ವಚನಗಳಲ್ಲಿ ರೂಪ ಅಂಶ, ಪ್ರೊ. ಸಜನಾ

ಅವರ ಬಸವಣ್ಣನವರ ವಚನಗಳಲ್ಲಿ ಪ್ರಾಣಿ ರೂಪಕ, ಕೊನೆಗೆ ಡಾ. ಸಿ.ವಿ. ಪ್ರಭುಸ್ವಾಮಿ ಮಠ ಅವರ ಬಸವಣ್ಣನವರ ವಚನಗಳ ರಚನೆಯ ಒಳ ರೂಪಿಕೆಗಳು ಇವೆ. ಮೊದಲಾದ ಮೂವತ್ತೆರಡು ಅಮೂಲ್ಯ ಲೇಖನಗಳು ಈ ಗ್ರಂಥದಲ್ಲಿವೆ. ಈ ಗ್ರಂಥದಲ್ಲಿ ಬಸವಣ್ಣನವರ ವಚನಗಳ ವಿವೇಚನೆಯಾಗಿದ್ದು ನಾಡಿನ ಸುಪ್ರಸಿದ್ಧ ವಿದ್ವಾಂಸರು ಬಸವಣ್ಣನವರ ವಚನಗಳನ್ನು ಹಲವು ನಿಟ್ಟಿನಿಂದ ಅಧ್ಯಯನ ಮಾಡಿದ್ದಾರೆ. "ಬಸವಣ್ಣನವರ ವಚನಗಳ ದರ್ಶನ ಅನ್ನೈಕ ವಿಮರ್ಶೆ ವಿಚಾರಗಳು ಇದರಲ್ಲಿ ಇವೆ. ಭಾಷಾ ಪ್ರಯೋಗ, ರಸತತ್ವ, ಉಪಮೆ, ರೂಪಕ, ಒಳ ರೂಪಿಕೆಗಳ ದರ್ಶನವೂ ಇಲ್ಲಿ ಸಾಧ್ಯವಾಗಿದೆ. ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯ ಭಾಷೆ, ಅಭಿವ್ಯಕ್ತಿ ವಿಧಾನಗಳ ವಿವಿಧ ಮುಖಗಳ ಚಿಂತನಾಧಾರೆ ಇಲ್ಲಿದೆ."೬೭ ಈ ಮಾತುಗಳು ಪ್ರಸ್ತುತ ಪುಸ್ತಕದ ಆಶಯವನ್ನು ನಿವೇದಿಸುತ್ತವೆ. ಇದೊಂದು ತುಂಬಾ ಮೌಲಿಕವಾದ ಸಂಪಾದನೆಯಾಗಿದೆ. ಸಾರಂಗಪ್ರಭೆಯಲ್ಲಿ ಈಗಾಗಲೇ ಪ್ರಕಟವಾಗಿದ್ದು ಪ್ರಥಮ ಭಾಗವಾದ ಪೂಜ್ಯ ಶ್ರೀ ಪ್ರಭು ಸಾರಂಗದೇವ ಶಿವಾಚಾರ್ಯರ ವ್ಯಕ್ತಿತ್ವ ಸಾಧನೆ ಮತ್ತು ಶ್ರೀ ಮಠದ ಪರಂಪರೆ ಈ ವಿಷಯವಾಗಿ ರಚನೆಗೊಂಡಿರುವ ೯ ಲೇಖನಗಳನ್ನುಳಿದು ೨ ನೇ ಭಾಗದ ಮೂವತ್ತೆರಡು ಲೇಖನಗಳು ಇಡಿಯಾಗಿ ಇಲ್ಲಿವೆ. ಸಾರಂಗ ಪ್ರಭೆಯು ಎರಡನೆಯ ಭಾಗದ ಉಪಶೀರ್ಷಿಕೆ ಇಲ್ಲಿ ಪ್ರಸ್ತುತ ಪುಸ್ತಕದ ತಲೆಬರಹವಾಗಿದೆ. ಕೃತಿ ಸಂಖ್ಯೆ ಹೆಚ್ಚಳಗೊಂಡಿರುವುದುನ್ನು ಬಿಟ್ಟರೆ ಅತಿ ಮಹತ್ತರವಾದ ಸಾಧನೆ ಇದರಿಂದ ಆಗಿಲ್ಲ.

**೪.೩.೩. : ವಚನ ಸಂಕಲನ ಸಂಪುಟ ೪ :**

ಪ್ರಸ್ತುತ ವಚನ ಸಂಕಲನ ಸಂಪುಟವು ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯ ಶ್ರೀ ಜಗದ್ಗುರು ತೋಂಟರಾದ್ಯ ಸಂಸ್ಥಾನಮಠದಿಂದ ಪ್ರಕಟಿತವಾಗಿದೆ. ಇದು ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಗ್ರಂಥ ಪ್ರಕಟಣಾ ಮಾಲೆಯ ೪೩ನೆಯ ಕೃತಿಯಾಗಿ ಹೊರಬಂದಿದೆ. ಇದು ೧೯೯೨ರಲ್ಲಿ ಪ್ರಥಮ ಮುದ್ರಣವಾಗಿದ್ದು ೧೯೭ ಪುಟಗಳನ್ನು ಒಳಗೊಂಡಿದೆ. ಈ ವಚನ ಸಂಕಲನ ಸಂಪುಟವನ್ನು ಡಾ.ಎಂ.ಎಂ. ಕಲಬುರ್ಗಿ, ಡಾ. ಬಿ.ಆರ್. ಹಿರೇಮಠ, ಡಾ. ಎಸ್. ಶಿವಣ್ಣನವರ ವಿದ್ವತ್ಪೂರ್ಣವಾಗಿ ಸಂಪಾದಿಸಿದ್ದಾರೆ. ಪ್ರಕಾಶಕರ ನುಡಿಯಲ್ಲಿ ಗದುಗಿನ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಆಶಯವಿದೆ. "ಇತ್ತೀಚಿನ ದಿನಗಳಲ್ಲಿ ಪ್ರಾಚೀನ ಸಾಹಿತ್ಯದ ಬಗೆಗೆ ಅದರಲ್ಲಿಯೂ ಅಪ್ರಕಟಿತ ಪ್ರಾಚೀನ ಸಾಹಿತ್ಯದ ಬಗೆಗೆ ಉಪೇಕ್ಷೆ ಬೆಳೆಯುತ್ತಲಿದೆ. ನಮ್ಮ ಹಿರಿಯರು ಜನ ಬದುಕಬೇಕೆಂದು ಬಯಸಿ ಬರೆದಿಟ್ಟಿರುವ ಈ ಎಲ್ಲ ಕೃತಿಗಳನ್ನು ಸಾಧ್ಯವಿದ್ದ ಮಟ್ಟಿಗಾದರೂ ಉಳಿಸಿಕೊಳ್ಳುವುದು ಅವರ ಉತ್ತರಾಧಿಕಾರಿಗಳಾದ ನಮ್ಮ ಕರ್ತವ್ಯವಾಗಿದೆ. ಈ ಕರ್ತವ್ಯ ಪ್ರಭೆಯ ಸಾಕಾರರೂಪ ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ. ಪ್ರಕಟಣಾ ಯೋಜನೆ ಬಹಳ ಜನರಿಗೆ ಪ್ರಾಚೀನ ಶ್ರೇಷ್ಠ ಕೃತಿಗಳು ಮಾತ್ರ ಪ್ರಕಟವಾಗಬೇಕೆಂಬ ಭಾವನೆ ಇದೆ. ಆದರೆ ಪ್ರತಿಯೊಂದು ಕೃತಿಗೆ

ತನ್ನದೇ ಆದ ಬೆಲೆ ಇರುವುದರಿಂದ ಎಲ್ಲ ಗ್ರಂಥಗಳನ್ನು ಪ್ರಕಟಿಸುವುದೇ ಯೋಗ್ಯ ಉಪಕ್ರಮ ಹೊಸಗನ್ನಡದ ನವೋದಯ ಕಾಲದಲ್ಲಿ ಸಾಹಿತ್ಯವನ್ನು ಸೌಂದರ್ಯ ದೃಷ್ಟಿಯಿಂದ ನೋಡುವ ದೃಷ್ಟಿ ಬೆಳೆದು ಅದರ ಉಳಿದ ಮುಖಗಳಾದ ಸಂಸ್ಕೃತಿ, ಭಾಷೆ, ಛಂದಸ್ಸು, ಸಮಾಜ, ಜಾನಪದ ಇತ್ಯಾದಿಗಳು ತೀರ ಅಲಕ್ಷಿತವಾಗಿವೆ. ಇದನ್ನು ಮನದಂದು ಈ ಯೋಜನೆ ಸಮಸ್ತ ಕೃತಿಗಳನ್ನು ಪ್ರಕಟಿಸಲು ಮುಂದೆ ಬಂದಿದೆ."[೬೮] ಈ ಮಾತುಗಳಲ್ಲಿ ಪ್ರಕಾಶನ ಸಂಸ್ಥೆಯ ಆಶಯ ಹೆಪ್ಪುಗಟ್ಟಿದೆ. ಈ ಕೃತಿಯ ಪ್ರಸ್ತಾವನೆಯನ್ನು ಡಾ. ಎಂ.ಎಂ. ಕಲಬುರ್ಗಿಯವರು ಬರೆದಿದ್ದಾರೆ. ಇದರಲ್ಲಿ ಮಿಶ್ರ ಷಟಸ್ಥಲ ವಚನದ ಕುರಿತಾಗಿ ಸುದೀರ್ಘವಾಗಿ ವಿವರಿಸಿದ್ದಾರೆ. ಪ್ರಸ್ತುತ ಕೃತಿಯ ಮಿಶ್ರ ಷಟಸ್ಥಲ ವಚನ ಸಂಕಲನಕ್ಕೆ ಸೇರಿದೆ ಎಂದು ವಿವರಿಸುತ್ತ - "ವ್ಯಕ್ತಿ ಕಲ್ಯಾಣ, ಸಮಾಜ ಕಲ್ಯಾಣವು ಸಮಸಮವಾಗಿ ಸಾಗಬೇಕಾದುದು ಪರಿಪೂರ್ಣ ಸಮಾಜದ ಲಕ್ಷಣ ಇವುಗಳಲ್ಲಿ 'ವೀರಶೈವ ಜಂಗಮ' ದಾಸೋಹ ಸಮಾಜಕಲ್ಯಾಣದ ಸಾಧನೆಯಾಗಿದೆ. ಲಿಂಗಪೂಜೆ ವ್ಯಕ್ತಿ ಕಲ್ಯಾಣದ ಸಾಧನೆಯಾಗಿದೆ. ಈ ಲಿಂಗ ಪೂಜಾ ಮಾಧ್ಯಮದಿಂದ ವ್ಯಕ್ತಿಯ ಆರು ಹಂತಗಳಲ್ಲಿ ತನ್ನನ್ನು ಉನ್ನತೀಕರಿಸಿಕೊಂಡು ಶುದ್ಧನಾಗುತ್ತಾನೆ. ಈ ಆರು ಹಂತಗಳನ್ನೇ ವೀರಶೈವದಲ್ಲಿ ಷಟ್‌ಸ್ಥಲವೆಂದು ಕರೆಯುತ್ತಾರೆ. ಈ ಷಟ್‌ಸ್ಥಲವನ್ನು ಅನುಸಂಧಾನ ಮತ್ತು ಅನುಸರಣೆ ಹೀಗೆ ಎರಡೂ ದೃಷ್ಟಿಯಿಂದ ವೀರಶೈವರಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಒಂದನ್ನು ಆಚರಣೆಯ ಸ್ಥಲಕ್ರಮವೆಂದು ಇನ್ನೊಂದನ್ನು ಅನುಭಾವ ಸ್ಥಲ ಕ್ರಮವೆಂದು ಕರೆಯುತ್ತಾರೆ."[೬೯] ಹೀಗೆ ಷಟ್‌ಸ್ಥಲದ ವಿವರಣೆ ನೀಡುತ್ತಾ ಮುಂದೆ ಆರೂ ಸ್ಥಲಗಳ ಕುರಿತಾಗಿ ವಿವರವಾಗಿ ಬರೆದಿದ್ದಾರೆ. ಪರಿಷ್ಕರಣ ಕಾರ್ಯದ ಕುರಿತಾಗಿಯೂ ಸಾಕಷ್ಟು ಚರ್ಚಿಸಿದ್ದಾರೆ. ಡಾ. ಎಂ.ಎಂ. ಕಲಬುರ್ಗಿಯವರ ಪ್ರಸ್ತಾವನೆಯು ಅಮೂಲ್ಯವಾದ ಬರಹವಾಗಿದೆ.

ಡಾ. ಬಿ.ಆರ್. ಹಿರೇಮಠರು ಈ ಕೃತಿಯ ಮತ್ತೋರ್ವ ಸಂಪಾದಕರು. ವಚನ ಸಂಕಲನ ಸಂಪುಟದಲ್ಲಿ ಶ್ರೀಯುತರು ಟೀಕಿನ ಏಕೋತ್ತರ ಶತಸ್ಥಲದ ಕುರಿತಾಗಿ ವಿವರಿಸಿದ್ದಾರೆ. ಇದರಲ್ಲಿ ಏಕೋತ್ತರ ಶತಸ್ಥಲದ ಕುರಿತಾಗಿ ಐತಿಹಾಸಿಕ ಅಂಶಗಳನ್ನು ದಾಖಲಿಸಿದ್ದಾರೆ. "ಮಹಾಲಿಂಗದೇವನ 'ಏಕೋತ್ತರ ಶತಸ್ಥಲ'ದ ತರುವಾಯ ಜಕ್ಕಣಾರ್ಯನ 'ಏಕೋತ್ತರ ಶತಸ್ಥಲ' (ಸ್ವರ ವಚನ) ಸಿದ್ಧಲಿಂಗೇಶ್ವರನ 'ಏಕೋತ್ತರ ಶತಸ್ಥಲ' (ಸ್ವರವಚನ, ವಚನ, ವೃತ್ತ) ಎಂಬ ಸಂಕಲನ ಕೃತಿಗಳು ಹೊರಬಂದವು. ಇದಲ್ಲದೆ ಮಗ್ಗೆಯ ಮಾಯಿದೇವರ ಪಥ್ಯೆಕೋತ್ತರ ಶತಸ್ಥಲ(ಷಟ್ಪದಿ) ಇಮ್ಮಡಿ ಮುರಗಾಸಿದ್ಧ ಶಿವಯೋಗಿಯ ಕೈವಲ್ಯ ಸೋಪಾನ ನಾಮೈಕೋತ್ತರ ಶತಸ್ಥಲ (ಷಟ್ಪದಿ) ವೆಂಬ ಸ್ವತಂತ್ರ ಕೃತಿಗಳೂ ರಚನೆಗೊಂಡಿರುತ್ತವೆ. ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣ, ವಿರಕ್ತ ತೋಂಟದಾರ್ಯರ ಸಿದ್ದೇಶ್ವರ ಪುರಾಣ, ಸಿದ್ಧನಂಜೇಶನ ಗುರುರಾಜ ಚಾರಿತ್ರ ಮೊದಲಾದ - ವೀರಶೈವ ಕೃತಿಗಳಲ್ಲಿಯೂ 'ನೂರೊಂದು ಸ್ಥಲಗಳನ್ನು ಕುರಿತು ನಿರೂಪಿಸಲಾಗಿದೆ. ಜೊತೆಗೆ ಜಕ್ಕಣಾರ್ಯನ ಏಕೋತ್ತರ ಶತಸ್ಥಲ (ವ್ಯಾಖ್ಯಾನ : ಗಿರೀಂದ್ರ) ಹಾಗೂ ಸಿದ್ಧಲಿಂಗನ ಏಕೋತ್ತರ ಶತಸ್ಥಲ ಕೃತಿಗಳಿಗೆ

ವ್ಯಾಖ್ಯಾನಗಳೂ ಬರೆಯಲ್ಪಟ್ಟಿರುತ್ತವೆ. ಹೀಗೆ 'ಏಕೋತ್ತರ ಶತಸ್ಥಲ'ವನ್ನು ವಚನ, ಸ್ವರವಚನ, ಷಟ್ಪದಿ ವ್ಯಾಖ್ಯಾನಗಳ ಮೂಲಕ ಪ್ರತಿಪಾದಿಸುತ್ತ ಬಂದ ವಿಷಯ ವಿದಿತವಾಗುತ್ತದೆ."[೨೦] ಇಲ್ಲಿ ಏಕೋತ್ತರ ಶತಸ್ಥಲದ ವಿವರವನ್ನು ಕಟ್ಟಿಕೊಟ್ಟಿದ್ದಾರೆ. ಅದಲ್ಲದೆ ಶೂನ್ಯ ಸಂಪಾದನೆಯ ಕುರಿತಾಗಿಯೇ ಚರ್ಚಿಸಿದ್ದಾರೆ. ಶೂನ್ಯ ಸಂಪಾದನೆಯಂತೆ ಏಕೋತ್ತರ ಶತಸ್ಥಲಗಳಿಗೂ ಸಂಗ್ರಹ ಕೃತಿಗಳು ಹುಟ್ಟಿಕೊಂಡಿರುವುದನ್ನು ಪ್ರತಿಪಾದಿಸಿದ್ದಾರೆ. ಶೂನ್ಯ ಸಂಪಾದನೆ ಹಾಗೂ ಏಕೋತ್ತರ ಶತಸ್ಥಲ ಕೃತಿಗಳಿಗೆ ಹದಿನೈದನೆಯ ಶತಮಾನದ ತರುವಾಯವೇ ಸಂಗ್ರಹ ಕೃತಿಗಳು ಹುಟ್ಟಿಕೊಂಡಿರುವುದು ಗೊತ್ತಾಗುತ್ತದೆ. "ಇಂತಹ ವಚನ ಸಂಗ್ರಹ ಕೃತಿಗಳು ವ್ಯಾಖ್ಯಾನಗಳಿಂದ ಕೂಡಿರುವುದು ಅವುಗಳ ವೈಶಿಷ್ಟ್ಯ ಹಾಗೂ ಅಂದಿನ ಅಗತ್ಯದ ದ್ಯೋತಕವೆನಿಸುತ್ತದೆ."[೨೧] ಡಾ. ಬಿ.ಆರ್. ಅವರು ಕೊನೆಯಲ್ಲಿ ಪ್ರಸ್ತುತ ಕೃತಿಗೆ ಬಳಸಿದ ಹಸ್ತಪ್ರತಿ ಭಾಂಡಾರ, ಕಾಗದ ಪ್ರತಿ ಸಂಖ್ಯೆ ಮುಂತಾದವುಗಳನ್ನು ವಿವರಿಸಿ ಪರಿಷ್ಕರಣ ಕಾರ್ಯದ ಬಗ್ಗೆ ಸಮಗ್ರ ಮಾಹಿತಿ ಒದಗಿಸಿದ್ದಾರೆ.

ಪ್ರಸ್ತುತ ಕೃತಿಯ ಇನ್ನೋರ್ವ ಸಂಪಾದಕರಾದ ಎಸ್. ಶಿವಣ್ಣ ಅವರು 'ಸಕಲ ಪುರಾತನರ ವಚನ'ದ ಕುರಿತಾಗಿ ವಿವರಿಸಿದ್ದಾರೆ. "ಸಕಲ ಪುರಾತನರ ವಚನ ಹೆಸರಿನ ಈ ಕೃತಿ ವಚನ ಸಂಕಲನ ಪ್ರಕಾರಕ್ಕೆ ಸಂಬಂಧಿಸಿದೆ. ಇದರಲ್ಲಿ ೭೯ ವಚನಕಾರ- ವಚನಕಾರ್ತಿಯರ ೧೪೫ ವಚನಗಳು ಮತ್ತೂ ಒಂದು ಸ್ವರ ವಚನವಿದೆ. ಈ ಸಂಕಲನದಲ್ಲಿ ಪ್ರಾಚೀನವಾದವು ಜೇಡರ ದಾಸಿಮಯ್ಯನ ವಚನಗಳು ಉಳಿದವುಗಳೆಲ್ಲ ತೋಂಟದ ಸಿದ್ಧಲಿಂಗನ ವಚನಗಳನ್ನು ಬಿಟ್ಟರೆ ಮಿಕ್ಕವೆಲ್ಲ ಬಸವಾದಿಗಳ ಸಮಕಾಲೀನ ವಚನಕಾರರ ವಚನಗಳಾಗಿದ್ದು ಇವರಲ್ಲಿ ಮೂವರು ಶಿವ ಶರಣೆಯರಿದ್ದಾರೆ."[೨೨] ಈ ಮಾತುಗಳು ಸಕಲಪುರಾತನರ ವಚನಗಳ ಮಾಹಿತಿಯನ್ನು ನೀಡುತ್ತವೆ.

ಪ್ರಸ್ತುತ ಕೃತಿಯಲ್ಲಿ ಮುಖ್ಯವಾಗಿ ಮೂರು ವಿಭಾಗಗಳಿವೆ. ೧) ಮಿಶ್ರ ಷಟ್‌ಸ್ಥಲ ವಚನಗಳು ೨) ಟೀಕಿನ ಏಕೋತ್ತರ ಸ್ಥಲದ ವಚನಗಳು ೩) ಸಕಲ ಪುರಾತನರ ವಚನಗಳು. ಇವುಗಳ ಕುರಿತಾಗಿ ಮೂವರು ಸಂಪಾದಕರು ಅನುಕ್ರಮವಾಗಿ ಒಂದೊಂದರ ಕುರಿತಾಗಿ ಪ್ರಸ್ತಾವನೆ ಬರೆದಿದ್ದಾರೆ. ಸಾಮಾನ್ಯವಾಗಿ ಕೃತಿಯೊಂದನ್ನು ಸಂಯುಕ್ತವಾಗಿ ಸಂಪಾದಿಸುವಾಗ ಎಲ್ಲರ ಪರವಾಗಿ ಒಂದೇ ಸಂಪಾದನೆ ಇರುತ್ತದೆ. ಅಥವಾ ಒಬ್ಬರೇ ಬರೆದಿರುವ ಸಮಗ್ರವಾದ ಪ್ರಸ್ತಾವನೆ ಇರುತ್ತದೆ. ಆದರೆ ಇಲ್ಲಿ ಮೂವರು ಸಂಪಾದಕರು ತಲಾ ಒಂದೊಂದು ವಿಷಯಗಳನ್ನು ಇಟ್ಟುಕೊಂಡು ಗ್ರಂಥ ಸಂಪಾದಿಸಿರುವುದು. ಅವುಗಳಿಗೆ ಸಂಬಂಧಿಸಿದ ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಬರೆದಿರುವುದು ವಚನ ಸಂಕಲನ ಸಂಪುಟದ ವೈಶಿಷ್ಟ್ಯವಾಗಿದೆ. ಪ್ರಸ್ತಾವನೆಯ ಶೀರ್ಷಿಕೆಯಡಿಯಲ್ಲಿ ಮೂರು ಸಂಪಾದಕರು ತಮ್ಮ ತಮ್ಮ ವಿಷಯದ ಸ್ಪಷ್ಟೀಕರಣ ನೀಡುತ್ತ ವಿಷಯದ ಮಹತ್ವ ಗ್ರಂಥ ಸಂಪಾದನೆಗೆ ಬಳಸಿದ ಹಸ್ತಪ್ರತಿ ಭಾಂಡಾರ, ಹಸ್ತಪ್ರತಿಯ ಸಂಖ್ಯೆ, ಪರಿಷ್ಕರಣ ಕಾರ್ಯ ಮುಂತಾದ ಗ್ರಂಥ ಸಂಪಾದನೆಗೆ ಸಂಬಂಧಿಸಿದ ಶಾಸ್ತ್ರೀಯ ಸಂಗತಿಗಳನ್ನು ಸೂಕ್ತವಾಗಿ ಚರ್ಚೆಗೊಳಪಡಿಸಿದ್ದಾರೆ.

ಪ್ರಸ್ತುತ ಕೃತಿಗೆ ಅನುಬಂಧವಿದ್ದು, ಅನುಬಂಧ ಒಂದರಲ್ಲಿ ವಚನಗಳ ಅರಾಕಾದಿಯನ್ನು ನೀಡಲಾಗಿದೆ. ಮಿಶ್ರ ಷಟ್‌ಸ್ಥಲದ ವಚನ ಟೀಕಿನ ಏಕೋತ್ತರ ವಚನ ಷಟ್‌ಸ್ಥಲದ ವಚನಗಳು, ಸಕಲ ಪುರಾತನರ ವಚನಗಳು, ಇವುಗಳನ್ನು ಅನುಕ್ರಮವಾಗಿ ವಚನಗಳ ಅಕಾರಾದಿ ವಚನ ಸಂಖ್ಯೆಯನ್ನು ದಾಖಲಿಗೊಳಿಸಿದ್ದಾರೆ. ಅನುಬಂಧ ಎರಡರಲ್ಲಿ ವಚನಾಂಕಿತ, ವಚನಕಾರರು, ವಚನಗಳ ಸಂಖ್ಯೆಯನ್ನೇ ನೀಡಿದ್ದಾರೆ. ಪ್ರಸ್ತುತ ಕೃತಿಗೆ ಕಠಿಣ ಪದಗಳ ಅರ್ಥಕೋಶವನ್ನು ಕೊನೆಯಲ್ಲಿ ನೀಡಿದರೆ ಅರ್ಥಪೂರ್ಣವಾಗುತ್ತಿತ್ತು. ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ದಿಗ್ಗಜರೆನಿಸಿದ ಈ ಮೂವರು ಕಠಿಣ ಪದಕೋಶ ನೀಡದೆ ಇರುವುದು ಸೋಜಿಗವನ್ನುಂಟು ಮಾಡುತ್ತದೆ. ಹೀಗಿದ್ದಾಗ್ಯೂ ತುಂಬಾ ಮೌಲಿಕವಾದ ಗ್ರಂಥವನ್ನು ಸಂಪಾದಿಸಿ ಅರ್ಥಪೂರ್ಣವಾದ ಪ್ರಸ್ತಾವನೆಯನ್ನು ಬರೆದು ಸಾರಸ್ವತ ಲೋಕದ ಗಮನ ಸೆಳೆದಿದ್ದಾರೆ. ಪ್ರಸ್ತಾವನೆಯು ಓದುಗರಿಗೆ ಪ್ರಶಸ್ತವಾದ ಪ್ರವೇಶಿಕೆಯನ್ನು ಒದಗಿಸುತ್ತದೆ. ಗಂಭೀರವಾಗಿ ಅಧ್ಯಯನ ಕೈಕೊಳ್ಳುವವರಿಗೆ ಈ ಕೃತಿಯು ಸೂಕ್ತವಾದ ಮಾರ್ಗದರ್ಶನ ನೀಡುತ್ತದೆ. ಸಂಯುಕ್ತ ಸಂಪಾದನೆಗೆ ಇದೊಂದು ಉತ್ತಮ ಉದಾಹರಣೆಯಾಗಿದೆ.

**೪.೪.೦ ಶರಣ ಸಾಹಿತ್ಯ :**

ಡಾ. ಬಿ.ಆರ್. ಹಿರೇಮಠ ಅವರು ಶರಣಸಾಹಿತ್ಯ ಕೃತಿಗಳನ್ನು ಇತರರೊಂದಿಗೆ ಸಂಪಾದಿಸಿಕೊಟ್ಟಿದ್ದಾರೆ.

**೪.೪.೧ : ತೋಂಟದ ಸಿದ್ಧೇಶ್ವರ ಭಾವರತ್ನಾಭರಣ ಸ್ತೋತ್ರ :**

ಪ್ರಸ್ತುತ ಕೃತಿಯ ಕವಿ ಸಿದ್ಧನಂಜೇಶನು ರಚಿಸಿದ 'ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ ಸ್ತೋತ್ರ'ವನ್ನು ಡಾ. ಎಂ.ಎಂ. ಕಲಬುರ್ಗಿ ಹಾಗೂ ಪ್ರೊ. ಬಿ.ಆರ್. ಹಿರೇಮಠ ಅವರು ಸಂಯುಕ್ತವಾಗಿ ಸಂಪಾದಿಸಿದ್ದಾರೆ. ಇದನ್ನು ಗದುಗಿನ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಪ್ರಕಟಿಸಿದೆ. ಪ್ರಸ್ತುತ ಗ್ರಂಥವು ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆಯ ಮೂರನೆಯ ಕೃತಿಯಾಗಿ ೧೯೭೭ರಲ್ಲಿ ಪ್ರಕಟಿತವಾಗಿದೆ. ಪ್ರಸ್ತುತ ಕೃತಿಯನ್ನು ಶ್ರೀ ಮದನಾದಿ ನಿರಂಜನ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ದಿವ್ಯ ಪಾದಾರವಿಂದಗಳಲ್ಲಿ ಸಮರ್ಪಿಸಲಾಗಿದೆ. "ತೋಂಟದ ಸಿದ್ಧಲಿಂಗ ಯತಿಗಳ ಪ್ರಭಾವಲಯದಲ್ಲಿ ಬೆಳಗುವ ಸಾಹಿತ್ಯ ಜ್ಯೋತಿಗಳು ಅನಂತ ಜಾಗತಿಕ ತತ್ವ ಮಹಾಂತವೆನಿಸಿದ ಪ್ಲೇಟೋನ ಸಂಭಾಷಣೆಗೂ ಮಿಗಿಲೆನಿಸುವ "ಶೂನ್ಯ ಸಂಪಾದನೆ" ಶಿಲ್ಪದ ಮಹಾರೂವಾರಿಗಳಾದ ಹಲಗೆ ಆರ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯ, ವಚನ ಸಂಕಲನಕಾರರೆಂದು ಪ್ರಸಿದ್ಧರಾದ ಸಂಪಾದನೆಯ ಚೆನ್ನಂಜೆದೇವ,

ಸಂಪಾದನೆಯ ಸಿದ್ಧವೀರಣ್ಣಾರ್ಯ, ಸಂಪಾದನೆಯ ಗುರು ಶಾಂತದೇವ, ಸ್ವತಂತ್ರ ವಚನಕಾರರಾಗಿ ಖ್ಯಾತಿವೆತ್ತ ಸ್ವತಂತ್ರ ಸಿದ್ಧಲಿಂಗ ಘನಲಿಂಗಿದೇವ, ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜ, ವಚನಗಳ ಟೀಕಾಕಾರನಾದ ಸೋಮಶೇಖರ ಶಿವಯೋಗಿ, ಶ್ರೇಷ್ಠ ಪುರಾಣಗಳನ್ನುರಚಿಸಿದ ಗುಬ್ಬಿಯ ಮಲ್ಲಣಾರ್ಯ, ಮಲ್ಲಿಕಾರ್ಜುನ, ಚೇರಮಾಂಕ, ಸಂಪಾದನೆಯ ಪರ್ವತೇಶ ಹೀಗೆ ನೂರಾರು ಕವಿಗಳ, ಸಾವಿರಾರು ಸಾಹಿತ್ಯ ಕೃತಿಗಳ ನಿರ್ಮಾಣಕ್ಕೆ ಕಾರಣರಾದವರು ತೋಂಟದ ಸಿದ್ಧಲಿಂಗ ಯತಿಗಳು. ಹೀಗಾಗಿ ಸಾಹಿತ್ಯ ಕೃತಿಗಳನ್ನು ಸಂಗ್ರಹಿಸುವುದು, ಶೋಧಿಸುವುದು. ಪ್ರಕಟಿಸುವುದು, ಪ್ರಚುರಿಸುವುದು ತೋಂಟದ ಸಿದ್ಧಲಿಂಗ ಪರಂಪರೆಯ ಕರ್ತವ್ಯವಾಗಿದೆ."[೨೩] ಈ ಮಾತುಗಳು ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯ ಪ್ರಕಾಶನದ ಧ್ಯೇಯೋದ್ದೇಶವನ್ನು ವಿವರಿಸುತ್ತದೆ.

ವೀರಶೈವ ಕವಿಗಳಲ್ಲಿ ಚಿಕ್ಕನಂಜೇಶ ಅಥವಾ ಸಿದ್ಧನಂಜೇಶ ಎಂದು ಎದ್ದು ಕಾಣುವ ಹೆಸರು. ಹೂಲಿಯ ಸಿದ್ಧನಂಜೇಶನ ಶಿಷ್ಯನಾಗಿದ್ದ ಕಾಲದಲ್ಲಿ ಚಿಕ್ಕನಂಜೇಶನೆಂಬ ಹೆಸರು, ನಂದ್ಯಾಲ ಪುರದ ಮಠಾಧಿಪತಿಯಾಗಿದ್ದ ಕಾಲದಲ್ಲಿ ಸಿದ್ಧನಂಜೇಶನೆಂಬ ಹೆಸರು ಈತನಿಗಿರುವುದು ತಿಳಿಯುತ್ತದೆ. ಹೀಗಾಗಿ ಈ ಕವಿಯು ತನ್ನ ಆಯುಷ್ಯದ ಪೂರ್ವಾರ್ಧವನ್ನು ಹೂಲಿಯಲ್ಲಿಯೂ ಹಾಗೂ ಉತ್ತರಾರ್ಧವನ್ನು ಶ್ರೀಶೈಲದ ನೆರೆಯ ನಂದ್ಯಾಲ ಪುರದಲ್ಲಿ ಕಳೆದಿರುವ ಸಂಗತಿ ಸುಸ್ಪಷ್ಟವಾಗಿದೆ. ಸಂಪಾದಕರು ಪ್ರಸ್ತಾವನೆಯಲ್ಲಿ ಸಿದ್ಧನಂಜೇಶನನ್ನು ಪರಿಚಯಿಸಿದ್ದಾರೆ. ಕವಿ ತನ್ನ ಕಾಲದ ಬಗ್ಗೆ ಮೌನ ತಳೆದಿದ್ದಾನೆಂದು ಹೇಳಿ ಹಲವಾರು ನಿದರ್ಶನಗಳನ್ನು ಚರ್ಚಿಸಿ ಹತ್ತಾರು ಆಧಾರಗಳನ್ನು ಒದಗಿಸಿ ಇದರ ಕಾಲವನ್ನು ನಿಗದಿಗೊಳಿಸಿದ್ದಾರೆ.

ಸಿದ್ಧನಂಜೇಶನ ರಾಘವಾಂಕ ಚರಿತೆ, ಗುರುರಾಜ ಚಾರಿತ್ರ್ಯ, ಬಸವಶತಕ, ತೋಂಟದ ದೇಶಿಕನ ಭಾವರತ್ನಾಭರಣಗಳು ತನ್ನ ಕೃತಿಗಳೆಂದು ಗುರುರಾಜ ಚಾರಿತ್ರ್ಯದಲ್ಲಿ ಹೇಳಿದ್ದಾನೆ. ಮೊದಲಿನ ಎರಡು ಕೃತಿಗಳಾದ ರಾಘವಾಂಕ ಚರಿತೆ, ಗುರುರಾಜ ಚಾರಿತ್ರ್ಯ ಎರಡೂ ಪ್ರಕಟಿತವಾಗಿವೆ. ಬಸವ ಶತಕ ಉಪಲಬ್ಧವಾಗಿಲ್ಲ. "ತೋಂಟದ ಸಿದ್ಧದೇಶಿಕನ ಭಾವರತ್ನಾಭರಣವು ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ ಸ್ತೋತ್ರ ಹೆಸರಿನಿಂದ ಇದೀಗ ಪ್ರಕಟವಾಗುತ್ತಲಿದೆ."[೨೪] "ಹೂಲಿಯ ಗುರು ಪರಂಪರೆಗೆ ಸಂಬಂಧಪಟ್ಟಂತೆ ಭಾವರತ್ನಾಭರಣದ ಕರ್ತೃ ಚಿಕ್ಕನಂಜೇಶನಿಗೆ ಹಿಂದಣ ಗುರು ವಂಶಾವಳಿಯಲ್ಲಿ ಒಬ್ಬನಾಗಿರುವ ಸತ್ಯಶಿವಯೋಗಿ (ಸಿದ್ಧನಂಜೇಶ) ಶಿವಾಚಾರ್ಯರು ಎಡೆಯೂರಿನ ಶ್ರೀ ತೋಂಟದಾರ್ಯ ಗುರುಕುಲದ ವಿರಕ್ತರಿಗೆ ಶಿವಯೋಗಾಭ್ಯಾಸವನ್ನು ಬೋಧಿಸುವ ಕಾರ್ಯ ಕೈಗೊಂಡಿದ್ದರಿಂದ ಈ ಚಿಕ್ಕನಂಜೇಶನ ಅಣ್ಣ ಮತ್ತು ಕಾವ್ಯಗುರುವಾದ ನಂದೀಶ ಕೃತ ಮರುಳಾರಾಧ್ಯ ವಿಜಯದ ಪದ್ಯದಿಂದ ತಿಳಿದುಬರುತ್ತದೆ. ವಿರಕ್ತ ಪೀಠಕ್ಕೂ, ಗುರುಪೀಠಕ್ಕೂ ಈ ಹಿಂದೆ ಇದ್ದ ಪರಸ್ಪರ ಸದ್ಭಾವನೆಯನ್ನು ಭಾವರತ್ನಾಭರಣ ಇನ್ನೂ ಸ್ಪಷ್ಟಪಡಿಸುತ್ತದೆ."[೨೫] ಸಂಪಾದಕರ ಈ ಮಾತುಗಳು

ವಿರಕ್ತ ಗುರು ಪರಂಪರೆಗಳ ನಡುವಿರುವ ಸೌಹಾರ್ದತೆಯನ್ನು ಸೂಚಿಸುತ್ತವೆ.

ಗವಿಸಿದ್ಧನಂಜೇಶನ ಭಾವರತ್ನಾಭರಣ ಸ್ತೋತ್ರವು ತೋಂಟದಾರ್ಯನ ಪವಾಡಗಳನ್ನೇ ಪ್ರಮುಖವಾಗಿ ಹೇಳುತ್ತಿದ್ದು ವಿರಕ್ತ ತೋಂಟದಾರ್ಯನ ಶ್ರೀ ಸಿದ್ಧೇಶ್ವರ ಮಹಾಪುರಾಣವೇ ಇದಕ್ಕೆ ಆಕರವಾಗಿರುವ ಸಾಧ್ಯತೆ ಇದೆ. "ತೋಂಟದಾರ್ಯನನ್ನು ಕುರಿತು ಪುರಾಣ ಬರೆದ ಶಾಂತೇಶನು ಅವರ ಕಣ್ಣ ಮುಂದೆಯೇ ಐಕ್ಯನಾದನೆಂಬ ಘಟನೆಯನ್ನು ವ್ಯಕ್ತಪಡಿಸುತ್ತ ಶಾಂತೇಶ್ವರ ಕೃತ ಸಿದ್ಧೇಶ್ವರ ಪುರಾಣದ ಕಾಲವಾದ ಕ್ರಿ. ಶ. ೧೫೬೧ರಲ್ಲಿ ತೋಂಟದಾರ್ಯರು ಜೀವಂತವಾಗಿದ್ದರೆಂಬ ಹೊಸ ಅಂಶವನ್ನು ಹೊರಗೆಡಹುತ್ತದೆ. ತೋಂಟದಾರ್ಯರ ಕಾಲ ೧೬ನೇ ಶತಮಾನದ ಉತ್ತರಾರ್ಧದವೆಂದು ವಿದ್ವಾಂಸರು ಇತ್ತೀಚೆಗೆ ಹೇಳುತ್ತಿರುವುದಕ್ಕೆ ಆಧಾರವಾಗಿ ಪರಿಣಮಿಸಿದೆ. ಇದಲ್ಲದೆ ಕರಸ್ಥಲ ನಾಗಿದೇವನಿಗೆ ಹಂಪಿ ವಿರೂಪಾಕ್ಷನ ಹರಿಹರಕೃತ 'ಬಸವರಾಜ ದೇವರ ರಗಳೆ' ಭಿಕ್ಷೆಯನ್ನು ನೀಡಿದ ಸಂಗತಿ ಪ್ರಥಮ ಸಲ ಬೆಳಕಿಗೆ ಬರುತ್ತದೆ."[೨೬] ಸಂಪಾದಕದ್ವಯರ ಈ ಮಾತುಗಳು ಐತಿಹಾಸಿಕ ಸತ್ಯವನ್ನು ಪ್ರಪ್ರಥಮವಾಗಿ ದಾಖಲಿಸಿದೆ

ಪ್ರಸ್ತುತ ಭಾವರತ್ನಾಭರಣ ಸ್ತೋತ್ರ ಕತೆಯಲ್ಲಿ ಅಲ್ಲಲ್ಲಿ ಸುಂದರವಾದ ಕಾವ್ಯಾಂಶವಿದ್ದು ಕವಿತ್ವದ ದೃಷ್ಟಿಯಿಂದ ಮಧ್ಯಮ ವರ್ಗದ ಕೃತಿ ಎಂದೇ ಹೇಳಬೇಕು. ಆದರೆ ಈ ಕವಿತ್ವದ ಹಿಂದಿರುವ ಭಕ್ತಿ ಭಾವ ಮಾತ್ರ ಅನನ್ಯವಾದುದು. ಗುರುಮಾರ್ಗದ ಒಬ್ಬ ಶಿವಯೋಗಿ ವಿರಕ್ತವರ್ಗದ ಇನ್ನೊಬ್ಬ ಶಿವಯೋಗಿಯನ್ನು ಕುರಿತು ಈ ರೀತಿ ಭಕ್ತಿಭಾವದಿಂದ ಹಾಡಿದುದು, ಭಾವನಿರ್ಭರತೆಯಿಂದ ಹೊಗಳಿದುದು ಉಭಯ ವರ್ಗಗಳ ಅನ್ಯೋನ್ಯತೆಯನ್ನು ತೋರಿಸಿಕೊಡುತ್ತವೆ, ಎನ್ನುವಲ್ಲಿ ವಿಮರ್ಶಾತ್ಮಕ ದೃಷ್ಟಿಕೋನವಿದೆ. ಗ್ರಂಥ ಸಂಪಾದಕರು ಕವಿ ಕಾವ್ಯ ಕುರಿತಾಗಿ ಸಂಶೋಧನೆಯ ಸಂಗತಿಗಳನ್ನು ದಾಖಲಿಸುವದರೊಂದಿಗೆ ಪ್ರಸ್ತುತ ಕೃತಿಯ ವಿಮರ್ಶೆಯನ್ನು ಮಾಡಿದ್ದಾರೆ. ಪ್ರಸ್ತಾವನೆ ತುಂಬಾ ಮಹತ್ತರವಾಗಿದ್ದು ಹಲವಾರು ಹೊಸ ಅಂಶಗಳನ್ನು ಪ್ರಥಮಬಾರಿಗೆ ಪ್ರಕಟಿಸಿದ್ದಾರೆ. ಗ್ರಂಥ ಸಂಪಾದಕರಿಗೆ ಇದೊಂದು ಮಾರ್ಗದರ್ಶಿಯಾದ ಕೃತಿಯಾಗಿದೆ.

"ತೋಂಟದ ಸಿದ್ಧೇಶ್ವರನ ಭಾವ ರತ್ನಾಭರಣ ಸ್ತೋತ್ರ ನನಗೆ ಲಭಿಸಿದ್ದು ಕಲಬುರ್ಗಿ ಜಿಲ್ಲೆಯ ಜೇವರಗಿ ತಾಲೂಕಿನ ಯಡ್ರಾಮಿ ಗ್ರಾಮದ ಶ್ರೀ ಮಹಾಲಿಂಗಯ್ಯ ಭಾವಿಮಠ ಅವರ ಮನೆಯಲ್ಲಿ. ಬಹಳ ದಿನಗಳಿಂದ ಸಂಶೋಧಕರ ಕಣ್ಣು ತಪ್ಪಿಸುತ್ತ ನಡೆದಿದ್ದು. ಈ ಕೃತಿ ಕವಿಯ ಕಾರ್ಯ ಕ್ಷೇತ್ರಗಳಾದ ಹೂಲಿ, ನಂದ್ಯಾಲಪುರದ ಪರಿಸರದಲ್ಲಿ ಸಿಗದೆ ದೂರದ ಯಡ್ರಾಮಿಯಲ್ಲಿ ಸಿಕ್ಕಿದುದು ಆಶ್ಚರ್ಯವೇ ಸರಿ. ಇದು ಕಾಗದ ಪ್ರತಿ ಇದ್ದು ತಕ್ಕಮಟ್ಟಿಗೆ ಸಿದ್ಧವಾಗಿಯೆ ಇದೆ. ಅವಶ್ಯವಿದ್ದಲ್ಲಿ ಮಾಡಿರುವ ತಿದ್ದುಪಡಿಗಳನ್ನು ಚೌಕ ಕೌಂಸಿನಲ್ಲಿ ಕೊಡಲಾಗಿದೆ. ತಿದ್ದುಪಡಿಗಳಿಗೆ ಸಂವಾದಿಯಾದ ಮೂಲ ಪಾಠವನ್ನು 'ಮೂ' ಎಂಬ ಸಂಕೇತದಿಂದ ಅಡಿಯಲ್ಲಿ ಕಾಣಿಸಲಾಗಿದೆ. ಹೀಗಿದ್ದು ಇನ್ನೂ ಅನೇಕ

ಸಂದೇಹಗಳು ಉಳಿದಿವೆ. ವಿದ್ವಾಂಸರು ಪರಿಹಾರಗಳನ್ನು ಸೂಚಿಸಿದಲ್ಲಿ ತುಂಬಾ ಉಪಕಾರವಾಗುತ್ತದೆ."[೨೬೮] ಈ ಮಾತುಗಳು ಗ್ರಂಥ ಸಂಪಾದಕರ ಸಂಪಾದನೆಯ ಶಿಸ್ತನ್ನು ಸಂಪಾದಕನ ಜವಾಬ್ದಾರಿಯನ್ನು ಹಾಗೂ ಅವರ ಪ್ರಾಮಾಣಿಕತೆಯನ್ನು ತಿಳಿಸುತ್ತೇವೆ.

ಪ್ರಸ್ತುತ ಕೃತಿಯು ಜನಸಾಮಾನ್ಯರಿಗೆ ತಲುಪಲೆಂದು ಪದ್ಯಕ್ಕೆ ಪ್ರತಿ ಪದದ ಅರ್ಥ ಭಾವಾನುವಾದ ಬರೆದಿರುವುದು ಪಂಡಿತರಿಗೂ, ಪಾಮರರಿಗೂ ಏಕಕಾಲದಲ್ಲಿ ಮುಟ್ಟಲು ನೆರವಾಗುತ್ತದೆ. ಜನಸಾಮಾನ್ಯರಿಗೆ ಅರ್ಥವಾಗುವಂತೆ ಸರಳವಾಗಿ ಭಾವಾನುವಾದವನ್ನು ಕೊಟ್ಟಿರುವುದರಿಂದ ಕೃತಿಯು ಜನಪ್ರಿಯವಾಗಿದೆ. ಗ್ರಂಥದ ಕೊನೆಯಲ್ಲಿ ಪದ್ಯಗಳ ಅಕಾರಾದಿ ಪುಟ ಸಂಖ್ಯೆಗಳನ್ನು ಕೊಟ್ಟಿರುವುದು ಓದುಗರಿಗೆ ತುಂಬಾ ನೆರವಾಗುತ್ತದೆ. ಇವೆಲ್ಲ ಅಂಶಗಳು ಗ್ರಂಥ ಸಂಪಾದನಾ ಶಾಸ್ತ್ರಕ್ಕೆ ಪೂರಕವಾಗಿವೆ.

**೪.೫.೦ ಸಂಕೀರ್ಣ ಸಾಹಿತ್ಯ :**

ಡಾ. ಬಿ.ಆರ್. ಹಿರೇಮಠ ಅವರು ಶಾಸನ ಹಸ್ತಪ್ರತಿ, ವಚನಸಾಹಿತ್ಯ, ಶರಣಸಾಹಿತ್ಯ ಮೊದಲಾದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಇತರರೊಡನೆ ಸಂಪಾದಿಸಿ ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಇವುಗಳ ಜೊತೆಗೆ ಡಾ. ಆರ್. ಸಿ. ಹಿರೇಮಠ ನಾವು ಕಂಡಂತೆ (ಸಂಸ್ಮರಣ ಗ್ರಂಥ) ಹಾಗೂ ನಿಜದ ನೆಲೆ (ಡಾ ಬಿ.ಕೆ ಹಿರೇಮಠ ಅವರ ಅಭಿನಂದನ ಗ್ರಂಥ) ಕನ್ನಡ ಪ್ರಪಂಚ (ಡಾ. ಪಾಟೀಲ ಪುಟ್ಟಪ್ಪ ಅವರ ಅಭಿನಂದನಾ ಗ್ರಂಥ) ಮುಂತಾದ ಗ್ರಂಥಗಳನ್ನು ಕೂಡ ಇತರರೊಂದಿಗೆ ಸಂಪಾದಿಸಿದ್ದಾರೆ. ಅವುಗಳನ್ನು ಸಂಕೀರ್ಣ ಸಾಹಿತ್ಯವೆಂದು ಅಧ್ಯಯನಕ್ಕೆ ಅಳವಡಿಸಲಾಗಿದೆ.

**೪.೫.೧ : ಡಾ. ಆರ್.ಸಿ. ಹಿರೇಮಠ ನಾವು ಕಂಡಂತೆ :**

ಪ್ರಸ್ತುತ ಕೃತಿಯನ್ನು ಡಾ. ಬಿ. ಆರ್. ಹಿರೇಮಠ, ಪ್ರೊ. ಬಿ.ವಿ. ಗುಂಜೆಟ್ಟಿಯವರು ಸಂಯುಕ್ತವಾಗಿ ಸಂಪಾದಿಸಿದ್ದಾರೆ. ಇದೊಂದು ಸಂಸ್ಮರಣ ಗ್ರಂಥವಾಗಿದೆ. ಧಾರವಾಡದ ಡಾ. ಆರ್. ಸಿ. ಹಿರೇಮಠ ಪ್ರತಿಷ್ಠಾನವು ಈ ಕೃತಿಯನ್ನು ಪ್ರಕಟಿಸಿದೆ. ೧೯೯೯ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ಕೃತಿಯು ೧೨೫ ಪುಟಗಳನ್ನು ಒಳಗೊಂಡಿದೆ. ಡಾ. ಆರ್.ಸಿ. ಹಿರೇಮಠ ಅವರು ನಾಡಿನ ಶ್ರೇಷ್ಠ ಸಾಹಿತಿಗಳು, ಸಂಶೋಧಕರು, ಭಾಷಾ ವಿಜ್ಞಾನಿಗಳು, ವಿಮರ್ಶಕರು, ಶಿಕ್ಷಣ ತಜ್ಞರು, ದಕ್ಷ ಆಡಳಿತಗಾರರು, ಇತ್ಯಾದಿ ಬಹುಮುಖ ಪ್ರತಿಭೆಯ ವ್ಯಕ್ತಿತ್ವವನ್ನು ಹೊಂದಿದವರು. ಪ್ರಾಧ್ಯಾಪಕರಾಗಿ ಕನ್ನಡ ಅಧ್ಯಯನ ಪೀಠದ ರೂವಾರಿಗಳು, ಸಿನೇಟ ಸಿಂಡಿಕೇಟ್ ವಿದ್ಯಾ ಪರಿಷತ್ತಿನ ಸದಸ್ಯರಾಗಿ, ಪಠ್ಯಪುಸ್ತಕ ರಚನಾ ಸಮಿತಿ ಸದಸ್ಯರಾಗಿ, ಸಂಯೋಜಕರಾಗಿ, ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಮಾಡಿರುವ ಕಾರ್ಯ ಮಹೋನ್ನತವಾದದ್ದು. "ಡಾ. ಆರ್.ಸಿ. ಯವರು ವ್ಯಕ್ತಿಯಲ್ಲ. ಮಹಾಶಕ್ತಿ. ಬಹುಮುಖ ಪ್ರತಿಭೆಯ ಪಾರದರ್ಶಕ ವ್ಯಕ್ತಿತ್ವದ

ಡಾ. ಆರ್. ಸಿ. ಯವರು ಈಗ ದೈಹಿಕವಾಗಿ ಇರದಿದ್ದರೂ, ಮಾನಸಿಕವಾಗಿ, ಕ್ರಿಯಾತ್ಮಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಜೀವಂತವಾಗಿದ್ದಾರೆ" ಎಂಬ ಮಾತು ಸತ್ಯವಾಗಿದೆ. ಡಾ. ಆರ್. ಸಿ. ಹಿರೇಮಠ ಅವರು ೧೯೯೮ರಲ್ಲಿ ಕಾಲವಾದ ಬಳಿಕ ಈ ಸಂಸ್ಮರಣ ಗ್ರಂಥ ರೂಪಗೊಂಡಿದೆ.

"ಡಾ. ಆರ್. ಸಿ. ಹಿರೇಮಠ ಅವರದು ಮಹಾನ್ ಚೇತನ. ಇವರು ಗಳಿಸಿದ ಶಿಷ್ಯ, ಪ್ರಶಿಷ್ಯ ವರ್ಗ ಅಪಾರ, ಬಿಟ್ಟು ಹೋದ ನೆನಪುಗಳು ಅಸಂಖ್ಯ, ಮಾಡಿದ ಸಹಾಯ ಸಹಕಾರ ಅನಂತ. ನಾಡಿನುದ್ದಕ್ಕೂ ವಿದ್ವಾಂಸರು, ಸಾಹಿತಿಗಳು, ಸ್ನೇಹಿತರೊಡನೆ ಹೊಂದಿದ್ದ ಬಾಂಧವ್ಯ ಅಗಣಿತವಾಗಿದೆ. ಡಾ. ಆರ್.ಸಿ. ಅವರ ಪ್ರಭಾವಲಯದಲ್ಲಿಪರಿಭ್ರಮಮಿಸಿದ, ಬೆಳಗಿದ ಇವೆಲ್ಲಾ ಅನುಭವಗಳನ್ನು ದಾಖಲಿಸುವುದು ಚಾರಿತ್ರಿಕವಾಗಿ ಅತ್ಯಂತ ಮಹತ್ವವಾದದ್ದೆಂದು ಭಾವಿಸಿ ಈ ಗ್ರಂಥ ನಿರ್ಮಾಣಕ್ಕಾಗಿ ಕಾರ್ಯಪ್ರವೃತ್ತರಾದೆವು"[೨೮] ಎಂದು ಸಂಪಾದಕರು ಈ ಕೃತಿಯ ಪ್ರಕಟಣೆಯ ಹಿನ್ನೆಲೆಯನ್ನು ವಿವರಿಸಿದ್ದಾರೆ.

ಡಾ. ಪಾಟೀಲ ಪುಟ್ಟಪ್ಪ, ಚೆನ್ನವೀರ ಕಣವಿ, ಡಾ. ಹಾ.ಮಾ. ನಾಯಕ, ಎನ್. ಬಸವಾರಾಧ್ಯ, ಡಾ. ಎಂ.ಎಂ. ಕಲಬುರ್ಗಿ, ಡಾ. ಗುರುಲಿಂಗ ಕಾಪಸೆ. ಡಾ. ಎಂ.ಜಿ. ಬಿರಾದಾರ, ಡಾ. ಎ. ಮುರಿಗೆಪ್ಪ, ಡಾ. ವೀರಣ್ಣ ರಾಜೂರ, ಡಾ. ಎಚ್. ವ್ಹಿ. ನಾಗೇಶ, ಡಾ. ಹಂಪ ನಾಗರಾಜಯ್ಯ ಮೊದಲಾದವರ ಲೇಖನಗಳು ಇದರಲ್ಲಿವೆ. ಶ್ರೀಮತಿ ಎಚ್.ಎಂ. ಬೀಳಗಿ, ಪ್ರೇಮಾ ನಡಕಟ್ಟಿ, ಶಶಿಕಲಾ ಹಿರೇಮಠ ಮುಂತಾದ ಮಹಿಳೆಯರ ಲೇಖನಗಳು ಈ ಕೃತಿಯಲ್ಲಿವೆ. "ಡಾ. ಆರ್.ಸಿ. ಅವರಿಗೆ ಅಖಿಲ ಭಾರತ ಮಟ್ಟದ ಸ್ಥಾನಮಾನಗಳು ಬಂದು ಹೋಗಿದ್ದವು. ಜ್ಞಾನಪೀಠ ಪ್ರಶಸ್ತಿ ಆಯ್ಕೆ ಸಮಿತಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿದ್ದರು. ತಿರುವನಂತಪುರ ದ್ರಾವಿಡ ಭಾಷಾ ಶಾಲೆಯ ನಿರ್ದೇಶಕರಾಗಿದ್ದರು. ಅಮೇರಿಕೆಯ ಶಾಂತಿ ಸ್ವಯಂ ಸೇವಾ ತಂಡದ ಭಾಷಾ ಕಲಿಕಾ ಕೇಂದ್ರದ ಮುಖ್ಯಸ್ಥರಾಗಿ ಅಮೇರಿಕೆಯಲ್ಲಿಯೇ ಕಾರ್ಯನಿರ್ವಹಿಸಿದರು"[೨೯] ಎಂಬ ಡಾ. ಪಾಟೀಲ ಪುಟ್ಟಪ್ಪನವರ ಮಾತುಗಳು ಡಾ. ಆರ್.ಸಿ. ಅವರ ವ್ಯಕ್ತಿತ್ವದ ಔನ್ನತ್ಯವನ್ನು ಬಿತ್ತರಿಸುತ್ತವೆ. "ಸೃಜನ, ಸಂಪಾದನ, ಅಧ್ಯಯನ ಮತ್ತು ಅಧ್ಯಾಪನ ಸಂಶೋಧನೆಗಳಲ್ಲಿ ತಮ್ಮ ವಿದ್ವತ್ತು ಹಾಗೂ ಪರಿಶ್ರಮಗಳ ಮೂಲಕ ಅಚ್ಚಳಿಯದ ಪ್ರಭಾವ ಮುದ್ರೆಯನ್ನೊತ್ತಿ ಹೋಗಿದ್ದಾರೆ. ಅವರೊಬ್ಬ ಮರೆಯಲಾಗದ ಮಹನೀಯರು"[೩೦] ಎಂದಿರುವ ಡಾ. ಬಿ.ವ್ಹಿ. ಮಲ್ಲಾಪೂರ ಅವರ ಮಾತುಗಳು ಡಾ. ಆರ್.ಸಿ. ಯವರ ವಿದ್ವತ್ತಿಗೆ ಸಾಕ್ಷಿಯಾಗಿವೆ.

"ಡಾ. ಹಿರೇಮಠ ಅವರ ಒಲವು ಮುಖ್ಯವಾಗಿ ಪ್ರಾಚೀನ ಕನ್ನಡದತ್ತ. ಪಂಪ, ವಚನಕಾರರು, ಹರಿಹರ, ಕುಮಾರವ್ಯಾಸ, ಷಡಕ್ಷರದೇವ ಈ ಐವರು ಅವರ ಪಂಚ ಪ್ರಾಣ. ಸಾಮಾನ್ಯವಾಗಿ ಪ್ರಾಚೀನ ಕಾವ್ಯಗಳೆಲ್ಲ ಅವರಿಗೆ ಮುಖೋದ್ಗತ. ಅವರ ವಿದ್ವತ್ತು ಬಹುಭಾಷಿಕ ವಿಷಯಕ, ಸಂಸ್ಕೃತದಷ್ಟು ಪ್ರಾಚೀನ ಇಂಗ್ಲೀಷಿನಷ್ಟು ಆಧುನಿಕವಾಗಿದ್ದ ಭಾಷೆ, ಶಿಕ್ಷಣ ವ್ಯಾಸಂಗದಿಂದಾಗಿ ಅವರಿಗೆ ಕನ್ನಡ ಭಾಷೆ

ಶಿಕ್ಷಣಗಳ ಸಂರಕ್ಷಣ ಸಂರಚನೆ ಮತ್ತು ಸಂವೇದನೆಗಳು ಮನೋವೇದ್ಯವಾಗಿದ್ದವು. ಹೀಗಾಗಿ ಕನ್ನಡವನ್ನು ಹಲವು ಮುಖಗಳಲ್ಲಿ ಬೆಳೆಸಲು ಅವರಿಗೆ ಸಾಧ್ಯವಾಯಿತು"[೮೧] ಎಂಬ ಡಾ. ಎಂ.ಎಂ. ಕಲಬುರ್ಗಿಯವರ ಮಾತುಗಳು ಡಾ. ಆರ್.ಸಿ. ಅವರು ಕನ್ನಡ ಕಟ್ಟಿದ ಕಾರ್ಯವನ್ನು ಸೊಗಸಾಗಿ ಪರಿಚಯಿಸುತ್ತವೆ.

"ಡಾ. ಆರ್.ಸಿ. ಯವರು ಈ ಶತಮಾನದ ಅದ್ಭುತ ಹಾಗೂ ಅಪರೂಪದ ಮಹಾಚೇತನ. ಇಂಥ ದಿವ್ಯ ಚೇತನಗಳು ಉದಯಿಸುವದು, ಬೆಳಗುವುದು, ಬೆಳಕು ನೀಡುವುದು ಯುಗಕ್ಕೊಮ್ಮೆ ಸಾಹಿತ್ಯ ಸೂರ್ಯರಾಗಿ ಉದಯಿಸಿ ನಾಡನ್ನು, ಸಾಹಿತ್ಯ ಲೋಕವನ್ನು, ಶಿಷ್ಯ ಪ್ರಶಿಷ್ಯರನ್ನು ಪ್ರಜ್ವಲಗೊಳಿಸಿದರು. ಆರ್.ಸಿ. ಯವರಲ್ಲಿ ಸಣ್ಣವರು, ದೊಡ್ಡವರು ಎಂಬ ಭೇದಭಾವ ಇರಲಿಲ್ಲ. ಎಲ್ಲರನ್ನೂ, ಎಲ್ಲವನ್ನೂ ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು, ಗೌರವಿಸುತ್ತಿದ್ದರು. ಅವರದು ಸಮಾನ ಹಾಗೂ ಸಮನ್ವಯದ ವ್ಯಕ್ತಿತ್ವ. ಎಲ್ಲ ವರ್ಗ, ವರ್ಣ, ಅಂತಸ್ತುಗಳ ಜನರಿಗೂ ಬೇಕಾಗಿದ್ದರು. ಡಾ. ಆರ್.ಸಿ. ಅವರ ಬಗೆಗೆ ಸಮಾಜದಲ್ಲಿ ನಾಡಿನಲ್ಲಿ ಅಪಾರವಾದ ಗೌರವ ಹಾಗೂ ಪೂಜ್ಯತೆ ಇದ್ದಿತ್ತು"[೮೨] ಎಂಬ ಸಂಪಾದಕರ ಮಾತುಗಳು ಡಾ. ಆರ್. ಸಿ. ಅವರ ವ್ಯಕ್ತಿತ್ವದ ಮತ್ತೊಂದು ಮಗ್ಗುಲನ್ನು ಅನಾವರಣಗೊಳಿಸುತ್ತದೆ.

ಡಾ. ಆರ್.ಸಿ. ಅವರ ಮಗಳಾದ ಡಾ. ಶಶಿಕಲಾ ಆರ್. ಹಿರೇಮಠ ಅವರ ಲೇಖನ ಇಂಗ್ಲೀಷಿನಲ್ಲಿದ್ದು ತಂದೆ ಮಗಳ ವಾತ್ಸಲ್ಯಕ್ಕೆ ಸಮ್ಯಕ್ ಸಾಕ್ಷಿಯಾಗಿದೆ. ಗಾಂಧೀಜಿಯವರ ಕುರಿತಾಗಿ ಆಲ್‌ಬರ್ಟ್ ಐನ್‌ಸ್ಟೀನ್ ಹೇಳಿರುವ ಮಾತನ್ನೇ ಹೇಳಿದ್ದಾರೆ.

ಡಾ. ಪಂಚಾಕ್ಷರಿ ಹಿರೇಮಠ, ನಿಂಗಣ್ಣ ಕುಂಟಿ (ಇಟಗಿ), ರಾಜೀವ ಹಿರೇಮಠ ಮತ್ತು ಡಾ. ಸೋಮಶೇಖರ ಇಮ್ರಾಪೂರ ಈ ನಾಲ್ವರು ಡಾ. ಆರ್.ಸಿ.ಯವರನ್ನು ಕುರಿತಾಗಿ ರಚಿಸಿರುವ ಅರ್ಥಪೂರ್ಣ ಕವಿತೆಗಳು ಇದರಲ್ಲಿವೆ.

ಈ ರೀತಿಯಾಗಿ ಹಲವಾರು ಹಿರಿಯ ವಿದ್ವಾಂಸರು ಡಾ. ಆರ್.ಸಿ. ಹಿರೇಮಠರನ್ನು ತಾವು ಕಂಡಂತೆ ತಮಗೆ ಕಂಡಷ್ಟನ್ನು ದಾಖಲಿಸಿದ್ದಾರೆ. ಎಲ್ಲ ಲೇಖನಗಳ ಕ್ರೋಢೀಕರಣದಿಂದ ಡಾ. ಆರ್.ಸಿ. ಅವರ ಭೂವ್ಯೋಮ ಸಾದೃಷ್ಯ ವ್ಯಕ್ತಿತ್ವ ಓದುಗರ ಮುಂದೆ ತೆರೆದುಕೊಳ್ಳುತ್ತದೆ. ಪುಸ್ತಕದ ಮುಖಪುಟದಲ್ಲಿ ಡಾ. ಆರ್.ಸಿ. ಅವರ ಆಕರ್ಷಕ ಭಾವಚಿತ್ರವಿದ್ದು ಬ್ಲರ್ಬದಲ್ಲಿ ಆರ್.ಸಿ. ಅವರ ಹಸ್ತಾಕ್ಷಕವಿರುವುದು ಅರ್ಥಪೂರ್ಣವಾಗಿದೆ. ಇಂಥದೊಂದು ಮೌಲಿಕ ಗ್ರಂಥವನ್ನು ಸಂಪಾದಿಸಿಕೊಟ್ಟ ಡಾ. ಬಿ. ಆರ್. ಹಾಗೂ ಪ್ರೊ ಗುಂಜೆಟ್ಟಿಯವರ ಶ್ರಮ ಸಾರ್ಥಕವಾಗಿದೆ.

**೪.೫.೨. ನಿಜದ ನೆಲೆ :**

ನಿಜದ ನೆಲೆಯು ಡಾ. ಬಿ. ಆರ್. ಹಿರೇಮಠ ಅವರ ಗುರುಗಳಾದ ಡಾ. ಬಿ. ಕೆ. ಹಿರೇಮಠರು ಅವರ ಅಭಿನಂದನ ಗ್ರಂಥವಾಗಿದೆ. ಡಾ. ಬಿ. ಆರ್. ಹಿರೇಮಠರು ಪ್ರಧಾನ ಸಂಪಾದಕರಾಗಿ ಡಾ. ಎಸ್. ಸಿ. ಪಾಟೀಲ ಹಾಗೂ ಸತ್ಯಾನಂದ ಪಾತ್ರೋಟರು ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ. ಬಾಗಲಕೋಟೆ ಬಸವೇಶ್ವರ ವಿದ್ಯಾವರ್ಧಕ ಸಂಘದ ವೈರಾಗ್ಯದ ಮಲ್ಲಣಾರ್ಯ ಪ್ರಕಾಶನದಿಂದ ಪ್ರಕಟಿತಗೊಂಡಿದೆ. ನಿಜದ ನೆಲೆಯು ೨೦೦೩ರಲ್ಲಿ ಪ್ರಟಕವಾಗಿದ್ದು ೧೮೯೮ ಪುಟಗಳ ಹೆಬ್ಬೊತ್ತಿಗೆಯಾಗಿದೆ. "ಡಾ. ಬಿ.ಕೆ. ಹಿರೇಮಠರು ಕರ್ನಾಟಕದ ಕಲೆ, ಸಾಹಿತ್ಯ ಉಭಯ ಕ್ಷೇತ್ರದಲ್ಲಿ ಸಾಧನೆಗೈದವರು. ಚಿತ್ರಕಲಾವಿದರಾಗಿ, ಕಲಾಸಾಹಿತಿಗಳಾಗಿ, ಸಂಶೋಧಕರಾಗಿ ಮಾಡಿದ ಕಾರ್ಯ, ನಾಡಿಗೆ ನೀಡಿದ ಕೊಡುಗೆ ಅನನ್ಯವಾಗಿದೆ. ಸಂಶೋಧಕರಾಗಿ ಮಾಡಿದ ಕಾರ್ಯ ಅನುಪಮವಾಗಿದೆ. ತಮ್ಮ ಅಧ್ಯಯನ, ಅಧ್ಯಾಪನ, ಸಂಶೋಧನ ಚಿತ್ರಕಲೆಯೊಂದಿಗೆ ಕನ್ನಡ ನಾಡು ನುಡಿಗೆ ಸಲ್ಲಿಸಿದ ಸೇವೆ ಗಮನಾರ್ಹವಾಗಿದೆ. ಸರಳ ಸಜ್ಜನ ಸಾತ್ವಿಕ ಬದುಕಿಗೆ ಹೆಸರಾದ ಡಾ. ಬಿ.ಕೆ. ಹಿರೇಮಠ ಅವರ ಬದುಕು ಒಂದು ತತ್ವ. ಅವರು ನಿಭಾಯಿಸಿದ ವೃತ್ತಿ ಒಂದು ವ್ರತ. ವಿದ್ಯಾರ್ಥಿಗಳ ಸೇವೆಯೆ ಸಂತೃಪ್ತಿ ಎಂದು ಭಾವಿಸಿದ ಪ್ರಾಧ್ಯಾಪಕರು ಜಾತಿ ಮತ ಪಂಥಗಳನ್ನು ಮೀರಿ ಮನುಷ್ಯರನ್ನು ಹುಡುಕಿ ಪ್ರೀತಿಸಿದವರು. ಜೀವನವಿಡೀ ತಾವು ನಂಬಿದ ಮೌಲ್ಯಗಳಿಗೆ ಬದ್ಧರಾಗಿ ನಿಂತ ಡಾ. ಬಿ.ಕೆ. ಅವರದು ದಣಿವರಿಯದ ಬದುಕು"[೮೩] ಎಂದು ಪ್ರಧಾನ ಸಂಪಾದಕರು ಹೇಳಿದ ಮಾತುಗಳು ಡಾ. ಬಿ.ಕೆ. ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಡಾ. ಬಿ.ಕೆ. ಹಿರೇಮಠ ಅವರ ಅರವತ್ತು ವಸಂತಗಳು ತುಂಬಿದ ಸಂದರ್ಭದಲ್ಲಿ ಅವರ ವಿದ್ಯಾರ್ಥಿಗಳು ಅಭಿಮಾನಿಗಳು, ಆಪ್ತರು ಒಟ್ಟಾಗಿ ಪ್ರೀತಿಯಿಂದ ಅರ್ಪಿಸಿದ ಅಭಿನಂದನಾ ಗ್ರಂಥವೇ ನಿಜದ ನೆಲೆಯು. ಮೂರು ನೆಲೆಗಳಲ್ಲಿ ರೂಪುಗೊಂಡಿದೆ. ಮೊದಲ ಭಾಗದಲ್ಲಿ ಬಿ. ಕೆ. ಅವರ ಆಸಕ್ತಿ ಕ್ಷೇತ್ರವಾದ ಚಿತ್ರಕಲಾ ಸಾಹಿತ್ಯವಿದೆ. ಈ ಭಾಗವು ಪ್ರಾಚೀನ ಕಲೆಯ ಅನ್ವಯಿಕ ಹಾಗೂ ಆಧುನಿಕ ಅಧ್ಯಯನದ ಹೊಸ ಒಳನೋಟಗಳನ್ನೊಳಗೊಂಡ ೭೪ ಲೇಖನಗಳ ಸಂಕಥನವಾಗಿದೆ. ೨ನೇ ನೆಲೆಯಲ್ಲಿ ಅವರ ಮತ್ತೊಂದು ಆಸಕ್ತಿಯ ಕ್ಷೇತ್ರವಾದ ಕನ್ನಡ ಸಾಹಿತ್ಯ ಹಾಗೂ ಭಾಷೆ ಕುರಿತಾಗಿರುವ ಲೇಖನಗಳಿಂದ ಮೈದುಂಬಿದೆ. ಇದರಲ್ಲಿ ಧರ್ಮ, ಸಾಹಿತ್ಯ, ಮೀಮಾಂಸೆ ಮತ್ತು ಸಂಪಾದನೆಗೆ ಸಂಬಂಧಿಸಿದ ಮೂವತ್ಮೂರು ಮೌಲಿಕ ಲೇಖನಗಳಿವೆ. ಮೂರನೆಯ ನೆಲೆಯು ಡಾ. ಬಿ.ಕೆ. ಅವರ ಬದುಕು ಬರಹದ ಕುರಿತಾಗಿದೆ. ಪೂರ್ವಾರ್ಧದಲ್ಲಿ ಬಿ. ಕೆ. ಅವರ ಕುಟುಂಬದ ಸದಸ್ಯರು ಹಾಗೂ ಅವರ ಆಪ್ತ ಸ್ನೇಹಿತರು, ಒಡನಾಡಿಗಳು, ಗುರುಗಳು ಹಾಗೂ ವಿದ್ಯಾರ್ಥಿಗಳು ಬರೆದ ನುಡಿನಮನಗಳಿವೆ. ಈ ನೆಲೆಯ ಉತ್ತರಾರ್ಧದದಲ್ಲಿ ಡಾ. ಬಿ.ಕೆ. ಅವರ ಸಾಹಿತ್ಯ ಹಾಗೂ ಕಲಾಕೃತಿಗಳನ್ನು ಕುರಿತಾದ ಲೇಖನಗಳನ್ನು ಒಳಗೊಂಡಿದೆ. ಮೂರನೆಯ ನೆಲೆಯಲ್ಲಿ ಬಿ.ಕೆ. ಅವರನ್ನು ಕುರಿತು ಮೂವತ್ತೆರಡು ಅವರ ಸಾಹಿತ್ಯ ಚಿತ್ರಕಲೆಯನ್ನು ಕುರಿತ ಲೇಖನಗಳಿವೆ. ಈ ಭಾಗದ ಲೇಖನಗಳು

ಡಾ. ಬಿ.ಕೆ. ಅವರ ಬದುಕನ್ನು ಹತ್ತಿರದಿಂದ ಕಂಡು ಬರೆದ ಲೇಖನಗಳು ಅವರ ಜೀವನ ಚರಿತ್ರೆಯಂತಿವೆ. ಅವರ ಸಾಹಿತ್ಯ ಕಲಾಕೃತಿಗಳ ಲೇಖನಗಳು ಅವರ ಅಸ್ಮಿತೆಯನ್ನು ಪ್ರಕಟಿಸುತ್ತವೆ. ನಿಜದ ನೆಲೆಯು ಒಂದುನೂರ ಮೂವತ್ತೇಳು (೧೩೭) ಲೇಖನಗಳ ಭವ್ಯ ಹಾಗೂ ಬೃಹತ್ ಕೃತಿಯಾಗಿದೆ. "ನಿಜದ ನೆಲೆಯ ಎಲ್ಲ ಭಾಗಗಳಿಗೆ ಸಂಬಂಧಿಸಿದ ಹಲವು ಕಪ್ಪು-ಬಿಳುಪು ಹಾಗೂ ವರ್ಣ ಛಾಯಾ ಚಿತ್ರಗಳಿವೆ. ಇವು ಪ್ರಸ್ತುತ ಗ್ರಂಥದ ಉಪಯುಕ್ತತೆಯ ಜೊತೆಗೆ ಸೌಂದರ್ಯವನ್ನು ಹೆಚ್ಚಿಸಿವೆ"[೮೪] ಎಂಬ ಮಾತುಗಳು ಕೃತಿಯ ಅಂತಃಸ್ಸತ್ವವನ್ನು ಹೊರಗೆಡಹುತ್ತದೆ.

"ಕಲೆ - ಸಾಹಿತ್ಯ - ಸಂಶೋಧನೆ ನನ್ನ ಬದುಕಿನಲ್ಲಿ ಒಂದಾದ ದಾರಿಗಳು, ಆದರೆ ಬದುಕು ನಾವು ಯೋಚಿಸಿಕೊಂಡಿರುವುದಕ್ಕಿಂದಲೂ ಬಹಳ ಬಹಳ ದೊಡ್ಡದು. ನನ್ನ ದೃಷ್ಟಿಯಲ್ಲಿ ಇಡಿಯಾಗಿ ಬದುಕನ್ನರಿಯುವುದು, ಪರಮ ಸತ್ಯವನ್ನರಿಯುವುದು ಒಂದೇ. ಪರಮ ಸತ್ಯ ಎಲ್ಲೋ ಒಂದೆಡೆ ದೊರಕುವಂತಹದಲ್ಲ. ಅದು ನಮ್ಮಲ್ಲಿ ನಮ್ಮ ಎಡ ಬಲ, ಹಿಂದೆ-ಮುಂದೆ, ಮೇಲೆ-ಕೆಳಗೆ ಎಲ್ಲೆಲ್ಲೂ ಅಸ್ತಿತ್ವ ಉಳ್ಳದ್ದು ಆದರೂ ಅದು ತನಗೆ ತಾನೇ ಕಾಣಿಸಿಕೊಳ್ಳುವುದಲ್ಲ. ನಿಷ್ಠೆಯ ಹುಡುಕಾಟವೇ ಅಲ್ಲಿಗೆ ನಮ್ಮನ್ನು ಕೊಂಡೊಯ್ಯಬಲ್ಲದು"[೮೫] ಎಂಬ ಡಾ. ಬಿ.ಕೆ. ಹಿರೇಮಠ ಅವರ ಮಾತುಗಳನ್ನೇ ಆರಂಭದಲ್ಲಿ ಬಳಸಿರುವುದು ಅರ್ಥಪೂರ್ಣವಾಗಿದೆ. ಈ ಗ್ರಂಥದಲ್ಲಿ ಬಳಸಿರುವ ವರ್ಣ ರಂಜಿತ, ಛಾಯಾಚಿತ್ರಗಳು, ಕಪ್ಪು ಬಿಳುಪಿನ ಚಿತ್ರಗಳು ಹೃದಯಂಗಮವಾಗಿವೆ. ಗ್ರಂಥದುದ್ದಕ್ಕೂ ಕಂಡುಬರುವ ರೇಖಾಚಿತ್ರಗಳು ಕೃತಿಯ ಮೌಲ್ಯವನ್ನು ಹೆಚ್ಚಳಗೊಳಿಸಿವೆ. ಡಾ. ಬಿ.ಆರ್. ಹಿರೇಮಠ ಅವರು ನಿಜದ ನೆಲೆಯನ್ನು ಎಲ್ಲ ನೆಲೆಗಳಿಂದಲೂ ಸಮೃದ್ಧವಾಗುವಂತೆ ಮಾಡಿದ್ದಾರೆ. ಸಂಪಾದನ ಕಾರ್ಯಕ್ಕೊಂದು ಕೈಗನ್ನಡಿಯಾಗಿದೆ.

**೪.೫.೩ ಕನ್ನಡ ಪ್ರಪಂಚ :**

ಇದು ನಾಡೋಜ ಡಾ. ಪಾಟೀಲ ಪುಟ್ಟಪ್ಪನವರ ಅಭಿನಂದನ ಗ್ರಂಥವಾಗಿದೆ. ಧಾರವಾಡದ ಡಾ. ಪಾಟೀಲ ಪುಟ್ಟಪ್ಪ ಅಭಿನಂದನ ಸಮಿತಿಯಿಂದ ೨೦೦೩ರಲ್ಲಿ ಪ್ರಸ್ತುತ ಕೃತಿಯು ಪ್ರಕಟವಾಗಿದೆ. ಪ್ರೊ. ಬಿ.ವಿ. ಗುಂಜೆಟ್ಟಿ, ಡಾ. ಬಿ.ಆರ್. ಹಿರೇಮಠ, ಡಾ. ಜಿ.ಎಂ. ಹೆಗಡೆ ಸಂಯುಕ್ತವಾಗಿ ಸಂಪಾದಿಸಿದ ಗ್ರಂಥವಿದು. ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಪಾಪು ಅವರು ಸರ್ವಾನುಮತದಿಂದ ಆಯ್ಕೆಯಾದ ಸಂದರ್ಭದಲ್ಲಿ ರೂಪುಗೊಂಡಿದ್ದು, ವಿಶೇಷ ಅಂಶವಾಗಿದೆ. "ಕನ್ನಡ ಪ್ರಪಂಚ ಪಾಪು ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗುತ್ತಿರುವ ಸಂದರ್ಭದಲ್ಲಿ ತವರಿನ ಅಭಿಮಾನಿಗಳ ಪ್ರೀತಿಯ ಬಾಗಿನವಾಗಿದೆ"[೮೬] ಎಂಬ ಮಾತು ಅಕ್ಷರಶಃ ಸತ್ಯವಾಗಿದೆ.

ಡಾ. ಪಾಟೀಲ ಪುಟ್ಟಪ್ಪನವರು ಕನ್ನಡದ ಅಸ್ಮಿತೆ, ಕನ್ನಡದ ಅನನ್ಯತೆ, ಕನ್ನಡದ ಸ್ವಾಭಿಮಾನದ ಪ್ರತೀಕವಾಗಿದ್ದಾರೆ. ಕನ್ನಡ, ಕನ್ನಡಿಗ, ಕರ್ನಾಟಕ ಈ ಮೂರಕ್ಕೂ ಕರುಳು ಬಳ್ಳಿಯ ಸಂಬಂಧವಿದೆ. ಈ ಮೂರನ್ನೂ ಪಾಪು ಅವರು ಸಮರ್ಥವಾಗಿ ಪ್ರತಿನಿಧಿಸುತ್ತಾರೆ. "ಆಧುನಿಕ ಕರ್ನಾಟಕಕ್ಕೂ ಪಾಟೀಲ ಪುಟ್ಟಪ್ಪ ಅವರಿಗೂ ಅವಿನಾಭಾವ ಸಂಬಂಧ. ಒಂದು ಬಿಟ್ಟು ಒಂದಿಲ್ಲ ಎನ್ನುವಷ್ಟು ಹಾಸುಹೊಕ್ಕು. ಕರ್ನಾಟಕದ ಏಕೀಕರಣ ಚಳುವಳಿಯಿಂದ ಹಿಡಿದು ಹುಬ್ಬಳ್ಳಿಗೆ ನೈಋತ್ಯ ವಲಯ ಸ್ಥಾಪಿಸುವವರೆಗೆ ಅವರ ಹೋರಾಟ ಪ್ರತಿಘಟ್ಟದಲ್ಲೂ ದಾಖಲುಗೊಳ್ಳುವಂಥದ್ದು. ಕರ್ನಾಟಕದ ನೆಲ ಜಲಕ್ಕೆ ಅನ್ಯಾಯ ಒದಗಿದಾಗಲೆಲ್ಲ ಸಿಡಿಮದ್ದಿನಂತೆ ಸ್ಫೋಟಿಸಿದ ಪಾಪು ಕನ್ನಡದ ಎಚ್ಚೆತ್ತ ಪ್ರಜ್ಞೆಯ ಸಂಕೇತವಾಗಿದ್ದಾರೆ. ಕರ್ನಾಟಕ ಚರಿತ್ರೆಯ ಎಳೆ ಎಳೆಯನ್ನು ಅಂಗೈ ಗೆರೆಯಷ್ಟು ಸ್ಪಷ್ಟವಾಗಿ ಚಿತ್ರಿಸಿರುವ ಪಾಪು ಕನ್ನಡಿಗರ ಸ್ವಾಭಿಮಾನದ ಬದುಕನ್ನು ಧಾರ್ಮಿಕ ಸಹಿಷ್ಣುತೆಯನ್ನು ಔದಾರ್ಯ ಗುಣವನ್ನು ಪರಾಕ್ರಮವನ್ನು ಮೈನವಿರೇಳಿಸುವಂತೆ ಬಣ್ಣಿಸಿದ್ದಾರೆ. ಗಡಿನಾಡು ಕನ್ನಡದ ಬಗ್ಗೆ ಪುಟ್ಟಪ್ಪ ಅವರು ತೋರಿದ ಕಾಳಜಿಯಂತೂ ಅನನ್ಯ"[೮೨] ಎಂಬ ಪೂಜ್ಯ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ತೋಂಟದಾರ್ಯಮಠ ಗದಗ ಅವರ ಮಾತುಗಳು ಡಾ. ಪಾಪು ಅವರ ಭವ್ಯ ವ್ಯಕ್ತಿತ್ವ ಹಾಗೂ ಅವರ ಅವಿತರ ಹೋರಾಟವನ್ನು ಅರ್ಥಪೂರ್ಣವಾಗಿ ಪರಿಚಯಿಸುತ್ತವೆ.

ಕನ್ನಡ ಪ್ರಪಂಚವು ಕನ್ನಡ ದಿಗ್ಗಜರ ಅಪೂರ್ವ ಸಂಗಮವಾಗಿದೆ. ರಾಜಕೀಯ ಧುರೀಣರು, ಧಾರ್ಮಿಕ ಮುಖಂಡರು, ಆಡಳಿತಗಾರರು, ಪತ್ರಿಕೋದ್ಯಮಿಗಳು, ಅಭಿಯಂತರು, ಕುಲಪತಿಗಳು, ಪ್ರಾಧ್ಯಾಪಕರು, ನ್ಯಾಯವಾದಿಗಳು, ವಿಮರ್ಶಕರು, ಸಂಶೋದಕರು, ಜಾನಪದ ವಿದ್ವಾಂಸರು, ಭಾಷಾ ವಿಜ್ಞಾನಿಗಳು, ಶೈಕ್ಷಣಿಕ ತಜ್ಞರು. ಕನ್ನಡ ಹೋರಾಟಗಾರರು, ಜನಪರ ಚಳುವಳಿಗಾರರು, ವ್ಯಾಪಾರಿಗಳು, ಕಲಾವಿದರು, ಮಕ್ಕಳ ಸಾಹಿತಿಗಳು ಹೀಗೆ ಸಮಾಜದ ವಿಭಿನ್ನ ಮುಖಗಳೆಲ್ಲ ಇಲ್ಲಿ ಅನಾವರಣಗೊಂಡಿವೆ. ಒಂದೊಂದು ಕ್ಷೇತ್ರದಲ್ಲಿ ಮಹೋನ್ನತ ಸಾಧನೆ ಮಾಡಿದ ದಿಗ್ಗಜರನ್ನೆಲ್ಲ ಒಂದೆಡೆ ಸೇರಿಸಿ, ಅವರ ಲೇಖನಗಳನ್ನು ಸಂಕಲಿಸಿ ಪುಸ್ತಕವನ್ನು ರೂಪಿಸುವುದು ಕಷ್ಟಸಾಧ್ಯವಾದ ಕಾರ್ಯವಾಗಿದೆ. ಡಾ. ಬಿ. ಆರ್. ಹಿರೇಮಠರು ಇತರ ಸಂಪಾದಕರೊಡನೆ ಈ ಘನ ಕಾರ್ಯವನ್ನು ಯಶಸ್ವಿಯಾಗಿ ನಿಭಾಯಿಸಿದ್ದಾರೆ.

ಗದಗ ಪೂಜ್ಯ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳ ಶುಭ ಹಾರೈಕೆಯಿದೆ. ನಾಡೋಜ ಚೆನ್ನವೀರ ಕಣವಿಯವರ ಸುನೀತ -'ಪಾಪು : ಮಹಾಪ್ರಸ್ಥಾನ' ಇವೆರಡು ಕನ್ನಡ ಪ್ರಪಂಚಕ್ಕೆ ಮುಕುಟ ಪ್ರಾಯವಾಗಿವೆ. ಶ್ರೀಮಾನ್ ಎಚ್.ಕೆ. ಪಾಟೀಲರ - ಕರ್ನಾಟಕದ ಸಾಕ್ಷಿ, ಪ್ರಜ್ಞೆ, ಡಾ. ಜಿ.ಎಂ. ಹೆಗಡೆಯವರ ಪಾಪು ಜೀವನ ಮತ್ತು ಸಾಹಿತ್ಯ, ಪ್ರೊ. ಸ.ಸ. ಮಾಳವಾಡರ ವಿದ್ಯಾರ್ಥಿ ನಾಯಕ ಕತೆಗಾರ ಪಾಪು, ಡಾ. ಆರ್.ಸಿ. ಹಿರೇಮಠ ಅವರ ಸ್ನೇಹಕ್ಕೆ ಇನ್ನೊಂದು ಹೆಸರು ಪಾಪು, ಡಾ. ದೇ. ಜವರೇಗೌಡ ಅವರ ಪ್ರಪಂಚದ ಪಾಟೀಲ ಪುಟ್ಟಪ್ಪನವರು, ಎನ್.ಕೆ. ಕುಲಕರ್ಣಿಯವರ ನಮ್ಮ ಪಾಪು, ಪ್ರೊ. ಬಿ.ಟಿ. ಸಾಸನೂರ ಅವರ ಅಸ್ಖಲಿತ ಮಾತುಗಾರ ಪಾಪು, ಡಾ. ಹಾ.ಮಾ. ನಾಯಕ

ಅವರ ಕನ್ನಡ ಕಾವಲು ಪಾಪು ಮಾಡಿದ ಅದ್ಭುತ ಕಾರ್ಯ, ಡಾ. ಜಿ.ಎಸ್. ಆಮೂರ ಅವರ ಪಾಪು ಸಮಗ್ರ ಕಥೆಗಳು, ರಾಮ ಜಾಧವ ಅವರ -ಚಿರಚೇತನ, ಜಿ.ಜಿ. ದೊಡವಾಡರ- ಶ್ರೀ ಮುರುಘಾಮಠದ ಅನನ್ಯ ಭಕ್ತ, ಪ್ರೊ. ನ. ವಜ್ರಕುಮಾರ ಅವರ ಕನ್ನಡದ ಪಾಂಚಜನ್ಯ, ಡಾ. ಕು.ಶಿ. ಹರಿದಾಸಭಟ್ಟರ ಸಮಗ್ರ ಪಾಪು ಪ್ರಪಂಚ, ಕಯ್ಯಾರ ಕಿಞ್ಞಣ್ಣ ರೈ ಅವರ ಆತ್ಮೀಯರಾದ ಡಾ. ಪಾಟೀಲ ಪುಟ್ಟಪ್ಪ, ಡಾ. ಹಂಪನಾ ಅವರ - ನಿರ್ಭಿಡೆಯ ಚಿಂತನಕಾರ, ಡಾ. ಆರ್.ಎಂ. ಗಜೇಂದ್ರಗಡ ಅವರ ಸವ್ಯಸಾಚಿ ಪಾಪು, ಡಾ. ಗುರುಲಿಂಗ ಕಾಪಸೆಯವರ ಪಾಪು ಪತ್ರಗಳು, ಶ್ರೀ ಬಿ.ಆರ್. ವಾಡಪ್ಪಿಯವರ -ಚಿಂತನಶೀಲ ಪಾಪು, ಡಾ. ಎಸ್.ಎಂ. ವೃಷಭೇಂದ್ರ ಸ್ವಾಮಿಗಳ ಕನ್ನಡದ ಅಪ್ಪಟ ಹೋರಾಟಗಾರ ಪಾಟೀಲ ಪುಟ್ಟಪ್ಪ, ಡಾ. ಸದಾನಂದ ಕನವಳ್ಳಿಯವರ ಕನಸಿನಲ್ಲೂ ಕನ್ನಡವನ್ನೇ ಕನವರಿಸುವ ಪಾಟೀಲ ಪುಟ್ಟಪ್ಪ, ಚ.ವಿ. ಮುಳುಗುಂದರ - ಮೇರು ಸದೃಶ ವಿಶಿಷ್ಟ ವ್ಯಕ್ತತ್ವದ ಪಾಪು, ಡಾ. ಜಿ.ಡಿ. ಜೋಶಿ ಅವರ ಕನ್ನಡಕ್ಕಾಗಿ ಹೋರಾಡಿ ನಾಡೋಜನಾಗಿ ಬೆಳೆದು ನಿಂತ ಪಾಟೀಲ ಪುಟ್ಟಪ್ಪ, ಡಾ. ಸೋಮಶೇಖರ ಇಮ್ರಾಪುರ ಅವರ ಕನ್ನಡ ಕರ್ನಾಟಕಮಯ ಪಾಪು, ದತ್ತಾತ್ರೇಯ ಕೆ. ಮೆಂಡನ್ ಅವರ ಮಾರ್ಗದರ್ಶಕ; ಪಾಪು, ಸಿ. ಎಚ್. ಪ್ರಹ್ಲಾದರಾವ್‌ರ ಪಾಪು ಪ್ರಪಂಚ, ಭರತಕುಮಾರ್ ಪೋಲಿಸು ಅವರ ಪಾಪು: ನಾನು ಕಂಡಂತೆ, ಪ್ರೊ. ಆರ್.ವ್ಹಿ. ಹೊರಡಿಯವರ ಅಪ್ರತಿಮ ಹೋರಾಟಗಾರ ಪ್ರಪಂಚದ ಪಾಪು, ಪ್ರೊ. ಸಿ.ಪಿ. ಹೇಮಗಿರಿಮಠ ಅವರ ಅಜಾತಶತ್ರು ಅಭಿಮಾನದ ಪಾಪು, ನಿರಂಜನ ವಾಲಿಶೆಟ್ಟರ ಅವರ ಪಾಪು ಕನ್ನಡದ ಕೆಲಸಕ್ಕೆ ಸದಾ ಮುಂದು, ಬೆನಕನಹಳ್ಳಿ ಶೇಖರಗೌಡರ - ಕನ್ನಡದ ಧೀಮಂತ ದಂಡನಾಯಕ ಪಾಟೀಲ ಪುಟ್ಟಪ್ಪ, ಈಶ್ವರಚಂದ್ರ ಚಿಂತಾಮಣಿ ಅವರ ಪಾಪು ಪ್ರಪಂಚ, ಆರೂರು ಲಕ್ಷ್ಮಣ ಶೇಠ್ ಅವರ ಪಾಪು ಎಂದರೆ ಸಾಲದೆ ? ಪ್ರೊ. ಬಿ.ವ್ಹಿ. ಗುಂಜೆಟ್ಟಿಯವರ - ನಾಡೋಜ ಡಾ. ಪಾಟೀಲ ಪುಟ್ಟಪ್ಪ, ಪ್ರೊ. ಎಸ್.ಸಿ. ಹಿರೇಮಠ ಅವರ ಬೆಳೆಯ ಸಿರಿ ಮೊಳಕೆಯಲ್ಲಿ, ಡಾ. ಎಚ್.ವ್ಹಿ. ನಾಗೇಶ ಅವರ ಪಾಪು ಪ್ರಪಂಚ ಕೆಲವು ಆತ್ಮೀಯ ನೋಟಗಳು, ಡಾ. ಬಿ.ಆರ್. ಹಿರೇಮಠ ಅವರ ಪ್ರಭಾವಶಾಲಿ ಮತ್ತು ಹೃದಯವಂತಿಕೆ ವ್ಯಕ್ತಿತ್ವದ ಪಾಪು, ಡಾ. ಚೆನ್ನಕ್ಕ ಪಾವಟೆ ಅವರ - ಬಹುಮುಖ ಪ್ರತಿಭೆಯ ಪಾಪು, ಡಾ. ಓಂಕಾರ ಕಾಕಡೆಯವರ ಕನ್ನಡ ಹೆಮ್ಮೆಯ ಪುತ್ರ ಪಾಟೀಲ ಪುಟ್ಟಪ್ಪ, ಡಾ. ಮೋಹನ ನಾಗಮ್ಮನವರ ಅವರ ಕನ್ನಡದ ಕಲಿ ಡಾ. ಪಾಟೀಲ ಪುಟ್ಟಪ್ಪನವರು ನಾಡು ನುಡಿ ಚಿಂತನೆ, ಡಾ. ಗುರುದೇವಿ ಹುಲೆಪ್ಪನವರಮಠ ಅವರ - ಕನ್ನಡಿಗರ ಕಣ್ಮಣಿ ಡಾ. ಪಾಟೀಲ ಪುಟ್ಟಪ್ಪನವರು, ಡಾ. ಶಿವಾನಂದ ಗಾಳಿಯವರ ನಾನು ಕಂಡ ಪಾಪು, ಡಾ. ವ್ಹಿ. ಎಸ್. ಮಾಳಿಯವರ ಪಾಪು; ಕನ್ನಡ ಬಾಪು, ಅರುಂಧತಿ ಬದಾಮಿಯವರ ಪಾಪು, ಅವರ ಬದುಕುವ ಮಾತು, ಬಿ.ಎಸ್. ಕೇಶವರಾವ್ ಅವರ ಹಿರಿಯರ ಬದುಕು ಪಾಪು ಪ್ರಪಂಚ, ಪ್ರೊ. ಸಿದ್ದಣ್ಣ ಉತ್ನಾಳರ ಪತ್ರಿಕಾ ಪ್ರಪಂಚದ ಪಾಪು, ಡಾ. ಶಿವಾನಂದ ಕಲ್ಲೂರರ ಕ್ರಿಯಾಶೀಲ ಬರಹಗಾರ 'ಪಾಪು', ರಾಜನ್ ಭಟ್ಟ ಅವರ ಕನ್ನಡದ ಕಹಳೆ ನಾಡೋಜ ಡಾ. ಪಾಟೀಲ ಪುಟ್ಟಪ್ಪನವರು, ಶಿವಪುತ್ರಯ್ಯ ರಾಚಯ್ಯನವರ ಅವರ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷ ಪಾಪು ಮುಂತಾಗಿ ಐವತ್ತೊಂದು ಲೇಖನಗಳಿವೆ.

ಒಂದು ಹಾರೈಕೆ, ಒಂದು ಕವಿತೆಯನ್ನೊಳಗೊಂಡು ಒಟ್ಟು ೫೩ ಬರಹಗಳಿರುವ ೨೮೨ ಪುಟಗಳಿರುವ ಗ್ರಂಥವಿದು. ಪಾಟೀಲ ಪುಟ್ಟಪ್ಪನವರ ಅಭಿನಂದನ ಗ್ರಂಥವಾಗಿದ್ದರೂ ಇದು ಕರ್ನಾಟಕ ಕಾಲೇಜು, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ವಿಶ್ವವಿದ್ಯಾಲಯದ ಅವಿಸ್ಮರಣೀಯ ಘಟನೆಗಳನ್ನು ದಾಖಲಿಸುವ ಅಪೂರ್ವ ಗ್ರಂಥವಾಗಿದೆ. ಗೋಕಾಕ ಚಳುವಳಿ, ಹುಬ್ಬಳ್ಳಿಯ ರೇಲ್ವೆ ವಲಯ, ಗಡಿನಾಡಿನ ಹೋರಾಟ, ಭಾಷಾ ಚಳುವಳಿ, ಉತ್ತರ ಕರ್ನಾಟಕದ ಅಭಿವೃದ್ಧಿಯ ಮಂತ್ರ ಮುಂತಾದವುಗಳನ್ನೆಲ್ಲ ಚಿತ್ರಿಸುತ್ತದೆ. ಅರವತ್ತು ವರುಷದ ಉತ್ತರ ಕರ್ನಾಟಕದ ಸಾಂಸ್ಕೃತಿಕ ಜಗತ್ತನ್ನು ಕನ್ನಡ ಪ್ರಪಂಚ ಕಟ್ಟಿಕೊಟ್ಟಿದೆ. ಡಾ. ಬಿ. ಆರ್. ಹಿರೇಮಠ, ಡಾ. ಜಿ.ಎಂ. ಹೆಗಡೆ, ಪ್ರೊ. ಬಿ.ವ್ಹಿ. ಗುಂಜೆಟ್ಟಿಯವರ ಶ್ರಮ ಸಾರ್ಥಕವಾಗಿದೆ. ಕನ್ನಡ ನಾಡಿನ ಸಾಂಸ್ಕೃತಿಕ ಚೈತನ್ಯಗಳನ್ನು ಒಂದೆಡೆ ಸಂಕಲಿಸಿರುವುದು ಸಾಹಸದ ಕಾರ್ಯವಾಗಿದೆ. ಕನ್ನಡದ ಸಮೃದ್ಧತೆಗೆ 'ಕನ್ನಡ ಪ್ರಪಂಚ'ವು ಸಾಕ್ಷಿಯಾಗಿದೆ.

ಈ ಅಧ್ಯಾಯವು ಸಂಪಾದನ ಸಾಹಿತ್ಯಕ್ಕೆ ಮೀಸಲಾಗಿದೆ. ಇದರಲ್ಲಿ ಸ್ವತಂತ್ರ ಸಂಪಾದನೆ. ಇತರರೊಡನೆ ಸಂಪಾದನೆ ಮತ್ತು ಪತ್ರಿಕಾ ಸಂಪಾದನೆ ಎಂದು ಮುಖ್ಯವಾಗಿ ಮೂರು ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ಸ್ವತಂತ್ರ ಸಂಪಾದನೆಯಲ್ಲಿ ಅಧ್ಯಯನಕ್ಕನುಕೂಲವಾಗುವಂತೆ ಮತ್ತೆ ಉಪ ಅಧ್ಯಾಯಗಳನ್ನು ರಚಿಸಲಾಗಿದೆ. ಇದರಲ್ಲಿ ವಚನ ಸಾಹಿತ್ಯ, ಶರಣ ಸಾಹಿತ್ಯ, ಸಂಕೀರ್ಣ ಸಾಹಿತ್ಯ ಕೃತಿಗಳನ್ನು ತಲಸ್ಪರ್ಶಿಯಾಗಿ ಅಧ್ಯಯನಿಸಿ ಫಲಿತಗಳನ್ನು ದಾಖಲಿಸಲಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ಸ್ವತಂತ್ರವಾಗಿ ಸಂಪಾದಿಸಿರುವ ಒಟ್ಟು ೧೧ ಕೃತಿಗಳನ್ನು ಇದರಲ್ಲಿ ವಿಶ್ಲೇಷಿಸಲಾಗಿದೆ. ಸಂಪಾದನೆ, ಸಂಪಾದನೆಯ ಮಹತ್ವ, ಡಾ. ಬಿ.ಆರ್. ಅವರ ಸಂಪಾದನೆಯ ವಿಶೇಷತೆಗಳನ್ನು ಸಾಂದರ್ಭಿಕವಾಗಿ ಗುರುತಿಸಲಾಗಿದೆ.

ಡಾ. ಬಿ.ಆರ್. ಹಿರೇಮಠ ಅವರು ಇತರರೊಡನೆ ಕೂಡಿ ಕೆಲ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅಧ್ಯಯನದ ಅನುಕೂಲಕ್ಕಾಗಿ ಗ್ರಂಥ ಸ್ವರೂಪದಲ್ಲಿ ಪ್ರಕಟವಾದ ಕೃತಿಗಳನ್ನು ಅನುಲಕ್ಷಿಸಿ ಮತ್ತೆ ಕೆಲ ಉಪ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಮುಖ್ಯವಾಗಿ ಶಾಸನ ಸಾಹಿತ್ಯ, ಹಸ್ತಪ್ರತಿ ಸಾಹಿತ್ಯ. ವಚನ ಸಾಹಿತ್ಯ, ಸಂಕೀರ್ಣ ಸಾಹಿತ್ಯ ಮುಂತಾದವುಗಳು ಇದರಲ್ಲಿ ಕೆಲ ಕೃತಿಗಳನ್ನು ಸಂಯುಕ್ತವಾಗಿ ಸಂಪಾದಿಸಲಾಗಿದೆ. ಮತ್ತೆ ಕೆಲವನ್ನು ಇಬ್ಬರಿಗಿಂತಲೂ ಹೆಚ್ಚು ಜನ ಕೂಡಿ ಸಂಪಾದಿಸಿದ್ದಾರೆ. ಆಯಾ ಕೃತಿಗಳನ್ನು ಪರಿಚಯಿಸುವಾಗ ಈ ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ಒಟ್ಟು ೧೧ ಕೃತಿಗಳನ್ನು ಇತರರೊಡನೆ ಸಂಪಾದಿಸಿ ಕೊಟ್ಟಿದ್ದಾರೆ. ಗ್ರಂಥ ಸಂಪಾದನಾ ಶಾಸ್ತ್ರದ ಸ್ಥೂಲ ತಿಳುವಳಿಕೆ ಮತ್ತು ಶಾಸ್ತ್ರೀಯ ಚೌಕಟ್ಟಿನೊಳಗೆ ಮಾಡಿದ ಅಧ್ಯಯನವನ್ನು ಇದರಲ್ಲಿ ವಿವರಿಸಲಾಗಿದೆ.

**೪. ಪತ್ರಿಕಾ ಸಂಪಾದನೆ :**

**೪.೦. ಪ್ರವೇಶ :**

ಆಧುನಿಕ ಸಮೂಹ ಸಂವಹನ ಮಾಧ್ಯಮಗಳಲ್ಲಿ ಪತ್ರಿಕೆ ಒಂದಾಗಿದೆ. ಶಾಸಕಾಂಗ, ನ್ಯಾಯಾಂಗ, ಕಾರ್ಯಾಂಗದ ಜೊತೆಗೆ ಪತ್ರಿಕಾಂಗವು ಒಂದು ಮಹತ್ವದ ಅಂಗವಾಗಿದೆ. ಪತ್ರಿಕಾಂಗವನ್ನು ಸಂವಿಧಾನದ ನಾಲ್ಕನೇ ಸ್ತಂಭವೆಂದು ಕರೆಯುವುದುಂಟು ಪತ್ರಿಕಾ ರಂಗವನ್ನು ಪ್ರಜಾಪ್ರಭುತ್ವದ ಊರುಗೋಲು ಎಂದು ವ್ಯಾಖ್ಯಾನಿಸಲಾಗುತ್ತದೆ. ಜನಾಭಿಪ್ರಾಯವನ್ನು ರೂಢಿಸುವ ಗುರುತರವಾದ ಹೊಣೆಗಾರಿಕೆ ಪತ್ರಿಕೆಯದ್ದಾಗಿದೆ. ಒಂದು ಸರ್ಕಾರವನ್ನು ಗೆಲ್ಲಿಸುವ ಇಲ್ಲವೆ ಒಂದು ಸರ್ಕಾರವನ್ನು ಮನೆಗೆ ಕಳಿಸುವ ಶಕ್ತಿ ಈ ಪತ್ರಿಕಾಂಗಕ್ಕಿದೆ.

ಆಳುವ ಸರ್ಕಾರಗಳು ಆನೆಗಳಂತಾದರೆ ಪತ್ರಿಕೆಗಳು ಅಂಕುಶದಂತೆ ಕಾರ್ಯನಿರ್ವಹಿಸುತ್ತವೆ. ಪ್ರಜಾಪ್ರಭುತ್ವದಲ್ಲಿ ಪತ್ರಿಕೆಗೆ ಬಹಳ ಮಹತ್ತರವಾದ ಸ್ಥಾನಮಾನವಿದೆ. ಅಷ್ಟೇ ಗುರುತರವಾದ ಜವಾಬ್ದಾರಿಯೂ ಇದೆ. ಸ್ವಾತಂತ್ರ್ಯಾಂದೋಲನದಲ್ಲಿ ಪತ್ರಿಕೆಗಳು ನಿರ್ವಹಿಸಿದ ಕಾರ್ಯ ಅಪ್ರತಿಮವಾಗಿದೆ. ಹಾಗೆಯೇ ಕರ್ನಾಟಕ ಏಕೀಕರಣ ಚಳುವಳಿ, ಗೋಕಾಕ ವರದಿ ಅನುಷ್ಠಾನಕ್ಕಾಗಿ ನಡೆದ ಹೋರಾಟ ಮುಂತಾದ ಹತ್ತು ಹಲವಾರು ಸಂದರ್ಭಗಳನ್ನಿಲ್ಲಿ ನೆನಪಿಸಿಕೊಳ್ಳಬಹುದು.

ಪತ್ರಿಕೆಗಳು ಸಾಹಿತ್ಯದ ಬೆಳವಣಿಗೆಗೆ ನೀಡಿದ ಕೊಡುಗೆಯು ಅಪಾರವಾದುದು. ಸಮಾಜದ ಎಲ್ಲ ರಂಗಗಳಲ್ಲಿಯೂ ಪತ್ರಿಕೆಯು ಗಣನೀಯ ಸೇವೆ ಸಲ್ಲಿಸಿದೆ. ಪತ್ರಿಕೆಯಿಂದಾಗಿ ಕಥಾ ಪ್ರಪಂಚ ವಿಸ್ತಾರವಾಗಿದೆ. ಪ್ರಬಂಧ, ವಿಮರ್ಶೆ, ಅಂಕಣ ಬರಹಗಳು ಪತ್ರಿಕೆಯಿಂದಲೇ ಮೂಡಿ ಬಂದವುಗಳು. ಬದುಕಿನ ಎಲ್ಲ ರಂಗಗಳಿಗೂ ಪತ್ರಿಕೆಯು ಸದಾ ಸ್ಪಂದಿಸುತ್ತದೆ. ಕಲೆ, ಸಾಹಿತ್ಯ, ಸಂಗೀತ, ಜಾನಪದ ಮುಂತಾದ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳಿಗೂ ಪತ್ರಿಕೆ ತನ್ನದೇ ಆದ ಕೊಡಿಗೆ ನೀಡಿದೆ. ಒಂದು ಜನಾಂಗದ ಜೀವನ ವಿಧಾನವನ್ನು ರೂಪಿಸಿದ ಕೀರ್ತಿ ಪತ್ರಿಕೆಗಳಿಗೆ ಸಲ್ಲುತ್ತದೆ. ಪತ್ರಿಕೆಗಳಲ್ಲಿ ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕ, ಮಾಸಿಕ, ದ್ವೈಮಾಸಿಕ, ತ್ರೈಮಾಸಿಕ, ಚಾತುರ್ಮಾಸಿಕ, ಷಾಣ್ಮಾಷಿಕ ಮತ್ತು ವಾರ್ಷಿಕ ಮುಂತಾದ ವಿವಿಧ ಪ್ರಕಾರಗಳಿವೆ. ಈ ವಿವಿಧ ಪ್ರಕಾರಗಳಲ್ಲಿ ಸಾವಿರಾರು ಪತ್ರಿಕೆಗಳಿಂದು ಭರಾಟೆಯಿಂದ ಮುನ್ನಡೆದಿವೆ. ಕನ್ನಡದ ಧೀಮಂತ ಲೇಖಕರು ಪತ್ರಿಕಾ ರಂಗದಿಂದಲೇ ಒಡಮೂಡಿಬಂದಿದ್ದು ಕನ್ನಡ ಸಾಹಿತ್ಯಕ್ಕೆ ಅನುಪಮವಾದ ಕಾಣಿಕೆ ನೀಡಿದ್ದಾರೆ. "ವಾರ ಪತ್ರಿಕೆಗಳು, ದಿನ ಪತ್ರಿಕೆಗಳು ಪ್ರಾರಂಭವಾಗಿ ರಾಜಕೀಯ ಸುದ್ದಿ ಸಮಾಚಾರಗಳಿಗೆ ಪ್ರಾಶಸ್ತ್ಯ ಕೊಡತೊಡಗಿದರೂ ಇತರ ನಿಯತಕಾಲಿಕೆಗಳ ಮಹತ್ವ ಕಡಿಮೆಯಾಗಲಿಲ್ಲ. 'ಸದ್ಬೋಧ ಚಂದ್ರಿಕೆ'ಯ ಗಳಗನಾಥರು, 'ಜಯಕರ್ನಾಟಕ'ದ ಆಲೂರು ವೆಂಕಟರಾಯರು, 'ಜಯಂತಿ'ಯ ಬೆಟಗೇರಿ ಕೃಷ್ಣಶರ್ಮರು, 'ಕರ್ನಾಟಕ'ದ

ಡಿ.ವಿ. ಗುಂಡಪ್ಪನವರು, 'ವೀರಕೇಸರಿ' ಸೀತಾರಾಮ ಶಾಸ್ತ್ರಿಗಳು 'ಸುಹಾಸಿನಿಯ' ಬೆನಗಲ್ ರಾಮರಾಯರು, 'ರಾಷ್ಟ್ರ ಬಂಧು'ವಿನ ಕಡೆಂಗೋಡ್ಲು ಶಂಕರಭಟ್ಟರು, 'ವಸಂತ'ದ ಶಿವರಾಮ ಕಾರಂತರು, 'ಚಿತ್ರಗುಪ್ತ'ದ ನಿರಂಜನರು, 'ಕಸ್ತೂರಿ'ಯ ಪಾ.ವೆಂ. ಆಚಾರ್ಯರು. 'ಜೀವನ'ದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಮೊದಲಾದವರು ಪತ್ರಿಕಾ ಮಾಧ್ಯಮದ ಮೂಲಕ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದ್ದು ಅತ್ಯಂತ ಮಹತ್ವದ ಅಂಶವಾಗಿದೆ. ಇದೆಲ್ಲ ಗ್ರಂಥಸ್ಥ ಭಾಷೆಯಲ್ಲಿ ಏಕರೂಪತೆಯನ್ನು ಸಾಧಿಸಲು ಮಾಡಿದ ಅನುಪಮವಾದ ಸೇವೆಯಾಗಿದೆ"[ಅಅ]ಎಂದು ಸುರೇಂದ್ರ ದಾನಿಯವರು ಪತ್ರಿಕೆಯ ಕಾರ್ಯವಿಧಾನವನ್ನು ವಿವರಿಸಿದ್ದಾರೆ. ಅಡಿಗರ 'ಸಾಕ್ಷಿ', ಲಂಕೇಶರ 'ಲಂಕೇಶ ಪತ್ರಿಕೆ', ಪಾಪು ಅವರ 'ಪ್ರಪಂಚ', ಚಂಪಾ ಅವರ 'ಸಂಕ್ರಮಣ', 'ಶೂದ್ರ' ಶ್ರೀನಿವಾಸರ ಶೂದ್ರ, ರವಿ ಬೆಳಗೆರೆಯವರ 'ಹಾಯ್! ಬೆಂಗಳೂರು', ಸಿ.ಪಿ.ಕೆ. ಅವರ 'ಮಲ್ಲಿಗೆ', ಎಸ್. ವಿದ್ಯಾಶಂಕರ ಅವರ 'ಸ್ವಪ್ನಲೋಕ', ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ 'ಸಂಕಲನ,' ಯು.ಆರ್. ಅನಂತಮೂರ್ತಿಯವರ 'ರುಜುವಾತು', ಆರ್. ಜಿ. ಹಳ್ಳಿ ನಾಗರಾಜರ 'ಅನ್ವೇಷಣೆ', ರಾಘವೇಂದ್ರ ಪಾಟೀಲರ 'ಸಾಹಿತ್ಯ ಸಂವಾದ' ಮುಂತಾದವುಗಳು ಆಧುನಿಕ ಸಂದರ್ಭದಲ್ಲಿ ನಿರ್ವಹಿಸಿದ ಕಾರ್ಯ ಅಮೋಘವಾದುದು. ಲಂಕೇಶದಂತಹ ಪತ್ರಿಕೆಗಳು ಜನಮನವನ್ನು ರೂಪಿಸಿದಂತಹವುಗಳು. ಸಂಕ್ರಮಣದಂಥ ಪತ್ರಿಕೆಗಳು ಸಾಹಿತ್ಯಿಕ ಚಳುವಳಿಗಳನ್ನು ಬೆಳೆಸಿದಂತಹವುಗಳು. ಈ ಮೇಲೆ ಪ್ರಸ್ತಾಪಿಸಿದ ಪತ್ರಿಕೆಗಳು ಹೊಸಗನ್ನಡ ಸಾಹಿತ್ಯದ ಪ್ರವರ್ತಮಾನಕ್ಕೆ ನೀಡಿದ ಕೊಡುಗೆ ಮಹತ್ತರವಾಗಿದೆ.

ರೇಡಿಯೋ, ಚಲನಚಿತ್ರ, ದೂರದರ್ಶನದಂಥ ಅತ್ಯಂತ ಪ್ರಭಾವಶಾಲಿ ಸಮೂಹ ಸಂವಹನ ಮಾಧ್ಯಮಗಳಾಗಿದ್ದಾಗ್ಯೂ ಪತ್ರಿಕೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಹಿಂದೆಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿಯೂ ಇರುವುದು ಪತ್ರಿಕೆಯ ಅಂತಃಸತ್ವಕ್ಕೆ ಸಾಕ್ಷಿಯಾಗಿದೆ. ದೂರದರ್ಶನದ ನೂರಾರು ಚಾನಲ್‌ಗಳ ದಾಳಿ, ರಿಯಾಲಿಟಿ ಶೋಗಳ ಹಾವಳಿ, ಚಲನಚಿತ್ರದ ವೈಭವ- ರಮ್ಯಾದ್ಭುತಲೋಕಗಳ ನಡುವೆಯೇ ಪತ್ರಿಕೆಯು ಸಶಕ್ತವಾಗಿದೆ. ದೃಶ್ಯ ಮತ್ತು ಶ್ರವ್ಯ ಮಾಧ್ಯಮಗಳ ತೀವ್ರ ಪೈಪೋಟಿ ಪ್ರಪಂಚದಲ್ಲಿಯೂ ಪತ್ರಿಕೆ ಉಳಿದುಕೊಂಡು ಬಂದಿದ್ದು ಅದರ ಸತ್ವಕ್ಕೆ ನಿದರ್ಶವಾಗಿದೆ.

ಯಾವುದೇ ಪತ್ರಿಕೆಯಲ್ಲಿ ಸಂಪಾದಕನ ಪಾತ್ರವು ಅತ್ಯಂತ ಪ್ರಮುಖವೂ ಮತ್ತು ನಿರ್ಣಾಯಕವೂ ಆಗಿರುತ್ತದೆ. "ಪತ್ರಿಕಾ ಸಂಸ್ಥೆಯ ಆತ್ಮದಂತಿರುವ ಸಂಪಾದಕನು ಅತ್ಯಂತ ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ತನ್ನ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ವರದಿಗಾರನಲ್ಲಿ ಇರಬೇಕಾದ ವಿಶೇಷ ಗುಣಗಳ ಜೊತೆಗೆ ಇನ್ನೂ ಅನೇಕ ವಿಶೇಷ ಗುಣಗಳು ಅವನಲ್ಲಿರಬೇಕಾಗುತ್ತದೆ. ಆಡಳಿತ ಕ್ಷೇತ್ರದಲ್ಲಿ ವಿಶೇಷ ಪರಿಣಿತಿ ಹಾಗೂ ಪತ್ರಿಕಾ ಕ್ಷೇತ್ರದ ಜ್ಞಾನ ಇವುಗಳ ಮೇಳ ಹೊಂದಿದ್ದಲ್ಲಿ ತನ್ನ ಕಾರ್ಯದಲ್ಲಿ ಯಶಸ್ವಿಯಾಗಬಲ್ಲ. ಪತ್ರಿಕಾಕಾರನು ಧರ್ಮದರ್ಶಿ ಮಂಡಳಿ, ಮಾಲೀಕರ ಹಿತಾಸಕ್ತಿ, ಕೆಲಸಗಾರರ

ಹಿತಾಸಕ್ತಿ ಹಾಗೂ ಸಾರ್ವಜನಿಕರ ಹಿತಾಸಕ್ತಿಗಳನ್ನು ಗಮನದಲ್ಲಿರಿಸಿಕೊಂಡು ಮಾಲೀಕ ಹಾಗೂ ವರದಿಗಾರರ ಕೊಂಡಿಯಾಗಿರಬೇಕಾಗುತ್ತದೆ. ಪತ್ರಿಕೆ ಹಾಗೂ ಸಮುದಾಯಗಳ ಮಧ್ಯದ ಸೇತುವೆಯಾಗಿಯೂ ಅತ್ಯಂತ ಜವಾಬ್ದಾರಿಯಿಂದ ತನ್ನ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ."[೮೯] ಈ ಮಾತುಗಳು ಸಂಪಾದಕನ ಜವಾಬ್ದಾರಿ ಮತ್ತು ಕರ್ತವ್ಯಕ್ಕೆ ಕೈಗನ್ನಡಿಯಾಗಿವೆ. ಈ ಆಶಯಗಳನ್ನು ಕಣ್ಮುಂದೆ ಇರಿಸಿಕೊಂಡು ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿರುವ ಕರ್ನಾಟಕ ಭಾರತಿ, ವಿದ್ಯಾರ್ಥಿ ಭಾರತಿ ಮತ್ತು ಸುಕುಮಾರ ಪತ್ರಿಕೆಗಳನ್ನು ಪರಿಶೀಲಿಸಲಾಗಿದೆ. ಇಂತಹ ಪತ್ರಿಕಾ ರಂಗದಲ್ಲಿ ಡಾ. ಬಿ.ಆರ್. ಹಿರೇಮಠ ಅವರೂ ಕೂಡಾ ಒಬ್ಬರಾಗಿದ್ದಾರೆ. - ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಮುಖವಾಣಿಯಾದ ವಿದ್ಯಾರ್ಥಿ ಭಾರತಿ ಮತ್ತು ಕರ್ನಾಟಕ ಭಾರತಿ ಮತ್ತು ಶಿವಯೋಗ ಮಂದಿರವು ಹೊರಡಿಸುವ ಸುಕುಮಾರ ಪತ್ರಿಕೆಗಳನ್ನು ಅರ್ಥಪೂರ್ಣವಾಗಿ ಸಂಪಾದಿಸಿದ್ದಾರೆ. ಅವುಗಳನ್ನು ಸಂಕ್ಷಿಪ್ತವಾಗಿ ನೋಡಬಹುದು.

**೪.೧.೧. ಕರ್ನಾಟಕ ಭಾರತಿ :**

ಡಾ. ಬಿ.ಆರ್. ಹಿರೇಮಠ ಅವರು ಕರ್ನಾಟಕ ಭಾರತಿ ತ್ರೈಮಾಸಿಕ ಪತ್ರಿಕೆಯನ್ನು ಪಾಂಡಿತ್ಯಪೂರ್ಣವಾಗಿ ಸಂಪಾದಿಸಿ ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ೧೯೯೧-೯೨ರಿಂದ ೧೯೯೩-೯೪ ರ ವರೆಗೆ ಒಂದು ಅವಧಿ ಅಂದರೆ ಮೂರು ಶೈಕ್ಷಣಿಕ ವರ್ಷಗಳ ವರೆಗೆ ಅರ್ಥಪೂರ್ಣವಾಗಿ ಸಂಪಾದಿಸಿದ್ದಾರೆ. ಡಾ. ಬಿ. ಆರ್. ಹಿರೇಮಠರು ಕರ್ನಾಟಕ ಭಾರತಿಯ ಸಂಪಾದಕತ್ವ ವಹಿಸಿದ ಮೇಲೆ ಈ ಪತ್ರಿಕೆಗೊಂದು ಹೊಸ ಘನತೆ ಪ್ರಾಪ್ತವಾಯಿತು. ವಿವಿಧ ಜ್ಞಾನ ಶಿಸ್ತಿಗಳಿಗೆ ಇದರಲ್ಲಿ ಅವಕಾಶ ಲಭಿಸಿತು. ವಿಶ್ವವಿದ್ಯಾಲಯದ ವಿವಿಧ ವಿಭಾಗದ ವಿದ್ವತ್ ವ್ಯಕ್ತಿಗಳನ್ನು ಸಂಪರ್ಕಿಸಿ ಅಮೂಲ್ಯ ಲೇಖನ ಪಡೆದು ಪ್ರತಿ ಸಂಚಿಕೆಗಳನ್ನು ಸಂಗ್ರಹಯೋಗ್ಯವಾಗುವಂತೆ ರೂಪಿಸಿದ್ದು ಅವರ ಶ್ರಮಕ್ಕೆ ಹಿಡಿದ ಕನ್ನಡಿಯಾಗಿದೆ. ಉದಾಹರಣೆಗೆ ಕರ್ನಾಟಕ ಭಾರತಿಯನ್ನು ನಾಲ್ಕು ವಿವಿಧ ಸಂಚಿಕೆಗಳನ್ನಾಗಿ ಪರಿವರ್ತಿಸಿದ್ದು ಹೊಸತನಕ್ಕೆ ನಾಂದಿ ಹಾಡಿತು. ಒಂದು ಸ್ವಾತಂತ್ರ್ಯೋತ್ತರ ಸಂಚಿಕೆ (ಅಗಸ್ಟ) ಎರಡು ರಾಜ್ಯೋತ್ಸವ ಸಂಚಿಕೆ (ನವೆಂಬರ) ಮೂರು ಸಂಕ್ರಮಣ ಸಂಚಿಕೆ (ಜನವರಿ) ನಾಲ್ಕು ಅಕ್ಷಯ ತೃತೀಯ ಸಂಚಿಕೆ (ಎಪ್ರೀಲ್) ಪ್ರಸ್ತುತ ಸಂಚಿಕೆಗಳ ಶೀರ್ಷಿಕೆ ಗಳನ್ನು ಗಮನಿಸಿದರೆ ಸಾಕು ಹೊಸತನವು ಎದ್ದು ಕಾಣುತ್ತದೆ. ಈ ರೀತಿಯಾಗಿ ಪ್ರತಿ ಸಂಚಿಕೆಯನ್ನೂ ಅರ್ಥಪೂರ್ಣವಾಗಿ ಜ್ಞಾನದ ಕಣಜಗಳನ್ನಾಗಿ ಮಾರ್ಪಡಿಸಿದ್ದು ಗಮನಾರ್ಹವಾಗಿದೆ. "ಕರ್ನಾಟಕ ಭಾರತಿಯು ಸೃಜನ, ವಿಮರ್ಶನ, ಸಂಶೋಧನ, ಸಾಹಿತ್ಯ, ವಿಜ್ಞಾನ ಮತ್ತು ಮಾನವಿಕ ವಿಷಯಗಳ ಅಭಿವೃದ್ಧಿಗಾಗಿ ಮೀಸಲಾಗಿದೆ." ಕರ್ನಾಟಕ ಭಾರತಿ ಒಳಪುಟ ಲೇಖಕರಿಗೆ ಸೂಚನೆಯಲ್ಲಿ ಸಂ. ೨೪. ಸಂ. ೩ ಹೀಗಿದ್ದರೂ ಕೆಲವು ವಿಶೇಷ ಸಂದರ್ಭ ಸಂಚಿಕೆಯನ್ನಾಗಿ ರೂಪಿಸಿದ್ದು ಉಂಟು." ೧೯೯೨ ಸಂವಿಧಾನ ಶಿಲ್ಪಿ, ಭಾರತರತ್ನ ಬಾಬಾಸಾಹೇಬ

ಅಂಬೇಡ್ಕರ ಅವರ ಶತಮಾನೋತ್ಸವ ವರ್ಷಾಚರಣೆಯಾಗಿತ್ತು. ಆದ್ದರಿಂದ ಕರ್ನಾಟಕ ಭಾರತಿಯನ್ನು "ಡಾ. ಬಿ.ಆರ್. ಅಂಬೇಡ್ಕರ ವಿಶೇಷಾಂಕ" ಎಂಬ ಉಪಶೀರ್ಷಿಕೆಯಡಿಯಲ್ಲಿ ಸಂಪಾದಿಸಿರುವುದನ್ನು ಕಾಣುತ್ತೇವೆ. ತಮ್ಮ ಸಂಪಾದಕೀಯದಲ್ಲಿ ಅಂಬೇಡ್ಕರ ಅವರ ಕುರಿತಾಗಿ ವಿವರಿಸಿದ್ದು ಹೀಗಿದೆ. -" ಸಮಾಜ ಸೂರ್ಯರಾಗಿ ಬಾಳಿ, ಬೆಳಗಿದ ಡಾ. ಬಿ.ಆರ್. ಅಂಬೇಡಕರ ಅವರ ಬದುಕು ಬರಹ ಅತ್ಯಂತ ಅಮೂಲ್ಯವಾದವುಗಳಾಗಿವೆ. ತನ್ನ ಸಮಾಜ, ದೇಶ ಸೇವೆಗಳಿಗಾಗಿ ಸರ್ವಸಮರ್ಪಣ ಭಾವದಿಂದ ದುಡಿದ ಅಂಬೇಡಕರ ಅವರ ಜೀವನ ನಿಷ್ಠೆ, ಸಮಾಜ ನಿಷ್ಠೆ ಹಾಗೂ ಕಾರ್ಯನಿಷ್ಠೆಗಳು ಅನುಪಮ ಹಾಗೂ ಅನುಕರಣೀಯವಾದವುಗಳಾಗಿರುತ್ತವೆ. ಭಾರತದ ಸಾಮಾನ್ಯ ಜನವರ್ಗದಲ್ಲಿ ಹೊಸ ಚೈತನ್ಯವನ್ನು ತುಂಬಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಜನರನ್ನು ಜಾಗೃತಗೊಳಿಸಿದ ಶ್ರೇಯಸ್ಸು ಅಂಬೇಡಕರದಾಗಿದೆ. ಹೀಗೆ ಅಂಬೇಡಕರ ಅವರು ಮಾನವೀಯತೆಯನ್ನು ಪ್ರೀತಿಸಿದ, ಗೌರವಿಸಿದ, ಎತ್ತಿ ಹಿಡಿದ ಮಹಾಮಾನವತಾವಾದಿಯಾಗಿದ್ದಾರೆ. ಇಂಥ ಅಂಬೇಡಕರರ ಜೀವನ ಹಾಗೂ ವಿಚಾರಗಳ ತಲಸ್ಪರ್ಶಿಯಾದ ಅಧ್ಯಯನ, ಪ್ರಸಾರಕಾರ್ಯಗಳು ಇನ್ನೂ ಭರದಿಂದ ವ್ಯವಸ್ಥಿತವಾಗಿ ಅನೇಕ ಮುಖಗಳಲ್ಲಿ ನಡೆಯುವ ಅವಶ್ಯಕತೆ ಇದೆ"[೬೦] ಎಂದು ಈ ಸಂಚಿಕೆಯ ಆಶಯವನ್ನು ವಿವರಿಸಿದ್ದಾರೆ.

ಅಂಬೇಡಕರ ವಿಶೇಷಾಂಕದಲ್ಲಿ ಅಶೋಕ ನರೋಡೆಯವರ ಬೋಧಿವೃಕ್ಷ ಕವನವಿದೆ. ಇದು ಡಾ. ಅಂಬೇಡಕರ ಅವರ ಜೀವನ ಸಾಧನೆ ವ್ಯಕ್ತಿತ್ವದ ಮಹೋನ್ನತಿಯನ್ನು ದಾಖಲಿಸಿದೆ. ಚಂದ್ರಮ್ಮ ಭೀಮಸೇನ್‌ರಾವ್ ಅವರ ಡಾ. ಬಿ. ಆರ್. ಅಂಬೇಡಕರ ಜೀವನ ಮತ್ತು ಸಾಧನೆ, ಜೋಗನ್ ಶಂಕರರವರ ಡಾ. ಅಂಬೇಡಕರರ ಸಾಮಾಜಿಕ ಮತ್ತು ಶೈಕ್ಷಣಿಕ ವಿಚಾರಗಳು, ಪ್ರೊ. ಶಿವರುದ್ರ ಕಲ್ಲೋಳಕರ ಅವರ ಡಾ. ಅಂಬೇಡಕರ ಧಾರ್ಮಿಕ ವಿಚಾರಗಳು, ಬಿ. ಕೃಷ್ಣಮೂರ್ತಿ ಅವರ ಇಂಗ್ಲೀಷ ಲೇಖನವನ್ನು ಡಾ. ಎ. ಮುರಿಗೆಪ್ಪನವರು ಕನ್ನಡಕ್ಕೆ ಭಾಷಾಂತರಿಸಿದ ಅಂಬೇಡಕರರು ಕಂಡಂತೆ; ಬೌದ್ಧ ಧರ್ಮ, ಮಾರ್ಕ್ಸನ ವರ್ಗ ಹೋರಾಟ ಮತ್ತು ಸಾಮಾಜಿಕ ಸಮಾನತೆ ಹಾಗೂ ದಯಾನಂದ ಮಾನೆಯವರ ಡಾ. ಅಂಬೇಡಕರ : ಅರ್ಥೈಸಿಕೊಳ್ಳುವ ಒಂದು ಪ್ರಯತ್ನ ಹೀಗೆ ಒಂದು ಕವಿತೆ ಹಾಗೂ ಐದು ಲೇಖನಗಳು ಈ ವಿಶೇಷಾಂಕದಲ್ಲಿವೆ. ಈ ವಿಶೇಷಾಂಕದ ಕುರಿತಾಗಿ ಡಾ. ಬಿ. ಆರ್. ಹಿರೇಮಠ ಅವರು ಸಂಪಾದಕೀಯದಲ್ಲಿ ದಾಖಲಿಸಿದ್ದು ಹೀಗೆ. "ಮಾನವೀಯ ಮೌಲ್ಯಗಳನ್ನು ಬದುಕಿದ, ಬದುಕಿಸಿದ ಡಾ. ಬಿ. ಆರ್. ಅಂಬೇಡಕರ ಅವರ ಜನ್ಮಶತಮಾನೋತ್ಸವವನ್ನು ಭಾರತದಾದ್ಯಂತ ಆಚರಿಸುತ್ತಿರುವ ಸಂದರ್ಭದಲ್ಲಿ "ಕರ್ನಾಟಕ ಭಾರತಿ" ಈ ಸಂಕ್ರಮಣ ಸಂಚಿಕೆಯನ್ನು 'ಡಾ. ಬಿ. ಆರ್. ಅಂಬೇಡಕರ ವಿಶೇಷಾಂಕ'ವನ್ನಾಗಿ ಹೊರತರುವುದು ಹೆಚ್ಚು ಅರ್ಥಪೂರ್ಣವೆನಿಸಿದೆ. ಈ ಮೂಲಕ

'ಭಾರತಿ' ಭಾರತ ರತ್ನ ಡಾ. ಅಂಬೇಡಕರ ಅವರಿಗೆ ತನ್ನ ಗೌರವಗಳನ್ನು ಸಲ್ಲಿಸುತ್ತಿದೆ."[೮೯] ಈ ಸಂಚಿಕೆಯನ್ನು ಅಂಬೇಡಕರ ಸಂಚಿಕೆಯನ್ನಾಗಿ ರೂಪಿಸಿದ್ದರೂ ಇನ್ನುಳಿದ ಅಂಶಗಳನ್ನು ಕಡೆಗಣಿಸಿಲ್ಲವೆಂಬುದು ಗಮನಾರ್ಹವಾಗಿದೆ.

ನ್ಯಾಯ -ವೈಶೇಷಿಕದ ಆಧ್ಯಾತ್ಮ ತತ್ವ (ಎನ್.ವ್ಹಿ. ಕೊಪ್ಪಳ) ರಾಜವರ್ಗದವರ ಸ್ವಹಸ್ತಾಕ್ಷರದ ಹಸ್ತಪ್ರತಿಗಳು (ಡಾ. ಬಿ.ಆರ್. ಹಿರೇಮಠ), ರಾಜತಾಂತ್ರಿಕ ಕೈಪಿಡಿಯಾಗಿ ಪಂಪಭಾರತ (ಶಾಂತಿನಾಥ ದಿಬ್ಬದ), ದುರ್ಗಸಿಂಹನ ಗುಲಬರ್ಗಾ ಜಿಲ್ಲೆಯ ನಿಪ್ಪಾಣಿ ಶಾಸನ (ಹನುಮಾಕ್ಷಿ ಗೋಗಿ), ಬಿಜಾಪುರ ಜಿಲ್ಲೆಯ ಮಕ್ಕಳ ಕಥೆ ಮತ್ತು ಕಾದಂಬರಿ (ಗುಂಡಣ್ಣ ಕಲಬುರ್ಗಿ), ಜಾನಪದ ಹಾಡು ಮತ್ತು ಲಾವಣಿಗಳಲ್ಲಿ ಮುಂಡರಗಿ ಭೀಮರಾಯ (ಬಿ.ವ್ಹಿ. ಶಿರೂರ), ಧಾರವಾಡ ಜಿಲ್ಲೆಯ ಸಣ್ಣ ಕಥಾ ಸಾಹಿತ್ಯ ಒಂದು ಸಮೀಕ್ಷೆ (ಬಾಳಣ್ಣ ಶೀಗಿಹಳ್ಳಿ), ಬಸವಕಲ್ಯಾಣದಲ್ಲಿ ದೊರೆತ ಶೈವ ಶಿಲ್ಪಗಳು, ಒಂದು ಅಧ್ಯಯನ (ಆರ್. ಎಂ. ಷಡಕ್ಷರಯ್ಯ) ಒರೆಗಲ್ಲು 'ನೂಲತೊಡಗದೆ' ಎಂದರೇನು? (ಯು. ಶಂಕರನಾರಣಭಟ್ಟ), ನಿಜಗುಣ ಸಿದ್ಧಲಿಂಗ ಅಂಕಿತದ ಒಂದು ಸ್ವರ ವಚನ (ಡಾ. ವೀರಣ್ಣ ರಾಜೂರ), ಸ್ವಾದಿ ಸದಾಶಿವರಾಯನ ರಚನೆಗಳು (ಎಸ್. ಶಿವಣ್ಣ), ಮುಂತಾದ ವೈವಿಧ್ಯಮಯ ವಿಷಯಗಳನ್ನೊಳಗೊಂಡು ಕರ್ನಾಟಕ ಭಾರತಿಯು ಸಮೃದ್ಧವಾಗಿ ರೂಪಗೊಂಡಿದೆ. ಡಾ. ಬಿ. ಆರ್. ಹಿರೇಮಠ ಅವರು ಡಾ. ವೀರಣ್ಣ ರಾಜೂರ ಅವರೊಂದಿಗೆ ಇದನ್ನು ಸಂಪಾದಿಸಿದ್ದು ಕುಲಪತಿಗಳಾದ ಡಾ. ಎಸ್. ರಾಮೇಗೌಡರು ಗೌರವ ಸಂಪಾದಕರಾಗಿದ್ದಾರೆ. ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಸದಾನಂದ ಕನವಳ್ಳಿಯವರು ಇದನ್ನು ಪ್ರಕಟಿಸಿದ್ದಾರೆ. ೧೭೨ ಪುಟಗಳ ಅಮೂಲ್ಯ ಮಾಹಿತಿ ಕೋಶವಾಗಿ ಕರ್ನಾಟಕ ಭಾರತಿಯು ಪ್ರಕಟವಾಗಿದೆ. ಇದೇ ರೀತಿ ಇನ್ನುಳಿದ ಸಂಚಿಕೆಗಳನ್ನು ಸರ್ವಾಂಗ ಸುಂದರವಾಗಿ ಮತ್ತು ಜ್ಞಾನದಾಗರವಾಗಿ ಸಂಪಾದಿಸಿದ್ದಾರೆ.

**೪.೧.೨. ವಿದ್ಯಾರ್ಥಿ ಭಾರತಿ :**

ಇದು ಕರ್ನಾಟಕ ವಿಶ್ವವಿದ್ಯಾಲಯದ ಷಾಣ್ಮಾಷಿಕ ಪತ್ರಿಕೆಯಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಬರುವ ಸ್ನಾತಕೋತ್ತರ ವಿಭಾಗಗಳ ವಿದ್ಯಾರ್ಥಿಗಳ ಪ್ರತಿಭೆಯನ್ನು ಹೊರ ತರುವ ಮತ್ತು ಅವರ ಪ್ರತಿಭೆಗೆ ಚಾಲನೆ ನೀಡುವ ಉದ್ದೇಶದಿಂದ ಈ ಪತ್ರಿಕೆಯು ಆರಂಭವಾಯಿತು. ಎಲ್ಲ ವಿಭಾಗಗಳಿಂದ ಕಥೆ, ಕವನ, ಹನಿಗವನ, ಕವಿ-ಕಾವ್ಯ ಪರಿಚಯ, ವಿಮರ್ಶೆ ಅಲ್ಲದೆ ತಮ್ಮ ತಮ್ಮ ವಿಷಯಗಳಿಗೆ ಸಂಬಂಧಿಸಿದಂತೆ (ವಿಜ್ಞಾನ, ಮನೋವಿಜ್ಞಾನ, ಹಿಂದಿ, ಸಂಸ್ಕೃತ,

ಸಂಗೀತ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮುಂತಾದವು) ಲೇಖನಗಳನ್ನು ಬರೆಯಿಸಿ ಪ್ರಕಟಿಸುವ ವೇದಿಕೆಯನ್ನು ತಯಾರಿಸುವ ಕಾರ್ಯವನ್ನು ಈ ಪತ್ರಿಕೆ ಮಾಡುತ್ತಿದೆ.

ಡಾ. ಬಿ. ಆರ್. ಹಿರೇಮಠ ಅವರು ಪ್ರಸಾರಾಂಗದ ಮುದ್ರಣಾಲಯದ ಅಧ್ಯಕ್ಷರಾಗಿರುವಂತೆ ವಿದ್ಯಾರ್ಥಿ ಭಾರತಿ ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಅವರ ನೇತೃತ್ವದಲ್ಲಿ ಈ ಪತ್ರಿಕೆಯು ಅವರ ಶಿಷ್ಯವರ್ಗದವರಿಂದ ಸಂಶೋಧನಾತ್ಮಕ ಬರಹಗಳಿಗೆ ಆದ್ಯತೆ ನೀಡಿ ಪ್ರಕಟವಾಗುತ್ತಿರುವುದು ಕಂಡುಬರುತ್ತದೆ.

ಈ ಅರ್ಧವಾರ್ಷಿಕದ ಪತ್ರಿಕೆಯ ಸ್ವರೂಪ ಇಂತಿದೆ. ಅಚ್ಚಕಟ್ಟಾದ ಮುಖಪುಟ, ಸಂಪುಟ, ಸಂಚಿಕೆಗಳ ವಿವರ, ಪ್ರಧಾನ ಸಂಪಾದಕರು, ಉಪಸಂಪಾದಕರ ಹೆಸರುಗಳು, ಸಂಪಾದಕ ಮಂಡಳಿಯ ವಿವರ, ಸಲಹಾ ಮಂಡಳಿಯಲ್ಲಿ ಕ.ವಿ.ವಿ. ವಿದ್ಯಾರ್ಥಿ ಒಕ್ಕೂಟದ ಅಧ್ಯಕ್ಷರು, ಸ್ನಾತಕೋತ್ತರ ವಿದ್ಯಾರ್ಥಿ ಒಕ್ಕೂಟದ ಪ್ರಧಾನ ಕಾರ್ಯದರ್ಶಿಗಳೂ, ಕನ್ನಡ ಅಧ್ಯಯನಪೀಠದ, ಕರ್ನಾಟಕ ಸಂಘದ ಪ್ರಧಾನ ಕಾರ್ಯದರ್ಶಿಗಳೂ ಇರುವರು. ಪ್ರಕಾಶಕರು, ಮುದ್ರಕರ ಹೆಸರುಗಳನ್ನು ಇದರಲ್ಲಿ ಕಾಣುತ್ತೇವೆ. ಈ ರೀತಿ ವಿದ್ಯಾರ್ಥಿ ಭಾರತಿ ಅಚ್ಚುಕಟ್ಟುತನದಿಂದ ಕೂಡಿದೆ.

"ಉದಯೋನ್ಮುಖ ಸಾಹಿತಿಗಳ, ಕವಿಗಳ, ವಿಮರ್ಶಕರ, ಪ್ರತಿಭೆಯ ಅಭಿವ್ಯಕ್ತಿಗೆ 'ವಿದ್ಯಾರ್ಥಿ ಭಾರತಿ' ಒಳ್ಳೆಯ ಮಾಧ್ಯಮವಾಗಿದೆ. ಈ ಪತ್ರಿಕೆ ಕೇವಲ ಕನ್ನಡ ಸಾಹಿತ್ಯಕ್ಕಷ್ಟೇ ಸೀಮಿತವಾಗಿರದೆ. ಎಲ್ಲ ವಿಷಯಗಳ ಮೂಲಕ ಬರವಣಿಗೆಗೆ ಪ್ರೋತ್ಸಾಹವನ್ನೀಯುತ್ತ ಬಂದಿದೆ. ತನ್ಮೂಲಕ ವಿದ್ಯಾರ್ಥಿಗಳಿಗೆ ತಮ್ಮ ಚಿಂತನ ಬರವಣಿಗೆಗಳಲ್ಲಿ ಉತ್ಸಾಹ - ಆತ್ಮವಿಶ್ವಾಸ ಮೂಡಿ ಹೆಚ್ಚಿನ ಓದು ಬರವಣಿಗೆಗಳಿಗೆ, ಜ್ಞಾನ ಕ್ಷಿತಿಜದ ವಿಕಾಸಕ್ಕೆ ಕಾರಣವಾಗಿ ಅದರಿಂದ ಸಮಾಜಕ್ಕೆ ಮೌಲಿಕ ಕೊಡುಗೆ ನೀಡುವಲ್ಲಿ ಅಭೂತಪೂರ್ವ ತಯಾರಿಯ ಆಶಯ ಈ ಪತ್ರಿಕೆಯ ಉದ್ದೇಶವಾಗಿದೆ"[೨] ಎಂಬ ಮಾತುಗಳು ವಿದ್ಯಾರ್ಥಿ ಭಾರತಿ ಪತ್ರಿಕೆಯ ಉದ್ದೇಶವನ್ನು ತಿಳಿಸುತ್ತವೆ.

ವ್ಯವಸ್ಥಿತವಾದ ಪರಿವಿಡಿ, ಎಲ್ಲ ಲೇಖನಗಳು ಮತ್ತು ಕೊನೆಗೆ ಲೇಖಕರ ವಿಳಾಸವನ್ನು ನೀಡಲಾಗಿದೆ. ಇದು ವಿದ್ಯಾರ್ಥಿ ಭಾರತಿ ಪತ್ರಿಕೆಯ ಸ್ವರೂಪವಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ಈ ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಕಾರ್ಯಮಾಡಿದ್ದು ಗಮನಾರ್ಹವಾಗಿದೆ.

**೪.೧.೩. ಸುಕುಮಾರ :**

'ಸುಕುಮಾರ' ಶಿವಯೋಗ ಮಂದಿರದ ಮುಖವಾಣಿಯಾಗಿ ಸುಕುಮಾರ ತ್ರೈಮಾಸಿಕ ಸಂಚಿಕೆಯು ಹೊರಬರುತ್ತಿತ್ತು. ಕೆಲ ಕಾಲಾನಂತರ ಸ್ಥಗಿತಗೊಂಡಿತ್ತು. ಅದನ್ನು ಪುನಃ ಆರಂಭಿಸಿದ ಶ್ರೇಯಸ್ಸು

ಡಾ. ಬಿ. ಆರ್. ಹಿರೇಮಠ ಅವರದಾಗಿದೆ. ಅವರು ಸುಕುಮಾರ ಪತ್ರಿಕೆಯ ಸಾರಥ್ಯವನ್ನು ವಹಿಸಿದರು. ಶಿವಯೋಗ ಮಂದಿರದ ಆಶಯಕ್ಕನುಗುಣವಾಗಿ ರೂಪಿಸಿದರು. ಡಾ. ಬಿ. ವ್ಹಿ. ಮಲ್ಲಾಪುರ ಅವರು ಪ್ರಧಾನ ಸಂಪಾದಕರಾಗಿ ಪ್ರೊ. ಬಿ. ವ್ಹಿ. ಗುಂಜೆಟ್ಟಿಯವರು ವ್ಯವಸ್ಥಾಪಕ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರೆ ಡಾ. ಬಿ. ಆರ್. ಹಿರೇಮಠ ಅವರು ಸುಕುಮಾರದ ಸಂಪಾದಕರಾಗಿ ಪತ್ರಿಕೆಯನ್ನು ಸರ್ವಾಂಗ ಸುಂದರವಾಗಿ ಹೊರತಂದರು. ೨೦೦೨ರಿಂದ ಆರಂಭವಾದ ಡಾ. ಬಿ.ಆರ್. ಅವರ ಸಂಪಾದಕತ್ವದ ಸುಕುಮಾರ ೨೦೦೭ರ ವರೆಗೆ ಚಾಚೂ ತಪ್ಪದೇ ಅವ್ಯಾಹತವಾಗಿ ಮುಂದುವರೆಯಿತು. ವರ್ಷಕ್ಕೆ ನಾಲ್ಕು ಸಂಚಿಕೆಯಂತೆ ೭ ವರ್ಷಗಳಲ್ಲಿ ಒಟ್ಟು ೨೮ ಸಂಚಿಕೆಗಳನ್ನು ಹೊರತಂದರು. ಪ್ರತಿಯೊಂದು ಸಂಚಿಕೆಗೂ ಅರ್ಥಪೂರ್ಣವಾದ ಸಂಪಾದಕೀಯ ಬರೆಯುತ್ತಿದ್ದರು. ಡಾ. ಬಿ. ಆರ್. ಅವರ ಸಂಪಾದಕಿಯದಲ್ಲಿ ಜಾಗತಿಕ ಆಗುಹೋಗುಗಳು, ವಿಶ್ವದ ವಿದ್ಯಮಾನಗಳು, ಸಮಕಾಲೀನ ಸಂಗತಿಗಳು ದಾಖಲೆಗೊಳ್ಳುತ್ತಿದ್ದವು. ವೀರಶೈವ ಧರ್ಮ, ತತ್ವ, ಆಚರಣೆ, ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳ ಜೊತೆಗೆ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ವಲಯದ ಲೇಖನಗಳಿಗೂ ಆದ್ಯತೆ ಲಭಿಸುತ್ತಿತ್ತು. ಶಿವಯೋಗ ಮಂದಿರದಿಂದ ಪ್ರಕಟವಾಗುತ್ತಿದ್ದ ಸುಕುಮಾರ, ಶಿವಯೋಗ ಮಂದಿರದ ಮುಖವಾಣಿಯಾಗಿದ್ದರೂ ಇನ್ನುಳಿದ ಸಂಗತಿಗಳೂ ಕೂಡಾ ಇದರಲ್ಲಿ ಸ್ಥಾನ ಪಡೆಯುತ್ತಿದ್ದವು. ಶಿಕ್ಷಣಕ್ಕೆ ಸಂಬಂಧಿಸಿದಂತೆ ಡಾ. ಬಿ. ಆರ್. ಅವರು ತಮ್ಮ ಸಂಪಾದಕೀಯದಲ್ಲಿ ವಿವರಿಸಿದ್ದು ಹೀಗಿದೆ. "ಇಂದಿನ ಶಿಕ್ಷಣದ ಆಮೂಲಾಗ್ರ ಬದಲಾವಣೆಗಳಿಂದ ಸಮಾಜದ ಮೇಲೆ ಹಲವಾರು ಗಮನಾರ್ಹ ಪರಿಣಾಮಗಳು ಉಂಟಾಗಿರುತ್ತವೆ. ಸರ್ವರಿಗೂ ಸಹಬಾಳು ಸರ್ವರಿಗೂ ಸಮಪಾಲು ಎನ್ನುವಂತೆ ಸರ್ವರಿಗೂ ಶಿಕ್ಷಣ ಎನ್ನುವ ಧೋರಣೆ ದೇಶದುದ್ದಕ್ಕೂ ಗಟ್ಟಿಗೊಳ್ಳುತ್ತ ಸಾಗುತ್ತಲಿದೆ. ಶಿಕ್ಷಣದ ಈ ಸಾರ್ವತ್ರೀಕರಣ ಜನರನ್ನು, ಸಮಾಜವನ್ನು ಕತ್ತಲೆಯಿಂದ ಬೆಳಕಿನೆಡೆಗೆ, ಅಜ್ಞಾನದಿಂದ ಜ್ಞಾನದ ಕಡೆಗೆ ಕೊಂಡೊಯ್ಯುತ್ತಲಿದೆ. ಶಿಕ್ಷಣದ ಈ ಹೊಸ ಆವಿಷ್ಕಾರವನ್ನೇ ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ" ಇಲ್ಲಿ ಜ್ಞಾನ, ಜ್ಯೋತಿ, ಸತ್ಯ ಪರುಷದ ರೂಪದಲ್ಲಿ ಶಿಕ್ಷಣ ಕಾರ್ಯ ನೆರವೇರಿಸಿದೆ. ವ್ಯಕ್ತಿಯನ್ನು ರೂಪಿಸುವ ಬೆಳೆಸುವ ಬೆಳಕಾಗಿಸುವ ಪ್ರಬಲ ಹಾಗೂ ಪ್ರಮುಖ ಸಾಧನವೇ ಈ ಶಿಕ್ಷಣ. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಮೂಲ ಕಾರಣವೆನಿಸುವ ಈ ಶಿಕ್ಷಣಕ್ಕೆ ದೇಶದ ಸರ್ವಾಂಗೀಣ ಪ್ರಗತಿ ಮುನ್ನಡೆಯಲ್ಲಿ ಅತ್ಯಂತ ಅಗ್ರಸ್ಥಾನವಿದೆ. ವ್ಯಕ್ತಿಯ ಕುಟುಂಬದ ಬೆಳವಣಿಗೆಗೆ ಸಮಾಜ, ನಾಡಿನ, ರಾಷ್ಟ್ರದ ಅಭಿವೃದ್ಧಿಗೆ ಸಹಾಯಕವಾಗಿ ಪರಿಣಮಿಸುತ್ತದೆ. ಆದ್ದರಿಂದ ವ್ಯಕ್ತಿಗೆ ನೀಡುವ ಶಿಕ್ಷಣದಲ್ಲಿ ಕುಟುಂಬದ ಸಮಾಜದ, ನಾಡಿನ, ದೇಶದ ಕಲ್ಯಾಣ ಅಡಗಿದೆಯೆಂದು ವಿದಿತವಾಗುತ್ತದೆ.

ಇಂದು ಶಿಕ್ಷಣ ಹೊಸ ಆಯಾಮಗಳನ್ನು ಒಳಗೊಂಡು ಬೆಳೆದರೂ ನೈತಿಕ ಶಿಕ್ಷಣದ ಕೊರತೆ ಇದೆ. ಮನುಷ್ಯ ಬುದ್ಧಿವಂತ, ವಿಚಾರವಂತ, ಪ್ರತಿಭಾವಂತನಾದರೂ ಅವನಿಗೆ ನೈತಿಕ ಶಿಕ್ಷಣ ಇಲ್ಲದಿದ್ದರೆ ಪ್ರಯೋಜನವಿಲ್ಲ. ನೀತಿವನಂತೂ ಆಗಬೇಕು. ಸಮಾಜದಲ್ಲಿ ಆಗುತ್ತಿರುವ ಅಲ್ಲೋಲ ಕಲ್ಲೋಲ ಅಸಂತೋಷಗಳಿಗೆ ನೈತಿಕ ಶಿಕ್ಷಣದ ಅವಶ್ಯಕತೆ ಇದೆ. ಮನೆಯಿಂದ ಹಿಡಿದು ದೇಶದವರೆಗೆ ನೈತಿಕ ಶಿಕ್ಷಣದ ಸ್ಥಾನ ಮಹತ್ವದ್ದಾಗಿದೆ."[೯೩]

"ಇಂದಿನ ಜನರ ಯಾಂತ್ರಿಕ ಇರುವಿಕೆ ಜೀವನಶೈಲಿ ಬಹಳಷ್ಟು ಆತಂಕ, ಅತೃಪ್ತಿ, ನೋವು, ದುಃಖ, ಕಷ್ಟ, ಸಂಕಟ ಸಂದಿಗ್ಧತೆಗಳನ್ನು ನಿರ್ಮಾಣಮಾಡಿದೆ. ಇದರಿಂದ ಸಮಾಜದಲ್ಲಿ ದೇಶದಲ್ಲಿ ದ್ವೇಷ, ಅಸೂಯೆ, ವೈರುಧ್ಯ, ವಿಕೃತಿ, ಸಂಘರ್ಷ, ಹಗೆತನಗಳು ತುಂಬಿ ತುಳುಕಾಡುವಂತಾಗಿದೆ. ಇದರಿಂದ ಬಹಳಷ್ಟು ಮಾನಸಿಕವಾಗಿ ಸೋತು ಹೋಗಿದ್ದಾರೆ. ದೈಹಿಕ, ಮಾನಸಿಕವಾಗಿ ಸೊರಗಿದ್ದಾರೆ. ಈ ಮಾನಸಿಕ ಮತ್ತು ದೈಹಿಕ ಅಶಕ್ತತೆ ಜಾಡ್ಯಗಳಿಂದ ವ್ಯಕ್ತಿ- ಸಮಾಜ ತತ್ತರಿಸಿ ಹೋಗಿದೆ. ನಾವು ನಮ್ಮ ಇರುವಿಕೆಯಲ್ಲಿ ಬದಲಾವಣೆಯನ್ನು ತರುವುದು ಅವಶ್ಯವಿದೆ. ಹಗುರ ಕೆಲಸ ಮಾಡುವದನ್ನು ಹಗೆತನ ಸಾಧಿಸುವುದನ್ನು ಹಗುರ ಆಗಿ ಭಾವಿಸುವುದನ್ನು ಜನ ನಿಲ್ಲಿಸಬೇಕು. ಒತ್ತಡ ವಿಮುಕ್ತರಾಗಿ ಆರೋಗ್ಯವಂತರಾಗಿ ಬಾಳಬೇಕಾಗಿದೆ. ಇದರಿಂದ ಆರೋಗ್ಯವಂತ ಸಮಾಜ ನಿರ್ಮಾಣವಾಗುತ್ತದೆ."[೯೪]

ಸುಕುಮಾರದಲ್ಲಿ ಸಾಮಾನ್ಯವಾಗಿ ೧೦ ವಿವಿಧ ಲೇಖನಗಳು, ಒಂದು ಕವಿತೆ, ಸಾದರ ಸ್ವೀಕಾರ ಶಿವಯೋಗ ಮಂದಿರದ ಕಾರ್ಯಕ್ರಮಗಳ ವರದಿ ಇತ್ಯಾದಿ ಅಂಶಗಳಿರುತ್ತಿದ್ದವು. ಶರಣ ಸಾಹಿತ್ಯ ಧರ್ಮ, ಸಂಸ್ಕೃತಿಗಳ ಕುರಿತಾಗಿ ಸಂಶೋಧನಾತ್ಮಕ, ಪರಿಚಯಾತ್ಮಕ, ವಿಮರ್ಶಾತ್ಮಕ, ವಿವೇಚನಾತ್ಮಕ, ವಿಶ್ಲೇಷಣಾತ್ಮಕ ಮುಂತಾದ ಲೇಖನಗಳಿಗೆ ಅಗ್ರ ತಾಂಬೂಲವಿತ್ತು. ನಾಡಿನ ಸುವಿಖ್ಯಾತ ವಿದ್ವಾಂಸರು ಸುಕುಮಾರಕ್ಕೆ ತಮ್ಮ ಮೌಲಿಕ ಲೇಖನಗಳನ್ನು ಬರೆಯುತ್ತಿದ್ದರು. ಬಸವಾದಿ ಶರಣರ ಪರಿಚಯ, ಅವರ ವಚನಗಳ ವಿವೇಚನೆ, ಶರಣ ಕ್ಷೇತ್ರಗಳ ದರ್ಶನ, ವೀರಶೈವ ಪ್ರಾಚೀನ ಸಾಹಿತ್ಯದ ದರ್ಶನ, ಶೂನ್ಯ ಸಂಪಾದನೆಗಳ ಪಕ್ಷಿನೋಟ, ಆಧುನಿಕ ವಚನಗಳು - ಹೊಸಕಾಲದ ಚಿಂತನೆ, ಸಮಕಾಲೀನ ಸಂಗತಿಗಳ ಮೇಲೆ ಬೆಳಕು ಚೆಲ್ಲುವ ಲೇಖನಗಳು ಸುಕುಮಾರದಲ್ಲಿ ಸ್ಥಾನ ಪಡೆಯುತ್ತಿದ್ದವು. ನಾಡಿನ ಮಠಾಧೀಶರು ಕೂಡಾ ಸುಕುಮಾರದಲ್ಲಿ ತಮ್ಮ ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದರು. ಶಿವಶರಣರ ನುಡಿಮುತ್ತುಗಳು, ಸಾದರ ಸ್ವೀಕಾರ, ಪುಸ್ತಕ ಪರಿಚಯ, ಶಿವಯೋಗ ಮಂದಿರ ಸಮಾಚಾರ ದರ್ಶನ, ಪ್ರಸಾದ ನಿಧಿಗೆ ನೀಡಿದ ದಾಸೋಹಿಗಳ ವಿವರ, ಪೂಜಾನಿಧಿಗೆ ನೀಡಿದ ದಾಸೋಹಿಗಳ ವಿವರ, ಸುಕುಮಾರ ಪತ್ರಿಕೆಗೆ ಹೊಸದಾಗಿರುವವರ ವಿಳಾಸಗಳು ಈ ರೀತಿಯಾಗಿ ಹತ್ತಾರು ವಿಷಯಗಳಿಂದ ಸುಕುಮಾರ ಸಮೃದ್ಧವಾಗಿ ಹೊರಬರುವಂತೆ ಡಾ. ಬಿ. ಆರ್. ಹಿರೇಮಠರು ಅಪಾರವಾಗಿ ಶ್ರಮಿಸಿದ್ದರು. ಅವರು ಸಂಪಾದಿಸಿದ ೬೨ ಸಂಚಿಕೆಗಳನ್ನು ತಿರುವಿ ಹಾಕಿದಾಗ ಕನ್ನಡ ನಾಡಿನ ನಾಡಿ ಮಿಡಿತ

ಗೊತ್ತಾಗುತ್ತದೆ. ಕರ್ನಾಟಕದ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮುಖಗಳ ಪರಿಚಯ ನಮಗಾಗುತ್ತದೆ. ಸಂಪಾದನೆಯ ಕಾರ್ಯ ತುಂಬಾ ಪರಿಶ್ರಮ ಮತ್ತು ಅಪಾರ ತಾಳ್ಮೆಯನ್ನು ಬಯಸುವಂತಹದ್ದು. ಡಾ. ಬಿ. ಆರ್. ಅವರು ತಾಳ್ಮೆ ಮತ್ತು ತಪಸ್ಸಿಗೆ ಮತ್ತೊಂದು ಹೆಸರಿನಂತಿದ್ದರು. ಶ್ರಮ ಸಂಸ್ಕೃತಿಯ ಮತ್ತೊಂದು ಹೆಸರೆ ಡಾ. ಬಿ. ಆರ್. ಹಿರೇಮಠ ಅವರಾಗಿರುವುದರಿಂದ ಸುಕುಮಾರ ಪತ್ರಿಕೆಗಳೆಲ್ಲವೂ ತುಂಬಾ ಅರ್ಥಪೂರ್ಣವಾಗಿ ವೈವಿಧ್ಯಮಯ ವಿಷಯಗಳಿಂದ ಒಡಗೂಡಿ ಸರ್ವಾಂಗ ಸುಂದರವಾಗಿ ಮೂಡಿ ಬಂದಿವೆ. ಸುಕುಮಾರ ಪತ್ರಿಕೆಯ ಇತಿಹಾಸದಲ್ಲಿ ಡಾ. ಬಿ. ಆರ್. ಅವರ ಹೆಸರು ಅಚ್ಚಳಿಯದೆ ನಿಲ್ಲುವಂತಹದ್ದು. ಪತ್ರಿಕಾ ರಂಗದಲ್ಲಿ ದಾಖಲಿಗೊಳ್ಳುವಂತಹದ್ದು. ಅವರ ಅಕಾಲಿಕ ನಿಧನ ಸುಕುಮಾರಕ್ಕೊಂದು ಭರಿಸಲಾಗದ ಹಾನಿ ಎಂದರೆ ಉತ್ಪ್ರೇಕ್ಷೆಯಲ್ಲ.

ಡಾ. ಬಿ. ಆರ್. ಹಿರೇಮಠ ಅವರು ತಾವು ಸಂಪಾದಿಸಿದ ಪತ್ರಿಕೆಗಳನ್ನು ಜ್ಞಾನದ ಕಣಜಗಳನ್ನಾಗಿ ರೂಪಿಸಿದರು. ಹೊಸ ಹೊಸ ಆಲೋಚನೆಗಳಿಗೆ ಅವಕಾಶ ತೆರೆದರು, ಜ್ಞಾನದ ವಿವಿಧ ಶಾಖೆಗಳಿಗೂ ಪ್ರವೇಶ ಕಲ್ಪಿಸಿದರು. ಯಾವುದೇ ಪತ್ರಿಕೆಯನ್ನು ರೂಪಿಸುವಾಗ ವಿಷಯದ ದೃಷ್ಟಿಯಿಂದ ಎಲ್ಲ ನಿಟ್ಟಿನಿಂದಲೂ ಸಮರ್ಪಕವಾಗುವಂತೆ ಎಚ್ಚರ ವಹಿಸಿದ್ದು ಪ್ರಮುಖ ಅಂಶವಾಗಿದೆ. ಕರ್ನಾಟರ ಭಾರತಿ ಇರಲಿ, ವಿದ್ಯಾರ್ಥಿ ಭಾರತಿ ಇರಲಿ ಅಥವಾ ಸುಕುಮಾರವೇ ಆಗಿರಲಿ ಎಲ್ಲದರಲ್ಲಿಯೂ ಹೊಸತನ ಇರುವಂತೆ ಚಿಂತನ ಮಂಥನಗಳಿಗೆ ವೇದಿಕೆಯನ್ನಾಗಿಸಿದರು. ಪತ್ರಿಕೆಯನ್ನು ಒಂದು ನಡುಗಡ್ಡೆಯನ್ನಾಗಿಸದೆ, ಜಾಗತಿಕ ಆಗುಹೋಗುಗಳು, ವಿಶ್ವದ ವಿದ್ಯಮಾನಗಳು, ಸಮಕಾಲೀನ ಸಂಗತಿಗಳು, ಎಲ್ಲವನ್ನೂ ಅಳವಡಿಸಿಕೊಂಡಿರುವುದು ವಿಶೇಷ. ಸಮಕಾಲೀನ ಸಂಗತಿಯಾದರೂ ಸಾರ್ವಕಾಲೀನ ಮೌಲ್ಯ ಪ್ರತಿಪಾದನೆಗೆ ಹೆಚ್ಚು ಒತ್ತು ನೀಡಿದ್ದರು. ಹೊಸಬರನ್ನು ಪ್ರೋತ್ಸಾಹಿಸುವುದು, ಯುವ ಬರಹಗಾರರನ್ನು ಬೆಳಕಿಗೆ ತರುವುದು ಇವರ ಇನ್ನೊಂದು ದೊಡ್ಡ ಗುಣವಾಗಿತ್ತು. ಪತ್ರಿಕೆಯೊಂದು ಸಮೂಹ ಸಂವಹನ ಮಾಧ್ಯಮದ ಪ್ರಬಲ ಅಂಗವೆಂಬುದನ್ನು ಮನಗಂಡು ಜನಾಭಿಪ್ರಾಯ ರೂಪಿಸುವಲ್ಲಿ ಶ್ರಮಿಸುತ್ತಿದ್ದರು. ಒಳ್ಳೆಯ ಅಭಿರುಚಿಯನ್ನು ಮೂಡಿಸುವುದು, ಸಂಸ್ಕೃತಿಯ ಪ್ರೀತಿಯನ್ನು ರೂಪಿಸುವುದು, ನಾಡಿನ ಹಿರಿಮೆ ಗರಿಮೆಗಳನ್ನು ವಿವರಿಸುವುದು ಇವರ ಮುಖ್ಯ ಆಶಯವಾಗಿತ್ತು. ಪ್ರಮುಖವಾಗಿ ಈ ಮೂರೂ ಪತ್ರಿಕೆಗಳಲ್ಲದೆ, ಸದ್ಧರ್ಮ ವಾಹಿನಿ, ಬಸವ ಪಥ, ಸ್ವಪ್ನಲೋಕ ವೊದಲಾದ ಪತ್ರಿಕೆಗಳ ಸದಸ್ಯರಾಗಿ ಸಲಹಾಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಅಧ್ಯಯನ, ಅಧ್ಯಾಪನ, ಸಂಶೋಧನ ಮುಂತಾದ ಕ್ಷೇತ್ರಗಳ ಜೊತೆಗೆ ಪತ್ರಿಕಾ ರಂಗದಲ್ಲಿಯೂ ಇವರು ಮಾಡಿರುವ ಸೇವೆ ಅನನ್ಯವಾಗಿದೆ.



## ಕೊನೆ ಟಿಪ್ಪಣಿಗಳು :

೧. ಡಾ. ಎಂ.ಎಂ. ಕಲಬುರ್ಗಿ : ಕನ್ನಡ ಗ್ರಂಥ ಸಂಪಾದನ ಶಾಸ್ತ್ರ, ಪ್ರಸ್ತಾವನೆಯಲ್ಲಿ.
೨. ಡಾ. ವಾಯ್.ಸಿ. ಭಾನುಮತಿ : ಮಹಾಮಾರ್ಗ ಪುಟ - ೧೬೫
೩. ಸಾಹಿತ್ಯ ಸಂಸ್ಕೃತಿ ಕೋಶ ಗ್ರಂಥ ಸಂಪಾದನೆ ಮತ್ತು ಹಸ್ತಪ್ರತಿಶಾಸ್ತ್ರ ಕನ್ನಡ ಪುಟ - ೪೮೦
೪. ಅದೇ, ಪುಟ - ೧೪೧
೫. ಸಂ. ಬಿ. ಆರ್. ಹಿರೇಮಠ : ಅದ್ವೈತಾನಂದ ವಚನಗಳು ಪ್ರಸ್ತಾವನೆ ಪುಟ - VI
೬. ಅದೇ, ಪುಟ -VI
೭. ಸಂ. ಬಿ. ಆರ್. ಹಿರೇಮಠ : ವಚನ ಸಂಕಲನ ಸಂಪುಟ ೧ ಪ್ರಸ್ತಾವನೆ ಪುಟ VI -VII)
೮. ಸಂ. ಬಿ. ಆರ್. ಹಿರೇಮಠ : ಸಂಕೀರ್ಣ ವಚನ ಸಂಪುಟ ೩ ಪ್ರಸ್ತಾವನೆ ಪುಟ - XB
೯. ಸಂ. ಬಿ. ಆರ್. ಹಿರೇಮಠ : ಸಂಕೀರ್ಣ ವಚನ ಸಂಪುಟ ೩ ಪ್ರಸ್ತಾವನೆ ಪುಟ - XXXII
೧೦. ಅದೇ, ಪುಟ - ೧
೧೧. ಅದೇ, ಪುಟ - ೧
೧೨. ಅದೇ, ಪುಟ - XXXIX
೧೩. ಅದೇ, ಪ್ರಸ್ತಾವನೆ ಪುಟ - XXI
೧೪. ಅದೇ, ಪ್ರಸ್ತಾವನೆ ಪುಟ - XXI
೧೫. ಅದೇ, ಪುಟ - XXV
೧೬. ಅದೇ, ಪುಟ - XXII
೧೭. ಅದೇ, ಪುಟ - XXIII
೧೮. ಅದೇ, ಪುಟ - XXIV
೧೯. ಅದೇ, ದ್ವಿತೀಯ ಆವೃತ್ತಿ ಪು. - XXV
೨೦. ಸಂ. ಬಿ. ಆರ್. ಹಿರೇಮಠ : ಸುಖ ಸಂಪಾದನೆಯ ವಚನಗಳು ಪ್ರಸ್ತಾವನೆಯ ಪುಟ - ೫
೨೧. ಅದೇ, ಪ್ರಸ್ತಾವನೆಯ ಪುಟ - ೬
೨೨. ಅದೇ, ಪುಟ - ೨
೨೩. ಅದೇ, ಪುಟ - ix
೨೪. ಸಂ. ಬಿ. ಆರ್. ಹಿರೇಮಠ : ಮಡಿವಾಳ ಮಾಚಿದೇವನ ವಚನಗಳು ಪ್ರಸ್ತಾವನೆ ಪುಟ - IX
೨೫. ಅದೇ, ಪುಟ - XII
೨೬. ಅದೇ, ಪ್ರಸ್ತಾವನೆ ಪುಟ - XVII
೨೭. ಅದೇ, ಪ್ರಸ್ತಾವನೆ ಪುಟ - XIX
೨೮. ಸಂ. ಬಿ. ಆರ್. ಹಿರೇಮಠ : ಸುಖ ಸಂಪಾದನೆಯ ಸಾರಾಮೃತ ಪ್ರಸ್ತಾವನೆ ಪುಟ - ೬
೨೯. ಅದೇ, ಪುಟ - ೬
೩೦. ಅದೇ, ಪುಟ - ೬
೩೧. ಅದೇ, ಪುಟ - VII
೩೨. ಅದೇ, ಪುಟ - X
೩೩. ಅದೇ, ಪುಟ -X
೩೪. ಅದೇ, ಪುಟ - XVI
೩೫. ಸಂ. ಬಿ. ಆರ್. ಹಿರೇಮಠ : ಹರಿಹರನ ಭಕ್ತಿ ತರಂಗಿಣಿ ಪ್ರಸ್ತಾವನೆ ಪುಟ - XIII
೩೬. ಅದೇ, ಪುಟ - XXIII
೩೭. ಅದೇ, ಪುಟ - XXIV
೩೮. ಸಂ. ಬಿ. ಆರ್. ಹಿರೇಮಠ : ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಕೃತಜ್ಞತೆ-ಪುಟ - iii
೩೯. ಅದೇ, ಪೀಠಿಕೆ-ಪುಟ - i
೪೦. ಅದೇ, ಪೀಠಿಕೆ-ಪುಟ - iii
* ಕುತೂಹಲಕ್ಕಾಗಿ ಗಮನಿಸಿ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ ಪೀಠಿಕೆ ಪುಟ - I ರಿಂದ V
೪೧. ಅದೇ, ಪೀಠಿಕೆ-ಪುಟ - iv
೪೨. ಅದೇ, ಪೀಠಿಕೆ-ಪುಟ - xix

೪೩. ! ; ɥä _ |Yír-ಪುಟ - xxix
೪೪. ಅದೇ, ಪೀಠಿಕೆ-ಪುಟ - xxxi
೪೫. ಅದೇ ಪೀಠಿಕೆ-ಪುಟ - xLi
೪೬. ಸಂ. ಬಿ. ಆರ್. ಹಿರೇಮಠ : ಇಮ್ಮಡಿ ಮುರಗಾ ಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು ಪ್ರಸ್ತಾವನೆ ಪುಟ - ೨
೪೭. ಅದೇ, ಪುಟ - ೮
೪೮. ಅದೇ,ಪುಟ - ೬
೪೯. ಸಂ. ಬಿ. ಆರ್. ಹಿರೇಮಠ : ಸೋದೆಯ ಸದಾಶಿವರಾಯನ ಕೃತಿಗಳು ಪ್ರಕಾಶಕರ ನುಡಿ ಪುಟ - ೩
೫೦. ಅದೇ, ಪ್ರಸ್ತಾವನೆ ಪುಟ -V
೫೧. ಅದೇ, ಪುಟ - VII
೫೨. ಅದೇ, ಪ್ರಸ್ತಾವನೆ ಪುಟ -XV
* ಕುತೂಹಲಕ್ಕಾಗಿ ಸೋದೆ ಸದಾಶಿವರಾಯನ ಕೃತಿಗಳು ಪುಟ -xiii
೫೩. ಅದೇ, ಪ್ರಸ್ತಾವನೆ ಪುಟ -VII-VIII
೫೪. ಅದೇ, ಪ್ರಸ್ತಾವನೆ ಪುಟ -XIX
೫೫. ಅದೇ, ಪುಟ -XXXI
೫೬. ಅದೇ, ಪುಟ -XXXIII
೫೭. ಸಂ. ಬಿ. ಆರ್. ಹಿರೇಮಠ, ಡಾ. ಹನುಮಾಕ್ಷಿ ಗೋಗಿ :ಮುದನೂರ ಶಾಸನಗಳು ನಿವೇದನೆಯಲ್ಲಿ ಪುಟ - ೨
೫೮. ಅದೇ, ಪುಟ - ೬
೫೯. ಡಾ. ವ್ಹಿ.ಬಿ. ಮಲ್ಲಾಪುರ, ಅದೇ, ಕೃತಿಯ ಬ್ಲರ್ಬ್
೬೦. ಡಾ. ವ್ಹಿ.ಬಿ. ಮಲ್ಲಾಪುರ, ಮುದನೂರು ಯಡ್ರಾಮಿ ಶಾಸನಗಳು ಕೃತಿಯ ಬ್ಲರ್ಬ್
೬೧. ಡಾ. ಎಂ.ಎಂ. ಕಲಬುರ್ಗಿ: ಕನ್ನಡ ಅಧ್ಯಯನ ಪೀಠದ ಹಸ್ತ ಪ್ರತಿ ಸೂಚಿ ಪುಟ - PII
೬೨. ಅದೇ, ಪ್ರಸ್ತಾವನೆಯ ಪು - IV
* ವಿವರಕ್ಕೆ ನೋಡಿ ಅದೇ, ಪುಟ - I
೬೩. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ಅಧ್ಯಯನ ಪೀಠದ ಹಸ್ತ ಪ್ರತಿ ಸೂಚಿ ಪುಟ - VII
೬೪. ಅದೇ, ಶೂಚಿ ಶಿಲ್ಪ ಪುಟ - VIII
೬೫. ಅದೇ, ಪುಟ - VIII
೬೬. ಸಂ. ಬಿ. ಆರ್. ಹಿರೇಮಠ : ಸಾರಂಗ ಪ್ರಭೆ ಸಂಪಾದಕರ ಮಾತು ಕನ್ನಡನಾಡು
೬೭. ಅದೇ, ಸಂಪಾದಕೀಯ ಪುಟ - IV
೬೮. ಸಂ. ಬಿ. ಆರ್. ಹಿರೇಮಠ : ವಚನ ಸಂಕಲನ ಸಂಪುಟ ೪ ಪ್ರಕಾಶಕರ ನುಡಿ ಪುಟ - ೩
೬೯. ಅದೇ, ಪ್ರಸ್ತಾವನೆ ಪುಟ - ೫
೭೦. ಅದೇ, ಪ್ರಸ್ತಾವನೆ ಪುಟ - ೭೬
೭೧. ಅದೇ, ಪ್ರಸ್ತಾವನೆ ಪುಟ - ೧೦
೭೨. ಅದೇ, ಪ್ರಸ್ತಾವನೆ ಪುಟ -೧೧
೭೩. ಸಂ. ಬಿ. ಆರ್. ಹಿರೇಮಠ : ತೋಂಟದ ಸಿದ್ದೇಶ್ವರ ಭಾವರತ್ನಾಭರಣ ಸ್ತೋತ್ರ ಪ್ರಕಾಶಕರ ನುಡಿ ಪುಟ - I
೭೪. ಅದೇ, ಪ್ರಸ್ತಾವನೆಯ ಪುಟ -III
೭೫. ಅದೇ, ಪ್ರಸ್ತಾವನೆಯ ಪುಟ -III
೭೬. ಅದೇ, ಪುಟ -IV
೭೭. ಅದೇ, ಪುಟ - V
೭೮. ಸಂ. ಬಿ. ಆರ್. ಹಿರೇಮಠ ಪ್ರೊ. ಬಿ.ವ್ಹಿ. ಗಿಂಚೆಟ್ಟಿ : ಡಾ. ಆರ್.ಸಿ. ಹಿರೇಮಠ ನಾವು ಕಂಡಂತೆ ನಿವೇದನೆ ಪುಟ -I
೭೯. ಅದೇ, ಪುಟ - ೧೩
೮೦. ಅದೇ, ಪುಟ - ೫೦
೮೧. ಅದೇ, ಪುಟ - ೫೪
೮೨. ಅದೇ, ಪುಟ - ೮೫
೮೩. ಅದೇ, ಪುಟ - ೧೬೫
೮೩. ಸಂ. ಬಿ. ಆರ್. ಹಿರೇಮಠ : ನಿಜದ ನೆಲೆ ಪುಟ - ೭
೮೪. ಅದೇ, ಪುಟ - ೮

೮೫. ಅದೇ, ಪುಟ - ೧೧

೮೬. ಸಂ. ಬಿ. ಆರ್. ಹಿರೇಮಠ : ಸಂಪಾದಕರ ಮಾತು ಕನ್ನಡ ಪ್ರಪಂಚ ಪುಟ - ೪

೮೭. ಅದೇ, ಪುಟ - ೫

೮೮. ಶ್ರೀ ಸುರೇಂದ್ರ ದಾನಿ : ಆಧುನಿಕ ಕನ್ನಡ ಸಾಹಿತ್ಯ ರೂಪಗಳು ಪತ್ರಿಕಾ ಸಾಹಿತ್ಯ ಪುಟ - ೨೦೧

೮೯. ಡಾ. ಡಿ.ವ್ಹಿ. ನಾಯಿಕ : ಸಮೂಹ ಮಾಧ್ಯಮಗಳು ಪತ್ರಿಕೆ - ಪುಟ - ೨೮

೯೦. ಸಂ. ಬಿ. ಆರ್. ಹಿರೇಮಠ : ಕರ್ನಾಟಕ ಭಾರತಿ ಸಂಪಾದಕೀಯ - ಪ್ರಸ್ತುತ ಪುಟ - ೧೬೮

೯೧. ಅದೇ, ಪ್ರಸ್ತುತ ಪುಟ - ೧೬೮

೯೨. ಸಂ. ಬಿ. ಆರ್. ಹಿರೇಮಠ : ವಿದ್ಯಾರ್ಥಿ ಭಾರತಿ ಸಂಪಾದಕೀಯ

೯೩. ಸಂ. ಬಿ. ಆರ್. ಹಿರೇಮಠ : ಸುಕುಮಾರ ಸಂಪುಟ ೩ ಜೂನ ಸಂಚಿಕೆ ೪. ೨೦೦೭

೯೪. ಸಂ. ಬಿ. ಆರ್. ಹಿರೇಮಠ : ಸುಕುಮಾರ ಸಂಪುಟ ೩ ಜೂನ ಸಂಚಿಕೆ ೪. ೨೦೦೭

# ಅಧ್ಯಾಯ - ೫ :
# ಡಾ. ಬಿ.ಆರ್. ಹಿರೇಮಠ ಅವರ ಬಿಡಿ ಲೇಖನಗಳ ಅಧ್ಯಯನ

**೫.೦ ಪ್ರವೇಶ :**

ಡಾ. ಬಿ. ಆರ್. ಹಿರೇಮಠ ಅವರ ಆಸಕ್ತಿಯ ಕ್ಷೇತ್ರಗಳು ಹಲವಾರು. ಓರ್ವ ವ್ಯಕ್ತಿ ಹಲವು ವಿಷಯಗಳಲ್ಲಿ ಪರಿಣತಿ ಸಾಧಿಸಿರುವುದು ವಿರಳ. ಅಂಥವರಲ್ಲಿ ಡಾ. ಬಿ. ಆರ್. ಹಿರೇಮಠರು ಒಬ್ಬರು. ಕಾವ್ಯ, ಕಥೆ, ನಾಟಕ ಮುಂತಾದ ಸೃಜನಶೀಲ ಕ್ಷೇತ್ರದಲ್ಲಿಯೂ ಶಾಸನ, ಸಂಸ್ಕೃತಿ, ಸಂಶೋಧನೆ, ಚರಿತ್ರೆ, ಛಂದಸ್ಸು, ಗ್ರಂಥ ಸಂಪಾದನೆ, ವಚನ ಸಾಹಿತ್ಯ, ಶರಣ ಸಂಸ್ಕೃತಿ ಮುಂತಾದ ಸೃಜನೇತರ ಸಾಹಿತ್ಯದಲ್ಲಿಯೂ ಇವರ ರಚನೆ ಅಗಾಧವಾಗಿದೆ. ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಮೂರೂ ನಿಟ್ಟಿನಲ್ಲಿ ಶ್ರೀಯುತರು ಕಾರ್ಯನಿರ್ವಹಿಸಿದ್ದಾರೆ. ಜಾನಪದ ಮತ್ತು ನಿಷ್ಪತ್ತಿ ಶಾಸ್ತ್ರಗಳಂತಹ ಕ್ಷೇತ್ರಗಳಲ್ಲಿಯೂ ಡಾ. ಬಿ. ಆರ್. ಅವರಿಗೆ ತುಂಬಾ ಆಸಕ್ತಿ. ಏಕ ವ್ಯಕ್ತಿ ನೆಲೆಯಲ್ಲಿದ್ದುಕೊಂಡು ಡಾ. ಬಿ. ಆರ್.ಅವರು ಸಾಹಿತ್ಯದ ವಿಭಿನ್ನ ನೆಲೆಗಳಲ್ಲಿ ಹೀಗೆ ಮುಖಾಮುಖಿಯಾಗಿದ್ದಾರೆ ಎಂಬುದನ್ನು ಅಧ್ಯಯನಿಸಿವುದೇ ಪ್ರಸ್ತುತ ಅಧ್ಯಾಯದ ಆಶಯವಾಗಿದೆ

**೫.೧ ಸೃಜನ ಸಾಹಿತ್ಯ :**

ಡಾ. ಬಿ. ಆರ್. ಹಿರೇಮಠ ಅವರು ಸಂಶೋಧಕರೆಂದೇ ಸಾರಸ್ವತ ಲೋಕಕ್ಕೆ ಚಿರಪರಿಚಿತರಾಗಿದ್ದಾರೆ. ಆದರೆ ಬಿ.ಆರ್. ಹಿರೇಮಠ ಅವರ ಒಳಗೆ ಸೃಜನಶೀಲ ಮನಸ್ಸಿತ್ತೆಂಬುದು ಕುತೂಹಲವಾಗಿದೆ. ಶಾಸನ ಹಸ್ತಪ್ರತಿಗಳಂತಹ ಶಾಸ್ತ್ರ ಸಾಹಿತ್ಯಕ್ಕೆ ಪ್ರವೇಶಿಸುವ ಮುಂಚೆ ಶ್ರೀಯುತರು ಕಾವ್ಯ, ಕಥೆ, ನಾಟಕ ಬರೆದಿರುವುದು ತಿಳಿಯುತ್ತದೆ. ಡಾ. ಬಿ.ಆರ್. ಹಿರೇಮಠರು ಮೂಲತಃ ಕವಿಗಳಾಗಿದ್ದು, ವಿದ್ಯಾರ್ಥಿ ಜೀವನದಲ್ಲಿಯೇ ಕಾವ್ಯ ರಚನೆ ಮಾಡುತ್ತಿದ್ದರು. ಪ್ರಪಂಚ, ಸಂಕ್ರಮಣ,

ಕ್ರಾಂತಿದರ್ಶಿ, ಸನ್ಮತಿ, ಹೇಮಕೂಟ, ಪರಂಜ್ಯೋತಿ, ಶರಣ ಧರ್ಮ ಮುಂತಾದ ಪತ್ರಿಕೆಗಳಲ್ಲಿ ಇವರ ಕವನಗಳು ಪ್ರಕಟವಾಗಿರುವುದು ಗಮನಾರ್ಹವಾಗಿದೆ. ಕವಿತೆಗಳಲ್ಲದೆ ಕಥೆಗಳನ್ನು ಬರೆಯುತ್ತಿದ್ದರೆಂಬುದಕ್ಕೆ ಯಜ್ಞಪಶು - ಕಥೆ ನಿದರ್ಶನವಾಗಿದೆ. ಹಾಗೇ ಡಾ. ಬಿ. ಆರ್. ಅವರು ನಾಟಕಗಳನ್ನು ರಚಿಸಿದ್ದರು. ದಾಸಸಾಹಿತ್ಯ, ಶಿಲೆಯಲ್ಲಿ ಸಾಹಿತ್ಯ, ವಚನ ಸಾಹಿತ್ಯ ಈ ಮೂರು ಏಕಾಂಕಗಳು ನಮಗಿಂದು ಲಭಿಸುತ್ತವೆ. ಇದರಲ್ಲಿ ದಾಸಸಾಹಿತ್ಯ ಮತ್ತು ವಚನ ಸಾಹಿತ್ಯ ನಾಟಕಗಳು ಆಕಾಶವಾಣಿಯಲ್ಲಿ ಬಿತ್ತರಗೊಂಡು ಬಾನುಲಿರೂಪಕಗಳಾಗಿವೆ. ಕಾವ್ಯ, ಕಥೆ, ನಾಟಕ ರಚಿಸಿದ್ದ ಸೃಜನಶೀಲ ಸಾಹಿತಿಯಾಗಿದ್ದ ಡಾ. ಬಿ.ಆರ್. ಹಿರೇಮಠ ಅವರು ತಮ್ಮ ಗುರುಗಳಾದ ಡಾ. ಎಂ.ಎಂ. ಕಲಬುರ್ಗಿ, ಡಾ. ಆರ್.ಸಿ. ಹಿರೇಮಠ ಅವರ ದಟ್ಟ ಪ್ರಭಾವದಿಂದಾಗಿ ಸಂಶೋಧಕರಾಗಿ ರೂಪಗೊಂಡಿರುವುದು ಐತಿಹಾಸಿಕ ಸಂಗತಿಯಾಗಿದೆ.

**೫.೨: ಬಿ.ಆರ್. ಅವರ ಕವಿತೆಗಳು :**

ಡಾ. ಬಿ.ಆರ್. ಹಿರೇಮಠ ಅವರು ರಚಿಸಿದ ಪ್ರಥಮ ಕವಿತೆ ಯಾವುದೆಂದು ಖಚಿತವಾಗಿ ಹೇಳಬರುವುದಿಲ್ಲ. ಏಕೆಂದರೆ ಬಹುಪಾಲು ಕವಿತೆಗಳಿಗೆ ದಿನಾಂಕಗಳನ್ನು ದಾಖಲಿಸಿದ್ದರೂ ಕೂಡಾ ಕೆಲವು ಕವಿತೆಗಳನ್ನು ರಚಿಸಿದ ದಿನಾಂಕಗಳಿಲ್ಲ. ಹೀಗಾಗಿ ಇದೇ ಮೊದಲ ಕವಿತೆ ಎನ್ನಲು ಸಾಧ್ಯವಿಲ್ಲ. ಸಧ್ಯ ಉಪಲಬ್ಧವಾದ ರಚನೆಗಳಲ್ಲಿ ಸೂರ್ಯೋದಯ ಪ್ರಪ್ರಥಮ ಕವನವೆಂದು ಪರಿಗಣಿಸಬಹುದು. ಇದರ ರಚನಾ ಕಾಲ ೬.೨.೧೯೭೨. ೧೯೭೨ರಿಂದ ೧೯೭೮ರ ವರೆಗೆ ರಚಿಸಿರಬಹುದಾದ ಒಟ್ಟು ೨೨ ಕವಿತೆಗಳು ೩ ಹನಿಗವನಗಳು, ೩ ಸಂಪಾದನೆಗಳು ಲಭಿಸಿವೆ.* ೭೨ರಲ್ಲಿ ರಚಿಸಿದ 'ಸೂರ್ಯೋದಯ' ಕವಿತೆಯನ್ನು ೭೩ರಲ್ಲಿ ಪರಿಷ್ಕರಣೆ ಮಾಡಿದ್ದು ತಿಳಿಯುತ್ತದೆ. ಸೂರ್ಯೋದಯ ಕವನವೊಂದು ಸುಂದರವಾದ ಅಭಿವ್ಯಕ್ತಿಯಾಗಿದೆ.

**ಸೂರ್ಯೋದಯ**

ವಿಚಾರಗಳ ತುತ್ತು
ಮತ್ತೆ ಮತ್ತೆ
ಮೆಲುಕು ಹಾಕುತ್ತಲಿದ್ದೇನೆ.
ನುರಿಸಿ ನುರಿಸಿ ಬಾಯಿ
ಸೋತಿತು ರಸವಿಲ್ಲ, ರುಚಿಯಿಲ್ಲ
ಅಸಂತೃಪ್ತಿ ತಳಮಳಗಳ
ಚೀರಾಟ ಕಿರಚಾಟ
ಕತ್ತಲು ಬೆಳಕುಗಳ

ಜಡಿಮಳೆ ಸುರಿಯುತ್ತಿದೆ

ಮೈಯೆಲ್ಲಾ ಒದ್ದೆ ಒದ್ದೆ

ಚಳಿ ಹತ್ತಿ ಮೈ ಬೆವತಿದೆ

ಬಿರುಗಾಳಿ ಮಿಂಚು ಗುಡುಗು

ತೊತ್ತಳದುಳಿಯುತ್ತಿವೆ

ಎದೆಯಾಳದಲ್ಲಿ ಮೈಲುದ್ದ ತೆರೆಗಳು

ಧೊಪ್ಪಂದು ಅಪ್ಪಳಿಸುತಿವೆ

ಮಾತು ಹೊರಡದು

ಕಣ್ಣು ತೆರೆಯದು

ಕಾಲು ನಡೆಯದು

ಆದರೆ ಮೌನತೆಯ ಅಂಚಿನಲಿ

ಆತ್ಮಸೂರ್ಯನೂ ಉಂಟು

ಇದರಲ್ಲಿ ಹಲವಾರು ವಿಷಯಗಳು ತಳುಕುಹಾಕಿಕೊಂಡಿವೆ. ಸೂರ್ಯೋದಯವೆಂದಾಗ ಕುವೆಂಪು, ಬೇಂದ್ರೆ, ಕಣವಿ, ಶಿವರುದ್ರಪ್ಪ ಅವರ ನೆನಪು ಸಹಜ. ಅವರು ಕಂಡ ಸೂರ್ಯೋದಯದ ಕಲ್ಪನೆ ಬೇರೆ, ಬಿ. ಆರ್. ಅವರಿಗೆ ಕಾಣಿಸುತ್ತಿರುವ ಸೂರ್ಯೋದಯವೆ ಬೇರೆ. ಕತ್ತಲು ಬೆಳಕುಗಳ ಜಡಿಮಳೆ, ಮೈಯೆಲ್ಲಾ ಒದ್ದೆ, ಬಿರುಗಾಳಿ ಮಿಂಚುಗುಡುಗುಗಳ ತೊತ್ತಲದುಳಿತ, ಎದೆಯಾಳದಲ್ಲಿ ಮೈಲುದ್ದ ತೆರೆಗಳು. ಇಲ್ಲಿ ಕಾವ್ಯ ತಾನೇ ತಾನಾಗಿ ನಳನಳಿಸಿದೆ. ಕವಿತೆಯುದ್ದಕ್ಕೂ ಹುಡುಕಾಟವಿದೆ. ಮಾತು ಹೊರಡದು. ಕಣ್ಣು ತೆರೆಯದು, ಕಾಲು ನಡೆಯದು. ಇಂತಹ ಜಡಗೊಂಡ ರಿಕ್ತಾವಸ್ಥೆಯಲ್ಲಿಯೂ ಕವಿ ನಿರಾಶೆಗೊಳ್ಳುವುದಿಲ್ಲ. ಮೌನತೆಯ ಅಂಚಿನಲ್ಲಿ ಆತ್ಮ ಸೂರ್ಯನುಂಟು ಎನ್ನುವಲ್ಲಿ ಅದಮ್ಯ ವಿಶ್ವಾಸವಿದೆ. ಜೀವನ ಪ್ರೀತಿ ಇದೆ. ಇದು ಡಾ. ಬಿ. ಆರ್. ಅವರ ಪ್ರಥಮ ರಚನೆಯಾದರೂ ಪ್ರಬುದ್ಧವಾಗಿದೆ. ಡಾ. ಬಿ.ಆರ್. ಅವರು ಈ ಕವಿತೆಯನ್ನು ೭೨ರಲ್ಲಿ ಬರೆದಾಗ ಕತ್ತಲು ಬೆಳಕು, ಜಡಿಮಳೆ, ನಿಟ್ಟುಸಿರು ಮೂರು ಶೀರ್ಷಿಕೆಗಳನ್ನು ಇಟ್ಟಿದ್ದಾರೆ. ೬.೨.೧೯೭೩ರಂದು ಪರಿಷ್ಕರಣ ಮಾಡಿ ಶುದ್ಧ ಪ್ರತಿ ತಯಾರಿಸುವಾಗ ಸೂರ್ಯೋದಯ ಶೀರ್ಷಿಕೆಯನ್ನು ಸ್ವೀಕರಿಸಿದ್ದಾರೆ. ಇದರಿಂದ ಸ್ಪಷ್ಟವಾಗುವ ಸಂಗತಿ ಏನೆಂದರೆ ಬಿ.ಆರ್. ಅವರು ತಮ್ಮ ರಚನೆಗಳನ್ನು ಪದೇ ಪದೇ ಪರಿಷ್ಕರಣೆ ಮಾಡುತ್ತಿದ್ದರೆಂಬುದಕ್ಕೆ ಸೂರ್ಯೋದಯ ಪುರಾವೆಯನ್ನು ಒದಗಿಸುತ್ತದೆ.

ಸೂರ್ಯೋದಯವಲ್ಲದೆ ಕವಿ, ನಮ್ಮ ಸರಕಾರ, ದಿಟ್ಟ ಪ್ರಶ್ನೆ, ಅಸ್ಪಷ್ಟತೆ (ಕ್ಲಿಷ್ಟತೆ), ಭಯ, ಸಮಸ್ಯೆ, ಹೀಗೂ ಇದ್ದಾರೆ, ಕರಕಿ, ಭಾಳ ಜ್ವಾಕಿರಬೇಕು. ಸಾಹಸ, ಕಿಂದರಜೋಗಿ, ಅಕ್ಕನಾಗಮ್ಮ,

ನೆನಹು, ಕಂಡದ್ದು, ನೀ ಇಲ್ಲದೆ, ಕರ್ತವ್ಯ, ಸಾರ್ಥಕತೆ, ಬಂಜೆ, ಬಂಟ ಮೊದಲಾದ ಕವಿತೆಗಳು ಮತ್ತು ಸ್ಥಿತಿ ಗತಿ, ಅಭಿವ್ಯಕ್ತಿ ಮೂರು ಹನಿಗವನಗಳನ್ನು ಡಾ. ಬಿ. ಆರ್. ಅವರು ರಚಿಸಿದ್ದಾರೆ.*

'ಕವಿ' ಕವಿತೆಯಲ್ಲಿ ಕವಿ ಎಂದರೆ ಯಾರು ? ಎಂಬುದನ್ನು ಪ್ರಶ್ನಿಸುತ್ತ ಆತನ ವೇಷ ಭೂಷಣ ನಡಿಗೆಯ ವೈಖರಿಯನ್ನು ಪರಿಚಯಿಸುತ್ತ -'ಶಂಖ, ಕಹಳೆ, ಕರಡಿ, ಸಂಬಾಳ, ತಾಳ ಮದ್ದಳೆ ನೂರಾರು ವಾದ್ಯಗಳ ಪ್ರದರ್ಶನ' ಎಂದು ಹೇಳಿ - 'ಸರ್ಕಸ್ಸು, ಡೊಂಬರಾಟಗಳ ಕಸರತ್ತು ನಡೆಯುವ, ಅಸ್ತವ್ಯಸ್ತ ಅರಿವೆ ತೊಟ್ಟು ಕೂದಲನ್ನು ಹೇಗಾದರೂ ಬಿಟ್ಟು ಪ್ರತಿಯೊಂದು ಫಂಗಷನ್ನಿಗೂ ಹಾಜರಿ ಹಾಕಿ ಎಲ್ಲಾ ಜನರಿಗೆ ಕಾಣುವ ಹಾಗೆ ಸಾಕಷ್ಟು ಪ್ರದಕ್ಷಿಣೆ ಹೊಡೆದು ಸದ್ದಿಲ್ಲದೇ ಪಲಾಯನ' ಎನ್ನುವಲ್ಲಿ ಸ್ವತಃ ಕವಿಯಾದ ಡಾ. ಬಿ. ಆರ್. ಹಿರೇಮಠರು ಕವಿಯೋರ್ವನನ್ನು ವಿಡಂಬಿಸಿದ್ದು ವಿಲಕ್ಷಣವಾಗಿದೆ. ಈ ಕವಿತೆಯುದ್ದಕ್ಕೂ ವ್ಯಂಗ್ಯ, ವಿಡಂಬನೆ, ತೀಕ್ಷ್ಣ ಕಟಕಿ ಇರುವುದನ್ನು ಗುರುತಿಸಬಹುದು. ಈ ಕವಿತೆ ನಿಜವಾದ ಕವಿಯನ್ನು ಗೌರವಿಸುತ್ತ ಕವಿಗಳ ರೀತಿಯಲ್ಲಿ ಪೋಜು ಕೊಡುವ ಆಷಾಢ ಭೂತಿಗಳನ್ನು ತರಾಟೆಗೆ ತೆಗೆದುಕೊಂಡಿದೆ. ದಿಟ್ಟ ಪ್ರಶ್ನೆ ಎಂಬ ಕವಿತೆಯ ವಸ್ತು ಇಂಥಹದೇ ಆಗಿದೆ. 'ನಮ್ಮ ಸರಕಾರ' ಕವಿತೆಯಲ್ಲಿ ತೀವ್ರವಾದ ವ್ಯಂಗ್ಯವಿದೆ.

"ಘುಮ್ಮೆಂದು ನಾರುವ
ಸಗಣಿ ಮೂತ್ರವ
ಬಳಿದು, ಹೊತ್ತು
ಅದರಿಂದಲೇ ಮಜ್ಜನಗೊಂಡು"

ಎಂದು ಆರಂಭಗೊಳ್ಳುವ ಕವಿತೆಯು ಮುಂದುವರೆದು - "ಅರೆಹೊಟ್ಟೆ, ಅರೆಬಟ್ಟೆಗಳಿಂದ ಮೂಳೆ, ಮಾಂಸ, ರಕ್ತಗಳ ಧಾರೆಯೆರೆದು ಒಡೆಯನ ಊಳಿಗಮಾಡಿ ಅಂತಸ್ತು ಸಂಪತ್ತು ಹೆಚ್ಚಿಸಿ ಅವನು ಹೇಳಿದ ಮಾತು ವೇದ ಉಪನಿಷತ್ತು ಎಂದು ತಿಳಿದು ಮನೆಯವರು ಕೊಟ್ಟ ಹಿಂಸೆಗಳನ್ನು ತಾಳಿ ಊರ ದೇವರುಗಳ ದರ್ಶನಕ್ಕೆ ಒಳಗಾಗಿ ಜನತೆಯ ದಬ್ಬಾಳಿಕೆಗೆ ತುತ್ತಾಗಿ ಕೊಳಚೆ ನೀರಿನ ಮುರುಕು ಗುಡಿಸಲಿನಲ್ಲಿ ವಾಸ ಮಾಡಿ, ತಮ್ಮನ್ನೇ ಮಾರಿಕೊಂಡು ತಮ್ಮ ಬದುಕು ನಡೆಸುವ ಜನರಿಗೆಂದು ಜೀತದಿಂದ ಮುಕ್ತಿ ?" ಎಂದು ಪ್ರಶ್ನಿಸುತ್ತಾರೆ. ಇಲ್ಲಿ ದಲಿತ ಬಂಡಾಯ ಸಾಹಿತ್ಯದ ಆಶಯ ಮಡುಗಟ್ಟಿರುವುದನ್ನು ಗುರುತಿಸಬಹುದಾಗಿದೆ. ಕನ್ನಡ ಸಾಹಿತ್ಯದಲ್ಲಿ ದಲಿತ ಧ್ವನಿ ದಾಖಲಾಗಿದ್ದು ಡಾ. ಸಿದ್ಧಲಿಂಗಯ್ಯ ಅವರ 'ಹೊಲೆ ಮಾದಿಗರ ಹಾಡು' ಕವನಸಂಕಲನದಿಂದ. ಅದು ಪ್ರಕಟವಾಗಿದ್ದು ೧೯೭೫ರಲ್ಲಿ ಬಂಡಾಯ ಸಾಹಿತ್ಯ ಸಂಘಟನೆ ಅಸ್ತಿತ್ವಕ್ಕೆ ಬಂದದ್ದು ೧೯೭೯ರಲ್ಲಿ ಈ ಐತಿಹಾಸಿಕ ಸಂಗತಿಗಳನ್ನು ಗಮನಿಸಿದಾಗ ಡಾ. ಬಿ. ಆರ್. ಹಿರೇಮಠ ಅವರು ೧೯೭೩ ರಲ್ಲಿಯೇ ದಲಿತಬಂಡಾಯ ಸಾಹಿತ್ಯದ ಕವನ ಕಟ್ಟಿರುವುದು ಗಮನಾರ್ಹ ಅಂಶವಾಗಿದೆ.

'ಅಸ್ಪಷ್ಟತೆ'ಯು ೧೨.೪.೧೯೭೩ರಲ್ಲಿ ರಚನೆಗೊಂಡಿದ್ದು ಸಮಯ ಮಧ್ಯಾನ್ಹ ೨.೩೦ ಗಂಟೆ ಎಂದು ವೇಳೆಯನ್ನು ಕೂಡಾ ದಾಖಲಿಸಿರುವುದು ವಿಶೇಷವೆನಿಸುತ್ತದೆ. ಈ ಕವಿತೆ ನಾಲ್ಕು ನುಡಿಗಳನ್ನು ಒಳಗೊಂಡಿದೆ. "ಕಲ್ಪನೆಯ ಬೆಳಕಿನಲ್ಲಿ ಗತಜೀವನದ ಪುಟಗಳು ಥಕಥೈ ಥಕಥೈ ಎಂದು ಹೆಜ್ಜೆ ಹಾಕುತ ನೃತ್ಯಲೀಲೆಯ ಮಾಡುತಲಿಹವು" ಎಂದು ಹೇಳಿ ೨ನೇ ನುಡಿಯಲ್ಲಿ 'ಆಗ' ಜರುಗುವ ಸಂಗತಿಗಳನ್ನು ಮೂರನೆಯ ನುಡಿಯಲ್ಲಿ 'ಅಲ್ಲಿ' ನಡೆದ ಘಟನೆಗಳನ್ನು ವಿವರಿಸಿ ಕೊನೆಗೆ ಅವು - "ಗೆರೆಗಳು ಯಾರ ಗೆರೆಗಳು ಎಂದು ಬರೆದವು. ಯಾರಿಗೊತ್ತು" ಎಂದು ಕವಿತೆ ಮುಕ್ತಾಯಗೊಳ್ಳುತ್ತದೆ. ಹೀಗೆ ವಿಧಿ ವಿಲಾಸವನ್ನು ಜಿಜ್ಞಾಸೆಗೊಳಪಡಿಸಿದ್ದಾರೆ. ಈ ಕವಿತೆಯ ಆಶಯ ವಿಶಿಷ್ಮವಾಗಿದೆ. ಅವರ ಬದುಕಿನ ವಿಶಿಷ್ಮ ಹಂತವನ್ನಿದು ವಿವರಿಸುತ್ತದೆ. ಉನ್ನತ ವ್ಯಾಸಂಗ ಮುಗಿದು ನೌಕರಿ ದೊರೆಯದೆ ನಿಲ್ಲಲು ಆಸರೆ ಇಲ್ಲದಿರುವ ಸಂದರ್ಭದಲ್ಲಿ ವಿಧಿವಿಲಾಸದ ಕುರಿತಾಗಿ ರಚಿಸಿದ ಗೀತೆ ಇದು. ಅವರ ಬದುಕು ನಿಲ್ಲಲೊಂದು ನೆಲೆ ಕಂಡುಕೊಳ್ಳದಿರುವ ಸಮಯವದು. ಅದಕ್ಕಾಗಿಯೇ ಕವಿತೆಯ ಶೀರ್ಷಿಕೆ ಅಸ್ಪಷ್ಟತೆಯಾಗಿದೆ. ಬದುಕು ಸರಳವಲ್ಲ, ಸಂಕೀರ್ಣವೂ, ತುಂಬಾ ಕ್ಲಿಷ್ಟವೂ ಆದುದಾಗಿದೆ. ವ್ಯಕ್ತಿಯ ಭವಿಷ್ಯ ಸುಸ್ಪಷ್ಟವಾಗಿರುವುದಿಲ್ಲ. ಆದ್ದರಿಂದಲೇ ಕವಿತೆಯ ಆಶಯ ಅವರ ಬದುಕಿನ ಪ್ರಮುಖ ಹಂತವನ್ನು ದಾಖಲಿಸಿದೆ. ಪ್ರಸ್ತುತ ಕವಿತೆಯನ್ನು ಶೀರ್ಷಿಕೆ 'ಅಸ್ಪಷ್ಟತೆ' ಎಂದಿದ್ದರೂ ಉಪಶೀರ್ಷಿಕೆಯು 'ಕ್ಲಿಷ್ಟತೆ' ಎಂದಿರುವುದು ಗಮನಾರ್ಹವಾಗಿದೆ.

ಭಯ ೧೮.೧೨.೧೯೭೪ರಲ್ಲಿ ರಚನೆಗೊಂಡ ಮತ್ತೊಂದು ಕವಿತೆ.

ಎದೆ ಬಿರುಕು

ಬಿಡುವ

ಸೆಳೆ ಮಿಂಚು

ಗುಡುಗು ಸಿಡಿಲು

ಕಿವಿಗಡಚಿಕ್ಕುವ

ಹಾಗೆ -

ಬೊಬ್ಬಿ ಹೊಡೆಯುವ

ಗಾಳಿ

ಮೈಯನೆಲ್ಲ

ನುಗ್ಗು ಮಾಡುವ

ಮರಮಳೆ

ಪ್ರಾಣ ಹಿಡಿದು

ಹಿಂಡಿ ಹಿಪ್ಪಿ ಮಾಡಿ

ಬಿಡುವ ಛಳಿ

ಬಿಡದೆ ಬಂದು

ಮುತ್ತಿಗೆ ಹಾಕಿ

ಹೆಡಮುರಗಿ

ಬಿಗಿದು ಬಂಧಿಸುವ ಕತ್ತಲೆ

ಗಳ ದಾಂದಲಿಯಲಿ

ಉಸಿರುಗಟ್ಟಿ

ಸಾಯುವೆನೋ ............

ಈ ಕವಿತೆಯು ಬಿ. ಆರ್. ಅವರ ಬದುಕಿನ ಮಹತ್ವದ ಘಟ್ಟದ ಮೇಲೆ ಹೊಸಬೆಳಕು ಚಲ್ಲುತ್ತದೆ. ಎಂ. ಎ. ಮುಗಿಸಿ ನೌಕರಿ ಸಿಗದ ಆತಂಕ ಮತ್ತು ತಲ್ಲಣಗಳು. ಇದರಲ್ಲಿ ಮಡುಗಟ್ಟಿವೆ. ತಮ್ಮ ನೋವನ್ನು ಶಮನಗೊಳಿಸಲು ಡಾ. ಬಿ.ಆರ್. ಅವರಿಗೆ ಕಾವ್ಯವೊಂದು ಅಭಿವ್ಯಕ್ತಿ ಮಾಧ್ಯಮವಾಗಿದ್ದನ್ನು ಇದರಲ್ಲಿ ಗುರುತಿಸಬಹುದು.

'ಮಾಡುದೇನೈತಿ',ಕವಿತೆ ಬಾರದು ಬಪ್ಪದು, ಬಪ್ಪುದು ತಪ್ಪದು' ಎಂಬ ಆಶಯವನ್ನು ಹೊತ್ತು ರಚನೆಯಾಗಿದೆ. ತಮ್ಮನ್ನು ತಾವೇ ಸಾಂತ್ವನಗೊಳಿಸುವ ಬದುಕನ್ನು ಎದುರಿಸುವ ಮನಸ್ಥಿತಿ ಇದೆ.

'ಬೆಳಗು' ಕವಿತೆ ಈ ಮುಂಚೆ ಅವರು ರಚಿಸಿದ ಸೂರ್ಯೋದಯದ ಆಶಯವನ್ನೇ ಹೇಳುತ್ತದೆ. ಇದಕ್ಕೆ 'ಸಮಸ್ಯೆ' ಎಂದು ಮತ್ತೊಂದು ಉಪಶೀರ್ಷಿಕೆಯನ್ನು ನೀಡಿದ್ದಾರೆ.

ಸಾಹಸ, ಕಿಂದರಜೋಗಿ, ನೆನಹು ಮುಂತಾದ ಕಿರುಗವಿತೆಗಳು ಇದರಲ್ಲಿವೆ. 'ಕಂಡದ್ದು' ಕವಿತೆಯು ಕನ್ನಡ ಅಧ್ಯಯನ ಪೀಠದಿಂದ ೧೯೭೭ರಲ್ಲಿ ಪ್ರಕಟವಾದ ೩೬ ಮುಖ ೬೩ ಕವನಗಳು, ಎಂಬ ಕವನ ಸಂಕಲನದಲ್ಲಿ ಪ್ರಕಟವಾಗಿದೆ. 'ನೀ ಇಲ್ಲದೆ' ಕವಿತೆ ಕೂಡಾ ಅದೇ ಕವನ ಸಂಕಲನದಲ್ಲಿ ಪ್ರಟಿಕವಾಗಿದೆ. 'ಕಂಡದ್ದು' ಕವಿತೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಕ್ಯಾಂಪಾಸಿನ ಪಡ್ಡೆ ಹುಡುಗರ ಹಾವಳಿ ದಾಖಲೆಗೊಂಡಿದ್ದರೆ. 'ನೀ ಇಲ್ಲದೆ' ಕವಿತೆಯಲ್ಲಿ ಶಾಸನ ಮತ್ತು ಹಸ್ತಪ್ರತಿಗೆ ಸಂಬಂಧಿಸಿದ ವಿಷಯಗಳು ಕುತೂಹಲಕಾರಿಯಾಗಿವೆ. ಶಾಸನಗಳನ್ನು ಅಧ್ಯಯನಿಸುವುದು, ಪ್ರತಿ ಮಾಡಿಕೊಡುವುದು, ಮೂಲ ನೋಡುವುದು, ತಿದ್ದುವುದು. ಶೋಧಿಸುವುದು ಈ ಎಲ್ಲ ಕ್ರಿಯೆಗಳು ಡಾ. ಬಿ. ಆರ್ ಅವರ ಕವಿತೆಯಲ್ಲಿ ಪ್ರೇಮಿಗಳ ಪಿಸುಮಾತಿನಂತೆ ವ್ಯಕ್ತವಾಗಿದೆ. ಇವರಿಗೆ ಶಾಸನವೇ ಸಂಗಾತಿ. "ಮನಸ್ಸಿನ ಮಾತ್ರಿಕೆಗಳು ಕನಸಿನ ಕಟ್ಟಿನಲ್ಲಿ ಬಿಚ್ಚುವಂತಿಲ್ಲ ಓದುವ ಸೊಗಸಿಲ್ಲ, ತಿದ್ದುವ ಗೋಜಿಗೆ ಹೋಗಿಲ್ಲ. ಮಾತ್ರಿಕೆಗಳ ತಗಿಬೇಕು ಸರಿಯಾಗಿ ತಿದ್ದಬೇಕು. ಮೂಲಕ್ಕೆ ಮೂಲ ಹಚ್ಚಬೇಕು, ಶೋಧಿಸಬೇಕು. ಸಂಶೋಧಿಸಬೇಕು"

ಎನ್ನುವ ಮಾತು ಪ್ರಿಯತಮ. ಪ್ರಿಯತಮೆಗೆ ಹೇಳಿದಂತಿದ್ದರೂ ಈ ಕಾವ್ಯದ ವಿಷಯ ಅಷ್ಟಕ್ಕೇ ಸೀಮಿತಗೊಳ್ಳದೆ ಮುಂದುವರೆಯುತ್ತದೆ. ನೀ ಇಲ್ಲದೆ ಹೇಗೆ ಸಾಧ್ಯವಾಗಬೇಕು, ಮೂಲ ಶಾಸನವಿಲ್ಲದೆ ಹಸ್ತಪ್ರತಿಯನ್ನು ತೆಗೆಯಲಾಗುವದಿಲ್ಲ. ಕಲ್ಲಚ್ಚು ಪ್ರತಿ ತೆಗೆಯದೆ ಮೂಲಕ್ಕೆ ಮೂಲ ಮುಖಾಮುಖಿಯಾಗಿಸಲು ಬಾರದು ಎಂಬುದನ್ನು ಗಮನಿಸಿದಾಗ ಶಾಸನ ಮತ್ತು ಕಲ್ಲಚ್ಚು ತೆಗೆಯುವ ಪ್ರಕ್ರಿಯೆಗಳಿಗೆ ಈ ಕಾವ್ಯದ ಮಾತುಗಳು ಅನ್ವಯಿಸುತ್ತವೆ.

'ಕರ್ತವ್ಯ'ವೆಂಬ ಕವಿತೆಯಲ್ಲಿ ಸಮಕಾಲೀನ ಸಂಗಿತ ದಾಖಲಿಗೊಂಡಿದೆ. " ನಮ್ಮ ಸರ್ಕಾರ ಮಾಡೈತಿ ಹೊಸ ಕಾನೂನು ಇಂದಿನ ಪೀಳಿಗೆಗದು ಹಾಲು ಜೇನು, ಬಡ ಜನರಿಗಾಗೈತಿ ಕಾಮಧೇನು" ಎಂದು ಆರಂಭವಾಗುವ ಕವಿತೆಯಲ್ಲಿ ಅಂತ್ಯ ಪ್ರಾಸವಿದೆ. ಮುಂದುವರೆದು ಕಲಬೆರಿಕೆ, ಕಳ್ಳರಿಗೆ, ಕಪ್ಪುಹಣ ಖದೀಮರಿಗೆ, ದೇಶ ದ್ರೋಹಿಜನರಿಗೆ ಹಾಕೈತಿ ಮುಗದಾಣ, ಕೇಳೈತಿ ಜುಲಮಾನ ಎನ್ನುವಲ್ಲಿ ೧೯೭೫ರ ತುರ್ತುಪರಿಸ್ಥಿತಿಯ ಕರಾಳ ನೆರಳಿದೆ. ಮುಂದೆ;

"ಹಿಂಸಾ ಸತ್ಯಾಗ್ರಹ ಚಳುವಳಿ ತ್ಯಜಿಸಿ
ದುಷ್ಟಶಕ್ತಿಗಳ ಪೂರಾವರಿಸಿ
ಯುವ ಶಕ್ತಿಯ ಸರಿಯಾಗಿ ಹರಿಸಿ
ಹೊಸ ಯೋಜನೆ ರೂಪಗೊಳಿಸಿ
ರಾಷ್ಟ್ರಶಕ್ತಿಯ ಬಲಪಡಿಸಿ
ದೇಶದ ಭವಿಷ್ಯ ಒಪ್ಪಗೊಳಿಸಿ
ತೋರಿಸಿ ಕೊಡಬೇಕ ನಮ್ಮ ಕರ್ತವ್ಯ"

ಎನ್ನುವಲ್ಲಿ ಭಾರತ ಸರ್ಕಾರವು ೧೯೭೫ರಲ್ಲಿ ದೇಶದ ಮೇಲೆ ತುರ್ತುಪರಿಸ್ಥಿತಿ ಹೇರಿದ್ದನ್ನು ಈ ಕವಿತೆ ಧ್ವನಿಸುತ್ತದೆ. ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಬರೆದ ಪ್ರತಿಭಟನಾ ಕಾವ್ಯವದಾಗಿರುವುದರಿಂದ ಕರ್ತವ್ಯಕ್ಕೆ ಹೆಚ್ಚಿನ ಪ್ರಾಮುಖ್ಯವಿದೆ.

'ಸಾರ್ಥಕತೆ' ಒಂದು ಯಶಸ್ವಿ ಕವಿತೆ, ಶಿವ ಶರಣರ ಸಮರ್ಪಣಾ ಭಾವವಿಲ್ಲಿ ವ್ಯಕ್ತವಾಗಿದೆ. 'ಬಂಜೆ' ಕವಿತೆಯ ಮತ್ತೊಂದು ವಿಶಿಷ್ಟ ರಚನೆಯಾಗಿದೆ. ಬಂಜೆಯ ಬದುಕಿನ ಕುರಿತಾಗಿ ಮಾನವೀಯ ಅನುಕಂಪವಿದೆ. 'ಅಕ್ಕನಾಗಮ್ಮ' ಒಂದು ವ್ಯಕ್ತಿ ಚಿತ್ರವಾಗಿದೆ.

ಬಿ.ಆರ್. ಹಿರೇಮಠರು ಕಾವ್ಯಕಟ್ಟುವಲ್ಲಿ ಶಿಷ್ಟ ಭಾಷೆಯನ್ನು ಬಳಸಿಕೊಂಡಿದ್ದಾರೆ. ಆದರೆ ಅವರಿಗೆ ಜಾನಪದದತ್ತ ಹೆಚ್ಚು ಸೆಳೆತವಿದೆ. ಇದಕ್ಕೆ 'ಭಾಳ ಜ್ವಾಕಿರಬೇಕು'. 'ಕರಿಕಿ' 'ಹಿಂಗಿದಾರೆ' ಕವಿತೆಗಳು ಉತ್ತಮ ಉದಾಹರಣೆಗಳಾಗಿವೆ.

'ಭಾಳ ಜ್ಯಾಕಿರಬೇಕು' ಕವಿತೆಯು "ನೋಡ್ರ್ಯಪಾ ಕೈಮ್ಯಾಗ ಕೈ ಹಾಕಿ ಆಣಿ ಮಾಡಿ ಹೇಳಿದ್ರೂ" ಎಂದು ಆರಂಭವಾಗಿ 'ಕುದ್ರಿ ನೆಲಿ, ನೀರಿನ ಸೆಲಿ, ಹೆಣ್ಣಿನ ನೆಲಿ ಯಾರಿಗೊತ್ತಿಲ್ಲೊ ತಮ್ಮಾ' ಎಂಬ ಜಾನಪದ ಗಾದೆ ಮಾತನ್ನು ಬಳಸಿಕೊಂಡು ಕವಿತೆ ಮುಂದುವರಿಸುತ್ತಾರೆ. ಕೊನೆಗೆ 'ಇದ್ದದ್ದೆಲ್ಲಾ ತಗ್ಗಿಸಿಕೊಂಡು ಹೋಗಬೇಕಾದದ್ದು ಭಾಳ ಜ್ಯಾಕಿ' ಎಂದು ಮುಕ್ತಾಯವಾಗುತ್ತದೆ. ಈ ಕವಿತೆಯಲ್ಲಿ ಅಪ್ಪಟ ಆಡು ನುಡಿ ಇದೆ. ದೇಶಿಯ ತಾಜಾತನವಿದೆ. ಜನಪದ ಗಾದೆ ಮಾತುಗಳ ಬಳಕೆ ಇದೆ. ಡಾ. ಬಿ. ಆರ್. ಅವರು ಮೂಲತಃ ಗ್ರಾಮೀಣ ವಿದ್ಯಾರ್ಥಿಯಾಗಿರುವುದರಿಂದ ದೇಶೀಯ ಸಹಜತೆ ಅವರ ಕಾವ್ಯದಲ್ಲಿ ತಾನೇ ತಾನಾಗಿ ಮೂಡಿ ಬಂದಿದೆ. ಇದೇ ರೀತಿ ಕರಿಕಿ ಕವಿತೆಯಲ್ಲಿಯೂ - "ನಮ್ಮ ಹೊಲಾ ನೋಡಿ ಊರ ಮಂದ್ಯಲ್ಲಾ ಉಗುಳುವಂಗಾಗೆತಿ, ಸುತ್ತೂರ ಮಂದ್ಯಾಗಿನ ದನಗೊಳಿಗೆಲ್ಲಾ ನಿಂದ್ರಾಕ ಖಾಯಂ ಜಾಗಾ ಆದಂಗಾಗೇತಿ" ಎಂದು ಕವನ ಆರಂಭವಾಗುತ್ತದೆ. 'ಕರಿಕಿ' ವಿಪರೀತ ಬೆಳೆದು ಹೊಲದಲ್ಲಿ ಬೆಳೆ ಬರಲಾರದ ಸ್ಥಿತಿಯನ್ನು ವಿವರಿಸುತ್ತಾರೆ. ಮುಂದೆ ಅದನ್ನು ಕಿತ್ತೊಗೆಯಲು ಮಾಡಿದ ಪ್ರಯತ್ನವಾಗಿ - "ಮಡಿಕಿ ಹೊಡದ್ರ ಮಿಸಕವಲ್ತು, ಟ್ರಾಕ್ಟರ ಹೊಡಸಿದ್ರೂ ಜಪ್ಪ ಅನವಲ್ತು, ಕೆಟ್ಟ ಬ್ಯಾಸಿಗ್ಯಾಗ ಎಂಟೆತ್ತಿನ ನೇಗಲಾ ಹೊಡದ್ರು ಕೆಟ್ಟ ಮಾರಿದ್ರೂ ಬಿಟ್ಟ ಹೋಗವಲ್ತು" ಎನ್ನುವಲ್ಲಿ ಕರಿಕಿಯನ್ನು ಬೇರು ಸಹಿತ ಕಿತ್ತೊಗೆಯಲು ಮಾಡಿರುವ ಪ್ರಯತ್ನಗಳಿಲ್ಲಿವೆ. ಕವಿತೆ ಮುಂದುವರಿದು -

"ಆಳಹಚ್ಚಿ ಕರಿಕಿ ಬೇರಿನ ಮಳಿ ಮುರದು
ವಂಶ ನಟೌಂಶ ಆಗು ಹಂಗ ನಟ್
ಕಡಸೀಸಿ ಕಡಿ ಮುಂದ ನಿಂತು ಈಗೇನ್
ನೋಡತಿ ಹಸನಕಟ್ ಹೊಲ"

ಎಂದು ಕರಕಿಯನ್ನು ಬೇರು ಸಹಿತ ಕಿತ್ತು ಹಾಕಿದ ನಿದರ್ಶನ ನೀಡುತ್ತಾರೆ. ಇದರಲ್ಲಿ ಬಳಕೆಯಾದ "ಉಗುಳುವಂಗಾಗೈತಿ. ಅದ್ಹ್ಯಾಂಗ ಸಾಧ್ಯರಿ, ಜಪ್ಪ ಅನವಲ್ತು, ಕೆಟ್ಟ ಬ್ಯಾಸಿಗ್ಯಾಗ ಕೆಟ್ಟ ಮಾರಿ ಬಿಟ್ಟ ಹೋಗ್ವಲ್ತು, ಹಣಿವಲ್ಕು ಜ್ಯಾಳ ನಿಟ್ಲ ಆಗೂತನಕಾ ಕರಿಕಿ ಬೇರಿನ ಮಳಿ ಮುರದು, ಹಸನ ಕಟ್ ಹೊಲಾ ಹಸು, ನೀರಡಿರಿ ಹಾರುವಂಗಾಗೈತಿ, ಬಿತ್ತಿದ್ದೇನೂ ಹುಸಿ ಹೋಗಂಗಿಲ್ಲ" ಮುಂತಾದ ಮಾತುಗಳು ಅಪ್ಪಟ್ಟ ದೇಶಿ ನೆಲೆಯಿಂದ ಮೂಡಿ ಬಂದವುಗಳಾಗಿವೆ.

ಕರಕಿ - ಇಲ್ಲಿ ಸಾಂಕೇತಿಕ ಅದರ ಹಿಂದೆ ಅಡಗಿರುವ ಧ್ವನಿ ತುಂಬಾ ವಿಶಿಷ್ಟವಾದದ್ದು. ಮನುಷ್ಯನ ಕೆಟ್ಟ ಚಟಗಳನ್ನು ಬಿಟ್ಟು ಕೊಡಲಾಗದ ದುಷ್ಟ ಗುಣಗಳಿಗೆ ಒಂದು ರೂಪಕದಲ್ಲಿ ಇಲ್ಲಿ ಬಳಕೆಯಾಗಿರುವುದು ವಿಶೇಷವಾಗಿದೆ.

'ಹಿಂಗೂ ಇದ್ದಾರೆ' - ಕವಿತೆಯಲ್ಲಿ ಕೂಡಾ ಜಾನಪದದ ಸೊಗಡಿದೆ. ಆಡು ನುಡಿಯ ದನಿ ಇದೆ. ದೇಶೀಯ ಸೊಬಗಿದೆ. ಅದೇ ರೀತಿ 'ಕಂಡದ್ದು' ಕವಿತೆಯಲ್ಲಿ 'ಮಾಡೂದೇನೈತಿ' ರಚನೆಯಲ್ಲಿಯೂ

ದೇಶೀ ಸೊಗಡಿದೆ. ವಿಶೇಷವೆಂದರೆ 'ಬಂಜೆ' ಕವಿತೆಯನ್ನು ಶಿಷ್ಟಭಾಷೆಯಲ್ಲಿ ಬರೆದಿದ್ದರೂ ಪರಿಷ್ಕರಿಸುವಾಗ ಅಪ್ಪಟ ಜಾನಪದವಾಗಿಯೇ ಕಟ್ಟಿದ್ದಾರೆ. ಆದರೆ ಅದು ಮುದ್ರಿತವಾಗಿ ಬಂದಾಗ (೩೩ ಮುಖ ೬೩ ಕವನಗಳು) ಮತ್ತೆ ಶಿಷ್ಟ ಭಾಷೆಯಲ್ಲಿ ಮೂಡಿದೆ. ಈ ಅಂಶವನ್ನು ಪರಿಶೀಲಿಸಿದಾಗ ಕಲಿಕೆಯ ಶಿಷ್ಟಭಾಷೆ ಆಕರ್ಷಣೆ ಒಂದೆಡೆಗಿದ್ದರೆ ಗ್ರಾಮೀಣ ಜನಾಂಗದ ಒಡನಾಡಿಯಾದ ದೇಶೀ ಭಾಷೆಯ ಸೆಳೆತ ಮತ್ತೊಂದೆಡೆ ಇದೆ.

ಬಿ. ಆರ್. ಹಿರೇಮಠರು ಪೂರ್ಣ ಪ್ರಮಾಣದ ಮೂರು ಮಿನಿ ಕವಿತೆಗಳನ್ನು ಹಾಗೂ ಒಂದು ಹನಿಗವಿತೆಯನ್ನು ಕೂಡಾ ರಚಿಸಿದ್ದಾರೆ. ಮಿನಿಗವಿತೆಗಳಿಗೆ ಉದಾಹರಣೆ.

ಸ್ಥಿತಿ : ಕೋಳಿಯ ಮರಿ
ಹೊರಬಂದದ್ದು
ತತ್ತಿಗೆ ಕಾವು ಕೊಟ್ಟಾಗ
ಕಾರ್ಯ ಗಂಗೋತ್ರಿ
ಹರಿದದ್ದು
ಕೈಗೆ ಕಾಂಚಾಣ ಬಿದ್ದಾಗ

ಗತಿ : ಸತ್ತು ಬದುಕಿ
ಬದುಕಿಯೋ ಸತ್ತು
ನಾವು ಬದುಕಿನ
ಸಮಾಧಿ ಶಯ್ಯೆಯಲಿ
ನಿದ್ರಿಸುವ
ತ್ರಿಶಂಕು ಜೀವನ

ಅಭಿವ್ಯಕ್ತಿ: ಮೈನೆರೆದು
ಮಂಚದಲಿ ಕುಳಿತ
ಅಭಿವ್ಯಕ್ತಿ ಕನ್ಯೆಗೆ
ಕತ್ತಲೆ ಕೋಣೆಯ ವಾಸ
ಹೊಸ್ತಿಲ ಒಳಗೇ ಕೋಶ

ಸ್ಥಿತಿ-ಗತಿ ಅಭಿವ್ಯಕ್ತಿ ಈ ಮೂರು ಮಿನಿ ಕವನಗಳಿಗೆ ಉದಾಹರಣೆಗಳಾದರೆ ಈ ಮುಂದಿನದು ಹನಿಗವನಕ್ಕೆ ಉದಾಹರಣೆ.

ಹೂ ಹೀಚು ಹಣ್ಣು

ಯಾವುದೂ

ಕಾಣ್ವಲ್ತು

ಮರಭೂಮಿಯೊಳಗ

ನೀರ

ಹಣಿಸಿಧಾಂಗ

ಆಗ್ಯೆತಿ-

ಇವು ಡಾ. ಬಿ. ಆರ್. ಹಿರೇಮಠರು ಅತ್ಯುತ್ತಮ ಕವಿ ಎಂಬುದಕ್ಕೆ ನಿದರ್ಶನವನ್ನು ಒದಗಿಸುತ್ತವೆ. ಈ ಕವಿತೆಗಳಲ್ಲದೆ ಡಾ. ಬಿ. ಆರ್. ಅವರು ಮೂರು ಜಾನಪದ ಹಾಡುಗಳನ್ನು ಸಂಪಾದಿಸಿದ್ದಾರೆ. 'ಶಿವ ಕೊಟ್ಟ ಕಾಲಕ್ಕೆ ಉಣಲಿಲ್ಲ' ಎಂಬ ತತ್ವಪದವನ್ನು ಸಂಪಾದಿಸಿದ್ದಾರೆ. ಜೂನ್ -೧೯೭೬ರ ಪರಂಜ್ಯೋತಿಯಲ್ಲಿದು ಪ್ರಕಟವಾಗಿದೆ. ಪಲ್ಲ, ಅನುಪಲ್ಲವನ್ನು ಒಳಗೊಂಡಿರುವ ಈ ಗೀತೆ ಐದು ನುಡಿಯನ್ನು ಒಳಗೊಂಡಿದೆ. "ಈ ಮೇಲಿನ ಹಾಡನ್ನು ಮಹಾದೇವಯ್ಯ ಬಸಲಿಂಗಯ್ಯ ಹಿರೇಮಠ (ಗ್ರಾಮ : ಬಿಜಾಪೂರ; ತಾಲ್ಲೂಕು; ಬೀಳಗಿ; ಜಿಲ್ಲಾ:ಬಿಜಾಪೂರ) ಅವರ ಹತ್ತಿರ ಹೋಗಿ ಅವರಿಂದ ಈ ಹಾಡನ್ನು ಸಂಪಾದಿಸಲಾಗಿದೆ."[೧] ಈ ಮಾತುಗಳು ಸಂಪಾದನೆಯ ಶಿಸ್ತಿಗೆ ಒಳಪಟ್ಟಿವೆ. ಬಿ. ಆರ್. ಹಿರೇಮಠರು ಮೂಲತಃ ಕವಿಯಾಗಿದ್ದರೂ ೧೯೭೬ರ ಹೊತ್ತಿಗೆ ಸಂಶೋಧನೆಯ ಪ್ರಭಾವ ಗಾಢವಾಗಿರುವುದನ್ನು ಇದು ಎತ್ತಿ ತೋರಿಸುತ್ತದೆ. ಹಾಗೆಯೇ 'ನೇಮಿನಾಥನ ಕೋಲು ಪದ' - ಬಿ.ಆರ್. ಅವರು ಸಂಪಾದಿಸಿರುವ ಜಾನಪದ ಗೀತೆಯಾಗಿದೆ. ೨೨ನೇ ತೀರ್ಥಂಕರನಾದ ನೇಮಿನಾಥನ ಕುರಿತಾಗಿರುವ ಕೋಲಾಟದ ಪದವನ್ನು ಸಂಪಾದಿಸಿಕೊಟ್ಟಿದ್ದಾರೆ. ೧೯೭೮ ರ ಸನ್ಮತಿ ಪತ್ರಿಕೆಯಲ್ಲಿ ಇದು ಪ್ರಕಟವಾಗಿದೆ.

"ಕೋಲು ಹೊಯ್ಯಿರೊ, ನೇಮಿಜಿನರಂಕಮಾಲೆಯ

ಲೀಲೆಯಿಂ ಪಾಡುತೆಲ್ಲರು ಕೂಡಿ ||ಪಲ್ಲ||

ಎಂದು ಆರಂಭವಾಗುವ ಈ ಕೋಲಾಟ ಪದವು ಒಟ್ಟು ೨ ನುಡಿಗಳನ್ನು ಒಳಗೊಂಡಿದೆ. ಆ ಕೋಲಾಟ ಪದಕ್ಕೆ ಆರಂಭದಲ್ಲಿ ಟಿಪ್ಪಣಿ ರೀತಿಯ ಮಾತುಗಳಿವೆ. "ನೇಮಿನಾಥನ ಕುರಿತು ಶಿಷ್ಟಪದ ಸಾಹಿತ್ಯ ರಚನೆಯಾದಂತೆ ಜಾನಪದ ಸೃಷ್ಟಿಯೂ ರಚನೆಯಾಗಿದೆ. ಜಾನಪದ ಕಥಾ ಸಾಹಿತ್ಯ ಹಾಗೂ ಪದ್ಯ ಸಾಹಿತ್ಯ ಅಪಾರ ಹಾಗೂ ವೈವಿಧ್ಯಮಯವಾಗಿದೆ. ಪ್ರಸ್ತುತ ನೇಮಿನಾಥನ ಕೋಲು ಪದ ಜಾನಪದ ಪದ್ಯಸಾಹಿತ್ಯದ ಗುಂಪಿಗೆ ಸೇರುತ್ತದೆ. ಕೋಲು ಪದಗಳು ದ್ವಿಪದಿ, ತ್ರಿಪದಿ, ಚೌಪದಿ, ಸಾಂಗತ್ಯ

ಮೊದಲಾದ ಛಂದೋ ಬಂಧಗಳಲ್ಲಿ ರಚನೆಯಾಗಿವೆ. ಇಲ್ಲಿಯ ನೇಮಿನಾಥನ ಕೋಲು ಪದ ಸಾಂಗತ್ಯ ಛಂದಸ್ಸಿನಲ್ಲಿವೆ."೨

**ಶಿವದಯಾ ಮೂರ್ತಿ :**

ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿರುವ ಶಿವದಯಾಮೂರ್ತಿ ಮತ್ತೊಂದು ತತ್ವ ಪದವಾಗಿದೆ.

"ಶಿವದಯಾಮೂರ್ತಿಯೆ ಭವಪಾಶರಹಿತನೆ

ಭುವನಗೊಳಗತಿ ಕೀರ್ತಿಯೇ, ಅವರ ವೀವೂದು"

ಎಂಬ ಪಲ್ಲದೊಂದಿಗೆ ಆರಂಭವಾಗಿರುವ ಈ ತತ್ವಪದವು ಒಟ್ಟು ೬ ನುಡಿಗಳನ್ನು ಒಳಗೊಂಡಿದೆ. ಇದರಲ್ಲಿ ಬಸವನ ಭಕ್ತಿಯನ್ನು ವಿವರಿಸುತ್ತ ಶಿವನ ಅನಂತ ಮಹಿಮೆಯನ್ನು ವರ್ಣಿಸುವ ಪದವಿದು. ಬಸವಣ್ಣ, ಪರಶಿವ ಇವರೀರ್ವರ ಜೊತೆಗೆ ಗುರು ಕೃಪೆಯು ಲಭಿಸಲೆಂದು ಕೇಳಿಕೊಳ್ಳುವ ಭಕ್ತನ ಆರ್ತ ಮೊರೆಯಾಗಿದೆ. ಕೊನೆಯಲ್ಲಿ "ಬಾದಾಮಿಪುರವಾಸ ಸದ್ಗುರು ಸಂಗಮೇಶ, ಸಾಧಕ ಜನ ಮನವಾಸ ಶಿವದಯಾ" ಎಂದು ಮುಕ್ತಾಯವಾಗುತ್ತದೆ. ಬಾದಾಮಿ ಪರಿಸರದಲ್ಲಿ ಮೂಡಿರುವ ರಚನೆ ಎಂಬುದು ಇದರಿಂದ ಸಾಬೀತಾಗುತ್ತದೆ. ಈ ರಚನೆಯು ೨.೧೦.೧೯೭೭ರಲ್ಲಿ ಹೇಮಕೂಟವೆಂಬ ಪತ್ರಿಕೆಯಲ್ಲಿ ಪ್ರಕಟಿತವಾಗಿದೆ. ಸರಳ ಸುಂದರ ಅನುಭಾವ ಗೀತೆಯನ್ನು ಸಂಪಾದಿಸಿ ಪ್ರಕಟಿಸಿರುವುದನ್ನು ಇಲ್ಲಿ ಗುರುತಿಸುತ್ತೇವೆ.

ಡಾ. ಬಿ. ಆರ್. ಹಿರೇಮಠ ಅವರ ಕಾವ್ಯ ರಚನಾ ಕ್ರಿಯೆ ವಿದ್ಯಾರ್ಥಿದೆಸೆಯಿಂದಲೇ (೧೯೭೨ ರಿಂದಲೇ) ಆರಂಭಗೊಂಡು ೧೯೭೭ಕ್ಕೆ ನಿಂತು ಬಿಡುತ್ತದೆ. ಸು. ೭ ವರ್ಷಗಳ ಕಾಲ ಕಾವ್ಯ ಕೃಷಿ ಮಾಡಿದ್ದಾರೆ. ಸ್ನಾತಕೋತ್ತರ ವ್ಯಾಸಂಗದ ತರುವಾಯ ಕ.ವಿ.ವಿ.ಯ ಕನ್ನಡ ಅಧ್ಯಯನ ಪೀಠದಲ್ಲಿ ಸಹಾಯಕ ಸಂಶೋಧಕರಾಗಿ ನಿಯುಕ್ತಗೊಂಡದ್ದು, ಶಾಸನ ಮತ್ತು ಹಸ್ತ ಪ್ರತಿಗಳಂತಹ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡದ್ದು, ಡಾ. ಆರ್.ಸಿ. ಹಿರೇಮಠ ಅವರ ಮಾರ್ಗದರ್ಶನ, ಡಾ. ಎಂ.ಎಂ. ಕಲಬುರ್ಗಿಯವರ ನಿಕಟ ಸಂಪರ್ಕ, ಡಾ. ಬಿ.ವ್ಹಿ. ಶಿರೂರ, ಡಾ. ವೀರಣ್ಣ ರಾಜೂರ, ಡಾ. ಬಿ.ವ್ಹಿ. ಮಲ್ಲಾಪೂರ, ಮುಂತಾದವರ ಒಡನಾಟದಿಂದಾಗಿ ಕವಿ ಕಳೆದುಕೊಂಡು ಸಂಶೋಧಕರಾಗಿ ರೂಪಗೊಂಡಿದ್ದು ತಿಳಿದುಬರುತ್ತದೆ. ಕಾವ್ಯ ಕ್ಷೇತ್ರಕ್ಕಾದ ಹಾನಿ ಸಂಶೋಧನಾ ಕ್ಷೇತ್ರಕ್ಕೆ ಲಾಭವಾಗಿ ಪರಿಣಮಿಸಿತು.

ಸಧ್ಯ ಉಪಲಬ್ಧವಿರುವ ಕವಿತೆಗಳನ್ನೆಲ್ಲಾ ಪರಿಶೀಲಿಸಿದರೆ ಡಾ. ಬಿ.ಆರ್. ಹಿರೇಮಠ ಅವರ ರಚನೆಗಳು ಗಮನಾರ್ಹವಾಗಿವೆ. ವಸ್ತು, ಭಾಷೆ, ಛಂದಸ್ಸಿನಿಂದ ಕೆಲವು ಯಶಸ್ವಿ ರಚನೆಗಳೂ ಆಗಿವೆ. ಸಮಕಾಲೀನ ಸಂಗತಿಗಳೂ, ದೇಶದ ರಾಜಕೀಯ ಸ್ಥಿತಿಗತಿಗಳೂ, ಸುತ್ತ ಮುತ್ತಲಿನ ಆಗು ಹೋಗುಗಳಿಗೆ

ಇವರ ಕಾವ್ಯ ಸ್ಪಂದಿಸಿವೆ. ದಲಿತ ಬಂಡಾಯ ಚಳುವಳಿ ಇನ್ನು ರೂಪಗೊಳ್ಳದ ಹೊತ್ತಿನಲ್ಲಿ ಬಿ. ಆರ್. ಅವರ ಕೆಲ ಕವಿತೆಗಳಲ್ಲಿ ಬಂಡಾಯದ ಆಶಯವಿರುವುದು ಕಂಡುಬರುತ್ತದೆ. ಪ್ರಗತಿ ಪರ ಚಿಂತಕ, ಜನಪರ ನಿಲುವು, ಸಮಾಜದ ಪರ ಒಲವುಗಳಾಗಿ ಇವರ ರಚನೆಗಳು ಓದುಗರನ್ನು ತಟ್ಟುತ್ತವೆ. ತೀಕ್ಷ್ಣ ವ್ಯಂಗ್ಯ, ಕಟಕಿ, ಮೊನಚುಗಳು ವ್ಯವಸ್ಥೆಯನ್ನು ಬಡಿದೆಬ್ಬಿಸುತ್ತವೆ. ಆಡುಮಾತಿನ ಸೊಗಡು, ಜಾನಪದೀಯ ಲಯ, ದೇಶೀ ತಾಜಾತನಗಳಿಂದಾಗಿ ಹಲವು ಕವನಗಳು ಸಹೃದಯರ ಮನಸ್ಸಿನಲ್ಲಿ ನಿಲ್ಲುತ್ತವೆ. ಇವರ ಚುಟುಕುಗಳು ತುಂಬಾ ಚುರುಕಾಗಿವೆ. ತಮ್ಮ ಧ್ವನಿಯಿಂದಾಗಿ ಇಡೀ ವ್ಯವಸ್ಥೆಯನ್ನೇ ಅನಾವರಣಗೊಳಿಸುತ್ತವೆ. ತುಂಬಾ ಭರವಸೆ ಮೂಡುವ ಕವಿತೆಗಳನ್ನೇ ಕಟ್ಟಿದ್ದರೂ ಡಾ. ಬಿ. ಆರ್. ಅವರು ಕಾವ್ಯಕ್ಷೇತ್ರವನ್ನು ಕೈಬಿಟ್ಟು ಶಾಸ್ತ್ರ, ಸಾಹಿತ್ಯದತ್ತ ವಲಸೆ ಹೋಗಿರುವುದು ಅಂದಿನ ವಾಸ್ತವದ ಒತ್ತಡವನ್ನು ತಿಳಿಸುತ್ತದೆ.

**೫.೩. ಕಥೆ:**

ಬಿ. ಆರ್. ಹಿರೇಮಠರು ಕವಿಯಾಗಿರುವಂತೆ ಕಥೆಗಾರರೂ ಕೂಡಾ ಆಗಿದ್ದಾರೆಂಬುದಕ್ಕೆ 'ಯಜ್ಞ ಪಶು' ಕಥೆ ಒಂದು ಉತ್ತಮ ಉದಾಹರಣೆಯಾಗಿದೆ. ಯಜ್ಞಪಶು ಒಂದು ಕಿರುಗತೆಯಾಗಿದೆ. ೨ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದೊಂದು ಪ್ರಕಟಿತ ಕಥೆಯಾಗಿದ್ದು ಮೂಲ ಯಾವುದೆಂಬುದು ಗೊತ್ತಾಗುತ್ತಿಲ್ಲ ೩೩೦-೩೩೧ ಪುಟ ಎಂಬುದು ಮಾತ್ರ ತಿಳಿಯುತ್ತದೆ. ಇನ್ನುಳಿದ ಅಂಶಗಳು ಎಷ್ಟೇ ಪ್ರಯತ್ನಿಸಿದಾಗ್ಯೂ ದೊರೆತಿಲ್ಲ. ಅವರ ಸಂಗ್ರಹದಲ್ಲಿ ಕೇವಲ ಈ ಎರಡು ಹಾಳೆಗಳು ಮಾತ್ರ ಲಭ್ಯವಿವೆ. ಬಿ. ಆರ್. ಅವರು ಇನ್ನೂ ಅನೇಕ ಕಥೆಗಳನ್ನು ಬರೆದಿರುವ ಸಾಧ್ಯತೆ ಇದೆ. ತೀವ್ರ ಶೋಧದ ನಡುವೆಯೂ ಅವರ ಕಥೆಗಳು ಲಭಿಸದಿರುವುದು ವಿಷಾದನೀಯ ಸಂಗತಿ.

ಪ್ರಸ್ತುತ ಕಥೆಯಲ್ಲಿ ಗ್ರಾಮೀಣ ವಿದ್ಯಾರ್ಥಿಗಳ ಓದು, ನಗರಕ್ಕೆ ಬಂದು ಉನ್ನತ ವ್ಯಾಸಂಗ ಮಾಡುವಾಗ ಸಂಗತಿ ದೋಷದಿಂದಾಗಿ ದುಶ್ಚಟಗಳ ದಾಸನಾಗಿ ಸಾಲ ಮಾಡಿ ಕೊನೆಗೆ ಸಾಲದ ಸುಳಿಯಲ್ಲಿಯೇ ಆತ ಆತ್ಮಹತ್ಯೆಗೆ ಬಲಿಯಾಗಿದ್ದು ಈ ಕಥೆಯ ಆಶಯವಾಗಿದೆ. ಕಥಾವಸ್ತು ತೀರ ಸರಳ ಮನೋಜ್ಞವಾಗಿದೆ. ಆರಂಭದಲ್ಲಿ ಅತ್ಯಂತ ಆಕರ್ಷಕವಾಗಿದ್ದು, "ಕಾಲೇಜು ಜೀವನದಲ್ಲಿ ಪ್ರವಹಿಸುವ ಚಂದ್ರನು, ವಿದ್ಯಾರ್ಥಿಗಳ ಬಳಗದಲ್ಲಿ ಅಳಿಯದ ಹೆಸರು ಗಿಟ್ಟಿಸಿಕೊಂಡವನು. ಇವರ ಕಾರ್ಯ ಕೀರ್ತಿಯನ್ನು ಕೇಳಿ ಓದಿದ ಕೆಲವರಿಗೆ ಥ್ಯಾಂಕ್ಸ್ ಹೇಳಲು ಕ್ಯೂ ಹಚ್ಚಿಕೊಂಡು ನಿಲ್ಲಬೇಕಾದ ಪರಿಸ್ಥಿತಿ ಇನ್ನು ಕೆಲವರಿಗೆ ಚಳಿಜ್ವರ ಬರಲು ಆರಂಭಿಸಿದವು. ಮತ್ತೆ ಕೆಲವರಿಗೆ ಅಸೂಯೆ ಅಸಹನೆಗಳ ಅಸ್ತ್ರ ಕೈಗೆ ಬಂದು ಅವರಲ್ಲಿ ವೀರಯೋಧರಾದರು. ಚಂದ್ರನ ಬಹುಮುಖ ಕಾರ್ಯಗಳ ಗೊಂದಲ ಅವನನ್ನು ಇಂತಹ ಸಿಂಹಾಸನದ ವ್ಯಕ್ತಿಯನ್ನಾಗಿ ಕಂಡರಿಸಿತು."[೩] ಈ ಆರಂಭ ಓದುಗರನ್ನು

ಹಿಡಿದಿಟ್ಟುಕೊಂಡು ಮುಂದೆ ಓದಿಸಿಕೊಂಡು ಹೋಗುತ್ತದೆ. "ಚಂದ್ರ ಆಶಾಪುರ ಗ್ರಾಮದಲ್ಲಿ ಬೆಳೆದವನು ೩೦-೪೦ ಮನೆಗಳುಳ್ಳ ಈ ಗ್ರಾಮ ಪಟ್ಟಣದಿಂದ ಬಹುದೂರದಲ್ಲಿದ್ದಿತ್ತು. ಬರಗಾಲ ಕಾಮಗಿರಿಯಲ್ಲಿ ಸರ್ಕಾರದವರು ರಸ್ತೆಯನ್ನು ಹಾಕಿಸಿದ್ದರೂ ಬಸ್ಸುಗಳ ಓಡಾಟ ಪ್ರಾರಂಭವಾಗಿರಲಿಲ್ಲ. ಹೀಗಾಗಿ ಕಾಲು ನಡಿಗೆಯಿಂದಲೇ ಪಟ್ಟಣಕ್ಕೆ ಹೋಗಬೇಕಾಗುತ್ತಿತ್ತು. ಸಮೀಪದಲ್ಲಿ ಹರಿಯುವ ನದಿ, ತಲೆದಿಂಬಿನಲ್ಲಿರುವ ಗುಡ್ಡ, ಆ ಊರಿನ ರಮಣೀಯತೆಗೆ ತಿಲಕವನ್ನಿಟ್ಟಿದ್ದವು. ಜಲದ ಪವಿತ್ರತೆ ಮತ್ತು ಗುಡ್ಡದ ಭವ್ಯತೆಗಳ ಮಧ್ಯದಲ್ಲಿ ನಿಸರ್ಗಕನ್ಯೆ ವಾಸವಾಗಿದ್ದಂತೆ ತೋರುತ್ತಿತ್ತು."[೪] ಈ ಮಾತುಗಳು ಪ್ರಾದೇಶಿಕ ಚಿತ್ರವಣವನ್ನು ಹುಬೆ ಹುಬೆಯಾಗಿ ಚಿತ್ರಿಸಿವೆ. ಆ ಗ್ರಾಮದ ಭೀಮಪ್ಪ ಮತ್ತು ಸೋಮವ್ವೆಯರ ಮಗನೇ ಕಥಾನಾಯಕನಾದ ಚಂದ್ರ. ಹೀಗೆ ಚಿತ್ತಾಕರ್ಷಕವಾಗಿ ಪರಿಸರವನ್ನು ಪರಿಚಯಿಸಿ ಚಂದ್ರನ ಚಟುವಟಿಕೆಗಳನ್ನು ರಸವತ್ತಾಗಿ ವಿವರಿಸಿದ್ದಾರೆ.

ಚಂದ್ರ ಅಡನಾಡಿ ಗೆಳೆಯರ ಒಡನಾಟಕ್ಕೆ ಬಿದ್ದು ಅಡ್ಡಹಾದಿ ಹಿಡಿದನು. "ಚಂದ್ರ ಮತ್ತೇ ಕಾಲೇಜಿಗೆ ಬಂದು ತನ್ನ ಕಾರ್ಯರಂಗದ ಕಾರ್ಯಕ್ರಮಗಳ ಪಟ್ಟಿಯನ್ನು ವಿಸ್ತರಿಸಿದನು. ಹಗಲು ರಾತ್ರಿ ಎಡೆಬಿಡದೆ ಸಾಗುವ ಈ ಕಾರ್ಯಗಳ ಮಧ್ಯದಲ್ಲಿ ಅವನಿಗೂ ಉಸಿರು ಬಿಡಲು ಅವಕಾಶವಿಲ್ಲದಂತಾಯಿತು. ಮನೆಯಿಂದ ತರಿಸಿದ ಹಣ ಸಾಲದಾಯಿತು. ಸಾಲದುದಕ್ಕೆ ಸಾಲ ಮಾಡಿದನು. ಸಾಲದ ಹೊರೆ ಅವನನ್ನು ಕುಸಿಯುವಂತೆ ಮಾಡಿತು. ಸಾಲಗಾರರು ಬಂದು ಕೇಳುವಾಗ ಅವನ ಗೆಳೆಯರು ಕಾಲು ಕಿತ್ತರು. ಸಾಲದ ಬಲೆಯಲ್ಲಿ ಚಡಪಡಿಸುತ್ತಿದ್ದ ಚಂದ್ರ ತೊಯ್ದು ಅರಿವೆಯಂತಾಗಿದ್ದನು."[೫] ಈ ಮಾತುಗಳಲ್ಲಿ ಚಂದ್ರನ ಚಟುವಟಿಕೆ ಅದರಿಂದಾದ ಅವನ ಅಧಃಪತನವನ್ನು ಮಾರ್ಮಿಕವಾಗಿ ನಿರೂಪಿಸಿದ್ದಾರೆ. "ವಿಷಮ ಪರಿಸ್ಥಿತಿಯ ತಿರುವಿನಲ್ಲಿ ತಿರುಗುತ್ತಿದ್ದ ಚಂದ್ರನು ಯಾವ ದಡವನ್ನು ಮುಟ್ಟದೆ ತೇಲುತ್ತಾ ಮುಳುಗುತ್ತ ಕಣ್ಣು ಬಿಡುತ್ತಿರುವ ಸಮಯದಲ್ಲಿ ಮನೆಯಿಂದ ಬಂದ ಪತ್ರ ಓದಿ ಕಂಗಾಲಾದನು. ಸೂರ್ಯಾಸ್ತವಾಯಿತು. ಕತ್ತಲೆಯ ಕರಾಳ ಛಾಯೆ ಪ್ರಕೃತಿಯನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿತ್ತು."[೬] ಈ ಮಾತುಗಳು ಚಂದ್ರನ ಅಂತ್ಯವನ್ನು ಸೂಚಿಸುತ್ತವೆ. ಮುಂದಿನ ಪ್ಯಾರಾದಲ್ಲಿ ವಿಷ ಸೇವನೆಯಿಂದ ಚಂದ್ರನ ಮರಣ, ಪತ್ರಿಕಾ ವಾರ್ತೆಯಿಂದ ಆತನ ತಂದೆ ತಾಯಿಗಳು ಕಂಗಾಲಾಗಿದ್ದು, ಪಾಲಕರ ಪರಿಸ್ಥಿತಿ ಶೋಚನೀಯವಾಗಿರುವುದನ್ನು ವಿವರಿಸುತ್ತ ಅವರ ಬಯಕೆಯ ಹಂದರ ಹರಿದು ಕರುಳಿನ ಕುಡಿಬಾಡಿ ವಂಶದ ದೀಪ ನಂದಿಹೋಗಿತ್ತು ಎಂಬುದು ಅರ್ಥಪೂರ್ಣವಾಗಿದೆ.

ಈ ಕಥೆಯು ಹಳ್ಳಿಯ ಮುಗ್ಧ ಹುಡುಗರು ನಗರದ ಖಯಾಲಿಗೆ ಬಿದ್ದರೆ ತಮ್ಮ ಪ್ರಾಣಕ್ಕೆ ಎರವಾಗುವುದನ್ನು ಲೇಖಕರು ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಕಥೆಯ ಅಂತ್ಯ ತುಂಬಾ ಆಕರ್ಷಿತವಾಗಿದೆ. ಕಥಾ ನಾಯಕನ ಹೆಸರು ಚಂದ್ರ ಎಂಬುದು ಅರ್ಥಪೂರ್ಣವೂ ಧ್ವನಿಯುಕ್ತವೂ ಆಗಿದೆ. ತಂದೆ ತಾಯಿಗಳ ಪ್ರಾಣ ಹಿಂಡಿ ವಿದ್ಯಾರ್ಜನೆಯ ಹೆಸರಿನಲ್ಲಿ ದುಷ್ಟ ಚಟಗಳ, ದುಷ್ಟ ಶಕ್ತಿಗಳ

ಆರಾಧನೆಗಾಗಿ ತನ್ನ ಪವಿತ್ರವಾದ ವಿದ್ಯಾರ್ಥಿ ಕರ್ತವ್ಯವನ್ನು ಮರೆತು ಹಣದ ಸೂರೆ ಮಾಡಿ ದುಷ್ಟ ದೇವತೆಗಳ ಯಾಗಕ್ಕೆ ತಾನೇ ಯಜ್ಞ ಪಶುವಾಗಿ ಬಲಿಯಾದ ಚಂದ್ರನ ಕಥೆ ಈಗಿನ ಗ್ರಾಮೀಣ ಜನಾಂಗದ ವಿದ್ಯಾರ್ಥಿಗಳಿಗೆ ಒಂದು ಪಾಠವಾಗುತ್ತದೆ. ತುಂಬಾ ಪರಿಣಾಮಕಾರಿಯಾಗಿ ಕಥೆಕಟ್ಟುವ ಕೌಶಲ ಹೊಂದಿದ್ದ ಡಾ. ಬಿ.ಆರ್. ಹಿರೇಮಠರು ಮುಂದೆ ಕಥೆಗಳನ್ನು ರಚಿಸದೆ ಹೋಗಿದ್ದು ಕನ್ನಡ ಸಣ್ಣ ಕಥಾ ಕ್ಷೇತ್ರಕ್ಕೆ ತುಂಬಲಾರದ ಹಾನಿ ಎಂದು ಹೇಳಿದರೆ ಅತಿಶಯೋಕ್ತಿಯಾಗದು.

**೫.೪ : ನಾಟಕ :**

ಡಾ. ಬಿ.ಆರ್. ಹಿರೇಮಠ ಅವರು ಕಾವ್ಯ ಕಥೆಗಳನ್ನು ರಚಿಸಿರುವಂತೆಯೇ ನಾಟಕಗಳನ್ನು ಕೂಡಾ ಬರೆದಿದ್ದಾರೆ. ಆಕಾಶವಾಣಿ ಕೇಂದ್ರದಿಂದ ಕೆಲವು ನಾಟಕಗಳು ಬಾನುಲಿ ರೂಪಕಗಳಾಗಿ ಪ್ರಸಾರಗೊಂಡಿವೆ. ಶಿಲೆಯಲ್ಲಿ ಸಾಹಿತ್ಯ, ವಚನ ಸಾಹಿತ್ಯ, ದಾಸಸಾಹಿತ್ಯ ಈ ಮೂರು ನಾಟಕಗಳು ಸಧ್ಯ ಉಪಲಬ್ಧವಾಗಿವೆ. ವಚನ ಸಾಹಿತ್ಯ ಮತ್ತು ದಾಸಸಾಹಿತ್ಯಗಳೆರಡು ಪ್ರಕಟಣೆಯ ಕಾಲ ಮತ್ತು ಬಾನುಲಿಯಿಂದ ಪ್ರಸಾರವಾದ ದಿನಾಂಕಗಳು ನಮೂದಿತವಾಗಿವೆ. ಆದರೆ ಶಿಲೆಯಲ್ಲಿ ಸಾಹಿತ್ಯದಲ್ಲಿ ರಚನೆಯ ಕಾಲವಾಗಲಿ ಪ್ರಸಾರವಾದ ಸಮಯವಾಗಲಿ ದಾಖಲುಗೊಂಡಿಲ್ಲ. ಆದರೂ ಶಿಲೆಯಲ್ಲಿ ಸಾಹಿತ್ಯವೇ ಮೊದಲನೇ ಕೃತಿ ಎಂದು ಆಂತರಿಕ ಪ್ರಮಾಣಗಳಿಂದ ಗುರುತಿಸಬಹುದಾಗಿದೆ. (ವಚನ ಸಾಹಿತ್ಯ ಬಾನುಲಿ ರೂಪಕದಲ್ಲಿ ಅರವಿಂದನ ಮುಖಾಂತರ ವೀರಗಲ್ಲು, ಮಾಸ್ತಿಗಲ್ಲುಗಳ ಬಗ್ಗೆ ಈ ಮೊದಲೇ ಪರಿಚಯ ಮಾಡಿಕೊಟ್ಟೆ. ಈಗ ನಮಗೆ ವಚನಸಾಹಿತ್ಯದ ಬಗ್ಗೆ ತಿಳಿಸಿಕೊಡು) ಎನ್ನುವ ಮಾತುಗಳಿಂದ ಶಿಲೆಯಲ್ಲಿ ಸಾಹಿತ್ಯ ಮೊದಲ ರಚನೆಯಾಗಿರುವುದು ಸ್ಪಷ್ಟವಾಗಿದೆ.

**ಶಿಲೆಯಲ್ಲಿ ಸಾಹಿತ್ಯ :**

ಏಳು ಅಂಕಗಳನ್ನೊಳಗೊಂಡ ರೂಪಕವಾಗಿದೆ. ವೀರೇಶ, ರೂಪಾ, ಲಕ್ಷ್ಮೀ ಎಂಬ ನಾಲ್ಕು ಪಾತ್ರಗಳು ಬರುತ್ತಿದ್ದು ನಿರೂಪಕನಾಗಿ ಕಾಕಾನ ಪಾತ್ರವಿದೆ. ಇದರಲ್ಲಿ ಸಂಜೀವ, ಇದರಲ್ಲಿ ಶಾಸನ ಸಾಹಿತ್ಯ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಪ್ರಶಸ್ತಿ ಶಾಸನಗಳು ಮೊದಲಾದ ಶಾಸನಕ್ಕೆ ಸಂಬಂಧಿಸಿದ ಅಂಶಗಳಿವೆ. ಐತಿಹಾಸಿಕ ಸಂಗತಿಗಳನ್ನು ಈ ರೂಪಕಕ್ಕೆ ಒಗ್ಗಿಸಿಕೊಂಡಿರುವುದು ಅರ್ಥಪೂರ್ಣವಾಗಿದೆ. ನಾಟಕದ ಆರಂಭವೇ ತುಂಬಾ ಕುತೂಹಲಕಾರಿಯಾಗಿದೆ. ಓದುಗರನ್ನು ಮತ್ತು ಕೇಳುಗರನ್ನು ಏಕಕಾಲಕ್ಕೆ ಹಿಡಿದಿಟ್ಟುಕೊಳ್ಳುವ ತಂತ್ರ ಯಶಸ್ವಿಯಾಗಿದೆ. ನಾಲ್ಕು ಪಾತ್ರಗಳ ಮುಖಾಂತರ ಶಾಸನ ಪ್ರತಿ ತೆಗೆಯುವ ಕ್ರಮವನ್ನು ಸೊಗಸಾಗಿ ಅನಾವರಣಗೊಳಿಸಿದ್ದಾರೆ. "ಕಲ್ಲಮ್ಯಾಗ ಹಳೆ ಕಾಲದ ಅಕ್ಷರ ಇರತಾವಲ್ಲ ಅವುಕ್ಕ ಶಾಸನ ಅಂತಾರ. ಅಂಥಾ ಶಾಸನದ ಅಕ್ಷರಗಳ ಪಡಿಯಚ್ಚು ತಗಿಯಾಕ ಬಳಸೊ ವಸ್ತುಗಳು ಇವು" ಎಂದು ಹೇಳಿ ಡ್ಯಾಬರ್, ಬ್ರಷ್, ಇಂಕ್‌ಪ್ಯಾಡ್, ಮಸಿ ಡಬ್ಬ ಮುಂತಾದ ಪರಿಕರಗಳನ್ನು ಪರಿಚಯಿಸುತ್ತಾರೆ. ಮುದುಕ ೧-೨-೩ ಪಾತ್ರಗಳ ಮುಖಾಂತರ ಹಳ್ಳಿಗಳಲ್ಲಿ ಶಾಸನಗಳ ಕುರಿತಾಗಿರುವ ವದಂತಿಗಳನ್ನು ಮೂಢ ನಂಬಿಕೆಗಳನ್ನು, ತಪ್ಪು ಕಲ್ಪನೆಗಳನ್ನು ತಿಳಿಸಿ ಅವು ಹುರುಳಿಲ್ಲದವುಗಳು ಜನರ

ಅಜ್ಞಾನವೇ ಮೂಢ ನಂಬಿಕೆಗಳಿಗೆ ಕಾರಣ ಎಂದು ನಿರೂಪಕನ (ಕಾಕಾ) ಮುಖಾಂತರ ತಿಳಿಸಿದ್ದಾರೆ. ಶಾಸನದ ಪಡಿಯಚ್ಚು ತೆಗೆಯುವ ಕ್ರಮವನ್ನು ಸಂವಾದದ ಮುಖಾಂತರವೇ ತಿಳಿಯಪಡಿಸುತ್ತಾರೆ. "ಹಿಂದಿನ ಕಾಲದ ಜನರು ತಾವು ಮಾಡಿದ ದತ್ತಿ, ಧಾರ್ಮಿಕ ಕಾರ್ಯಗಳು ಎಲ್ಲರಿಗೂ ಗೊತ್ತಾಗಲಿ ಅದರಿಂದ ಅವರಿಗೂ ಸ್ಫೂರ್ತಿ ಬರಲಿ, ಧಾರ್ಮಿಕ ಮನೋಭಾವನೆ ಬೆಳೆಯಲಿ ಅನ್ನೊ ಉದ್ದೇಶದಿಂದ ಗುಡಿಸಲ ಊರ ಮುಂದಿನ ಅಗಸಿ, ಚಾವಡಿ ಹತ್ತಿರ, ಕೆರೆದಂಡಿ ಮೊದಲಾದ ಮುಖ್ಯ ಜಾಗಾದಾಗ ಶಾಸನದ ಕಲ್ಲ ನಿಂದಿರಸಿರತಾರ"[೭] ಎಂದು ನಿರೂಪಕನ ಮುಖಾಂತರ ಶಾಸನಗಳ ಆಶಯವನ್ನು ವಿವರಿಸಿದ್ದಾರೆ. ಹುಡುಗರು ಶಾಸನಗಳ ಮೇಲಿರುವ ಚಿತ್ರ ಅವುಗಳ ಅರ್ಥವನ್ನು ಪ್ರಶ್ನಿಸಿದಾಗ ನಿರೂಪಕ ಅವುಗಳ ಕುರಿತಾಗಿ ವಿವರಿಸುವುದು ಹೀಗೆ. "ಸೂರ್ಯ, ಚಂದ್ರ, ಅಂದ್ರ ಕೊಟ್ಟ ದತ್ತಿ ಏನೈತ್ಯಲ್ಲಾ ಅದು ಭಾಳ ದಿವಸ ಉಳಿಬೇಕು. ಅಂತರ್ಥ. ಆಕಳ ಕರು ಇವು ದತ್ತಿ ವಂಶ ಪಾರಂಪರ್ಯವಾಗಿ ನಡೆದುಕೊಂಡು ಬರ್ಲಿ ಅಂತ ಅರ್ಥ, ಖಡ್ಗ ಐತ್ಯಲ್ಲಾ ಅದು ಯಾರೂ ಈ ದಾನ ಕೆಡಸ್ತಾರ ಅವರಿಗೆ ರಾಜದಂಡನೆ ಐತಿ ಅಂತರ್ಥ. ದಾನ ಮಾಡಿದವ ಸ್ವರ್ಗದಲ್ಲಿ ಸುಖವಾಗಿರತಾನ ಅನ್ನೂ ತಿಳುವಳಿಕಿ ಈ ಲಿಂಗ ಈ ಮನಸ್ಯಾನ ಚಿತ್ರ ಹೇಳತಾವ"[೮] ಎನ್ನುವಲ್ಲಿ ನಾಟಕಕಾರರು ತುಂಬಾ ಸರಳವಾಗಿ ಮತ್ತು ಸೊಗಸಾಗಿ ಶಾಸನಗಳ ಸಂಕೇತಗಳನ್ನು ವಿವರಿಸಿದ್ದಾರೆ.

ಶಾಸನದ ಆರಂಭದಲ್ಲಿರುವ ಶ್ಲೋಕ ಅದರ ಅರ್ಥ ದೇವರ ಸ್ತುತಿ ಅರಸ ಬಿರುದಾವಳಿಗಳು ಅವುಗಳ ವೈಶಿಷ್ಟ್ಯ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ. ನಾಟಕದೊಳಗೆ ಮತ್ತೊಂದು ನಾಟಕವನ್ನು ಏರ್ಪಡಿಸಿ ನಾಲ್ಕನೇ ಅಂಕದೊಳಗೆ ರಾಜ, ದಂಡನಾಯಕ, ಕವಿ, ನಿರೂಪಕ ನಾಲ್ಕು ಪಾತ್ರಗಳ ಮುಖಾಂತರ ಐತಿಹಾಸಿಕ ಸಂಗತಿಗಳನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ. ಓದುಗರ ಮತ್ತು ಕೇಳುಗರ ಮನೋಲೋಕದೊಳಗೆ ರಾಜನ ಒಡ್ಡೋಲಗವೇ ಆವಿರ್ಭವಿಸುವುದನ್ನು ಕಾಣಬಹುದು. ರಾಜನ ಬಿರುದಾವಳಿಗಳು ಆತ ನೀಡಿದ ದಾನ, ದಾನ ಶಾಸನ ಸಾಹಿತ್ಯವನ್ನು ರಚಿಸುವ ಕವಿ ಅದನ್ನು ಅನುಷ್ಠಾನಗೊಳಿಸುವ ದಂಡ ನಾಯಕ ಇವೆಲ್ಲ ಸಂಗತಿಗಳನ್ನು ಓದುಗರಿಗೆ ತಲುಪಿಸುವ ನಿರೂಪಕ ಒಂದೊಂದು ಪಾತ್ರಗಳು ಅವು ನಿಭಾಯಿಸುವ ಸಂದರ್ಭ ಪ್ರೇಕ್ಷಕರಿಗೆ ತಲುಪಿಸುವ ಸಂದೇಶ ಸಾಂದರ್ಭಿಕವಾಗಿ ಮೂಡಿ ಬಂದಿವೆ. ವಿಶೇಷವೆಂದರೆ ಅರಸನ ಪಾತ್ರವನ್ನು ಲೇಖಕರೇ ನಿಭಾಯಿಸಿದ್ದು ಅರ್ಥಪೂರ್ಣವಾಗಿದೆ. ರೂಪಕ ಬಾನುಲಿಯಲ್ಲಿ ಪ್ರಸಾರವಾದಾಗ ನಿರೂಪಕ ಅಥವಾ ಕಾಕಾನ ಪಾತ್ರವನ್ನು ಡಾ. ಬಿ. ಆರ್. ಹಿರೇಮಠ ಅವರೇ ನಿಭಾಯಿಸಿದ್ದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಮುಂದೆ ನಾಲ್ಕು ಪಾತ್ರಗಳ ಮುಖಾಂತರ ಶಾಸನಗಳಿಗೆ ಬಂದಿರುವ ದುರಾವಸ್ಥೆ, ಅವುಗಳನ್ನು ರಕ್ಷಿಸಬೇಕಾದ ಹೊಣೆಗಾರಿಕೆ. ಶಾಸನಗಳೆಂದರೆ ರಾಷ್ಟ್ರೀಯ ಸಂಪತ್ತು, ಹಿರಿಯರಿಂದ ಬಂದ ಬಳುವಳಿ ಮುಂತಾದ ಅಂಶಗಳನ್ನು ತಿಳಿಸಿ ಶಾಸನಗಳನ್ನು ಕಂಡಾಗ "ಶಾಸನ ಶಾಸ್ತ್ರ ಇಲಾಖೆ, ವಿಶ್ವವಿದ್ಯಾಲಯ ಸಂಘ ಸಂಸ್ಥೆಗಳು ಮುಂತಾದವುಗಳಿಗೆ ತಿಳಿಸುವ ಕಾರ್ಯವಾಗಬೇಕು"[೯] ಎಂದು ಜನಸಾಮಾನ್ಯರಿಗೆ ತಿಳುವಳಿಕೆ ಮೂಡಿಸಿದ್ದಾರೆ.

ಮುಂದೆ ಮಾಸ್ತಿ ಕಲ್ಲುಗಳ ಪರಿಚಯಿಸಲು ನಾಟಕದೊಳಗೆ ಮತ್ತೊಂದು ನಾಟಕವನ್ನು ವಿಶಿಷ್ಟವಾಗಿ ಸಂಯೋಜಿಸಿದ್ದಾರೆ. ಅಪ್ಸರೆ ೧-೨ ದೂತ, ತಾಯಿ, ಪತ್ನಿ ಇವರ ಮುಖಾಂತರ ಸತಿ ಪದ್ಧತಿ, ಸತಿ ಸಹಗಮನವನ್ನು ಅದರ ಐತಿಹಾಸಿಕತೆಯನ್ನು ಸತಿ ಪದ್ಧತಿಯ ವಿಧಿ ವಿಧಾನಗಳನ್ನು ನಿರೂಪಿಸಿದ್ದಾರೆ. ಸತಿ ಪದ್ಧತಿ ಇಂದು  ಜೀವವಿರೋಧಿ ನೆಲೆಯಾಗಿ ಕಾಣಿಸುತ್ತದೆ. ಪುರುಷ ಪ್ರಧಾನ ಸಮಾಜದ ಕ್ರೂರ ದಬ್ಬಾಳಿಕೆ ಇದು. ಪುರುಷರು ಸ್ವಾರ್ಥ ಮತ್ತು ಧೂರ್ತತೆ ಇಲ್ಲಿದೆ ಅದನ್ನಿಂದು ವೈಭವೀಕರಿಸುವದು ಸಾಧುವಾದ ಸಂಗತಿಯಲ್ಲ. ಆದರೆ ಡಾ. ಬಿ. ಆರ್. ಅವರು ಅಂದಿನ ಪರಂಪರೆಯನ್ನು ಸನಾತನ ಸಂಗತಿಗಳನ್ನು ತಿಳಿಸಲು ಈ ದೃಶ್ಯ ರೂಪಕ ಬಳಸಿಕೊಂಡಿದ್ದಾರೆ. ಸತಿ ಹೋದ ನಂತರ ಸ್ಮಾರಕ ಮಾಡಿ ಶಾಸನ ನಿಲ್ಲಿಸಿರುವುದನ್ನು ಪ್ರಸ್ತಾಪಿಸಿ - "ಇದಕ್ಕೆ ಮಾಸ್ತಿಕಲ್ಲು ಅಂತ ಕರೀತಾರ. ಹಿಂಗ ನಮ್ಮ ನಾಡೊಳಗೆ ಇರುವಂಥಾ ಎಲ್ಲಾ ಶಾಸನಗಳು ತಮ್ಮ ತಮ್ಮ ಕಥೆಯನ್ನು ಹೇಳಕೊಂತ ನಿಂತಿವೆ. ರಾಜ ಮೊದಲಾದವರು ವಿವಿಧ ಉದ್ದೇಶಗಳಿಗಾಗಿ ಈ ಶಾಸನಗಳನ್ನು ಬರೆಸಿದರು. ನಮ್ಮ ದೇಶದ ಸಂಸ್ಕೃತಿಯ ಚರಿತ್ರೆಯನ್ನು ಸಿದ್ಧಗೊಳಿಸುವಲ್ಲಿ ಈ ಶಾಸನಗಳ ಪಾತ್ರ ಬಹಳ ದೊಡ್ಡದು. ಈ ದೇಶದ ಜನತೆ ನಡೆದ ಹೆಜ್ಜೆಗಳನ್ನು ಪಡೆದ ಸಿದ್ಧಿಗಳನ್ನು ಸಾರುವ ಪ್ರಾಮಾಣಿಕ ಸಾಕ್ಷಿಯೆನಿಸಿದ ಇಂಥ ಶಾಸನಗಳು ಜನರ ಬದುಕಿನಷ್ಟೇ ವೈವಿಧ್ಯ ಪೂರ್ಣವಾಗಿವೆ, ವೈಭವಪೂರ್ಣವಾಗಿವೆ. ಇವು ನಮ್ಮ ರಾಷ್ಟ್ರದ ಸಾಂಸ್ಕೃತಿಕ ಸಂಪತ್ತು ಅನ್ನುವ ಭಾವನೆ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಮೂಡಿ ಬರಬೇಕು."[೧೦] ಈ ರೀತಿಯಾಗಿ ಶಾಸನಗಳ ಸಂರಕ್ಷಣೆಯ ಅರಿವನ್ನು ಮೂಡಿಸುತ್ತಾರೆ.

ಶಾಸನದಂತಹ ಶಾಸ್ತ್ರ ಸಾಹಿತ್ಯವನ್ನು, ಶುಷ್ಕ ಸಂಗತಿಗಳನ್ನು, ಸ್ವಾರಸ್ಯಪೂರ್ಣವಾಗಿ ನಿರೂಪಿಸಿ ಓದುಗರ ಗಮನಸೆಳೆದು ಶಾಸನ ಸ್ಮಾರಕಗಳನ್ನು ಸಂರಕ್ಷಿಸಬೇಕೆಂಬ ಅರಿವು ಮೂಡಿಸುವಲ್ಲಿ ಈ ರೂಪಕ ಮಹತ್ತರ ಪಾತ್ರ ವಹಿಸುತ್ತದೆ. ಹಾಗಾಗಿ ಇದು ಯಶಸ್ವಿಯಾದ ರೂಪಕವಾಗಿದೆ. ಈ ರೂಪಕಕ್ಕೆ ಶಿಲೆಯಲ್ಲಿ ಸಾಹಿತ್ಯ ಎಂದು ಹೆಸರಿಸುವುದು ಅರ್ಥಪೂರ್ಣವಾಗಿದೆ ಹಾಗೂ ಅಷ್ಟೇ ಧ್ವನಿಪೂರ್ಣವೂ ಆಗಿದೆ.

**ವಚನ ಸಾಹಿತ್ಯ :**

ಇದು ೪.೮.೧೯೮೧ರಂದು ಆಕಾಶವಾಣಿ ಧಾರವಾಡ ಬಾನುಲಿ ನಿಲಯದಿಂದ ಪ್ರಸಾರವಾಗಿದೆ. ವಚನ ಸಾಹಿತ್ಯ ನಾಟಕವು ಏಳು ದೃಶ್ಯಗಳನ್ನೊಳಗೊಂಡ ಏಕಾಂಕವಾಗಿದೆ. ಬಾನುಲಿ ಪ್ರಸಾರಕ್ಕೆಂದೇ ರಚನೆಗೊಂಡ ರೂಪಕವಿದು. ಇದರಲ್ಲಿ ಕಾಕಾ, ಅರವಿಂದ, ವೀರೇಶ ಹಾಗೂ ಇನ್ನೆರಡು ಇತರ ಪಾತ್ರಗಳ ಮುಖಾಂತರ ರೂಪಕವನ್ನು ಬೆಳೆಸಿಕೊಂಡಿರುತ್ತಾರೆ. ಇದರಲ್ಲಿ ವಚಸಾಹಿತ್ಯ, ಮಹತ್ವ, ಆರಂಭ, ವಚನ ಪೂರ್ವ ಯುಗ ಮುಂತಾದವರನ್ನು ಸ್ಥೂಲವಾಗಿ ಪರಿಚಯಿಸುತ್ತಾರೆ. ಎರಡನೇ ದೃಶ್ಯದಲ್ಲಿ ಕೇಶಿರಾಜ, ಕೊಡಕುಳಿ ಕೇಶಿರಾಜರ ಊರು, ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಐತಿಹಾಸಿಕ ಸಂಗತಿಯನ್ನು ಪ್ರಸ್ತಾಪಿಸುತ್ತಾರೆ. ಕೇಶಿರಾಜರ ಶಿಷ್ಯ ಲಿಂಗ ಸ್ತೋತ್ರದ

ಕಂದ, ಮಂತ್ರ ಮಹತ್ವದ ಕಂದಶೀಲ ಮಹತ್ವದ ಕಂದ, ನವರತ್ನ ಮಾಲೆ ಕೃತಿಗಳನ್ನು ಹೆಸರಿಸುತ್ತಾರೆ. ಬಸವಯುಗದಲ್ಲಿ ಬಾಳಿ ಬೆಳಗಿದ ಶರಣನೆಂದು ಹೇಳಿ ಕೇಶಿರಾಜನನ್ನು ಪರಿಚಯಿಸುತ್ತಾರೆ. ಆಮೇಲೆ ಬಸವಣ್ಣನವರಿಗಿಂತ ಮುಂಚೆ ಆಗಿ ಹೋದ ಜೇಡರ ದಾಸಿಮಯ್ಯ ಅವನ ವಚನಗಳ ವೈಶಿಷ್ಟ್ಯತೆಯನ್ನು ಸರಳ ಸುಂದರವಾಗಿ ವಿವರಿಸುತ್ತಾರೆ. ಜೇಡರ ದಾಸಿಮಯ್ಯ ಮತ್ತು ಕೇಶಿರಾಜರ ಮುಂಚೆ ಯಾರಿದ್ದರೆಂಬ ಪ್ರಶ್ನೆ ಹಾಕಿ ಪಂಪ, ರನ್ನ, ಪೊನ್ನ ಮುಂತಾದ ಮಹಾ ಕವಿಗಳು ರಾಜಾಶ್ರಯದಲ್ಲಿದ್ದರೆಂದು ವಿವರಿಸುವುದರೊಂದಿಗೆ ಎರಡನೆಯ ದೃಶ್ಯ ಮುಗಿಯುತ್ತದೆ. ಮೂರನೆಯ ದೃಶ್ಯ ನಾಟಕದಲ್ಲಿಯೇ ಇನ್ನೊಂದು ನಾಟಕ ಅರಸ, ಕವಿ, ವಿದ್ವಾಂಸ -೧-೨, ಮಂತ್ರಿ ಮುಂತಾದ ಪಾತ್ರಗಳ ಮೂಲಕ ೧೦-೧೧ನೇ ಶತಮಾನದ ಚಂಪೂ ಸಾಹಿತ್ಯವನ್ನು ರಾಜಾಶ್ರಯದಲ್ಲಿದ್ದ ಪಂಡಿತ ಮಂಡಲಿಯನ್ನು ಪ್ರಕಾಂಡ ಕವಿ ಬಳಗವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ನಾಟಕದೊಳಗೆ ನಡೆಯುವ ನಾಟಕದ ಈ ಸಂಯೋಜನೆ ತುಂಬಾ ಹೃದಯಂಗಮವಾಗಿದೆ.

ನಾಲ್ಕನೆ ದೃಶ್ಯದಲ್ಲಿ ೧೨ನೇ ಶತಮಾನದ ಶಿವಶರಣರು ಕಲ್ಯಾಣದಲ್ಲಿ ಕೈಗೊಂಡ ಶರಣ ಚಳುವಳಿ, ಕಟ್ಟಿಕೊಂಡ ಅನುಭವ ಮಂಟಪ, ಇಲ್ಲಿ ವಿರಾಜಮಾನರಾದ ಶಿವಶರಣರು, ಶೂನ್ಯ ಸಿಂಹಾಸನಾಧೀಶನಾದ ಅಲ್ಲಮ ಮುಂತಾದವರ ಸ್ತಬ್ಧ ಚಿತ್ರದೊಂದಿಗೆ ರೂಪಕ ಆರಂಭವಾಗುತ್ತದೆ. ಅನುಭವ ಮಂಟಪದಲ್ಲಿ ಶಿವಶರಣರ ಸಮ್ಮುಖದಲ್ಲಿ ಚಿಂತನ ಮಂಥನ ನಡೆಯುತ್ತದೆ. ನಾಟಕದೊಳಗೆ ಮತ್ತೊಂದು ನಾಟಕದ ದೃಶ್ಯ ಸಂಯೋಜನೆಯಾಗಿದೆ. ಪ್ರಭುದೇವ, ಚೆನ್ನಬಸವಣ್ಣ, ಬಸವಣ್ಣ, ಸಿದ್ಧರಾಮ, ಮಡಿವಾಳ, ಮಾಚಿದೇವ ಮುಂತಾದವರ ಮೂಲಕ ಸಮಾಜ ಸುಧಾರಣೆಯ ಸಂಗತಿಗಳು ನಿರೂಪಣೆಯಾಗಿವೆ. ಮಡಿವಾಳ ಮಾಚಿದೇವ ಮತ್ತು ಚೆನ್ನಬಸವಣ್ಣನ ಸಂಭಾಷಣೆಯ ಮುಖಾಂತರ ವೃತ್ತಿ ಮತ್ತು ಕಾಯಕಕ್ಕಿರುವ ವ್ಯತ್ಯಾಸ ವಿವರಿಸಲಾಗಿದೆ. "ತಾನು ಮಾಡುವ ಕೆಲಸ ಹೆಂಡತಿ ಮಕ್ಕಳು. ಬಂಧು -ಬಳಗದ ಜೀವನದ ನಿರ್ವಹಣೆಗಾಗಿ ಎಂಬ ಭಾವದಿಂದ ಕೂಡಿದ್ದರೆ ಅದು ವೃತ್ತಿಯಾಗುತ್ತದೆ. ಶಿವನಿಗಾಗಿ ಸಮಾಜ ಕಲ್ಯಾಣಕ್ಕಾಗಿ ಎಂಬ ಸರ್ವ ಸಮರ್ಪಣಾ ಭಾವದಿಂದ ಪ್ರೇರೇಪಿತವಾಗಿದ್ದರೆ ಅದು ಕಾಯಕವೆನಿಸುತ್ತದೆ"[೧೧] ಎಂದು ಕಾಯಕಕ್ಕೆ ಹೊಸ ಭಾಷ್ಯ ಬರೆದಿರುವುದನ್ನು ಕಾಣುತ್ತೇವೆ. ಈ ರೂಪಕ ಕಾಕಾ ಮತ್ತು ವೀರೇಶರ ಮುಖಾಂತರ ಸಂಭಾಷಣೆ ಜರುಗಿ ಹಲವಾರು ಶಿವ ಶಿರಣರ ಹಾಗೂ ಪ್ರಮುಖ ಶಿವಶರಣೆಯರ ವ್ಯಕ್ತಿತ್ವವನ್ನು ಪರಿಚಯಿಸಿ ಅವರ ವಚನಗಳ ಆಶಯವನ್ನು ನಿರೂಪಿಸಿ ಅವರವರ ವಚನಾಂಕಿತಗಳನ್ನು ಸೂಚಿಸಿದ ಕ್ರಮ ವಿನೂತನವಾಗಿದೆ. ಸಾಂದರ್ಭಿಕವಾಗಿ ಬಸವ, ಅಲ್ಲಮ, ಸಿದ್ಧರಾಮ, ಅಕ್ಕಮಹಾದೇವಿ, ಚೆನ್ನಬಸವಣ್ಣ ಮೊದಲಾದವರ ವಚನಗಳನ್ನು ಬಳಸಿಕೊಂಡಿದ್ದಾರೆ.

೬ನೇ ದೃಶ್ಯವು ವಚನಕಾರರ ಆಚಾರ, ವಿಚಾರಗಳ ಕುರಿತಾಗಿ ವಿವರಿಸುವ ಸಂಗತಿಗಳನ್ನು ಒಳಗೊಂಡಿದೆ. ವಚನ ಸಾಹಿತ್ಯದ ಓದಿನ ಪ್ರಯೋಜನ, ಶಿವಶರಣರ ವಿಚಾರ ಧಾರೆಗಳು,

ಸಮಾಜೋಧಾರ್ಮಿಕ ಆಂದೋಲನ, ಕಾಯಕ ದಾಸೋಹಗಳ ಪರಿಕಲ್ಪನೆ ಮುಂತಾದವುಗಳನ್ನು ಕಾಕಾ ಮತ್ತು ವೀರೇಶರ ಸಂವಾದದಲ್ಲಿ ತಿಳಿಸಿಲಾಗಿದೆ. "ಶಿವಶರಣರ ವಿಚಾರಗಳನ್ನು ನಾವು ಆಚರಣೆಗೆ ತರಬೇಕು. ವಚನಗಳನ್ನು ಹಾಡುವುದು, ಓದುವುದು, ಭಾಷಣ ಬಿಗಿಯುವುದು ಇವುಗಳಿಂದ ಯಾವುದೂ ಪ್ರಯೋಜನವಿಲ್ಲ"[೨] ಎಂದು ವಚನಗಳನ್ನು ಅಳವಡಿಸಿಕೊಳ್ಳುವುದರ ಸೂಚನೆಯನ್ನು ಈ ಮೂಲಕ ನೀಡಿದ್ದಾರೆ. ವೀರೇಶನು ವಚನ ಓದಿ ಶರಣ ವಿಚಾರಗಳನ್ನು ಆಚರಿಸಿ ಅಳವಡಿಸಿಕೊಂಡವರು ಯಾರಾದರೂ ಅದಾರೇನು ಎಂದು ಪ್ರಶ್ನಿಸಿ ದಾಗ ಕಾಕಾ ಫ. ಗು. ಹಳಕಟ್ಟಿಯವರ ಜೀವನ ಚರಿತ್ರೆಯನ್ನು ವಚನ ಪ್ರಕಟಣೆಯ ಇತಿಹಾಸವನ್ನು ವಿವರಿಸುವುದು ಕುತೂಹಲಕಾರಿಯಾಗಿದೆ. ಇದು ವಚನಸಾಹಿತ್ಯಕ್ಕೆ ಹಳಕಟ್ಟಿಯವರ ಕೊಡುಗೆಯನ್ನು ನಿರೂಪಿಸುತ್ತದೆ. ಇವರಲ್ಲಿದೆ. ಸಿ.ಸಿ. ಬಸವನಾಳ, ಡಾ. ಆರ್. ಸಿ. ಹಿರೇಮಠ, ಪ್ರೊ. ಎಸ್.ಎಸ್. ಭೂಸನೂರಮಠ, ಡಾ. ಎಮ್. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ ಮುಂತಾದ ವಿದ್ವಾಂಸರು ವಚನಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನೆ ಪ್ರಕಟಣಾ ಕಾರ್ಯವನ್ನು ನಿರ್ವಹಿಸಿದ್ದನ್ನು ಹೇಳುತ್ತಾರೆ.

ದೃಶ್ಯ ಏಳು ಕೊನೆಯ ದೃಶ್ಯವಾಗಿದೆ. ಇದರಲ್ಲಿ ಶಿವಶರಣರ ಲಕ್ಷಣಗಳು, ವಚನಸಾಹಿತ್ಯದ ಆಶಯ, ಪ್ರತಿಪಾದಿಸುವ ಮಾನವೀಯ ಮೌಲ್ಯಗಳು ಮುಂತಾದವುಗಳ ವಿವರಣೆ ಇದೆ. ದಯವೆ ಧರ್ಮದ ಮೂಲವಯ್ಯ, ಸಕಲ ಜೀವಾತ್ಮರಿಗೆ ಲೇಸನೆ ಬಯಸುವವರು ಮನುಜರು ಮುಂತಾದ ವಚನಗಳು ಹಿನ್ನೆಲೆಯಲ್ಲಿ ತೇಲಿ ಬರುತ್ತವೆ. ಪಾತ್ರಗಳ ಪರಸ್ಪರ ಬೀಳ್ಕೊಡುಗೆಯೊಂದಿಗೆ ನಾಟಕ ಮುಗಿಯುತ್ತದೆ. ಡಾ. ಫ.ಗು. ಹಳಕಟ್ಟಿಯವರ ಶತಮಾನೋತ್ಸವ ನಿಮಿತ್ತವಾಗಿ ರಚನೆಗೊಂಡು ಪ್ರಸಾರವಾಗಿರುವ ಸಾಂದರ್ಭಿಕ ರೂಪಕವಿದು.

**ದಾಸ ಸಾಹಿತ್ಯ :**

ಇದು ಡಾ. ಬಿ. ಆರ್. ಅವರು ರಚಿಸಿರುವ ೩ನೆಯ ಬಾನುಲಿ ರೂಪಕವಾಗಿದೆ. ೭ ದೃಶ್ಯಗಳನ್ನೊಳಗೊಂಡ ಈ ಏಕಾಂಕ ನಾಟಕವು ೩.೮.೧೯೮೧ ರಂದು ಧ್ವನಿ ಮುದ್ರಣಗೊಂಡು ೧೧.೮.೧೯೮೧ರಂದು ಬಾನುಲಿ ಕೇಂದ್ರದಿಂದ ಪ್ರಸಾರಿತಗೊಂಡಿದೆ. ಪಂಢರಪುರದ ನಾಯಕ ಮನೆತನದ ಶ್ರೀನಿವಾಸನ ಚಿನಿವಾರ ವೃತ್ತಿಯೊಂದಿಗೆ ನಾಟಕ ಆರಂಭವಾಗುತ್ತದೆ. ಈ ನಾಟಕದಲ್ಲಿ ಪುರಂದರದಾಸರ ಪೂರ್ವಾಶ್ರಮದ ಕಥೆ ಇದೆ. ಅವನ ಹೆಂಡತಿ ಸರಸ್ವತಿ ಇವರಿಬ್ಬರ ತಾಳ ಮೇಳವಿಲ್ಲದ ದಾಂಪತ್ಯ, ಸೀನಪ್ಪನಾಯಕನ ಜಿಪುಣತನ, ಸರಸ್ವತಿಯ ಔದಾರ್ಯ ಏಕಕಾಲಕ್ಕೆ ನಿರೂಪಣೆ ಗೊಂಡಿವೆ. ಶ್ರೀಮನ್ ಮಹಾ ವಿಷ್ಣು ಬ್ರಾಹ್ಮಣ ರೂಪದಲ್ಲಿ ಬಂದು ಗಂಡ ಹೆಂಡಿರನ್ನು ಪರೀಕ್ಷೆಗೊಳಪಡಿಸಿದ್ದು ಈ ನಾಟಕದ ತಿರುಳಾಗಿದೆ.

೨ ನೇ ದೃಶ್ಯದಲ್ಲಿ ಬ್ರಾಹ್ಮಣ ಸೀನಪ್ಪ ಮತ್ತು ಸರಸ್ವತಿ ಮೂವರ ಸಂಭಾಷಣೆಯಿಂದ ನಾಟಕಕ್ಕೆ ಓಟ ಪ್ರಾಪ್ತಿಯಾಗಿದೆ. ಸರಸ್ವತಿ ಬ್ರಾಹ್ಮಣನಿಗೆ ಮುತ್ತಿನ ಮೂಗುತಿಯನ್ನು ಕೊಡುವುದರೊಂದಿಗೆ ಎರಡನೆಯ ದೃಶ್ಯ ಮುಕ್ತಾಯಗೊಳ್ಳುತ್ತದೆ.

ಬ್ರಾಹ್ಮಣ ವೇಷದಲ್ಲಿದ್ದ ಶ್ರೀಹರಿ ಸೀನಪ್ಪನ ಅಂಗಡಿಗೆ ಮುತ್ತಿನ ಮೂಗುತಿಯನ್ನು ಮಾರಲು ಬರುವುದರೊಂದಿಗೆ ಮೂರನೆಯ ದೃಶ್ಯ ಆರಂಭವಾಗುತ್ತದೆ. ಸೀನಪ್ಪ ನಾಯಕ ಹೆಂಡತಿಯ ಮೂಗುತಿಯನ್ನು ಗುರುತಿಸಿ ಅದನ್ನು ತಿಜೋರಿಯಲ್ಲಿ ಭದ್ರವಾಗಿರಿಸಿ ನೇರವಾಗಿ ಮನೆಗೆ ಬಂದು ಹೆಂಡತಿಯನ್ನು ಪರೀಕ್ಷಿಸುತ್ತಾನೆ. ಅವರ ಪರೀಕ್ಷಾ ಸಂದರ್ಭವು ನಡೆಯುತ್ತದೆ. ಕುಡಿಯಬೇಕೆಂದಿದ್ದ ವಿಷದ ಬಟ್ಟಲದೊಳಗೆ ಮೂಗುತಿ ದೊರೆತದ್ದು ಸರಸ್ವತಿಗೂ ಸೋಜಿಗ, ಅದನ್ನು ಕಂಡ ಸೀನಪ್ಪನಿಗೂ ಪರಮಾಶ್ಚರ್ಯ. ಮುಂದೆ ಇದೆಲ್ಲ ದೈವಲೀಲೆ ಶ್ರೀ ಹರಿಯ ಪರೀಕ್ಷೆ ಎಂಬುದು ಗೊತ್ತಾಗಿ ಲೌಕಿಕ ಜೀವನದಲ್ಲಿ ವೈರಾಗ್ಯ ಹೊಂದಿ ಆಧ್ಯಾತ್ಮಿಕತೆಯನ್ನು ಸಾಧಿಸಿದ್ದು ದೃಶ್ಯದಲ್ಲಿಯ ಸಂಗತಿಯಾಗಿದೆ.

ನಾಲ್ಕನೇ ದೃಶ್ಯ ಪುರಂದರ ದಾಸರು ದಾಸಕೂಟ, ವ್ಯಾಸಕೂಟದ ಜಿಜ್ಞಾಸೆ, ಕನ್ನಡದಲ್ಲಿ ದಾಸಸಾಹಿತ್ಯ ಬೆಳೆಯಲು ಕಾರಣ, ಶ್ರೀಪಾದರಾಯರ, ವ್ಯಾಸತೀರ್ಥರ ಪರಸ್ಪರ ಸಂಬಂಧ ವಿಜಯನಗರ ಶ್ರೀ ಕೃಷ್ಣ ದೇವರಾಯನ ರಾಜಗುರುವಾದ ವ್ಯಾಸ ತೀರ್ಥರು, ಅವರ ಮಹೋನ್ನತ ವ್ಯಕ್ತಿತ್ವ ಅವರ ಶಿಷ್ಯರಾಗಿ ಬಂದ ಪುರಂದರ, ಕನಕದಾಸರು, ವಾದಿರಾಜರು ಮುಂತಾದವರ ಕಿರು ಪರಿಚಯವಿದೆ. ಕನಕದಾಸರ ಕೀರ್ತನೆಗಳು, ಹರಿಭಕ್ತಿ ಸಾರ, ರಾಮಧ್ಯಾನ ಚರಿತೆ, ನಳ ಚರಿತ್ರೆ, ಮೋಹನ ತರಂಗಿಣಿ ಮುಂತಾದ ಕೃತಿಗಳನ್ನು ಪರಿಚಯಿಸಿ ಅವುಗಳಿಗೆ ಬಳಸಿದ ಛಂದಸ್ಸಿನೊಂದಿಗೆ ನಾಲ್ಕನೆಯ ದೃಶ್ಯ ಮುಕ್ತಾಯಗೊಳ್ಳುತ್ತದೆ.

೫ನೇ ದೃಶ್ಯದಲ್ಲಿ ಕೀರ್ತನಕಾರರು ಅವರ ಪರಂಪರೆ, ಕೀರ್ತನೆಗಳ ಅಂಕಿತ ಮುಂತಾದವುಗಳ ಕಿರು ಪರಿಚಯವಿದೆ. ದಾಸರು ಯಾವ ಸಂಪ್ರದಾಯಕ್ಕೆ ಸೇರಿದವರೆಂಬ ಪ್ರಶ್ನೆಯನ್ನೆತ್ತಿ ನಿರೂಪಕನ ಮುಖಾಂತರ "ದಾಸರು ಮಧ್ವ ಸಂಪ್ರದಾಯದವರು ಅಂದ್ರ ಮದ್ವಾಚಾರ್ಯರು ಹೇಳಿದಂತೆ ದೇವರು ಒಡೆಯ ನಾವು ಅವನ ಊಳಿಗದವರು. ದೇವರನ್ನು ಮೆಚ್ಚಿಸಲು ಭಕ್ತಿಯೊಂದೇ ದಾರಿ ಎಂದು ನಂಬಿದವರು"[೧೩] ಎಂದು ನಿರೂಪಕನಾದ ಕಾಕಾನ ಮೂಲಕ ಮಧ್ವ ಸಂಪ್ರದಾಯದ ಅನನ್ಯತೆಯನ್ನು ವಿವರಿಸಿದ್ದಾರೆ. ಮುಂದೆ ದಾಸರ ಹಾಡುಗಳ ಆಶಯ ನಿರೂಪಿಸುತ್ತ "ಒಳ್ಳೆಯವರಾಗಿ ಬದುಕಬೇಕು. ಉಪಕಾರಿಗಳಾಗಿರಬೇಕು, ಉದಾರಿಗಳಾಗಿರಬೇಕು, ಬಾಳಿನಲ್ಲಿ ಶಾಂತಿಯನ್ನು ತಂದುಕೊಂಡು ಸುಖವಾಗಿ ಜೀವಿಸಬೇಕು ಅನ್ನುವದನ್ನು ದಾಸರ ಹಾಡುಗಳು ತಿಳಿಸ್ತಾವ"[೧೪] ಎನ್ನುವಲ್ಲಿ ಕೀರ್ತನ ಸಾಹಿತ್ಯದ ಆಶಯ ಸರಳವಾಗಿ ನಿರೂಪಿತವಾಗಿದೆ.

೬ನೇ ದೃಶ್ಯದಲ್ಲಿ ಕನ್ನಡ ಶ್ರೇಷ್ಠ, ಸಂಸ್ಕೃತ ಶ್ರೇಷ್ಠ ಎಂಬ ಘರ್ಷಣೆಯಾಗಿ ಯಾವುದು ಶ್ರೇಷ್ಠ ಅಲ್ಲ, ಕನಿಷ್ಠವಲ್ಲ ಎಂಬ ದೃಷ್ಟಾಂತದೊಂದಿಗೆ ವಿವಾದ ಮುಕ್ತಾಯಗೊಳ್ಳುತ್ತದೆ. ವ್ಯಾಸ ತೀರ್ಥರು ಪುರಂದರದಾಸರ ಕೀರ್ತನೆಗಳನ್ನು ಪುರಂದರೋಪನಿಷತ್ತು ಎಂದು ಘೋಷಿಸಿ ಅವುಗಳಿಗೆ ಸಂಸ್ಕೃತ ಸಮಾನವಾದ ಸಾಹಿತ್ಯವೆಂದು ನಿರ್ಮಿಸುವ ಪ್ರಸಂಗ ಮಾರ್ಮಿಕವಾಗಿದೆ. ಕನಕ, ಪುರಂದರದಾಸರ ಪರಂಪರೆಯನ್ನು ಮುಂದುವರೆಸಿದ ವಿಜಯದಾಸ, ಪ್ರಸನ್ನ ವೆಂಕಟದಾಸ, ಗೋಪಾಲದಾಸ, ಜಗನ್ನಾಥದಾಸ, ಮೋಹನ ದಾಸ, ಕಾಖಂಡಕಿ ಮಹಿಪತಿದಾಸ ಮುಂತಾದ ಮಹನೀಯರನ್ನು ಪರಿಚಯಿಸುತ್ತಾರೆ. ದಾಸರಿಗೂ ಸಂಗೀತಕ್ಕೂ ಇರುವ ಸಂಬಂಧದ ಜಿಜ್ಞಾಸೆಯೊಂದಿಗೆ ಆರನೇ ದೃಶ್ಯ ಮುಕ್ತಾಯಗೊಳ್ಳುತ್ತದೆ.

ಏಳನೇ ಅಧ್ಯಾಯ ದಾಸರು ಸಂಗೀತಕ್ಕೆ ನೀಡಿರುವ ಕೊಡುಗೆಯೊಂದಿಗೆ ರಾಗ, ತಾಳಗಳ ಪರಿಕಲ್ಪನೆ ವಿವಿಧ ವಿಷಯಗಳ ವಿವೇಚನೆಯೊಂದಿಗೆ ಸಂಗೀತದ ಸಾರವನ್ನು ತಿಳಿಸುತ್ತದೆ. ಪ್ರತಿಭಾ, ಕಾಕಾ, ಅರವಿಂದ, ಸುಮಿತ್ರ ಈ ನಾಲ್ಕು ಪಾತ್ರಗಳ ಸಂವಾದದೊಂದಿಗೆ ವಚನ ಸಾಹಿತ್ಯ ದಾಸ ಸಾಹಿತ್ಯಗಳ ಪರಸ್ಪರ ತೌಲನಿಕ ಅಂಶಗಳು ಜಿಜ್ಞಾಸೆಗೊಳಗಾಗುತ್ತವೆ. ವಚನಸಾಹಿತ್ಯ, ದಾಸ ಸಾಹಿತ್ಯಕ್ಕೆ ಪ್ರೇರಣೆ ನೀಡಿರುವುದನ್ನು ಮತ್ತು ಪ್ರಭಾವಿತಗೊಂಡಿರುವುದನ್ನು ನಿದರ್ಶನದ ಮೂಲಕ ಪ್ರಸ್ತುತ ಪಡಿಸುತ್ತಾರೆ. ಮುಂದೆ ದಾಸರ ಕೀರ್ತನೆಯ ಒಂದೊಂದು ಸಾಲುಗಳೊಂದಿಗೆ ದೃಶ್ಯ ಮುಂದುವರೆಯುತ್ತದೆ. ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಮಾಡಲು ಬೇಡಿ ಹುಚ್ಚಪ್ಪಗಳಿರಾ, ಕುಲ ಕುಲವೆನ್ನುತಿಹರು ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ, ಈಸಬೇಕು ಇದ್ದು ಜೈಸಬೇಕು ಮುಂತಾದ ಕೀರ್ತನೆಗಳಲ್ಲಿ ಅಡಗಿರುವ ಲೋಕಾನುಭವ, ಸಾಮಾಜಿಕ ಪ್ರಜ್ಞೆಯನ್ನು ವಿಷದಪಡಿಸುತ್ತಾರೆ. ಭಕ್ತಿ, ನೀತಿ, ಧರ್ಮ, ತತ್ವ ಬೋಧಿಸಿರುವ ದಾಸಸಾಹಿತ್ಯದ ಪರಂಪರೆ ಮಹತ್ವವಾಗಿದೆ ಎಂಬುದನ್ನು ನಿರ್ಮಿಸುವುದರೊಂದಿಗೆ ದೃಶ್ಯ ಮುಕ್ತಾಯಗೊಳ್ಳುತ್ತದೆ. ಈ ರೀತಿಯಾಗಿ ಏಳು ದೃಶ್ಯಗಳಲ್ಲಿ ದಾಸ ಸಾಹಿತ್ಯದ ಉಗಮ, ವಿಕಾಸ, ವೈಶಿಷ್ಟ್ಯತೆ, ಸಂಗೀತದ ಸಹಚರ್ಯ, ಭಕ್ತಿ ಸಾಹಿತ್ಯ ಮುಂತಾದ ಅಂಶಗಳನ್ನು ಪರಿಣಾಮಕಾರಿಯಾಗಿ ಈ ರೂಪಕ ವಿವರಿಸುತ್ತದೆ. ಸರ್ವರನ್ನೂ ಮೆಚ್ಚಿಸುವ, ತಲುಪುವ ಸರಳ ಸುಂದರ ರೂಪಕ ಇದಾಗಿದೆ.

**೫.೨.೦ ಸೃಜನೇತರ :**

ಡಾ. ಬಿ. ಆರ್. ಹಿರೇಮಠ ಅವರದು ಮೂಲತಃ ಸೃಜನಶೀಲ ಸಾಹಿತ್ಯವಾಗಿದ್ದರೂ, ಅವರು ಹೆಚ್ಚಾಗಿ ತೊಡಗಿಸಿತೊಂಡದ್ದು ಸೃಜನೇತರ ಸಾಹಿತ್ಯದಲ್ಲಿ ಕಾರ್ಯ ನಿರ್ವಹಿಸಿದರು. ಪೂರ್ಣ ಪ್ರಮಾಣದ ಸಂಶೋಧಕರಾಗಿ ರೂಪಗೊಂಡು ಕನ್ನಡ ಸಂಶೋಧನಾ ಕ್ಷೇತ್ರವನ್ನು ವಿಸ್ತರಿಸಿದರು. ಇತಿಹಾಸ, ಶಾಸನ,

ಸಂಶೋಧನೆ, ಈ ಲೇಖಕರ ಸಾಹಿತ್ಯ ಕೃಷಿಯ ಕ್ಷೇತ್ರ, ಗಂಭೀರ ಬರವಣಿಗೆ, ಮಾಹಿತಿ ಸಂಗ್ರಹ, ತೀರ ಅಗತ್ಯದ ನೆಲೆಗಟ್ಟುಗಳನ್ನು ಸಿದ್ಧಿಸಿಕೊಂಡಿರುವುದು ಗಮನಾರ್ಹವಾಗಿದೆ. ಪ್ರಸ್ತುತ ಸಾಹಿತ್ಯದ ವಿಭಿನ್ನ ನೆಲೆಗಳು ಭಾಗದಲ್ಲಿ ಡಾ. ಬಿ.ಆರ್. ಹಿರೇಮಠ ಅವರು ರಚಿಸಿರುವ ಚರಿತ್ರೆ, ಅರಸು ಮನೆತನ, ಶಾಸ್ತ್ರ ಸಾಹಿತ್ಯ, ವ್ಯಕ್ತಿ ಚಿತ್ರಗಳು, ವಿಮರ್ಶೆ, ಮತ್ತು ಜಾನಪದ ಮುಂತಾದ ಸೃಜನೇತರ ವಿಭಾಗದಲ್ಲಿ ನೀಡಿದ ಕೊಡುಗೆಯನ್ನು ಪರಿಶೀಲಿಸುವುದಾಗಿದೆ. ಗ್ರಂಥಸ್ವರೂಪದಲ್ಲಿ ಹೊರಬಂದಿರುವ ಕೃತಿಗಳನ್ನು ಹೊರತುಪಡಿಸಿ, ಪ್ರಖ್ಯಾತ ಪತ್ರಿಕೆಗಳಲ್ಲಿ ಬಂದಿರುವ ಲೇಖನಗಳನ್ನಾಯ್ದು ವಿವೇಚಿಸಲಾಗುವುದು.

I. ಬಸವಣ್ಣನವರ ವಂಶಜರು ಹಾಗೂ ಶಾಸನಗಳು (ಬಸವ ಪಥ ೨ ಸಂಚಿಕೆ ಸಂಪುಟ) ಬಸವಣ್ಣನವರ ಜನ್ಮಸ್ಥಳ (ಕ್ರಾಂತಿದರ್ಶಿ ಪತ್ರಿಕೆ, ಬಸವ ಜಯಂತಿ ವಿಶೇಷಾಂಕ ೧೯೮೧), ಕವಿಳಾಸಪುರ ಗ್ರಾಮದಲ್ಲಿ ಶೋಧ (ಸಂಯುಕ್ತ ಕರ್ನಾಟಕ ೨೫-೩-೭೭ರ ಸಂಚಿಕೆಯಲ್ಲಿ), ೧೯ನೇ ಶತಮಾನದ ಎರಡು ದಾಖಲೆಗಳು (ಇತಿಹಾಸ ದರ್ಶನ ಸಂ. ೬. ೧೯೯೧) (ಕರ್ನಾಟಕ ಇತಿಹಾಸ ಅಕಾಡೆಮಿ), ಸರಜಾ ; ಹನುಮೇಂದ್ರ ಚರಿತೆ (ಹರತಿಸಿರಿ ಎಚ್.ವ್ಹಿ. ವೀರನಾಯಕ ನೆನಪಿನ ಸಂಪುಟ ಅಗಸ್ಟ ೧೯೮೭) ಕನ್ನಡ ಸಾಹಿತ್ಯದ ಮೇಲೆ ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ (ಹೇಮಕೂಟ ಪುಟ- ೩ ರಿಂದ ೧೨) ವಚನ ಸಾಹಿತ್ಯದಲ್ಲಿ ಚಾರಿತ್ರಿಕ ಅಂಶಗಳು (ಅಪ್ರಕಟಿತ ಲೇಖನ ಬಿ.ಆರ್. ಹಿರೇಮಠರ ವೈಯಕ್ತಿಕ ಸಂಗ್ರಹದಿಂದ ಶೋಧಿಸಲಾಗಿದೆ.) ಬಸವಣ್ಣನವರ ಬಾಗೇವಾಡಿ (ಸಂಯುಕ್ತ ಕರ್ನಾಟಕ ಜನಮನಕ್ಕೆ ಪ್ರತಿಕ್ರಿಯೆ ೧೪-೧೨-೧೯೮೨) ಸಾಂಸ್ಕೃತಿಕ ಕೇಂದ್ರಗಳಾಗಿ ವೀರಶೈವ ಮಠಗಳು (ಸುವರ್ಣಝುರಿ ಸ್ಮರಣ ಸಂಚಿಕೆ ಪುಟ-೭೪ ರಿಂದ ೭೬) ಇವು ಬಿ. ಆರ್. ಹಿರೇಮಠ ಅವರು ಬರೆದಿರುವ ಚರಿತ್ರೆಗೆ ಸಂಬಂಧಿಸಿದ ಬಿಡಿ ಲೇಖನಗಳಾಗಿವೆ.

**I. ಬಸವಣ್ಣನವರ ವಂಶಜರು ಹಾಗೂ ಶಾಸನಗಳು :**

ಇದು ಬಸವಣ್ಣನವರ ಕುರಿತಾಗಿರುವ ವಂಶಾವಳಿಗೆ ಸಂಬಂಧಿಸಿದ ಅಧಿಕೃತ ದಾಖಲೆಯಾಗಿದೆ. ಹುಕ್ಕೇರಿ ತಾಲೂಕಿನ ಅರ್ಜುನವಾಡ ಗ್ರಾಮದ ನೆಲೆಯಲ್ಲಿ (ಭೂಗತ ಕವಿಳಾಸಪುರ ಪ್ರದೇಶವನ್ನು)೧೯೨೮ರಲ್ಲಿ ದೊರೆತ ಶಾಸನ. ನಾ. ಶ್ರೀ ರಾಜಪುರೋಹಿತ, ಡಾ. ಎಸ್.ಸಿ. ನಂದೀಮಠ, ಮಧುರ ಚೆನ್ನ, ಡಾ. ಫ.ಗು. ಹಳಕಟ್ಟಿ ಇವರ ಸಂಯುಕ್ತ ಪ್ರಯತ್ನದಿಂದ ಲಭಿಸಿದ ಕವಿಳಾಸಪುರ ಶಾಸನದ ಕುರಿತಾಗಿ ಹಲವಾರು ವಿದ್ವಾಂಸರು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದು ಚಾರಿತ್ರಿಕ ಸಂಗತಿಯಾಗಿದೆ. 'ಕವಿಳಾಸಪುರವೆಂದರೆ ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಮನಗುಳಿ' ಎಂದು ಕೆಲವರು ಹೇಳಿದರೆ ಧಾರವಾಡ ಜಿಲ್ಲೆಯ ರಾಣೇಬೆನ್ನೂರು ತಾಲೂಕಿನ ಚೌಡದಾನಪುರವೆಂದು ಮತ್ತೆ ಹಲವರು ವಾದಿಸಿದರು. ಈ ವಾದ ಸಂವಾದವನ್ನು ಕೂಲಂಕುಶವಾಗಿ ಅಧ್ಯಯನಿಸಿದ ಡಾ. ಎಂ.ಎಂ. ಕಲಬುರ್ಗಿಯವರು ಹುಕ್ಕೇರಿ ತಾಲೂಕಿನಲ್ಲಿ ಕ್ಷೇತ್ರ ಕಾರ್ಯ ಕೈಗೊಂಡು ೧೯೭೬ರಲ್ಲಿ ಈಗಿನ

ಕವಿಳಾಸಪುರವನ್ನು ನಿರ್ಣಯಿಸಿದರು. ಕಲಬುರ್ಗಿಯವರ ಸೂಚನೆಯ ಜಾಡನ್ನು ಹಿಡಿದು ಮತ್ತೆ ಕೆಲವರು ಭೌಗೋಳಿಕ ಪರಿಸರವನ್ನು ಪರಿಚಯಿಸಿದರು. ಇವೆಲ್ಲ ಅಂಶಗಳನ್ನು ಕ್ರೋಢೀಕರಿಸಿಕೊಂಡು ಡಾ. ಬಿ.ಆರ್. ಅವರು ಪ್ರಸ್ತುತ ಲೇಖನವನ್ನು ಸಿದ್ಧಪಡಿಸಿದ್ದಾರೆ. "ಬಸವಣ್ಣನವರ ಕುರಿತಾಗಿ ದೊರೆತ ಒಟ್ಟು ೧೧ ಶಾಸನಗಳಲ್ಲಿ ಕವಿಳಾಸಪುರವು ಬಸವಣ್ಣನವರ ಹಾಗೂ ಅವರ ವಂಶಜರಿಗೆ ಸಂಬಂಧಿಸಿದ ಅಪೂರ್ವ ಸಂಗತಿಗಳನ್ನು ಪ್ರಪ್ರಥಮವಾಗಿ ಬಿಡಿಸಿ ಹೇಳುತ್ತದೆ. ಬಸವಣ್ಣನವರು ಪೌರಾಣಿಕ ವ್ಯಕ್ತಿ ಎಂದು ಭಾವಿಸುತ್ತಿದ್ದೆ. ಅವರ ಜನ್ಮಸ್ಥಳ ಹಾಗೂ ತಂದೆಯ ವಿಷಯವಾಗಿ ಸಂದೇಹಿಸುತ್ತಿದ್ದ ಜನರಿಗೆ - "ಮತ್ತಂ ತರ್ದವಾಡಿ ಮಧ್ಯಗ್ರಾಮ ಬಾಗೇವಾಡಿ ಪುರವರಾಧೀಶ್ವರಂ ಮಾದಿರಾಜ" ಎಂಬ ಶಾಸನ ಪ್ರಮಾಣ ದೊರೆತು. ಬಸವಣ್ಣನವರು ಪೌರಾಣಿಕ ವ್ಯಕ್ತಿಗಳಲ್ಲ, ಐತಿಹಾಸಿಕ ವ್ಯಕ್ತಿ. ಅವರ ಜನ್ಮಸ್ಥಳ ಬಿಜಾಪುರ ಜಿಲ್ಲೆ ಬಾಗೇವಾಡಿ. ತಂದೆ ಪುರ ಪ್ರಭು ಮಾದಿರಾಜ ಎಂಬ ಸಂಗತಿಗಳು ನೆಲೆಯೂರಿ ^à:[illegible][೧೫] ಎಂಬ ಅಂಶವನ್ನು ಬಿ.ಆರ್.ಹಿರೇಮಠರು ಸ್ಪಷ್ಟಪಡಿಸಿದರು. ಶಾಸನದ ಪಠ್ಯವನ್ನು ಆಧಾರವಾಗಿಟ್ಟುಕೊಂಡು ಬಸವಣ್ಣನವರ ದಿವ್ಯ ವ್ಯಕ್ತಿತ್ವ ಹಾಗೂ ಅವರ ಪಾರದರ್ಶಕ ವ್ಯಕ್ತಿತ್ವಕ್ಕೆ ಹಿಡಿದ ದರ್ಪಣದಂತಿರುವ ಕಂದಪದ್ಯಗಳನ್ನು ಉಲ್ಲೇಖಿಸಿ ಮುಂದೆ ಶಾಸನೋಕ್ತ ಮಾದಿರಾಜರ ವಂಶಾವಳಿಯನ್ನು ನಿರೂಪಿಸಿದ್ದಾರೆ. ಇದೊಂದು ಮಹತ್ವದ ಚಾರಿತ್ರಿಕ ಲೇಖನವಾಗಿದೆ.

**II. ಬಸವಣ್ಣನವರ ಜನ್ಮಸ್ಥಳ :**

ಈ ಲೇಖನವು ಅರ್ಜುನವಾಡ ಶಾಸನದಲ್ಲಿ (ಕವಿಳಾಸಪುರಕ್ಕೆ ಸಂಬಂಧಿಸಿದಂತೆ) ಬರುವ ಅಂಶಗಳಿಗೆ ಪೂರಕವಾದ ಸಂಗತಿಗಳನ್ನೇ ಒಳಗೊಂಡಿದೆ. ವಿದ್ವಾಂಸರಲ್ಲಿ ನಡೆದ ಹಲವಾರು ಚರ್ಚೆಗಳನ್ನು ಇದರಲ್ಲಿ ಕ್ರೋಢೀಕರಿಸಿ ತಮ್ಮದೇ ಆದ ನಿಲುವನ್ನಿಲ್ಲಿ ಪ್ರತಿಪಾದಿಸಿರುವುದು ಮುಖ್ಯವಾಗಿದೆ. "ಬಸವಣ್ಣನವರ ಜನ್ಮಸ್ಥಳ ಬೆಳಗಾವಿ ಜಿಲ್ಲೆಯ ಬೆಲ್ಲದ ಬಾಗೇವಾಡಿ ಅಲ್ಲ. ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಆದರೆ ಬಸವಣ್ಣನವರ ವಂಶಜ ಯತಿರಾಯ ಹಾಲಬಸವಿದೇವನು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಕವಿಳಾಸಪುರದಲ್ಲಿದ್ದ ಎಂಬ ವಿಷಯ ಅರ್ಜುನವಾಡ ಶಾಸನದಿಂದ ಗೊತ್ತಾಗುತ್ತದೆ"[೧೬] ಎಂಬ ಅಂಶವನ್ನು ಖಚಿತವಾಗಿ ವಿವರಿಸಿದ್ದು ಮಹತ್ವದ ಸಂಗತಿಯಾಗಿದೆ. ಇದಲ್ಲದೆ ಈ ಲೇಖನದ ಪ್ರಮುಖ ಅಂಶವೆಂದರೆ ಡಾ. ಬಿ.ಆರ್. ಹಿರೇಮಠ ಅವರು ಈ ಹಾಲಬಸವಿದೇವ ಕವಿಳಾಸಪುರಕ್ಕೆ ಯಾವಾಗ ಬಂದನು? ಯಾವ ಕಾರಣಕ್ಕಾಗಿ ಬಂದನು? ಅಲ್ಲಿ ಎಷ್ಟು ಕಾಲ ಬದುಕಿದ್ದನು? ಅವನ ವಂಶ ಮುಂದುವರಿದ್ದಿದ್ದೀತೆ? ಹಾಗಿದ್ದರೆ ಅವರ ಹೆಸರೇನು ? ಅವರೂ ಅಲ್ಲಿ ಇದ್ದರೋ? ಅಥವಾ ಬೇರೆ ಸ್ಥಳದಲ್ಲಿ ವಾಸವಾಗಿದ್ದರೋ ಎಂಬ ವಿಷಯಗಳು ರಹಸ್ಯವಾಗಿವೆ ಎಂದು ಜಿಜ್ಞಾಸೆಗೊಳಪಡಿಸಿರುವುದು ಸಂಶೋಧನೆಯ ಕ್ಷೇತ್ರ ವಿಸ್ತರಿಸುವುದಕ್ಕೆ ಬೇಕಾದ ಮೂಲದ್ರವ್ಯವನ್ನು ಒದಗಿಸುತ್ತದೆ.

**III. ಬಸವಣ್ಣನವರ ಬಾಗೇವಾಡಿ :**

ಈ ಲೇಖನವು ೧೪-೧೨-೧೯೮೨ರ ಸಂಯುಕ್ತ ಕರ್ನಾಟಕದ ಜನಮನ ವಿಭಾಗದಲ್ಲಿ ಬಾಬುರಾವ ಅಮ್ಮಣಗಿಯವರು 'ಬಸವಣ್ಣನವರ ಬಾಗೇವಾಡಿ' ಕುರಿತು ಬರೆದ ಅಂಶಗಳ ಬಗೆಗೆ ಸ್ಪಷ್ಟೀಕರಣ ನೀಡಿ ವಿವರಣೆ ನೀಡಿರುವ ಟಿಪ್ಪಣಿ ರೂಪದ ಲೇಖನವಿದು. ಇದರಲ್ಲಿ ಒಟ್ಟು ೮ ಅಂಶಗಳನ್ನು ಪ್ರಸ್ತಾಪಿಸಿ ವಾಸ್ತವ ಅಂಶಗಳ ದರ್ಶನ ಮಾಡಿಸಿದ್ದಾರೆ. ಅಮ್ಮಣಗಿಯವರು ಎತ್ತಿದ ಪ್ರಶ್ನೆಗಳಿಗೆ ಶಾಸನಗಳಿಂದ ಆಧಾರ ಒದಗಿಸಿ ವಿಷಯ ಸ್ಪಷ್ಟಗೊಳಿಸಿದ್ದಾರೆ. "ಬಹುದು', 'ಇರಬೇಕು', 'ಇದ್ದಿರಬೇಕು' ಗಾಳಿಗೋಪುರ ಇಂಥ ಮಾತುಗಳಿಂದ ಯಾವುದೇ ಅಂಶ ನಿರ್ಧಾರವಾಗುವುದಿಲ್ಲ. ಇಂಥ ಗಾಳಿ ಗೋಪುರದಿಂದ ಹೊರಬಂದು ಗಟ್ಟಿ ನೆಲದ ಮೇಲೆ ನಿಂತು ವಿಚಾರ ಮಾಡಿದಾಗ ಮಾತ್ರ ನಿಜವಾದ ಸತ್ಯ ಸಂಗತಿ ಬೆಳಕಿಗೆ ಬರುತ್ತದೆ. ಅಮ್ಮಣಗಿಯವರು ಆಹ್ವಾನವಾಗಿ ಸ್ವೀಕರಿಸಿ ಕಾರ್ಯ ಪ್ರವೃತ್ತರಾಗಲಿ"[೧೭] ಎಂದು ಸವಾಲನ್ನು ಹಾಕಿದ್ದಾರೆ. ಇಲ್ಲಿ ಮುಖ್ಯವಾಗಿ ಬಸವನ ಬಾಗೇವಾಡಿ, ಬೆಲ್ಲದ ಬಾಗೇವಾಡಿ, ಕುರಿತಾಗಿ ವಾದ ಸಂವಾದಗಳಿವೆ. ಹಾಗೆಯೇ ತರ್ದವಾಡಿನಾಡು, ಅರ್ಜುನವಾಡ ಸ್ಥಳಗಳ ಕುರಿತಾಗಿ ಚರ್ಚೆ ಇದೆ. ಕಳಚೂರಿ, ಪೆರ್ಮಾಡಿ, ಬಿಜ್ಜಳರ ಕಾಲದ ಐತಿಹಾಸಿಕ ಅಂಶಗಳ ವಿವೇಚನೆ ಇದೆ. ಲಕುಲೀಶ, ಪಾಶುಪತ, ಕಾಳಾಮುಖ, ಕಾಪಾಲಿಕ, ಶೈವ ಮತಗಳ ಪ್ರಸ್ತಾಪವಿದೆ. ಬಸವಪೂರ್ವ, ಬಸವಯುಗ, ಬಸವೋತ್ತರ ಯುಗದ ಮುಖ್ಯಸಂಗತಿಗಳು. ಚರ್ಚೆಗೊಳಗಾಗಿವೆ. ಈ ಮೇಲೆ ಪ್ರಸ್ತಾಪಿಸಿದ ಎಲ್ಲ ಅಂಶಗಳಿಗೆ ಡಾ. ಬಿ.ಆರ್. ಹಿರೇಮಠ ಅವರು ಸಮರ್ಪಕವಾದ ಆಧಾರ ಒದಗಿಸಿ ವಿಷಯವನ್ನು ಸ್ಪಷ್ಟಗೊಳಿಸಿದ್ದಾರೆ. ಜನಮಾನಸದಲ್ಲಿ ತಪ್ಪು ಗ್ರಹಿಕೆ ಉಂಟಾಗಬಹುದಾಗಿದ್ದ ಸಂಗತಿಯನ್ನು ನಿವಾರಿಸಿ ವಾಸ್ತವದ ದರ್ಶನ ಮಾಡಿಸಿದ್ದಾರೆ. ಡಾ. ಬಿ. ಆರ್. ಅವರ ಆಳವಾದ ಅಧ್ಯಯನ ಅಪಾರ ವಿದ್ವತ್ತಿಗೆ ಮತ್ತು ಚಾರಿತ್ರಿಕ ಪ್ರಜ್ಞೆಗೆ ಈ ಲೇಖನವೊಂದು ಶ್ರೇಷ್ಠ ನಿದರ್ಶನವಾಗಿದೆ.

**IV. ಕವಿಳಾಸಪುರ ಗ್ರಾಮದಲ್ಲಿ ಶೋಧ :**

ಇದೊಂದು ಕಿರು ಟಿಪ್ಪಣೆಯಾಗಿದ್ದರೂ ಅತ್ಯಂತ ಮಹತ್ವದ ಸಂಗತಿಯತ್ತ ಬೆಳಕನ್ನು ಚೆಲ್ಲುತ್ತದೆ. ಬಸವಣ್ಣನವರ ವಂಶಜರು ನೆಲೆ ನಿಂತಿದ್ದ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಕವಿಳಾಸಪುರ ಗ್ರಾಮದಲ್ಲಿ ಬಸವಣ್ಣನವರಿಗೆ ಸಂಬಂಧಿಸಿದ ಶಾಸನಗಳ ವಿವರ ಇದರಲ್ಲಿದೆ. ಡಾ. ಬಿ.ಆರ್. ಹಿರೇಮಠ ಅವರು ಕ್ಷೇತ್ರಕಾರ್ಯ ಕೈಗೊಂಡಾಗ ಲಭಿಸಿದ ಶಾಸನ ಅತ್ಯಂತ ಕಿರಿದಾಗಿದ್ದರೂ ಅದರ ಮಹತ್ವ ಅತಿ ಹಿರಿದಾದುದಾಗಿದೆ. ಅವರ ಮಾತಿನಲ್ಲಿಯೇ ಹೇಳುವುದಾದರೆ "ತೀರ ಇತ್ತೀಚೆಗೆ ನಡೆಸಿದ ಸಂಶೋಧನೆಯಿಂದ ಲಭಿಸಿದ ಶಾಸನ ೧೨ನೇ ಶತಮಾನಕ್ಕೆ ಸಂಬಂಧಿಸಿದಂತೆ ಮಣ್ಣಿನಲ್ಲಿ ಹೂತು ಹೋಗಿದ್ದ ಈ ಶಾಸನ ಒಂದು ಸೀಮೆಯ ಕಲ್ಲು. ಸೂರ್ಯ ಚಂದ್ರರ ಮಧ್ಯೆ ಈಶ್ವರ ಲಿಂಗ ಇರುವ ಚಿತ್ರದ ಕೆಳಗೆ' ಶ್ರೀ ಬಸವಣ್ಣ ದಂಣ್ಣಾಯಕರ ಕೆಯ್' ಎಂಬ ಮೂರು ಸಾಲುಗಳ ಬರವಣಿಗೆ ಇದೆ.

ಬಸವಣ್ಣನವರ ಹೊಲದ ಸೀಮೆಯ ಅಥವಾ ಅವರ ವಂಶಜರ ಹೊಲದ ಸೀಮೆಯನ್ನು ಸೂಚಿಸುವ ಇದು ಅವರನ್ನು ದಣ್ಣಾಯಕ ಎಂದು ಕರೆದ ಪ್ರಥಮ ಶಾಸನ ಎನಿಸಿದೆ. ಹೊಲದ ನಾಲ್ಕೂ ಮೂಲೆಗಳಲ್ಲಿ ನಿಲ್ಲಿಸಬಹುದಾಗಿದ್ದ ಸೀಮೆಯ ಕಲ್ಲುಗಳಲ್ಲಿ ಒಂದು ಈಗ ಲಭಿಸಿದಂತಾಗಿದ್ದು ಇನ್ನೂ ಮೂರು ಕಲ್ಲುಗಳನ್ನು ಶೋಧಿಸಬೇಕಾಗಿದೆ"[೧೮]ಎಂಬ ಮಹತ್ವದ ಅಂಶವನ್ನು ಈ ಪುಟ್ಟ ಶಾಸನ ವಿವರಿಸುತ್ತದೆ. ಅರ್ಜುನವಾಡದ ಶಾಸನ ಲಭಿಸಿದ ಸ್ಥಳ ಮತ್ತು ಹೂತು ಹೋದ ಕವಿಳಾಸಪುರದ ಉತ್ಖನನ ಕಾರ್ಯ ಕೈಕೊಂಡರೆ ಬಸವಣ್ಣನವರಿಗೆ ಸಂಬಂಧಿಸಿದ ಮಹತ್ವದ ಚಾರಿತ್ರಿಕ ಅಂಶಗಳು ದೊರೆಯಬಹುದಾಗಿದೆ ಎಂದು ಮತ್ತು ಅವು ಬಸವಣ್ಣನವರ ವಂಶದವರ ಇತಿಹಾಸದ ಮೇಲೆ ಹೊಸ ಬೆಳಕು ಮೂಡಬಹುದು ಎಂದು ಸೂಚಿಸಿದ್ದು ಅತ್ಯಂತ ಸಮಂಜಸವಾಗಿದೆ.

**V.ಸರಜಾ ಹನುಮೇಂದ್ರ ಚರಿತೆ :**

ಹನುಮೇಂದ್ರ ಚರಿತ್ರೆ ಡಾ. ಬಿ. ಆರ್. ಅವರು ರಚಿಸಿದ ಮತ್ತೊಂದು ಲೇಖನವಾಗಿದೆ. ಕರ್ನಾಟಕದ ನಾಯಕ ಪ್ರಮುಖ ಮನೆತನಗಳಲ್ಲಿ ಎದ್ದು ಕಾಣುವ ಹೆಸರು ತರೆ ಕೆರೆ ಪಾಳೆಗಾರರದು. ಈ ಪಾಳೆಗಾರರ ೨ನೆಯ ನಾಯಕ ಸರಜಾ : ಹನುಮೇಂದ್ರನನ್ನು ಕುರಿತಾಗಿ ಬರೆದಿರುವ ಚರಿತೆ ಇದು. ಕವಿ ಕೃಷ್ಣಶರ್ಮನು ಸರಜಾ ಹನುಮೇಂದ್ರ ಚರಿತ್ರೆಯನ್ನು ರಚಿಸಿದ್ದಾನೆ. ಇದರ ಇನ್ನೊಂದು ಹೆಸರು ಹನುಮೇಂದ್ರ ಯಶೋ ವಿಲಾಸವಾಗಿದೆ. ಕಥಾನಾಯಕ ೨ನೆಯ ಸರಜಾ ಹನುಮೇಂದ್ರನ ಸಾಹಸ, ಐತಿಹಾಸಿಕ ಸಂಗತಿ, ಪಾಳೆಗಾರ ವಂಶಜರು ಮುಂತಾದ ಸಂಗತಿಗಳನ್ನು ವಿವರಿಸುತ್ತದೆ.

ಈ ಚಾರಿತ್ರಿಕ ಕಾವ್ಯವನ್ನು ಆಧರಿಸಿ ತರಿಕೆರೆ ಪಾಳೆಗಾರರ ವಂಶವೃಕ್ಷವನ್ನು ರೇಖಿಸಲಾಗಿದೆ. ಈ ಕೃತಿಯ ಸಾಫಲ್ಯವನ್ನು ಹಾಗೂ ಅದರ ಮಿತಿಯನ್ನು ಕೂಡಾ ವಿವರಿಸಿದ್ದಾರೆ. "ಸರಜಾ ಹನುಮೇಂದ್ರ ಚರಿತ್ರೆಯು ಒಂದು ಸಾಮಾನ್ಯ ಇತಿಹಾಸ ಕೃತಿ ಹಾಗೂ ಸಾಧಾರಣ ಕಾವ್ಯ ಕೃತಿಯಾಗಿದೆ ಎಂದು ಹೇಳಬಹುದು."[೧೯] ಈ ಹೇಳಿಕೆ ಕಾವ್ಯವನ್ನು ಉತ್ಪ್ರೇಕ್ಷಿಸದೆ ವ್ಯಕ್ತಿಯನ್ನು ವೈಭವೀಕರಿಸದೆ ವಾಸ್ತವಿಕ ಸಂಗತಿಗಳನ್ನು ದಾಖಲಿಸಿರುವುದು ಗಮನಾರ್ಹವಾಗಿದೆ.

**VI. ವಚನ ಸಾಹಿತ್ಯದಲ್ಲಿ ಚಾರಿತ್ರಿಕ ಅಂಶಗಳು :**

ಇದೊಂದು ಅಪ್ರಕಟಿತ ಲೇಖನ. ವಚನ ಸಾಹಿತ್ಯದಲ್ಲಿ ಹಲವಾರು ಚಾರಿತ್ರಿಕ ಸಂಗತಿಗಳು ಅಡಕವಾಗಿವೆ. ಈ ಚಾರಿತ್ರಿಕ ಸಂಗತಿಗಳಿಂದ ಇಲ್ಲಿಯವರೆಗೆ ಪ್ರಶ್ನಾರ್ಹವೆನಿಸಿದ್ದ ಸಂದೇಹಕ್ಕೊಳಪಟ್ಟಿದ್ದ ವಿಷಯಗಳಿಗೆ ಪರಿಹಾರ ದೊರಕುತ್ತದೆ. ಕೆಲವು ವಿವರಗಳಿಗೆ ಅಧಿಕೃತತೆ ಪ್ರಾಪ್ತವಾಗುತ್ತದೆ. ವಚನ ಸಾಹಿತ್ಯದಲ್ಲಿ ಅಡಕವಾಗಿರುವ ಚಾರಿತ್ರಿಕ ಸಂಗತಿಗಳನ್ನು ವಿವೇಚಿಸಿದ ಪ್ರಮುಖ ಲೇಖನವಿದು. ಇದರಲ್ಲಿ ಚತುರಾಚಾರ್ಯರ ಕುರಿತಾಗಿ ಜಿಜ್ಞಾಸೆ ಇದೆ. ಮರೆಮಿಂಡದೇವ, ಹಾವಿನಹಾಳ ಕಲ್ಲಯ್ಯ, ಆದಯ್ಯ, ಬಾಲ ಬೊಮ್ಮಣ್ಣ ಮುಂತಾದವರ ವಚನಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಏಕೋರಾಮಿ ತಂದೆಗಳು,

ಪಂಡಿತಾರಾಧ್ಯರು, ರೇವಣಸಿದ್ಧೇಶ್ವರರು, ಮರುಳ ಸಿದ್ಧೇಶ್ವರರ ಕುರಿತಾಗಿ ವಿಶೇಷ ಅಧ್ಯಯನ ಕೈಗೊಂಡಿದ್ದಾರೆ. "ವಚನಕಾರರಿಗೆ ಆಚಾರ್ಯಪುರುಷರಲ್ಲೆ ಆಗಲಿ ಬಸವಾದಿ ಶಿವಶರಣರಲ್ಲೆ ಆಗಲಿ ಯಾವದೇ ಭೇದ ಭಾವ ಇರಲಿಲ್ಲವೆಂಬುದು ಗೊತ್ತಾಗುತ್ತದೆ. ೧೨ನೆ ಶತಮಾನದಲ್ಲಿ ಚತುರಾಚಾರ್ಯರನ್ನು ಬಸವಾದಿ ಪ್ರಮಥರನ್ನು ಸಮಭಾವದಿಂದ ಕಾಣುತ್ತಿದ್ದರು. ಹೀಗಾಗಿ ಮೂಲತಃ ವೀರಶೈವಧರ್ಮ ಸಮನ್ವಯ ಧರ್ಮವಾಗಿ ರೂಪುಗೊಂಡಿರುವ ಸಂಗತಿ ಪ್ರಕಟಗೊಳ್ಳುತ್ತದೆ. ಚತುರಾಚಾರ್ಯರ ಅಸ್ತಿತ್ವ, ಕಾಲಮಿತಿ, ಐತಿಹಾಸಿಕತೆ ಇವರು ೧೨ನೇ ಶತಮಾನದಲ್ಲಿ ಹೊಂದಿದ್ದ ಪೂಜ್ಯತೆ ಆದರಗಳು ಇದರಿಂದ ವಿದಿತವಾಗುತ್ತವೆ"[೨೦] ಎಂಬ ಚಾರಿತ್ರಿಕ ಅತ್ಯಂತ ಮಹತ್ವದ ಅಂಶವೊಂದನ್ನಿಲ್ಲಿ ಡಾ. ಬಿ.ಆರ್. ಅವರು ಪ್ರತಿಪಾದಿಸಿದ್ದಾರೆ. ಗುರುವಿರಕ್ತರ ಕಿತ್ತಾಟ ಮತ್ತು ಮೇಲು ಕೀಳುಗಳ ತಾರತಮ್ಯ ಮಾಡುವ ಸಮಕಾಲೀನ ಸಂದರ್ಭದಲ್ಲಿ ಈ ಲೇಖನವು ಸಮಾಜಕ್ಕೆ ಹೊಸದಾರಿಯನ್ನು ರೂಪಿಸುವ ಸಾಮರ್ಥ್ಯ ಪಡೆದಿದೆ. ಹೀಗಾಗಿ ಇದು ಅತ್ಯಂತ ಮಹತ್ವದ ಲೇಖನಗಳಲ್ಲಿ ಒಂದಾಗಿದೆ.

**VII. ಕನ್ನಡ ಸಾಹಿತ್ಯದ ಮೇಲೆ ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ :**

ಇದರಲ್ಲಿ ಕ್ರಿ.ಶ. ೧೬೦೦ರಲ್ಲಿ ಸ್ಥಾಪಿತವಾದ ಈಸ್ಟ ಇಂಡಿಯಾ ಕಂಪನಿಯು ಭಾರತಕ್ಕೆ ಬಂದದ್ದು ಹಂತ ಹಂತವಾಗಿ ಭಾರತವನ್ನೆಲ್ಲ ಕಬಳಿಸಿದ್ದು, ೧೭೫೭ರ ಪ್ಲಾಸಿ ಕಾಳಗ, ೧೮೫೭ರ ಸ್ವಾತಂತ್ರ್ಯ ಸಂಗ್ರಾಮ, ೧೯೪೭ರ ಸ್ವಾತಂತ್ರ್ಯ, ಈ ಮೂರು ಘಟ್ಟದ ಭಾರತೀಯ ರಾಜಕೀಯ ಸ್ಥಿತಿಗತಿಗಳನ್ನು, ಚಾರಿತ್ರಿಕ ಸಂಗತಿಗಳನ್ನು, ಚರ್ಚಿಸಿದ್ದಾರೆ. ಮುಂದೆ ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ವಾತಂತ್ರ್ಯಾಂದೋಲನಕ್ಕೆ ಕನ್ನಡ ಕವಿಗಳು ಸ್ಪಂದಿಸಿದ ರೀತಿ ಕಟ್ಟಿದ ಕಾವ್ಯ, ಸ್ವಾತಂತ್ರ್ಯ ಪ್ರಾಪ್ತಿಗಾಗಿ ಕೊಟ್ಟ ಕರೆ ಮುಂತಾದ ಅಂಶಗಳನ್ನು ಕ್ರೋಢೀಕರಿಸಿ ಲೇಖನವನ್ನು ರಚಿಸಿದ್ದಾರೆ.

"ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ ಪ್ರವಾಹ ರೂಪದಲ್ಲಿ ಕಾಣಿಸಿಕೊಂಡಿರುವುದು ಜಾನಪದ ಸಾಹಿತ್ಯದಲ್ಲಿ. ಶಿಷ್ಟ ಸಾಹಿತ್ಯಕ್ಕಿಂತಲೂ ಜಾನಪದ ಸಾಹಿತ್ಯದಲ್ಲಿ ದೇಶಭಕ್ತಿ ಹಾಡುಗಳು ಅಧಿಕ ಪ್ರಮಾಣದಲ್ಲಿವೆ. ಕಿತ್ತೂರು, ಸುರಪುರ, ನರಗುಂದ, ಮುಂಡರಗಿ, ಹಲಗಲಿ ಮೊದಲಾದ ಬಂಡಾಯಗಳನ್ನು ಕುರಿತು ನಿರ್ಮಾಣವಾದ ಜಾನಪದ ಸಾಹಿತ್ಯ ರಾಶಿ ಅಪಾರವಾದುದಾಗಿದೆ."[೨೧] ಇಲ್ಲಿ ಶಿಷ್ಟ ಸಾಹಿತ್ಯ ಹಾಗೂ ಜಾನಪದ ಸಾಹಿತ್ಯ ಈ ಎರಡನ್ನೂ ತೌಲನಿಕವಾಗಿ ಅಧ್ಯಯನಿಸಿರುವುದನ್ನು ಕಾಣುತ್ತೇವೆ. ಚಾರಿತ್ರಿಕ ಸಂಗತಿಗಳನ್ನು ಶಿಷ್ಟಸಾಹಿತಿಗಳು ದಾಖಲಿಸಲು ಹಿಂದೇಟು ಹಾಕಿದಾಗ ಜಾನಪದರು ನಿರ್ಭಿಡೆಯಿಂದ ಸ್ವಾತಂತ್ರ್ಯ ಕಹಳೆ ಮೊಳಗಿಸಿದ ಸಂಗತಿ ಇತಿಹಾಸದಲ್ಲಿ ದಾಖಲಾಗಿದೆ. ಈ ಚಾರಿತ್ರಿಕ ಅಂಶಗಳು ವಿಶ್ಲೇಷಣೆ ಮಾಡಿರುವುದು ಗಮನಾರ್ಹವಾಗಿದೆ.

**VIII. ೧೯ನೆಯ ಶತಮಾನದ ಎರಡು ದಾಖಲೆಗಳು :**

ಕರ್ನಾಟಕ ಇತಿಹಾಸ ಅಕಾಡೆಮಿ ಪ್ರಕಟಿಸುವ ವಾರ್ಷಿಕ ಸಂಚಿಕೆ ಇತಿಹಾಸ ದರ್ಶನದಲ್ಲಿ ಬೆಳಕು ಕಂಡಿರುವ ಲೇಖನವಿದು. ಬ್ರಿಟಿಷರ ಕಾಲದಲ್ಲಿ ರಾಜ್ಯಾಡಳಿತ ಆಯಾ ಪ್ರಾಂತೀಯ ಭಾಷೆಗಳಲ್ಲಿಯೇ

ನಿರ್ವಹಿಸುತ್ತಿದ್ದವು. ಕರ್ನಾಟಕದಲ್ಲಿ ಕನ್ನಡವನ್ನೇ ಆಡಳಿತ ಭಾಷೆಯನ್ನಾಗಿ ಮಾಡಿಕೊಂಡಿದ್ದರ ಅಂಶವನ್ನಿಲ್ಲಿ ಚರ್ಚಿಸಿದ್ದಾರೆ. ದಾಖಲೆ ಒಂದನ್ನು ಧಾರವಾಡ ಮ್ಯಾಜಿಸ್ಟ್ರೇಟರಾದ ಜಿ.ಎಸ್. ಎಂಡ ಸಾಹೇಬರು ೧೮೫೨ನೆಯ ಇಸ್ವಿಯಲ್ಲಿ ಪೊಲೀಸ ಸಿಬ್ಬಂದಿಯವರಿಗೆ ಹೊರಡಿಸಿದ ಆದೇಶ ಪತ್ರ ಕನ್ನಡದಲ್ಲಿದೆ. ೧೬ ಸಾಲಿನ ಈ ಜಹಗೀರು ನಾಮೆಯಲ್ಲಿ ಧಾರವಾಡ ಮಾಜಿಸ್ಟ್ರೇಟ್ ಮುದ್ರೆ ಕನ್ನಡದಲ್ಲಿರುವುದನ್ನು ಪ್ರಸ್ತಾಪಿಸಿದ್ದಾರೆ.

ದಾಖಲೆ ಎರಡರಲ್ಲಿ ಅಲಿಜಾ ಗವರ್ನರ ಸಾಹೇಬರು ಬಹದ್ದೂರ ಇನ್ ಕೌನ್ಸಿಲ್ ಅವರ ಹುಕುಮಿನ ಮೇರೆಗೆ ಎಕ್ಟಿಂಗ್ ಸೆಕ್ರೆಟರಿ ಜೆ. ನ್ಯೂಜೆಂಟ್ ಅವರು ಮುಂಬೈಯಿಂದ ೨೪ ಫೆಬ್ರುವರಿ ೧೯೩೦ರಂದು ಹೊರಡಿಸಿದ 'ಇಸ್ತಿಹಾರ' (ಪ್ರಕಟಣೆ) ಇದಾಗಿದೆ. ಇದರಲ್ಲಿ ೨೦ ಸಾಲುಗಳಿವೆ. ಈ ಆದೇಶದಲ್ಲಿರುವ ವಿಷಯವನ್ನು ಚರ್ಚಿಸಿ ಇದು ಕನ್ನಡ ಭಾಷೆಯಲ್ಲಿರುವುದನ್ನು ಚರ್ಚೆ ಮಾಡುತ್ತಾರೆ. ಅಂದಿನ ಕಾಲದ ಚಾರಿತ್ರಿಕ ಮಹತ್ವದ ಅಂಶಗಳನ್ನು ಈ ಲೇಖನದಲ್ಲಿ ವಿವರಿಸಿದ್ದಾರೆ. "ಇವೆರಡೂ ಪ್ರಾದೇಶಿಕ ಕನ್ನಡ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿದ್ದು ೧೯ನೇ ಶತಮಾನದ ಆಂಗ್ಲರ ಪ್ರಾದೇಶಿಕ ಆಡಳಿತ ಭಾಷೆ ಕನ್ನಡವಾಗಿದ್ದಿತೆಂಬುದನ್ನು ಸಮಕಾಲೀನ ಮಹತ್ವದ ಸಂಗತಿಗಳನ್ನು ತಿಳಿಸುವ ಅಪೂರ್ವ ದಾಖಲೆಗಳಾಗಿರುತ್ತವೆ."[೨೨] ಇದು ಚರಿತ್ರೆಗೆ ಸಂಬಂಧಿಸಿದ ಅಂಶಗಳನ್ನು ತಮ್ಮ ವಿಚಕ್ಷಣಾ ದೃಷ್ಟಿಯಿಂದ ಶೋಧಿಸಿ ಹೊಸ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಅನುಬಂಧದಲ್ಲಿ ಎರಡೂ ದಾಖಲೆಗಳ ಪೂರ್ಣ ಪಠ್ಯವನ್ನು ಒದಗಿಸಿದ್ದಾರೆ. ಇದು ಅವರ ಚಾರಿತ್ರಿಕ ಪ್ರಜ್ಞೆ, ಸಂಶೋಧನಾ ನಿಷ್ಠೆಗೆ ಸಾಕ್ಷಿಯಾಗಿದೆ.

**IX. ಸಾಂಸ್ಕೃತಿಕ ಕೇಂದ್ರಗಳಾಗಿ ವೀರಶೈವ ಮಠಗಳು :**

ಈ ಲೇಖನವು ಸುವರ್ಣಝರಿ ವಿಶೇಷಾಂಕದಲ್ಲಿ ಪ್ರಕಟಿತವಾಗಿದೆ. ೪ ಪುಟಗಳನ್ನೊಳಗೊಂಡ ಲೇಖನವಿದು. ಪ್ರಾಚೀನ ಕರ್ನಾಟಕದ ದೇವಾಲಯ ಪರಂಪರೆ ಮುಂದೆ ಮಠದ ಸಂಸ್ಕೃತಿಯಾಗಿ ರೂಪುಗೊಂಡಿರುವ ವಿವರಗಳಿವೆ. ದೇವಾಲಯ ಸಂಸ್ಕೃತಿ ಹಾಗೂ ಮಠ ಸಂಸ್ಕೃತಿಗಳ ಪರಸ್ಪರ ಸಾಮ್ಯ ಸಂಗತಿಗಳನ್ನು ಅವುಗಳ ಕಾರ್ಯ ವೈಖರಿಗಳನ್ನು ವಿವರಿಸಿದ್ದಾರೆ. ಶಾಸನಗಳಲ್ಲಿ ಪ್ರಸ್ತಾಪಿತವಾಗಿರುವ ವೀರಶೈವ ಮಠ ಸಂಸ್ಕೃತಿಯನ್ನು ಅಲ್ಲಲ್ಲಿ ಚರ್ಚೆಗೆ ಎತ್ತಿಕೊಂಡಿದ್ದಾರೆ. "ಪ್ರಾಚೀನ ಕರ್ನಾಟಕದ ಮಠಗಳು ವಿದ್ಯಾವಂತರ ನೆಲೆಗಳಾಗಿ, ತಪೋಧನರ ವಾಸಸ್ಥಾನಗಳಾಗಿ, ವಿದ್ಯಾದಾನದ ಜ್ಞಾನ ಮಂದಿರಗಳಾಗಿ, ಧರ್ಮ, ಕಲೆ-ಸಾಹಿತ್ಯ- ಸಂಸ್ಕೃತಿಗಳ ಆಗರಗಳೆನಿಸಿದ್ದವು. ಅಷ್ಟೇ ಅಲ್ಲ ಅಲ್ಲಿ ಜನಪರ, ಸಮಾಜಪರ ಕಾರ್ಯಗಳನ್ನು ಕೈಗೊಂಡು ಸಮಾಜಮುಖಿಯಾಗಿ ಬೆಳೆದವು"[೨೩] ಎಂಬ ಐತಿಹಾಸಿಕ ಸಂಗತಿಯನ್ನು ವಿವರಿಸಿದ್ದಾರೆ. ಇಂದಿನ ಮಠಗಳು ಪ್ರಾಚೀನ ಮಠ ಸಂಸ್ಕೃತಿಯ ಪರಂಪರೆಯನ್ನು ಅಳವಡಿಸಿಕೊಳ್ಳಬೇಕಾಗಿದೆ ಎಂಬ ಅಂಶದತ್ತ ಗಮನ ಸೆಳೆದಿದ್ದಾರೆ. ಇಂದಿನ ವೀರಶೈವ ಮಠಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಜನಕಲ್ಯಾಣ, ಲೋಕಕಲ್ಯಾಣ ಹಾಗೂ ಆತ್ಮ ಕಲ್ಯಾಣಗಳ ಸ್ಥಾನಗಳಾಗಿ

ನಿಂತಿರುವುದು ಸಮಾಜದ ಭಾಗ್ಯ. ನಾಡಿನ ಪುಣ್ಯ ವಿಶೇಷ ಎಂದಿರುವುದು ಗಮನಾರ್ಹವಾಗಿದೆ. ಈ ರೀತಿಯಾಗಿ ಒಂಬತ್ತು ಚಾರಿತ್ರಿಕ ಲೇಖನಗಳನ್ನು ಡಾ. ಬಿ.ಆರ್. ಅವರು ರಚಿಸಿರುವುದು ವೈವಿಧ್ಯಮಯ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ.

**೫.೨.೨ ಅರಸು ಮನೆತನಗಳು:**

ಡಾ. ಬಿ.ಆರ್. ಹಿರೇಮಠ ಅವರು ಅರಸುಮನೆತನಗಳಿಗೆ ಸಂಬಂಧಿಸಿದ ಲೇಖನಗಳನ್ನು ಬರೆದಿದ್ದಾರೆ. ವಿಜಯನಗರದ ಪ್ರೌಢದೇವರಾಯ, ಲಕ್ಕಣ ದಂಡೇಶ, ಕಳಚೂರಿ ಬಿಜ್ಜಳ, ಮಹಾನಾಡ ಪ್ರಭುಗಳು, ಬಿಜ್ಜಾವರದ ಪ್ರಭುಗಳು, ಇಮ್ಮಡಿ ಚಿಕ್ಕಭೂಪಾಲ, ಮುಮ್ಮಡಿ ಚಿಕ್ಕಪ್ಪ ದೊರೆ, ಹಾಗಲವಾಡಿ ಪ್ರಭುಗಳು, ಸೋದೆಯ ಸದಾಶಿವರಾಯ, ಗೋವೆಯ ಕದಂಬ ಮೂರನೆಯ ಗೋವಲದೇವ, ಬೀಳಗಿ ಅರಸು ಮನೆತನ, ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಮುಂತಾದ ಲೇಖನಗಳು ಪ್ರಮುಖವಾಗಿವೆ. ಇದರಲ್ಲಿ ಕಳಚೂರಿ ಬಿಜ್ಜಳನ ಶಿರೋಳ ಶಾಸನ, ಮಹಾನಾಡಪ್ರಭುಗಳು, ಏಳು ಬೆಟ್ಟದ ನಾಯಕರು, ಮಹಾನಾಡ ಪ್ರಭುಗಳು ಮತ್ತು ಮಹಾನಾಡ ಸೀಮೆ, ಬಿಜ್ಜಾವರ ಪ್ರಭುಗಳ ಆಶ್ರಿತ ಕವಿ ಶ್ರೀ ಮಲ್ಲಿಕಾರ್ಜುನನ ಕೃತಿಗಳು, ಬಿಜ್ಜಾವರದ ಮುಮ್ಮಡಿ ಚಿಕ್ಕಪ್ಪ ದೊರೆಗಳ ಸೂತಕಾದಿಗಳಿಗೆ ಒಳಗಾದ ಜನರು, ಹಾಗಲವಾಡಿ ರಾಜಾಶ್ರಯದ ಶಿವಯೋಗಿ ಸೋಸಲೆ ರೇವಣಾರಾಧ್ಯರು ಮತ್ತು ಅವರ ಕೃತಿಗಳು, ಸದಾಶಿವ ನೀತಿ ; ಒಂದು ವಿವೇಚನೆ ಮುಂತಾದ ಲೇಖನಗಳನ್ನು ಇಲ್ಲಿ ಪರಿಶೀಲಿಸಲಾಗುವುದು.

**I. ಕಳಚೂರಿ ಬಿಜ್ಜಳನ ಶಿರೋಳ ಶಾಸನವು :**

ಇದು ಕಳಚೂರಿ ಅರಸು ಮನೆತನದ ಪ್ರಮುಖ ಶಾಸನವಾಗಿದೆ. ಇದು 'ಸಾಧನೆ' ಯ ಸಂಪುಟ -೧೪; ಸಂಚಿಕೆ -೦೪ (ಅಕ್ಟೋಬರ-ಡಿಸೆಂಬರ್-೧೯೮೫)ರಲ್ಲಿ ಪ್ರಕಟವಾಗಿದೆ. "ಬಿಜ್ಜಳನು ತಾನು ಮಹಾಮಂಡಲೇಶ್ವರನಾಗಿದ್ದಾಗ (ಕ್ರಿ.ಶ. ೧೧೩೪) ತಾನೇ ಚಕ್ರವರ್ತಿ ಎಂದು ಸಾರಿಕೊಂಡ ಸಂಗತಿ ಇದೆ. 'ಸ್ವಸ್ತಿ ಸಮಸ್ತ ಭುವನಾ ಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾದ ಕಾಳಾಂಜರಪುರವರಾಧೀಶ್ವರ ಸುವರ್ಣ ವೃಷಭ ಧ್ವಜ ಡಮರುಗ ತೂರ್ಯ್ಯ ನಿರ್ಘೋಷಣ ಕದನ ಪ್ರಚಂಡ ಸುಭಟರಾದಿತ್ಯ ಕಲಿಗಳಂಕುಶ ಚಲದಂಕರಾಮ ಸಾಹಸೋತ್ತುಂಗ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತು ಕಳಚುರ್ಯ್ಯ ಚಕ್ರವರ್ತಿ ವೀರ ಬಿಜ್ಜಳದೇವ' ಎಂಬ ಗದ್ಯದಿಂದ ಸ್ಪಷ್ಟವಾಗುತ್ತದೆ. ಇದು ಬಿಜ್ಜಳನ ಆರಂಭದ ರಾಜಕೀಯ ಮಹತ್ವಾಕಾಂಕ್ಷೆಯನ್ನು ಎತ್ತಿ ಹೇಳುವ ಮಹತ್ವದ ದಾಖಲೆಯಾಗಿದೆ"[೨೪] ಎಂಬ ಮಹತ್ವದ ಅಂಶವನ್ನು ಬಿ.ಆರ್. ಹಿರೇಮಠ ಅವರು ಪ್ರಥಮ ಬಾರಿಗೆ ತಿಳಿಸಿದ್ದಾರೆ.

## II. ಮಹಾನಾಡ ಪ್ರಭುಗಳು :

ಬಿ. ಆರ್. ಹಿರೇಮಠ ಅವರು ಮಹಾನಾಡ ಪ್ರಭುಗಳ ಕುರಿತಾಗಿ ವಿಶೇಷವಾದ ಅಧ್ಯಯನವನ್ನು ಕೈಗೊಂಡಿದ್ದಾರೆ. ಆದ್ದರಿಂದ ಮಹಾನಾಡ ಪ್ರಭುಗಳು, ಮಹಾನಾಡ ಪ್ರಭುಗಳು ದ್ರವ್ಯ ಭೂಸ್ಥಾಪನೆ ಮತ್ತು ಬಲಿ, ಮಹಾನಾಡ ಪ್ರಭುಗಳು ಏಳು ಬೆಟ್ಟದ ನಾಯಕರು, ಮಹಾನಾಡ ಪ್ರಭುಗಳು ಮತ್ತು ಮಹಾನಾಡಿನ ಸೀಮೆ ಈ ನಾಲ್ಕು ಲೇಖನಗಳು ಮಹಾನಾಡ ಪ್ರಭುಗಳು ಅರಸು ಮನೆತನಕ್ಕೆ ಸಂಬಂಧಿಸಿದವುಗಳಾಗಿವೆ. ಆರಂಭದಲ್ಲಿ ಮಹಾನಾಡ ಪ್ರಭುಗಳನ್ನು ಪರಿಚಯಿಸಿದ್ದಾರೆ. "ವಿಜಯನಗರ ಅರಸರ ಪಾಳೆಯಗಾರರಾಗಿ ಆಳಿದವರು ಮಹಾನಾಡ ಪ್ರಭುಗಳು ಮುಮ್ಮಡಿ ಪಟ್ಟಣ, ಬಿಜ್ಜಾವರ ಮಧುಗಿರಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ರಾಜ್ಯಭಾರ ನಡೆಸಿದ ವೀರಶೈವ ಅರಸು ಮನೆತನವಿದು. ಕರ್ನಾಟಕದ ವೀರಶೈವ ಅರಸು ಮನೆತನಗಳಲ್ಲಿ ಇದು ಅತ್ಯಂತ ಮಹತ್ವ ಪೂರ್ಣವೂ ಅಭ್ಯಾಸ ಯೋಗ್ಯವೂ ಆಗಿದೆ. ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿ, ಬೋಳಬಸವೇಶ್ವರರು, ಈ ಮನೆತನದ ರಾಜಗುರುಗಳಾಗಿದ್ದರು. ಹೀಗೆ ರಾಜಶಕ್ತಿ ಹಾಗೂ ಧರ್ಮಶಕ್ತಿಗಳ ಅಪೂರ್ವ ಸಂಗಮವನ್ನು ಮೈಗೂಡಿಸಿಕೊಂಡು ಬಂದ ಅರಸು ಮನೆತನ ಮಹಾನಾಡ ಪ್ರಭುಗಳದು"[೨೫] ಎಂದು ಈ ಅರಸುಮನೆತನವನ್ನು ಪರಿಚಯಿಸಿದ್ದಾರೆ. ಮುಂದೆ ಮಹಾನಾಡ ಪ್ರಭುಗಳಿಗೆ ಸಂಬಂಧಿಸಿದ ವಿಷಯವನ್ನುಳ್ಳ ಹಸ್ತಪ್ರತಿಗಳನ್ನು ಸಂಶೋಧಿಸಿ ಅದರಲ್ಲಿರುವ ವಿವರಗಳನ್ನು ದಾಖಲುಗೊಳಿಸಿದ್ದಾರೆ. ಮಹಾನಾಡ ಪ್ರಭುಗಳು ದ್ರವ್ಯ ಭೂಸ್ಥಾಪನೆ ಮತ್ತು ಬಲಿಯ ಕುರಿತಾಗಿ ಅದರ ಮುಂದಿನ ಲೇಖನದಲ್ಲಿ ವಿಸ್ತೃತವಾಗಿ ಚರ್ಚಿಸಿದ್ದಾರೆ. ಈ ಲೇಖನವೂ ಕೂಡಾ ಹೇಮಕೂಟದಲ್ಲಿ ಪ್ರಕಟಿತವಾಗಿದೆ. ಈ ಹಸ್ತಪ್ರತಿಯಲ್ಲಿರುವ ದ್ರವ್ಯ ಭೂಸ್ಥಾಪನೆ ಮತ್ತು ಬಲಿ ಶಬ್ದಗಳಿಗೆ ಅರ್ಥವನ್ನು ತಿಳಿಯಲು ಜಿ.ಎಂ. ಉಮಾಶಾಸ್ತ್ರಿಯವರಿಗೆ ಪ್ರಶ್ನಿಸಿದ್ದಾರೆ. ಅದಕ್ಕೆ ಅವರಿಂದ ಬಂದ ಉತ್ತರ ಅಳವಡಿಸಿಕೊಂಡು ಲೇಖನ ಕಟ್ಟಿಕೊಟ್ಟಿದ್ದಾರೆ. ಡಾ. ಬಿ.ಆರ್. ಅವರು ಬರೆದ ಪತ್ರ ಅದಕ್ಕೆ ಶಾಸ್ತ್ರಿಯವರು ಬರೆದ ಉತ್ತರ ಎರಡೂ ಈ ಲೇಖನದಲ್ಲಿವೆ. ತಮಗೆ ಗೊತ್ತಿಲ್ಲದ ಸಂಗತಿಗಳ ಕುರಿತಾಗಿ ವಿದ್ವಾಂಸರೊಂದಿಗೆ ಪತ್ರಿಸಿ, ಚರ್ಚಿಸಿ ವಿಷಯ ಸ್ಪಷ್ಟಗೊಳಿಸುತ್ತಿದ್ದಾರೆಂಬುದಕ್ಕೆ ಈ ಲೇಖನ ನಿದರ್ಶನವಾಗಿದೆ. ಮಹಾನಾಡ ಪ್ರಭುಗಳು ಮತ್ತು ಏಳು ಬೆಟ್ಟದ ನಾಯಕರು ಮತ್ತೊಂದು ಲೇಖನ ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಶಂಬೋನ ಹಳ್ಳಿಯಲ್ಲಿ ಮಹಾನಾಡ ಪ್ರಭುಗಳ ವಂಶಸ್ಥರಿದ್ದಾರೆ. ಇವರ ಮನೆಯಲ್ಲಿ ಹಲವಾರು ದಾಖಲೆಗಳಿವೆ. ಮಹಾನಾಡ ಪ್ರಭುಗಳಿಗೆ ಸಂಬಂಧಿಸಿದ ದಾಖಲೆಗಳಲ್ಲಿ ಇದೂ ಒಂದಾಗಿದೆ. ಅರಸು ಮನೆತನದವರ ಮನೆಯಲ್ಲೆ ದೊರೆತ ದಾಖಲೆಗೆ ಚಾರಿತ್ರಿಕ ಮಹತ್ವವಿದೆ ಎಂದು ವಿವರಿಸುತ್ತ ಮುಂದೆ ಮಿಡಿಗೇಶಿ ದುರ್ಗದ ಮುಖ್ಯ ನಾಯಕರು ವೀರಣ್ಣನ ಬೆಟ್ಟದ ನಾಯಕರು, ಬೆನಕನ ಬೆಟ್ಟದ ನಾಯಕರು, ಬೆಟದೂರು ನಾಯಕರು, ಹೊಸಬೆಟ್ಟದ ನಾಯ್ಕರು, ಅವರುಗಲ್ಲು ಬೆಟ್ಟದ ನಾಯಕರು, ಸಿದ್ಧಗಿರಿ ಬೆಟ್ಟದ ನಾಯಕರು ಮುಂತಾಗಿ ಏಳು ಉಪಶಿರ್ಷಿಕೆಗಳ ಅಡಿಯಲ್ಲಿ ಏಳು ನಾಯಕರ

ಪ್ರಮುಖರು ಅವರ ಸ್ಥಳಗಳು ಅವರ ವಿಶೇಷತೆಗಳನ್ನು ಚಾರಿತ್ರಿಕ ಸಂಗತಿಗಳನ್ನು ಕಟ್ಟಿಕೊಟ್ಟಿದ್ದಾರೆ. ಡಾ. ಬಿ.ಆರ್. ಹಿರೇಮಠ ಅವರು ಅರಸುಮನೆತನಗಳ ಕುರಿತಾಗಿ ಆಳವಾಗಿ ಅಧ್ಯಯನ ಕೈಗೊಳ್ಳುವಾಗ ಅಭ್ಯಾಸಕ್ಕನುಕೂಲವಾಗಿ ಹೇಗೆ ವಿಷಯವನ್ನು ವಿಂಗಡಿಸಿಕೊಳ್ಳುತ್ತಿದ್ದರೆಂಬುದಕ್ಕೆ ಪ್ರಸ್ತುತ ಲೇಖನ ಸಾಕ್ಷಿಯನ್ನು ಒದಗಿಸುತ್ತದೆ. ಮಹಾನಾಡ ಪ್ರಭುಗಳು ಮತ್ತು ಮಹಾನಾಡಿನ ಸೀಮೆ ಈ ಅರಸು ಮನೆತನಕ್ಕೆ ಸಂಬಂಧಿಸಿದ ಮತ್ತೊಂದು ಮಹತ್ವದ ಲೇಖನವಾಗಿದೆ. ಇದರಲ್ಲಿ ಮಹಾನಾಡ ಪ್ರಭುಗಳ ಸಮಕಾಲೀನರ ಹೆಸರು, ಸಮಕಾಲೀನ ಪಾಳೆಗಾರರು ಇವರ ರಾಜಧಾನಿಗಳು ಮೊದಲಾದ ಅಂಶಗಳ ಪರಿಚಯವಿದೆ. ಕೆಳದಿ, ಹಾಗಲವಾಡಿ, ಕೊಡಗು, ಕಿತ್ತೂರು, ಪುಂಗನೂರು, ಬೆಳವಡಿ, ಬೀಳಗಿ, ಸ್ವಾದಿ, ಒಂಟಮೂರಿ ಮೊದಲಾದ ವೀರಶೈವ ಪಾಳೆಗಾರರ ಜೊತೆಗೆ ಮಹಾನಾಡ ಪ್ರಭುಗಳು ಕರ್ನಾಟಕದ ಪ್ರಮುಖ ವೀರಶೈವ ಪಾಳೆಗಾರರಾಗಿದ್ದಾರೆ. ಮುಂದೆ ವೀರಶೈವ ಸಾಮ್ರಾಜ್ಯ ಮತ್ತು ಮಹಾನಾಡ ಪ್ರಭುಗಳಿಗಿರುವ ಸಂಬಂಧಗಳು, ಶ್ರೀ ಕೃಷ್ಣದೇವರಾಯನ ಕಾಲಕ್ಕಿದ್ದ ಮಹಾನಾಡ ಪ್ರಭುಗಳ ರಾಜ್ಯದ ನಿರ್ಧಿಷ್ಟವಾದ ವಿಸ್ತಾರ ಮೊದಲಾದ ಅಂಶಗಳನ್ನು ಶಾಸನಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಅದೂ ಅಲ್ಲದೆ ಮಹಾನಾಡ ಪ್ರಭುಗಳ ಆಳ್ವಿಕೆಗೆ ಸಂಬಂಧಿಸಿದ ೪೭ ಶಾಸನಗಳನ್ನು ಆಧಾರವಾಗಿ ಕೊಟ್ಟು ಮಹಾನಾಡ ಪ್ರಭುಗಳ ಮಹಾನಾಡಿನ ಸೀಮೆಯನ್ನು ನಿರ್ಧಿಷ್ಟವಾಗಿ ಗುರುತಿಸಿದ್ದಾರೆ. ಮಧುಗಿರಿ ತಾಲೂಕಿನ ಶಂಭೋನಹಳ್ಳಿಯಲ್ಲಿರುವ ಮಹಾನಾಡ ಪ್ರಭುಗಳ ವಂಶಸ್ಥರಾದ ದೊಡ್ಡಣ್ಣಪ್ಪಾಜಿಯವರ ವಶದಲ್ಲಿರುವ ಕಾಗದ ಪತ್ರದ ಅಧ್ಯಯನ ಮತ್ತು ಪರಿಶೀಲನೆಯಿಂದ ಮೇಲಿನ ವಿಷಯಕ್ಕೆ ಪುಷ್ಠಿ ಒದಗಿಸಿದ್ದಾರೆ.

**III. ಬಿಜ್ಜಾವರ ಪ್ರಭುಗಳ ಆಶ್ರಿತ ಕವಿ ಮಲ್ಲಿಕಾರ್ಜುನನ ಕೃತಿಗಳು :**

ಡಾ. ಬಿ.ಆರ್. ಅವರ ಅರಸುಮನೆತನಕ್ಕೆ ಸಂಬಂಧಿಸಿದ ಮತ್ತೊಂದು ಲೇಖನವಾಗಿದೆ. ಬಿಜ್ಜಾವರ ಪ್ರಭುಗಳು ವೀರಶೈವ ಅರಸುಮನೆತನಗಳಲ್ಲಿ ಒಂದಾಗಿದೆ. ಬಿಜ್ಜಾವರ ಪ್ರಭುಗಳು ರಾಜಕೀಯ ಸಾಮ್ರಾಜ್ಯವನ್ನು ನಡೆಸದೆ, ಧರ್ಮಸಾಮ್ರಾಜ್ಯವನ್ನು, ಸಾಹಿತ್ಯ ಸಾಮ್ರಾಜ್ಯವನ್ನು ನಿರ್ಮಿಸಿದ್ದರು. ಬಿಜ್ಜಾವರ ಪ್ರಭುಗಳಲ್ಲಿ ರಾಜಶಕ್ತಿ, ಧರ್ಮ ರಕ್ಷೆ, ಸಾಹಿತ್ಯ ಸೃಷ್ಟಿ ಈ ಮೂರು ಸಂಗಮ ಗೊಂಡಿದ್ದವು. ಈ ಬಿಜ್ಜಾವರ ಮಹಾನಾಡ ಪ್ರಭುಗಳ (ಕ್ರಿ.ಶ. ೧೬೫೦) ರಾಜಾಶ್ರಯದಲ್ಲಿ ಕವಿಯಾಗಿದ್ದ ಮಲ್ಲಿಕಾರ್ಜುನನಿಗೆ ಇಮ್ಮಡಿ ಚಿಕ್ಕಭೂಪಾಲ ತೋಂಟದರಾಯ ಹಾಗೂ ಸಪ್ಪೇಂದ್ರರ ರಾಜಾಶ್ರಯ ದೊರೆತಿತ್ತು. ಶಿವಾನುಭವಿಯೂ, ಶಿವಕವಿಯೂ ಆದ ಮಲ್ಲಿಕಾರ್ಜುನನಿಗೆ ಮಹಾನಾಡ ಪ್ರಭುಗಳ ಪ್ರೀತಿ ಗೌರವಗಳು ಲಭಿಸಿದ್ದವು. ಮಲ್ಲಿಕಾರ್ಜುನ ರಾಜಾಶ್ರಯದ ಕವಿಯಾಗಿ ಬಿಜ್ಜಾವರದ ಮಧುಗಿರಿಗಳಲ್ಲಿ ವಾಸವಾಗಿದ್ದ, ಈ ಕವಿ ಕನ್ನಡ ಸಂಸ್ಕೃತ ಉಭಯ ಭಾಷೆಗಳಲ್ಲಿಯೂ ಪಾಂಡಿತ್ಯ ಪಡೆದವನಾಗಿದ್ದ ಈತ ಬಸವಾದಿ ಶಿವಶರಣರ ಸಮಗ್ರ ವಚನವಾಙ್ಮಯವನ್ನು ಹರಿಹರ, ರಾಘವಾಂಕ,

ಭೀಮಕವಿ, ವಿರುಪಾಕ್ಷ ಪಂಡಿತ, ಚಾಮರಸ ಮುಂತಾದ ವೀರಶೈವ ಕವಿಗಳ ಸಾಹಿತ್ಯವನ್ನು ಹಾಗೂ ತೋಂಟದ ಸಿದ್ಧಲಿಂಗೇಶ್ವರಾದಿ ವಿರಕ್ತರ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದನ್ನು ವಿವರಿಸುತ್ತಾರೆ. "ಧಾರ್ಮಿಕ ಮನೋಭಾವದ ಈ ಕವಿಯ ಕೃತಿಗಳಲ್ಲಿ ಧರ್ಮ ಹಾಗೂ ಕಾವ್ಯ ಧರ್ಮಗಳ ಸುಂದರ ಸಮನ್ವಯವಿದೆ."[೨೬] ಮಲ್ಲಿಕಾರ್ಜುನನ ಕವಿಕೃತ ಸಾಹಿತ್ಯ ಬಹುಪಾಲು ಅಪ್ರಕಟಿತ ರೂಪದಲ್ಲಿಯೇ ಇವೆ. ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಒಂದೇ ಈತನ ಪ್ರಕಟಿತ ಕೃತಿಯಾಗಿದೆ. ಡಾ. ಬಿ. ಆರ್. ಹಿರೇಮಠರು ಅಪ್ರಕಟಿತ ಕೃತಿಗಳನ್ನು ಬದಿಗಿರಿಸಿ ಪ್ರಕಟವಾಗಿರುವ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದ ಕುರಿತಾಗಿ ಸುದೀರ್ಘವಾಗಿ ವಿವೇಚನೆ ಮಾಡಿದ್ದಾರೆ. ೧೫ ಪುಟಗಳ ವ್ಯಾಪ್ತಿಯನ್ನೊಳಗೊಂಡ ಲೇಖನವಿದು. ಚಿಕ್ಕ ಭೂಪಾಲ ಸಾಂಗತ್ಯದ ಕವಿ ಕಾವ್ಯ ವಿಚಾರ, ಸಾಹಿತ್ಯ ಸಾಂಸ್ಕೃತಿಕ ಸಂಗತಿಗಳನ್ನು ಅರ್ಥಪೂರ್ಣವಾಗಿ ಚರ್ಚಿಸಿದ್ದಾರೆ.

"ಮಹಾನಾಡ ಪ್ರಭುಗಳ ಆಶ್ರಯದಲ್ಲಿ ಸೃಜನ ಮತ್ತು ವ್ಯಾಖ್ಯಾನ ಸಾಹಿತ್ಯ ಮಾತ್ರ ಸೃಷ್ಟಿಯಾಗಿರುವುದು ಗೊತ್ತಾಗುತ್ತದೆ. ಈ ಅರಸು ಮನೆತನದ ಆಶ್ರಯದಲ್ಲಿ ಸ್ವರ ವಚನ ಸಾಹಿತ್ಯ, (ಸಂಸ್ಕೃತ). ಅನುವಾದ ಸಾಹಿತ್ಯ, ಸಂಸ್ಕೃತ ಕಾವ್ಯ-ಶಾಸ್ತ್ರ-ಧರ್ಮ ಗ್ರಂಥಗಳ ಸಂಗ್ರಹ ಸಂಕಲನ ಸಾಹಿತ್ಯ ರಚನೆಯಾಗಿರುವ ಸಾಧ್ಯತೆಯಿದೆ. ಅನುಪಲಬ್ಧವಾದ ಈ ಸಾಹಿತ್ಯ ರಾಶಿಯ ಅನ್ವೇಷಣಕಾರ್ಯ ಇನ್ನೂ ನಡೆಯಬೇಕಾಗಿದೆ. ಶರಣ ಸಂಸ್ಕೃತಿ, ಶರಣಧರ್ಮದ ಅನುಯಾಯಿಗಳಾದ ವೀರಶೈವ ಅರಸು ಮನೆತನಗಳ ಆಶ್ರಯದಲ್ಲಿ ವಚನ ಸಂಕಲನ ಸಂಗ್ರಹ, ವಚನ ರಚನೆಯಂಥ ಕಾರ್ಯಗಳು ನಡೆಯದಿರುವುದು ಅಚ್ಚರಿಯನ್ನುಂಟು ಮಾಡುತ್ತದೆ."[೨೭] ಈ ಮಾತುಗಳಿಂದ ಮಹಾನಾಡ ಪ್ರಭುಗಳ ಕಾಲದ ಸಾಹಿತ್ಯದ ಜಿಜ್ಞಾಸೆ ಮಾಡಿರುವುದನ್ನು ಕಾಣುತ್ತೇವೆ. ಈ ಲೇಖನವು ತಿಪಟೂರಿನ ನೊಳಂಬ ವೀರಶೈವ ಸಂಗದ ಆಶ್ರಯದಲ್ಲಿ ೧೬-೧೭ ಅಕ್ಟೋಬರ ೧೯೯೪ರಲ್ಲಿ ಜರುಗಿದ ಮಹಾನಾಡು ವೀರಶೈವ ಅರಸುಮನೆತನ ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವಾಗಿದೆ.

**IV.ಬಿಜ್ಜಾವರದ ಮುಮ್ಮಡಿ ಚಿಕ್ಕಪ್ಪ ದೊರೆಗಳ ಸೂತಕಾದಿಗಳಿಗೆ ಒಳಗಾದ ಜನರು :**

ಇದು ಬಿಜ್ಜಾವರದ ಮುಮ್ಮಡಿ ಚಿಕ್ಕಪ್ಪ ದೊರೆಗಳಿಗೆ ಸಂಬಂಧಪಟ್ಟ ಲೇಖನವಾಗಿದೆ. ಅರಸು ಮನೆತನಗಳು ವಿಷಯದಲ್ಲಿಯೇ ಅತ್ಯಂತ ಕಿರಿದಾದ ಲೇಖನವಾಗಿದೆ. ಕೇವಲ ಎರಡು ಪ್ಯಾರಾ ಒಳಗೊಂಡಿದೆ.

ಬಿಜ್ಜಾವರ ಮುಮ್ಮಡಿ ಚಿಕ್ಕಪ್ಪ ದೊರೆಗಳ ಸೂತಕಾದಿಗಳಿಗೆ ಒಳಗಾದ ಮನೆತನಗಳ ಪಟ್ಟಿಯನ್ನು ನೀಡುತ್ತಾರೆ. ಅದು ಹೀಗಿದೆ. 'ಗೌಡುಗಳು - ಗುಂಡುಕಲ್ಲು, ಬೆಳನೂರು ಒಕ್ಕಲಿಗರು, ಅರಿವೆ ಗೌಡ, ತುಂಗೋಟಿ ವಳಿತದ ಒಕ್ಕಲಿಗರು, ದಾಸೇಗೌಡ ಹರಿವೇಗೌಡ, ಬಿಜ್ಜಾವರ ಕಲ್ಲಿಕೆರೆ ಹುರಳಿ ಒಕ್ಕಲಿಗರು ಮುದೇಗೌಡ ತೋವಿನಕೆರೆ ಗೌಡಸಾನಿ ದ್ಯಾಮಮ್ಮ, ಹಳ್ಳಿಗರು ಸೂರೇನ ಹಳ್ಳಿ ಮೂಡಲಗಿರೇಗೌಡ

ಸೂರೆ ಕುಂಚಟಿಗರು."[೨೮] ಇದು ಅಲ್ಲದೆ ಉಳಿಗಕ್ಕೆ ಒಳಗಾದ ಜನಾಂಗದ ಯಾದಿಯನ್ನು ಸಹ ನೀಡುತ್ತಾರೆ. ಅದು ಹೀಗಿದೆ. "ಚೆಂಬಿನ ಶೀಲಿದ್ದವುದೂಡಿ ಬಣಜಿಗರು, ಕೆರೆಹಳ್ಳಿಕರರು, ಜೋಗಿಹಳ್ಳಿಕರರು, ತೆಲುಗರು, ಪಾವಡದವರು, ಉಗ್ರ ಎಂಟು ಪಾವಡದವರು, ತುಂಗೋಟಿಯೂರತಿಮ್ಮ, ಚಿಕ್ಕತಿಮ್ಮ, ಕಾಳಮುದ್ದ, ಕೊಲ್ಲಾರಿ ಅಗರಸ ಗೊರವಮಲ್ಲ"[೨೯] ಇವರು ಬಿಜ್ಜಾವರದ ಮುಮ್ಮಡಿ ಚಿಕ್ಕಪ್ಪದೊರೆಗಳಿಗೆ ಈ ಮೇಲೆ ಉಲ್ಲೇಖಿಸಿದ ಮನೆತನಗಳು ಸೂತಕಾದಿಗಳಿಗೆ ಒಳಗಾದವರು, ಸೂತಕಾದಿಗಳಿಗೆ ಒಳಗಾದ ಊಳಿಗದವರಾಗಿದ್ದಾರೆ ಎಂಬುದು ತಿಳಿದುಬರುತ್ತದೆ. ಈ ಕಿರು ಲೇಖನವನ್ನು ಶಂಭೋನಹಳ್ಳಿಯ ಕಾಗದ ಕೃತಿಯಿಂದ ೧೬-೦೩-೧೯೪೯ರಲ್ಲಿ ನಕಲಿಸಿಕೊಂಡ ಹಸ್ತಪ್ರತಿ ಆಧಾರದ ಮೇಲಿಂದ ಡಾ. ಬಿ. ಆರ್. ಅವರು ಕಟ್ಟಿಕೊಟ್ಟಿದ್ದಾರೆ. ಈ ಕಿರುಲೇಖನವು ೧೯೬೭ರ ಕರ್ನಾಟಕ ಭಾರತಿ (ಸಂ.೨೩ ಸಂಚಿಕೆ -೩) ಯಲ್ಲಿ ಪ್ರಕಟವಾಗಿದೆ. (ಪುಟ -೬೨) ಲೇಖನದಿಂದ ಡಾ. ಬಿ.ಆರ್. ಹಿರೇಮಠ ಅವರು ಎಂತಹ ಚಿಕ್ಕ ಚಿಕ್ಕ ವಿಷಯಗಳ ಕುರಿತಾಗಿಯೇ ಗಮನಹರಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

**V. ಹಾಗಲವಾಡಿ ರಾಜಾಶ್ರಯದ ಶಿವಯೋಗಿ ಸೋಸಲೆ ರೇವಣಾರಾಧ್ಯರು :**

ಕರ್ನಾಟಕದ ವೀರಶೈವ ಅರಸು ಮನೆತನಗಳಲ್ಲಿ ಸ್ವಾದಿ, ಕೆಳದಿ, ಕಿತ್ತೂರುಗಳಷ್ಟೇ ಪ್ರಮುಖವಾದದ್ದು ಹಾಗಲವಾಡಿ. ಇಂಥ ಪ್ರಮುಖ ವೀರಶೈವ ಅರಸು ಮನೆತನ ಕುರಿತಾಗಿ ಸಮಗ್ರವಾಗಿ ಅಧ್ಯಯನ ನಡೆದೇ ಇರಲಿಲ್ಲ. ಡಾ. ಬಿ.ಆರ್. ಅವರು ಪ್ರಪ್ರಥಮಬಾರಿಗೆ ಈ ಅರಸು ಮನೆತನದ ಕುರಿತಾಗಿ ತಲಸ್ಪರ್ಶಿಯಾದ ಅಧ್ಯಯನ ಕೈಗೊಂಡಿದ್ದಾರೆ. ಅದರ ಫಲಿತವೇ ಪ್ರಸ್ತುತ ಲೇಖನವಾಗಿದೆ. "ಹಾಗಲವಾಡಿ ಅರಸರು ಕನ್ನಡ ಸಂಸ್ಕೃತ ಉಭಯ ಭಾಷೆ, ಸಾಹಿತ್ಯಗಳಿಗೂ ರಾಜಾಶ್ರಯ ನೀಡಿದವರು. ಈ ಅರಸು ಮನೆತನದ ದೊರೆಗಳು ವಿದ್ಯಾ ಪಕ್ಷಪಾತಿಗಳೂ, ಕಾವ್ಯ ಪೋಷಕರೂ, ಧರ್ಮ ಪ್ರಸಾರಕರೂ, ಅನುಭಾವಿಗಳೂ, ದಾರ್ಶನಿಕರು, ರಾಜರ್ಷಿಗಳೂ, ಸ್ವತಃ ಕವಿಗಳೂ ಆಗಿದ್ದರು. ಹೀಗಾಗಿ ಅವರ ಆಶ್ರಯದಲ್ಲಿ ಧಾರ್ಮಿಕ, ತಾತ್ವಿಕ, ಭಕ್ತಿಪರ, ಸ್ತುತಿಪರ ಸಾಹಿತ್ಯ ಸೃಷ್ಟಿಯಾಯಿತು. ಆಚಾರ್ಯ ಪರಂಪರೆಯ ಗುರು ವರ್ಗದ ಮಾರ್ಗದರ್ಶನದಲ್ಲಿ ವೀರಶೈವ ಧಾರ್ಮಿಕ ಸೈದ್ಧಾಂತಿಕ ಸಂಯೋಜನ ಹಾಗೂ ವ್ಯಾಖ್ಯಾನ ಸಾಹಿತ್ಯ ರಚನೆಯಾಯಿತು."[೩೦] ಈ ರೀತಿ ಹಾಗಲವಾಡಿ ಅರಸು ಮನೆತನ ಪರಿಚಯಿಸಿ ಅವರ ಸಾಹಿತ್ಯ ಸಂಸ್ಕೃತಿ ಪೋಷಣೆಯನ್ನು ವಿವರಿಸಿದ್ದಾರೆ. ಈ ಎಲ್ಲ ಚಟುವಟಿಕೆಗಳ ಪ್ರಸಾರದ ಪ್ರಧಾನ ಕೇಂದ್ರವಾಯಿತು. ವೀರಶೈವರಿಗೆ ಪ್ರಮುಖ ಆಶ್ರಯ ತಾಣವೂ ಆಗಿ ಪರಿಣಮಿಸಿತು. ಗುಬ್ಬಿ, ಎಡೆಯೂರು, ಗುಳೂರು, ಗುಮ್ಮಳಾಪುರ, ಸ್ವಾದಿ, ಕೆಳದಿಗಳ ತರುವಾಯ ವೀರಶೈವ ಪರಂಪರೆಯನ್ನು ಮುಂದುವರೆಸಿದ ಶ್ರೇಯಸ್ಸು ಹಾಗಲವಾಡಿ ಅರಸು ಮನೆತನಕ್ಕೆ ಸಲ್ಲುತ್ತದೆ ಎಂಬುದನ್ನು ಸೋದಾಹರಣವಾಗಿ ನಿರೂಪಿಸಿದ್ದಾರೆ. ಈ ಹಾಗಲವಾಡಿ ಅರಸುಮನೆತನದ ಆಶ್ರಯದಲ್ಲಿದ್ದು

ವೀರಶೈವ ಸಾಹಿತ್ಯ ರಚಿಸಿದವರಲ್ಲಿ ಸೋಸಲೆ ರೇವಣಾರಾಧ್ಯರು ಪ್ರಮುಖರಾಗಿದ್ದಾರೆ. ಶಿವಯೋಗಿ ರೇವಣಾರಾಧ್ಯರ ವಂಶಾವಳಿ, ಮನೆತನ ಹಿನ್ನೆಲೆ, ಅವರ ಸಾಹಿತ್ಯ ಮೊದಲಾದ ವಿಷಯಗಳನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

"ಶಿವಯೋಗಿ ಸೋಸಲೆ ರೇವಣಾರಾಧ್ಯರು ಹಾಗಲವಾಡಿ ಪಾಳೆಗಾರರ ಧರ್ಮ ಗುರುಗಳು, ರಾಜಗುರುಗಳಾಗಿದ್ದು ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರಗಳಿಗೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಶಿವಯೋಗಿ, ಶಿವಾನುಭವಿ, ಶಿವಕವಿ, ವ್ಯಾಖ್ಯಾನಕಾರ, ಸಂಯೋಜಕರಾಗಿ ವೀರಶೈವ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ"[೩೧] ಎಂದು ರೇವಣಾಧ್ಯರ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಅವರ ಉಪಲಬ್ಧ ಅಪ್ರಕಟಿತ ಸಾಹಿತ್ಯವೆಲ್ಲಾ ಬೇಗನೇ ಪ್ರಕಟಗೊಳ್ಳುವಂತಾಗಬೇಕು, ಅನುಪಲಬ್ಧ ಕೃತಿಗಳ ಶೋಧಕಾರ್ಯ ನಡೆಯುವಂತಾಗಬೇಕು. ಹೊಸ ಕೃತಿಗಳ ಶೋಧಕಾರ್ಯ ನಡೆಯುವಂತಾಗಬೇಕು. ಹೊಸ ಕೃತಿಗಳ ಅನ್ವೇಷಣಾ ಕಾರ್ಯ ಮುಂದುವರಿಯಬೇಕು. "ಹಾಗಲವಾಡಿ ಮತ್ತು ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಕೈಗೊಳ್ಳುವ ಸಮಗ್ರ ಕ್ಷೇತ್ರಕಾರ್ಯದಿಂದ ರೇವಣಾರಾಧ್ಯರ ಅರಮನೆ, ಗುರುಮನೆಗಳ ಸಂಬಂಧ ಅವರ ಇತರ ಸಾಹಿತ್ಯ ಪ್ರಕಾರ, ಅನುಪಲಬ್ಧ ಕೃತಿಗಳ ಹಸ್ತಪ್ರತಿ, ರೇವಣಾರಾಧ್ಯರ ಹೆಸರಿನಲ್ಲಿರುವ ಸ್ಮಾರಕ, ಸಮಕಾಲೀನ ಇತರ ಕವಿ ಕೃತಿ, ತರುವಾಯದ ವಂಶಜರು ಹಾಗೂ ಅವರ ವಾಸಸ್ಥಳ ಮೊದಲಾದ ಅಪೂರ್ವ ಸಂಗತಿಗಳ ಮೇಲೆ ಹೊಸ ಬೆಳಕು ಬೀಳುವ ಸಾಧ್ಯತೆ ಇದೆ"[೩೨] ಎಂದು ವಿದ್ವಾಂಸರಿಗೆ ಮತ್ತು ಸಂಶೋಧಕರಿಗೆ ಮಾರ್ಗದರ್ಶನ ಮಾಡಿದ್ದಾರೆ. ಅನುಬಂಧದಲ್ಲಿ ಸೋಸಲೆ ರೇವಣಾರಾಧ್ಯರ ಅಪ್ರಕಟಿತ ಕೃತಿಗಳ ಹಸ್ತಪ್ರತಿಗಳ ಆದಿ ಅಂತ್ಯ ಭಾಗವನ್ನು ಕೊಟ್ಟಿದ್ದಾರೆ. ಈ ರೀತಿ ಹಾಗಲವಾಡಿ ಅರಸು ಮನೆತನಕ್ಕೆ ಸಂಬಂಧಿಸಿದ ಮಹತ್ವದ ಲೇಖನ ಇದಾಗಿದ್ದು ೨೨ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ.

**VI. ಸೋದೆಸದಾಶಿವರಾಯನ ಸದಾಶಿವ ನೀತಿ:**

ವೀರಶೈವ ಅರಸು ಮನೆತನಗಳಲ್ಲಿ ಸೋದೆ ಒಂದು ಪ್ರಮುಖ ಮನೆತನವಾಗಿದೆ. ಸೋದೆಯ ಅರಸ ಸದಾಶಿವರಾಯ ಒಳ್ಳೆ ಅರಸನಾಗಿರುವಂತೆ ಸೋಪಜ್ಞ ಕವಿಯೂ ಆಗಿದ್ದ ಸದಾಶಿವ ನೀತಿಯು ೫೧೭ ಪದ್ಯಗಳನ್ನೊಳಗೊಂಡ ಕೃತಿಯಾಗಿದೆ. ಇದರಲ್ಲಿ ೪೭೭ ಕಂದ ಪದ್ಯಗಳು, ೩೯ ವೃತ್ತಗಳು, ಒಂದು ಷಟ್ಪದಿ ಇರುತ್ತದೆ. 'ಸದಾಶಿವ ನೀತಿ'ಯ ಪ್ರತಿಯೊಂದು ಪದ್ಯದ ಕೊನೆಯಲ್ಲಿ 'ಗುರು ನಂದಯ್ಯ' ಅಥವಾ 'ಗುರು ನಂದೀಶ' ಅಂಕಿತವಿದೆ. ಹೆಸರೆ ಸೂಚಿಸುವಂತೆ ಈ ಕೃತಿಯ ಉದ್ದೇಶ ನೀತಿಬೋಧೆಯಾಗಿದೆ. ವೀರಶೈವ ಧರ್ಮನೀತಿ ಬೋಧೆ, ರಾಜನೀತಿ ಬೋಧೆ, ಸಮಾಜ ನೀತಿಬೋಧೆ, ಯುದ್ಧನೀತಿ ಬೋಧೆ ಮುಂತಾಗಿ ಹಲವಾರು ವಿಧದಲ್ಲಿದೆ. "ಸರ್ವಜ್ಞನ ವಚನಗಳಂತೆ ಸದಾಶಿವ ನೀತಿಯ ಕಂದ ಪದ್ಯ ಹಾಗೂ ವೃತ್ತಗಳು ಸೂತ್ರಬದ್ಧವಾದ ಸೂಕ್ತಿಗಳಾಗಿರುತ್ತವೆ. ಸದಾಶಿವರಾಯನ ಜೀವನಾನುಭವ ಹಾಗೂ ಲೋಕಾನುಭವಗಳ ಅಮೃತ ಫಲದ ಸಾಕಾರ ರೂಪವಾಗಿದೆ."[೩೩] ಈ ಲೇಖನವು

೧೯೯೩ರ ಬಸವ ಪಥದ ಏಪ್ರೀಲ್- ಮೇ ಸಂಚಿಕೆಯಲ್ಲಿ ಪ್ರಕಟವಾಗಿದೆ. ಸೋದೆ ಅರಸ ಸದಾಶಿವರಾಯನ ಐತಿಹಾಸಿಕ ವ್ಯಕ್ತಿತ್ವವನ್ನು ಚಿತ್ರಿಸುವುದರ ಜೊತೆಗೆ ಆತನ ಕೃತಿ ಸದಾಶಿವ ನೀತಿಯನ್ನು ಪರಿಚಯಿಸುತ್ತದೆ. ಇದು ಮೂರು ಪುಟಗಳ ವ್ಯಾಪ್ತಿಯುಳ್ಳ ಕಿರುಲೇಖನವಾಗಿದೆ.

ವೀರಶೈವ ಅರಸು ಮನೆತನಗಳಿಗೆ ಸಂಬಂಧಿಸಿದ ಈ ಲೇಖನಗಳಲ್ಲದೆ ಇನ್ನು ಕೆಲವು ಲೇಖನಗಳಿವೆ. ಅವು ಸೋದೆ ಸದಾಶಿವರಾಯನ ಉಳಿಮೆ ಮಹಾತ್ಮೆ, ಸೋದೆ ಸದಾಶಿವರಾಯನ ಹೊಸ ಕೃತಿಗಳು, ಸೋದೆ ಸದಾಶಿವರಾಯನ ಸ್ವರ ವಚನಗಳಲ್ಲಿ ಐತಿಹಾಸಿಕ ಸಂಗತಿಗಳು. ಸೋದೆ ಸದಾಶಿವರಾಯನ ಹೊಸ ಕೃತಿಗಳು, ಸೋದೆ ಸದಾಶಿವರಾಯನ ಸ್ವರ ವಚನಗಳಲ್ಲಿ ಐತಿಹಾಸಿಕ ಸಂಗತಿಗಳು, ಸೋದೆ ಸದಾಶಿವ ರಾಯನ ಶಾಸನೋಕ್ತ ಕಂದಪದ್ಯ, ಮುಮ್ಮಡಿ ಚಿಕ್ಕಭೂಪಾಲ ಮತ್ತು ಹರದಹಳ್ಳಿ ಬಸವಲಿಂಗಸ್ವಾಮಿಗಳು, ಮಧುಗಿರಿ ಚೆನ್ನರಾಯ ದುರ್ಗದ ಮಧುಕೇಶಿ ದೊರೆಗಳ ವಂಶಾವಂಶಿ, ಸ್ವಾದಿ ಅರಸರ ಕಾಲದ ಸಾಹಿತ್ಯ ಮತ್ತು ಕೆಳದಿಯರ ಕನ್ನಡ ಧಾರ್ಮಿಕ ಸಾಹಿತ್ಯ. ಇವೇ ಮೊದಲಾದವುಗಳು ವೀರಶೈವ ಅರಸು ಮನೆತನಕ್ಕೆ ಸಂಬಂಧಿಸಿದ ಲೇಖನಗಳಾಗಿವೆ. ಬೇರೆಡೆ ಇವುಗಳನ್ನು ಚರ್ಚಿಸಿರುವುದರಿಂದ ಇಲ್ಲಿ ಕೇವಲ ಹೆಸರುಗಳನ್ನು ಉಲ್ಲೇಖಿಸಲಾಗಿದೆ.

**೫.೨.೩ ಶಾಸನ ಸಾಹಿತ್ಯ :**

ಈ ಅಧ್ಯಾಯದಲ್ಲಿ ಶಾಸನಗಳಲ್ಲಿ ದೇವದಾಸಿಯರು, ಕೂಡಲ ಸಂಗಮದಲ್ಲಿ ಹೊಸ ಶಿಲಾ ಶಾಸನಗಳು, ಇಮ್ಮಡಿ ಜಗದೇಕಮಲ್ಲನ ಕಳಸಾಪುರ ಶಾಸನ, ಕಳಚೂರಿ ಸೋವಿದೇವನ ಹೊಸ ಶಾಸನಗಳು ಬಾಗಲಕೋಟ ಜಿಲ್ಲೆಯ ಶಾಸನ ಸಾಹಿತ್ಯ, ಹೆರೂರು ಹಾಗೂ ಆಲದಕಟ್ಟೆ ಶಾಸನ, ಕನ್ನಡ ಶಾಸನಗಳ ಓದುವಿಕೆ ಮತ್ತು ಭಾಷೆ ಶಾಸನಗಳಲ್ಲಿ ನೇಕಾರರು, ಮುತ್ತಗೆಯ ಅಪ್ರಕಟಿತ ಶಾಸನ, ಮುತ್ತಿಗೆಯ ಹೊಸ ಶಾಸನ, ಅಣ್ಣಿಗೇರಿ ಶಾಸನ ಇವೇ ಮುಂತಾದ ಲೇಖನಗಳನ್ನು ಚರ್ಚಿಸಲಾಗುವುದು.

**I. ಶಾಸನಗಳಲ್ಲಿ ದೇವದಾಸಿಯರು :**

ಪ್ರಸ್ತುತ ಲೇಖನ ಅಥಣಿ ದೇವದಾಸಿ ವಿಮೋಚನಾ ಪುನರ್ವಸತಿ ಸಂಘದ ದಶಮಾನೋತ್ಸವ ನಿಮಿತ್ತವಾಗಿ ಹೊರಬಂದಿರುವ 'ವಿಮೋಚನಾ ಜ್ಯೋತಿ' ಎಂಬ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿದೆ. ಇದು ೧೦ ಪುಟಗಳ ವ್ಯಾಪ್ತಿಯಲ್ಲಿದ್ದು ೧೯೮೭ ರಲ್ಲಿ ಪ್ರಥಮ ಬಾರಿಗೆ ಪ್ರಕಟವಾಗಿದೆ. "ದೇವಾಲಯಗಳಲ್ಲಿ ದೇವರ ಸೇವೆಯನ್ನು ಮಾಡುವವರು ದೇವದಾಸಿಯರು. ದೇವದಾಸಿಯರು ಸೂಳೆ ಸಮಾಜದಿಂದ ಬಂದ ಸೂಳೆಯರೇ ಆಗಿರುತ್ತಿದ್ದರು. ಆದರೆ ಎಲ್ಲ ಸೂಳೆಯರೂ ದೇವದಾಸಿಯಾಗಿರುತ್ತಿರಲಿಲ್ಲ. ಪ್ರಾಚೀನ ಕರ್ನಾಟಕದಲ್ಲಿ ಆರಂಭದಿಂದಲೂ ಈ ಪದ್ಧತಿ ಇತ್ತು. ಕರ್ನಾಟಕದ ಶಾಸನಗಳಲ್ಲಿ ದೇವದಾಸಿಪದದ ಅತ್ಯಂತ ಪ್ರಾಚೀನ ಉಲ್ಲೇಖ ಕ್ರಿ.ಶ. ೧೧೧೩ರ ಆಲಹಳ್ಳಿ

ಶಾಸನವಾಗಿದೆ. (ಎಪಿಗ್ರಾಫಿಯಾ ಕರ್ನಾಟಕ ಸಂಪುಟ VII 97) ಇದಕ್ಕಿಂತ ಪೂರ್ವದ ಶಾಸನಗಳಲ್ಲಿ ಸೂಳೆ ಎಂಬ ಪದವೇ ಹೆಚ್ಚಾಗಿ ಬಳಕೆಯಾಗಿದೆ. ಕ್ರಿ, ಶ. ೬೩೩ರ ಮಹಾಕೂಟ ಶಾಸನವೇ (ಇಂಡಿಯನ್ ಎಂಟಿಕ್ವರಿ ಸಂ. -II ಪುಟ -೧೨೨) ಸೂಳೆ ಪದವನ್ನು ತಿಳಿಸುವ ಕರ್ನಾಟಕ ಪ್ರಾಚೀನತಮ ದಾಖಲೆಯಾಗಿದೆ."[೩೪] ಈ ರೀತಿಯಾಗಿ ಶಾಸನಗಳಲ್ಲಿ ದೊರೆಯುವ ಸೂಳೆ ಮತ್ತು ದೇವದಾಸಿ ಪದಗಳ ಪ್ರಾಚೀನತೆಯನ್ನು ಶೋಧಿಸಿದ್ದಾರೆ. ಮುಂದುವರೆದು ಶಾಸನಗಳಲ್ಲಿ ಬರುವ ರಾಣಿವಾಸ, ಪೆಂಡವಾಸ, ಪೆಂಡವಾಸದ ಸೂಳೆಯರು, ವಾರವಧು, ಗಣಿಕೆ ಪದಗಳು ಅವುಗಳ ಅರ್ಥ ಮುಂತಾದವುಗಳನ್ನು ವಿಶ್ಲೇಷಿಸುತ್ತ ಕಾವ್ಯಗಳಲ್ಲಿ ಕಂಡುಬರುವ ಈ ಪದ್ಧತಿಯ ಬಗೆಗೆ ಚರ್ಚಿಸಿದ್ದಾರೆ. ದೇವಾಲಯಗಳಲ್ಲಿ ದೇವರ ಸೇವೆಯನ್ನು ಮಾಡುವವರು, ಅಂಗಭೋಗ ಮತ್ತು ರಂಗಭೋಗ ಮುಂತಾದವುಗಳನ್ನು ವಿವರಿಸಿದ್ದಾರೆ. ಹೀಗೆ ಶಾಸನ, ಕಾವ್ಯ. ದೇವಾಲಯಗಳು, ಗುಡಿಗುಂಡಾರಗಳು ಧಾರ್ಮಿಕ ಆಚರಣೆಗಳು ಮುಂತಾದವನ್ನು ವಿಶ್ಲೇಷಿಸುತ್ತ ದೇವದಾಸಿಯರ ಕುರಿತಾಗಿ ಮಾಹಿತಿಯನ್ನು ಕಲೆಹಾಕಿದ್ದಾರೆ. ಐತಿಹಾಸಿಕ ಕಾಲಘಟ್ಟದಲ್ಲಿ ಪದಗಳು ಏರುಪೇರಾಗಿರುವುದನ್ನು ಆಚರಣೆ ವಿಕೃತವಾಗಿರುವುದನ್ನು ದಾಖಲಿಸಿದ್ದಾರೆ.

**II. ಕೂಡಲ ಸಂಗಮದಲ್ಲಿ ಹೊಸ ಶಿಲಾ ಶಾಸನಗಳು :**

ಬಸವಣ್ಣನವರ ವ್ಯಕ್ತಿತ್ವವನ್ನು ರೂಪಿಸಿದ ಕೂಡಲಸಂಗಮ ಕ್ಷೇತ್ರದಲ್ಲಿ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಸೋಮೇಶ್ವರನ (ಕ್ರಿ.ಶ. ೧೦೬೮ ರಿಂದ ೧೦೭೬) ಕಾಲದ ಹೊಸ ಶಿಲಾ ಶಾಸನಗಳನ್ನು ಡಾ. ಬಿ.ಆರ್. ಹಿರೇಮಠರು ಹೊಸದಾಗಿ ಸಂಶೋಧಿಸಿದ್ದಾರೆ. ಬಸವಪಥ (೧೯೮೮ ರ ಸಂಪುಟ ೧೦, ಸಂಚಿಕೆ ೩) ದಲ್ಲಿ ಪ್ರಕಟವಾಗಿದೆ. ಕೂಡಲ ಸಂಗಮನಾಥ ದೇವಾಲಯದ ಆವರಣದಲ್ಲಿರುವ ಗೌಡರ ಮನೆಯ ಗೋಡೆಯಲ್ಲಿ ಈ ಶಿಲಾ ಶಾಸನವಿದೆ. ಈ ಶಿಲಾಶಾಸನದ ಮೇಲೆ ಮಣ್ಣು ಮೆತ್ತಿ ಸಾರಿಸಿರುವುದರಿಂದ ಅದು ಸುರಕ್ಷಿತವಾಗಿ ಉಳಿದಿತ್ತು. ಹೀಗಿದ್ದರೂ ಶಾಸನದ ಕೆಳಭಾಗ ಮಾತ್ರ ಒಡೆದಿದೆ. ಕೂಡಲಸಂಗಮದಲ್ಲಿ ಈಗಾಗಲೇ ದೊರೆತಿರುವ ಮೂರು ಶಾಸನಗಳಿಗಿಂತಲೂ (ಕ್ರಿ.ಶ. ೧೧೫೮, ೧೧೬೦, ೧೨೧೩) ಈ ಶಾಸನ ಅತ್ಯಂತ ಪ್ರಾಚೀನತಮವಾಗಿದೆ. ಇದರ ಕಾಲ ೧೦೬೮ರಿಂದ ೧೦೭೬ ಆದ್ದರಿಂದ ಕೂಡಲ ಸಂಗಮದ ತೀರ ಪ್ರಾಚೀನತಮ ಶಾಸನವೆಂಬ ಮಹತ್ವ ಇದಕ್ಕಿದೆ. ಈ ಐತಿಹಾಸಿಕ ಶಾಸನವನ್ನು ಸಂಶೋಧಿಸಿದ ಕೀರ್ತಿ ಡಾ. ಬಿ.ಆರ್. ಹಿರೇಮಠ ಅವರಿಗೆ ಸಲ್ಲುತ್ತದೆ. "ಕಲ್ಯಾಣ ಚಾಲುಕ್ಯ ಚಕ್ರವರ್ತಿ ೨ನೆಯ ಸೊಮೇಶ್ವರನ ಆಳ್ವಿಕೆಯ ಉಲ್ಲೇಖವನ್ನು ವಿವರಿಸುತ್ತದೆ. ಈ ಶಾಸನದಲ್ಲಿ ದೇವರ ನೈವೇದ್ಯಕ್ಕಾಗಿ ಬಿಟ್ಟ ದತ್ತಿಯ ವಿಷಯ ಪ್ರಸ್ತಾಪವಾಗಿದೆ. ಈ ತ್ರುಟಿತ ಶಾಸನದಲ್ಲಿ ಒಟ್ಟು ೧೨ ಸಾಲುಗಳಿರುತ್ತವೆ. ಶಾಸನದ ಅಂತ್ಯ ಸಾಲುಗಳ ಕೆಲವು ಅಕ್ಷರಗಳು ಸವಕಲಾಗಿದ್ದು ಬಹಳಷ್ಟು ಅಸ್ಪಷ್ಟವಾಗಿವೆ."[೩೫] ಹೀಗಿದ್ದಾಗ್ಯೂ ಈ ಶಿಲಾಶಾಸನಕ್ಕೆ ಐತಿಹಾಸಿಕ ಮಹತ್ವವಿದೆ.

ಈ ಪ್ರಾಚೀನತಮ ಶಿಲಾಶಾಸನ ವಲ್ಲದೆ ಕೂಡಲಸಂಗಮನಾಥ ದೇವಾಲಯದ ಅದೇ ಆವರಣದಲ್ಲಿ ಜಾತವೇದ ಮುನಿಗಳ ಗದ್ದುಗೆ ಎಂದು ಕರೆಯಲಾಗುವ ಕಟ್ಟೆಯ ಗಗ್ಗರಿ ಕಲ್ಲಿನಲ್ಲಿ ಇನ್ನೊಂದು ಶಿಲಾಶಾಸನವಿದೆ. ಬಾಗಲಕೋಟೆಯ ರುದ್ರಪ್ಪ ತಂದೆ ಸಿದ್ದಪ್ಪ ಕುಪ್ಪಸ್ತ ಅವರು ಮೂರುನೂರು ರೂಪಾಯಿ ಖರ್ಚು ಮಾಡಿದ ವಿಷಯವನ್ನೊಳಗೊಂಡಿದೆ. ಎರಡು ಸಾಲಿನ ಈ ಪುಟ್ಟ ಶಾಸನದ ಆರಂಭದ ಅಕ್ಷರಗಳು ಅಸ್ಪಷ್ಟವಾಗಿವೆ. ಈ ಎರಡೂ ಹೊಸ ಶಾಸನಗಳನ್ನು ಶೋಧಿಸಿ ಅಧ್ಯಯನಿಸಿ ವಸ್ತು ವಿಷಯವನ್ನು ವಿಶ್ಲೇಷಿಸಿ ಹೊಸ ತಿಳುವಳಿಕೆಯನ್ನು ನೀಡಿದವರು ಡಾ. ಬಿ.ಆರ್. ಹಿರೇಮಠ ಅವರು. ಕೂಡಲ ಸಂಗಮದಲ್ಲಿ ಶೋಧಿಸಿದ ಈ ಕಾರ್ಯ ಐತಿಹಾಸಿಕ ದಾಖಲೆಯಾಗಿದೆ.

**III. ಇಮ್ಮಡಿ ಜಗದೇಕಮಲ್ಲನ ಕಳಸಾಪುರ ಶಾಸನ :**

ಈ ಶಾಸನವು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೩೪ -ಸ ೧-೨ ಜೂನ್ ಡಿಸೆಂಬರ್ ೧೯೮೯ರಲ್ಲಿ ಪ್ರಕಟಿತವಾಗಿದೆ. ಧಾರವಾಡ ಜಿಲ್ಲೆ ಗದಗ ತಾಲೂಕಿನ ಕಳಸಾಪೂರ ಗ್ರಾಮದಲ್ಲಿ ೧೩-೧೨-೧೯೮೭ರಂದು ಕೈಗೊಂಡ ಪರಿವೀಕ್ಷಣೆಯಲ್ಲಿ ಈ ಶಾಸನ ಲಭ್ಯವಾಗಿದೆ. ೪ ಹೊಸ ಶಾಸನಗಳನ್ನಿಲ್ಲಿ ಶೋಧಿಸಲಾಯಿತು. ಈ ನಾಲ್ಕೂ ಹೊಸ ಶಾಸನಗಳು ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದವುಗಳು. ಇವುಗಳಲ್ಲಿ ೩ ಶಾಸನಗಳು ತ್ರುಟಿತವಾಗಿವೆ. ಇಮ್ಮಡಿ ಜಗದೇಕಮಲ್ಲನ ಆಳ್ವಿಕೆಯ ೮ನೇ ವರ್ಷದ ಶಾಸನಮಾತ್ರ ಸುಸ್ಥಿತಿಯಲ್ಲಿದೆ ಎಂದು ಹೇಳಿ ಅದನ್ನು ಈ ಲೇಖನದಲ್ಲಿ ಪರಿಚಯಿಸಿದ್ದಾರೆ. "ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನು ಆಳುತ್ತಿದ್ದಾಗ ಮಹಾಮಂಡಲೇಶ್ವರ ಹಟಗಾರ ಹೆಮ್ಮಾಡಿ ದೇವರಸನು ಎರಂಬರವಿಯ ನೆಲವೀಡಿನಿಂದ ರಾಜ್ಯಭಾರ ಮಾಡುತ್ತಿದ್ದನು. ಆಗ ನಾಗಾವಿಯ ಹೆಗ್ಗಡೆ ನಾರಾಯಣಯ್ಯನು ಸ್ವಯಂಭೂ ಮಹಾಬಲೇಶ್ವರ ದೇವಾಲಯದ ನಂದಾ ದೀವಿಗೆ ಹಾಗೂ ನೈವೇದ್ಯಗಳಿಗಾಗಿ ಅದರ ಸ್ಥಾನಾಚಾರ್ಯ ಈಶಾನ್ಯ ಶಕ್ತಿ ಪಂಡಿತರ 'ಕಾಲಂಕರ್ಚಿ ' ಹಣ ದಾನ ಮಾಡಿದುದು ಈ ಶಾಸನದ ವಿಷಯವಾಗಿದೆ."[೩೬] ಈ ಶಾಸನ ೨೨ ಸಾಲುಗಳನ್ನು ಒಳಗೊಂಡಿದ್ದು ಇಡಿಯಾಗಿ ಗದ್ಯದಲ್ಲಿದೆ. ಈ ದಾನ ಶಾಸನದಲ್ಲಿ ಕಳಸಾಪುರ ಗ್ರಾಮದ ಪ್ರಾಚೀನ ಹೆಸರು ಕಾಡಿಯೂರವೆಂದು ನಾಗಾವಿಯ ಪ್ರಾಚೀನ ಹೆಸರು ನಾಗವಾವಿ ಎಂದು ಕರೆಯಲಾಗಿದೆ. ನಾಗಾವಿ ಗ್ರಾಮದಲ್ಲಿ ಮಹಾಬಳೇಶ್ವರ ದೇವಾಲಯುವಿದ್ದು ಈಶಾನ್ಯ ಶಕ್ತಿ ಪಂಡಿತ ಈ ದೇವಾಲಯದ ಸ್ಥಾನಾಚಾರ್ಯನಾಗಿದ್ದುದು ಪ್ರಸ್ತುತ ಶಾಸನದ ಮೂಲಕ ಪ್ರಪ್ರಥಮ ಬಾರಿಗೆ ತಿಳಿದು ಬರುತ್ತದೆ. ಇದೊಂದು ಮೌಲಿಕ ವಿಚಾರವಾಗಿದೆ. ಈ ಲೇಖನದಲ್ಲಿ ಪ್ರಾಚೀನ ಕರ್ನಾಟಕದ ಪ್ರಜೆಗಳು ದಾನ ದತ್ತಿ ಕಾರ್ಯ, ತೆರಿಗೆಯ ಹೆಸರು ಮುಂತಾದವುಗಳನ್ನು ಡಾ. ಬಿ.ಆರ್. ಹಿರೇಮಠ ಅವರು ವಿಸ್ತೃತವಾಗಿ ಚರ್ಚಿಸಿದ್ದಾರೆ. ಇತಿಹಾಸ, ವಾಣಿಜ್ಯಶಾಸ್ತ್ರ, ಸಾಹಿತ್ಯ ಮತ್ತು ಸಂಸ್ಕೃತಿಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

**IV. ಕಳಚೂರಿ ಸೋವಿದೇವನ ಹೊಸ ಶಾಸನ :**

ಈ ಶಾಸನವು ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಮಜ್ಜಿಗುಡ್ಡ ಗ್ರಾಮದಲ್ಲಿದೆ. ಕಳಚೂರಿ ಚಕ್ರವರ್ತಿ ರಾಯಮುರಾರಿ ಸೋವಿದೇವನ ಕಾಲದ ಹೊಸ ಶಾಸನವಿದು. ಕ್ರಿ.ಶ. ೧೧೭೦ರಿಂದ ೧೧೭೪ರ ಅವಧಿಯಲ್ಲಿದು ರಚನೆಗೊಂಡಿದೆ. ಡಾ. ಬಿ. ಆರ್. ಹಿರೇಮಠ ಅವರು ಮೊದಲ ಬಾರಿಗೆ ಶೋಧಿಸಿದ್ದಾರೆ. "ರಾಯಮುರಾರಿ ಸೋವಿದೇವನ ದಂಡನಾಯಕ ಧನ್ನೊಗಿ, ಬಪ್ಪಣ್ಣ, ಮಹಾದೇವ, ಮಾರ್ತಾಂಡ ಮೊದಲಾದ ಕರ್ಣಗಳು ಹಾಗೂ ಸಮಯ ಸಾಸಿರ್ವರೂ ಕೂಡಿ ಮಜ್ಜಿಗುಡ್ಡದ ಧೊರೇಶ್ವರ ಮತ್ತು ಕೇಶವೇಶ್ವರ ದೇವಾಲಯಗಳ ಸರಸಸಂಗೀತ, ರಂಗಭೋಗ ಮುಂತಾದ ದೇವಕಾರ್ಯಗಳಿಗಾಗಿ ಕೈಹಮಯ್ಯ ನಾಯಕನಿಗೆ ಆಯದಾಯ ಕಾಣಿಕೆ ತಿಕುಳ ಬಿಟ್ಟಬೀಯವನ್ನು ಮೂರುನೂರು ಮೊತ್ತರು ಭೂಮಿಯನ್ನು ದಾನವಾಗಿ ನೀಡಿದುದು ಈ ಶಾಸನದ ಪ್ರಮುಖ ವಿಷಯವಾಗಿದೆ. ಇದೇ ದೇವಾಲಯಕ್ಕೆ ತಿಳಿಯಾದೇವಿಯು ೫೦ ಮತ್ತರ ಭೂಮಿಯನ್ನು ಸ್ವತಂತ್ರವಾಗಿ ದಾನ ನೀಡಿದ್ದಾಳೆ. ಹೀಗೆ ಇದರಲ್ಲಿರುವ ಎರಡು ಪ್ರಮುಖ ದಾನಗಳನ್ನು ಕ್ರಮವಾಗಿ ಕ್ರಿ.ಶ. ೧೧೭೦ ಹಾಗೂ ೧೧೭೪ರಲ್ಲಿ ನೀಡಲಾಗಿದೆ. ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯಲ್ಲಿರುವ ಈ ಶಾಸನದ ಅಕ್ಷರಗಳು ಸಣ್ಣವಾಗಿ ಇದ್ದು ಅಂದವಾಗಿರುತ್ತವೆ"[೩೭] ಎಂದು ಶಾಸನದ ವಸ್ತು ವಿಷಯವನ್ನು ವಿವರಿಸಿದ್ದಾರೆ.

ಮಜ್ಜಿಗುಡ್ಡ ಗ್ರಾಮದ ಕಲ್ಲೇಶ್ವರ ದೇವಾಲಯದ ಹೊರಗೋಡೆಗೆ ಆನಿಸಿ ಇಟ್ಟಿರುವ ಈ ಶಾಸನದಲ್ಲಿ ಒಟ್ಟು ೭೪ ಸಾಲುಗಳಿದ್ದು ಇವುಗಳಲ್ಲಿ ೫೯ ಸಾಲುಗಳ ತರುವಾಯ ಸಾಕಷ್ಟು ಸ್ಥಳಬಿಟ್ಟು ಕೊನೆಯ ೫ ಸಾಲುಗಳನ್ನು ದೊಡ್ಡ ಗಾತ್ರದಲ್ಲಿ ಕಂಡರಿಸಲಾಗಿದೆ. ಆರಂಭದಲ್ಲಿ ಶಿವ ಗಣಪತಿ, ಸರಸ್ವತಿಯರನ್ನು ಸ್ತುತಿಸಲಾಗಿದೆ. ಆಮೇಲೆ ಕಳಚೂರಿ ಅರಸರ ವಂಶಾವಳಿ, ಧನ್ನೊಗಿ ದಂಡನಾಯಕನ ವಂಶಾವಳಿ ಹಾಗೂ ಕೈಹಮಯ್ಯ ನಾಯಕನ ವಂಶವಾಳಿಯ ವರ್ಣನೆ ಇದೆ. "ಈ ಶಾಸನದ ಕೊನೆಯಲ್ಲಿ ಬರುವ ೫ ಸಾಲುಗಳಲ್ಲಿ ದೇವರ ಕಾಲುಹಾಗಿ ವೀರಯ್ಯನಿಗೂ 'ಕಂಬದ ಸೂಳೆ'ಯೊಬ್ಬಳಿಗೂ ಭೂದಾನ, ಮನೆದಾನ ನೀಡಿದ ಉಲ್ಲೇಖವಿದೆ, ಕಂದ, ವೃತ್ತ, ಪದ್ಯಗಳಿಂದ ಕೂಡಿದ ಈ ಶಾಸನ ಸಾಹಿತ್ಯಿಕ ಗುಣಗಳಿಂದ ಕೂಡಿದುದಾಗಿದೆ"[೩೮] ಎಂದು ವಿವರಿಸಿರುವುದು ಅರ್ಥಪೂರ್ಣವಾಗಿದೆ.

**V. ಬಾಲಗಕೋಟ ಜಿಲ್ಲೆಯ ಶಾಸನಗಳು :**

ಇದೊಂದು ತುಂಬಾ ಮಹತ್ವದ ಲೇಖನವಾಗಿದೆ. ಆರಂಭದಲ್ಲಿ ಇಡೀ ಶಾಸನದ ಸಾಹಿತ್ಯವನ್ನು ಪರಿಚಯಿಸುತ್ತ ಶಾಸನ ಸಾಹಿತ್ಯಕ್ಕೆ ವ್ಯಾಖ್ಯೆ ಬರೆಯುತ್ತಾರೆ. ಬಾಗಲಕೋಟದಲ್ಲಿ ೨೦೦೧ರಲ್ಲಿ ಜರುಗಿದ ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣೆ ಸಂಚಿಕೆ "ಬಾಗಿಲು"ದಲ್ಲಿ ಪ್ರಕಟವಾದ ಲೇಖನವಿದು. ಒಟ್ಟು ಹದಿಮೂರು ಪುಟಗಳ ವ್ಯಾಪ್ತಿಯಲ್ಲಿದೆ. ಕರ್ನಾಟಕದಲ್ಲಿ ನಡೆದ ಶಾಸನ ಸಂಗ್ರಹ, ಶಾಸನ ಪರಿವೀಕ್ಷಣೆಗೆ ಪ್ರಕಟಣಾ ಕಾರ್ಯವನ್ನು ವಿವರಿಸುತ್ತಾರೆ. ತದನಂತರ ಬಾಗಲಕೋಟೆಗೆ ಸಂಬಂಧಿಸಿದ

ವಿವರವನ್ನು ಕಲೆಹಾಕುತ್ತಾರೆ. ಜಮಖಂಡಿ, ಮುಧೋಳ, ಬೀಳಗಿ, ಬಾದಾಮಿ, ಬಾಗಲಕೋಟ ಮತ್ತು ಹುನಗುಂದ ತಾಲೂಕುಗಳಲ್ಲಿ ಲಭಿಸುವ ಶಾಸನಗಳ ವಿವರ ನೀಡುತ್ತಾರೆ. ಕ್ರಮವಾಗಿ ಶಾಸನವಿರುವ ಗ್ರಾಮಗಳು ಲಭಿಸುವ ಶಾಸನಗಳು, ಪ್ರಕಟಿತ ಶಾಸನಗಳು, ಅಪ್ರಕಟಿತ ಶಾಸನಗಳು, ಇತ್ಯಾದಿ ಕೋಷ್ಟಕವನ್ನು ತಯಾರಿಸಿ ಖಚಿತ ಮಾಹಿತಿಯನ್ನು ಒದಗಿಸಿದ್ದಾರೆ. ಬಾಗಲಕೋಟ ಜಿಲ್ಲೆಯ ೧೦೦ ಗ್ರಾಮಗಳಲ್ಲಿ ಒಟ್ಟು ೬೦೨ ಶಾಸನಗಳು ಲಭ್ಯವಿದ್ದು. ಅವುಗಳಲ್ಲಿ ೫೧೭ ಶಾಸನಗಳು ಪ್ರಕಟವಾಗಿದ್ದರೆ ೮೫ ಶಾಸನಗಳು ಅಪ್ರಕಟಿತವಾಗಿ ಉಳಿದಿವೆ. "ಬಾಗಲಕೋಟ ಜಿಲ್ಲೆಯಲ್ಲಿ ದೊರೆಯುವ ೬೦೨ ಶಾಸನಗಳಲ್ಲಿ ದಾನಶಾಸನಗಳೇ ಅಧಿಕವಾಗಿರುತ್ತವೆ. ವೀರಗಲ್ಲು, ಮಾಸ್ತಿಕಲ್ಲುಗಳು ವಿರಳವಾಗಿ ಕಂಡುಬರುತ್ತವೆ. ಅಧಿಕ ಸಂಖ್ಯೆಯ ಶಾಸನಗಳು ತ್ರುಟಿತವಾಗಿರುತ್ತವೆ. ಇದಲ್ಲದೆ ಪಟ್ಟಿಕೆ ರೂಪದ ಶಾಸನಗಳು ಬಾದಾಮಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಹೀಗಾಗಿ ಸಾಹಿತ್ಯ ಗುಣದಿಂದ ಕೂಡಿದ ಶಾಸನಗಳ ಸಂಖ್ಯೆ ಕಡಿಮೆ ಪ್ರಮಾಣದಲ್ಲಿದೆ. ಆದರೆ ಶಾಸನ ಸಾಹಿತ್ಯವನ್ನು ಒಳಗೊಂಡ ಶಾಸನಗಳ ಸಂಖ್ಯೆ ಕಡಿಮೆ ಇದ್ದರೂ ಸತ್ವ ಹಾಗೂ ಚಾರಿತ್ರಿಕ ದೃಷ್ಟಿಯಿಂದ ಮೌಲಿಕ ಎನಿಸುತ್ತವೆ"[೬] ಎಂದು ವಿಶ್ಲೇಷಿಸಿದ್ದು ಸಂಶೋಧಕನ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ. ಜಿಲ್ಲೆಯ ಸ್ವಾಭಿಮಾನವನ್ನು ಬದಿಗಿರಿಸಿ ವಾಸ್ತವಿಕ ಸತ್ಯವನ್ನು ವಿವರಿಸುವುದನ್ನಿಲ್ಲಿ ಕಾಣುತ್ತೇವೆ. ಅಧ್ಯಯನಕ್ಕನುಕೂಲವಾಗಿ ಜಿಲ್ಲೆಯ ಒಟ್ಟು ಶಾಸನಗಳನ್ನು ಪದ್ಯಶಾಸನ, ಗದ್ಯಶಾಸನ, ಗದ್ಯಪದ್ಯ ಮಿಶ್ರಿತ ಶಾಸನಗಳೆಂದು ವರ್ಗೀಕರಿಸಿದ್ದಾರೆ. ಜಿಲ್ಲೆಯ ಸಮಗ್ರ ಶಾಸನಗಳನ್ನು ಮೊಟ್ಟಮೊದಲ ಬಾರಿಗೆ ಪರಿವೀಕ್ಷಣೆಗೆ ಒಳಪಡಿಸಿರುವುದು ಗಮನಾರ್ಹವಾಗಿದೆ. ಕೊನೆಯಲ್ಲಿ "ಬಾಗಲಕೋಟ ಜಿಲ್ಲೆಯ ಶಾಸನ ಸಾಹಿತ್ಯ ವೈವಿಧ್ಯಪೂರ್ಣವಾಗಿದ್ದು ಹಲವಾರು ವೈಶಿಷ್ಟ್ಯಗಳನ್ನೂ, ಪ್ರಥಮಗಳನ್ನೂ ಪಡೆದುಕೊಂಡಿದೆ. ಕನ್ನಡ ಶಿಷ್ಟಪದ ಸಾಹಿತ್ಯಕ್ಕೆ ಈ ಜಿಲ್ಲೆಯ ಶಾಸನ ಸಾಹಿತ್ಯ ನೀಡಿದ ಕೊಡುಗೆ, ಮಾಡಿದ ಸಾಧನೆ ಅನನ್ಯ, ಅನುಪಮ ಹಾಗೂ ಅತ್ಯಪೂರ್ವವಾದುದಾಗಿದೆಯೆಂಬುದು ಮೇಲಿನ ವಿವೇಚನೆಯಿಂದ ದೃಢಪಡುತ್ತದೆ. ಈ ರೀತಿಯಾಗಿ ಕರ್ನಾಟಕ ಶಾಸನ ಸಾಹಿತ್ಯದಲ್ಲಿ ಬಾಗಲಕೋಟೆ ಜಿಲ್ಲೆಯ ಶಾಸನ ಸಾಹಿತ್ಯಕ್ಕೆ ವಿಶೇಷ ಮನ್ನಣೆ, ಗೌರವ ಹಾಗೂ ಸ್ಥಾನ ಸಂದಾಯವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ ಮತ್ತು ಇಂಥ ಶಾಸನ ಸಾಹಿತ್ಯದ ಅಧ್ಯಯನದಿಂದ ಪ್ರಾದೇಶಿಕ ಸಾಹಿತ್ಯದ ಸ್ವರೂಪ, ಮಹತ್ವ ಹಾಗೂ ವೈಶಿಷ್ಟ್ಯಗಳು ಪ್ರಕಟಗೊಳ್ಳುತ್ತವೆ. ಸಮಗ್ರ ಕನ್ನಡ ಸಾಹಿತ್ಯಕ್ಕೆ ಆಯಾ ಪ್ರದೇಶಗಳ ಶಾಸನಗಳ ಸಾಹಿತ್ಯ ನೀಡಿದ ಕೊಡುಗೆಯ ಪರಿಚಯವೂ ಆಗುತ್ತದೆ" ಎಂದಿರುವುದು ತುಂಬ ಸೂಕ್ತವಾಗಿದೆ.

**VI. ಕನ್ನಡ ಶಾಸನಗಳ ಓದುವಿಕೆ ಮತ್ತು ಭಾಷೆ :**

ಪ್ರಸ್ತುತ ಲೇಖನವು ಏಳು ಪುಟಗಳನ್ನು ಒಳಗೊಂಡಿದೆ. ಇದೊಂದು ಅಪ್ರಕಟಿತ ಲೇಖನ. ಕನ್ನಡ ಶಾಸನಗಳನ್ನು ಓದುವ ಉಪಕ್ರಮದ ವಿವರಣೆ ಇದರಲ್ಲಿದೆ. ಕನ್ನಡ ಶಾಸನವನ್ನು ಓದಲು ಬೇಕಾದ ಅರ್ಹತೆಗಳು, ಲಿಪಿ, ಜ್ಞಾನ, ಖಚಿತ ತಿಳುವಳಿಕೆಗಳು ಅವಶ್ಯಕವಾಗುತ್ತವೆ. ಅರಸು ಮನೆತನಗಳು,

ಆಯಾ ಕಾಲದ ಕನ್ನಡ ಅಕ್ಷರಗಳ ಸ್ವರೂಪ ಬಲ್ಲವರು, ಶಾಸನಗಳನ್ನು ಓದಬಹುದಾಗಿದೆ. ಶಾಸನಗಳ ಗಾಢ ಸಂಪರ್ಕ, ಅವುಗಳ ಒಡನಾಟ, ಶಾಸನ ಓದುವಿಕೆಯನ್ನು ನಿರಂತರವಾಗಿ ರೂಢಿಸಿಕೊಂಡಿದ್ದರೆ ಓದುವದು ಸರಾಗವೆನಿಸುತ್ತದೆ. ಶಾಸನ ಓದುವವರು ಕ್ಷೇತ್ರಕಾರ್ಯಕೈಗೊಳ್ಳಬೇಕು. ನಿರಂತರ ಅಧ್ಯಯನವಿರಬೇಕು. ವ್ಯಕ್ತಿಯ ಪ್ರಾಮಾಣಿಕತೆ ಮತ್ತು ಅಧಿಕೃತತೆಗಳು ಓದಿದ ಶಾಸನದ ವಿಷಯವನ್ನು ಖಚಿತವಾಗಿ ವಿವರಿಸಲು ನೆರವಾಗುತ್ತವೆ. "ಶಾಸನಗಳನ್ನು ಓದುವ ವಿಧಾನ ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನವಾಗಿರುವುದು. ಇಲ್ಲಿ ಕನ್ನಡ ಶಾಸನಗಳನ್ನು ಓದಲು ಅಳವಡಿಸಿಕೊಂಡ ವಿಧಾನಗಳನ್ನು ಮಾತ್ರ ವಿವರಿಸುತ್ತಿದ್ದೇನೆ."[೪೦] ಅವರ ಪ್ರಾಮಾಣಿಕತೆಗೆ ನಿದರ್ಶನವಾಗಿದೆ. ಶಾಸನದ ಪಡಿಯಚ್ಚು ತೆಗೆಯುವುದು, ಶಾಸನ ಪಠ್ಯವನ್ನು ಇಡಿಯಾಗಿ ಗ್ರಹಿಸುವುದು, ಅಕ್ಷರಗಳನ್ನು ಗುರುತಿಸಿಕೊಳ್ಳುವುದು ಮುಂತಾದ ಪ್ರಾಥಮಿಕ ಸಾಮಗ್ರಿಗಳನ್ನು ಆರಂಭದಲ್ಲಿ ವಿವರಿಸುತ್ತಾರೆ. "ಶಾಸನಗಳ ಅಕ್ಷರ ಓದುವ ಕ್ರಮ ಶಾಸನದ ಮಧ್ಯದಲ್ಲಿ ಕಲ್ಲು ಒಡೆದಿದ್ದರೆ ಆ ಭಾಗದಲ್ಲಿ ನಷ್ಟವಾದ ಅಕ್ಷರಗಳನ್ನು ಮೇಲೆ ಮತ್ತು ಕೆಳಗಿನ ಸಾಲುಗಳ ಪ್ರಮಾಣದಿಂದ ಪ್ರತಿಯೊಂದು ಅಕ್ಷರಕ್ಕೆ ಡಾಟ್ - ಹಾಕಬೇಕು. ಓದುವಾಗ ಅಕ್ಷರ ಅಸ್ಪಷ್ಟವೆನಿಸಿದರೆ ಅದನ್ನು ಚೌಕ [] ಕೌಂಸಿನಲ್ಲಿ ಇಡಬೇಕು. ಶಾಸನದಲ್ಲಿ ಭಾಷಾ ದೋಷಗಳಿದ್ದರೆ ಅವುಗಳನ್ನು ತಿದ್ದದೆ ಇದ್ದಕ್ಕಿದ್ದಂತೆ ಓದಬೇಕು. ಬೇಕೆನಿಸಿದರೆ ಅವುಗಳ ಶುದ್ಧರೂಪವನ್ನು ಆ ಅಶುದ್ಧ ಅಕ್ಷರದ ಮುಂದೆಯೇ ದುಂಡು ಕೌಂಸಿ()ನಲ್ಲಿ ಕೊಡಬಹುದಾಗಿದೆ. ಶಾಸನಗಳ ಸಾಲುಗಳನ್ನು ಮೂಲದಲ್ಲಿ ಇದ್ದಂತೆಯೇ ಓದಬೇಕು. ಬರೆದುಕೊಳ್ಳಬೇಕು. ಶಾಸನ ಓದುವವನಿಗೆ ತಾಳ್ಮೆಯ ಗುಣ ಅಧಿಕವಾಗಿರಬೇಕಾಗುತ್ತದೆ. ಶಾಸನ ಓದುವದರಲ್ಲಿ ಪಾರದರ್ಶಕತೆ ಅತ್ಯಂತ ಪ್ರಮುಖವಾದುದಾಗಿರುತ್ತದೆ. ಶಾಸನವಿರುವ ಸ್ಥಳದಿಂದ ಮರಳಿ ನಮ್ಮ ಸ್ಥಳಕ್ಕೆ ಬಂದ ಮೇಲೆಯೂ ಶಾಸನ ಪಾಠದಲ್ಲಿ ಸಂಶಯ ಸಮಸ್ಯೆ ಅಸ್ಪಷ್ಟತೆ ಗೋಚರಿಸಿದರೂ ಅದನ್ನು ಅಷ್ಟಕ್ಕೆ ಬಿಡಬಾರದು ಮತ್ತೆ ಶಾಸನವಿರುವ ಸ್ಥಳಕ್ಕೆ ಹೋಗಿ ಶಾಸನ ಪಾಠವನ್ನು ಪರಿಶೀಲಿಸಿ ಆ ಸಮಸ್ಯೆಯನ್ನು ಪರಿಹರಿಸಿಕೊಳ್ಳಬಹುದಾಗಿದೆ."[೪೧] ಈ ಮಾತುಗಳು ಶಾಸನ ಓದುವ ಕ್ರಮವನ್ನು ಸಾಧ್ಯಂತವಾಗಿ ವಿವರಿಸುತ್ತವೆ. ಶಾಸನ ಅಭ್ಯಾಸಿಗಳಿಗೆ ಈ ಮಾತುಗಳು ಸೂಕ್ತ ಮಾರ್ಗದರ್ಶಿಯಾಗಿವೆ. ಮುಂದಿನ ಮೂರು ಪುಟಗಳಲ್ಲಿ ಶಾಸನಗಳ ಭಾಷೆಯ ಕುರಿತಾಗಿ ವಿವರಿಸುತ್ತಾರೆ.

"ಶಾಸನಗಳನ್ನು ಭಾಷೆಯ ದೃಷ್ಟಿಯಿಂದ ಅಧ್ಯಯನ ಮಾಡಿದ್ದು ಅತ್ಯಲ್ಪ ಈ ಕ್ಷೇತ್ರದಲ್ಲಿ ಇನ್ನೂ ಆಗಬೇಕಾದ ಕೆಲಸ ಅಪಾರವಾಗಿದೆ. ಶಾಸನ ಪದಪ್ರಯೋಗ ಕೋಶ, ಶಾಸನ ಪದ್ಯಕೋಶ, ಶಾಸನ ಪರಿಭಾಷಾ ಕೋಶ ಮೊದಲಾದವು ಅಗತ್ಯವಾಗಿ ನೆರವೇರಬೇಕಾದ ಕಾರ್ಯಗಳೆನಿಸಿವೆ. ಹೀಗೆ ಕರ್ನಾಟಕದ ಶಾಸನಗಳು ಭಾಷೆಯ ಅಧ್ಯಯನದ ದೃಷ್ಟಿಯಿಂದ ಅತ್ಯಂತ ಉಪಯುಕ್ತ ಆಕರ ಸಾಮಗ್ರಿಗಳಾಗಿರುತ್ತವೆ. ಈ ಮಾತುಗಳು ಶಾಸನ ಭಾಷೆಯನ್ನು ಕುರಿತು ವಿವರಿಸುತ್ತವೆ."[೪೨] ಒಬ್ಬ

ಇತಿಹಾಸಕಾರನಾಗಿ, ಶಾಸನತಜ್ಞರಾಗಿ, ಸಾಹಿತ್ಯ ಕೋವಿದರಾಗಿ, ಭಾಷಾ ವಿಜ್ಞಾನಿಯಾಗಿ ತಮ್ಮ ಅನುಭವವನ್ನೆಲ್ಲಾ ಧಾರೆಯೆರೆದು ಈ ಲೇಖನ ರೂಪಿಸಿರುವುದನ್ನು ಮನಗಾಣಬಹುದು. ಇಂಥಲ್ಲಿ ಡಾ. ಬಿ. ಆರ್. ಅವರ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಗುರುತಿಸಬಹುದು.

**VII. ಶಾಸನಗಳಲ್ಲಿ ನೇಕಾರರು :**

ಇದೊಂದು ಅಪ್ರಕಟಿತ ಲೇಖನ. ನಾಲ್ಕು ಪುಟದ ವ್ಯಾಪ್ತಿಯಲ್ಲಿದೆ. "ನೇಕಾರರನ್ನು ಶಾಸನಗಳಲ್ಲಿ ಸಾಲಿಗರೆಂದು ಕರೆಯಲಾಗಿದೆ. ಸಾಲ+ಇಗ=ಸಾಲಿಗ. ಸಾಲೆ ಎಂದರೆ ಬಟ್ಟೆ, ಅರಿವೆ ಸಾಲಿಗ ಎಂದರೆ ಬಟ್ಟೆ ನೇಯುವ ವೃತ್ತಿಯ ನೇಕಾರ ಎಂದರ್ಥ"[೪೩] ಎಂದು ಪದನಿಷ್ಪತ್ತಿ ಹೇಳಿದ್ದಾರೆ. ಜೇಡರ ದಾಸಿಮಯ್ಯನ ಒಂದು ವಚನವನ್ನು ಕೊಟ್ಟು ಸ್ಪಷ್ಟಪಡಿಸಿದ್ದಾರೆ. ಪ್ರಾಚೀನಕಾಲದ ಮಗ್ಗದೆರೆ ಎಂಬ ತೆರಿಗೆಯನ್ನು ಪ್ರಸ್ತಾಪಿಸಿದ್ದಾರೆ. ನೇಕಾರರನ್ನು ಸಮಯಸಾಲಿಗ, ಜೇಡ (೧೧೧೦ ಕ್ರಿ.ಶ.) ಪಟ್ಟಗಾರ (ಕ್ರಿ.ಶ. ೭೯೩) ಮೊದಲಾದ ಪರ್ಯಾಯ ಪದಗಳು ಈ ನೇಕಾರರಿಗಿವೆ. ಅತ್ಯಂತ ಪ್ರಾಚೀನತಮವಾದ ೯೬೮ರ ಲಕ್ಷ್ಮೇಶ್ವರ ಶಾಸನ ಹೀಗೆ ನೇಕಾರರು ಹಾಗೂ ನೇಕಾರ ವೃತ್ತಿ ಜೇಡರದಾಸಿಮಯ್ಯನಿಗಿಂತಲೂ ತೀರ ಪ್ರಾಚೀನವಾಗಿತ್ತೆಂದು ಶಾಸನಗಳ ಆಧಾರದಿಂದ ಸ್ಪಷ್ಟಪಡಿಸುತ್ತಾರೆ. ಕರ್ನಾಟಕದಲ್ಲಿ ದೊರೆತ ಶಾಸನಗಳನ್ನು ಆಧರಿಸಿ ನೇಕಾರ ವೃತ್ತಿ ಅದರ ವೈಶಿಷ್ಟ್ಯತೆ ಅವರಲ್ಲಿಯ ಒಳಪಂಗಡಗಳನ್ನು ಹೆಸರಿಸಿದ್ದಾರೆ. "ಪ್ರಾಚೀನ ಸಂಘಗಳು, ಸಂಘ ಸಾಸಿರ್ವರೂ, ಉತ್ಪಾದನೆ, ಮಾರಾಟ ಸಂಘಟನೆಗಳನ್ನು ದಾಖಲಿಸಿದ್ದಾರೆ. ಶಾಸನಗಳು ನೇಕಾರರ ಪ್ರಾಚೀನತೆ, ವೃತ್ತಿ ವಿವರ, ಆರಾಧ್ಯದೈವ, ರಚಿಸಿಕೊಂಡ ಸಂಘ ಮೊದಲಾದ ಉಪಯುಕ್ತ ಮಾಹಿತಿಯನ್ನು ಪೂರೈಸುತ್ತವೆ."[೪೪] ಎಂದಿರುವುದು ಸಮಂಜಸವಾಗಿದೆ. ಇವು ಡಾ. ಬಿ.ಆರ್. ಹಿರೇಮಠ ಅವರ ತಲಸ್ಪರ್ಶಿ ಅಧ್ಯಯನ ಐತಿಹಾಸಿಕ ಹಿನ್ನೆಲೆ, ಸೂಕ್ಷ್ಮ ಪರಿವೀಕ್ಷಣೆಗೆ ಸಾಕ್ಷಿಯಾಗಿವೆ.

**VIII. ಮುತ್ತಿಗೆ ಶಾಸನ -೧ :**

ಇದೊಂದು ಅಪ್ರಕಟಿತ ಶಾಸನ. ಡಾ. ಬಿ.ಆರ್. ಅವರು ಪ್ರಪ್ರಥಮ ಬಾರಿಗೆ ಶೋಧಿಸಿಕೊಟ್ಟಿದ್ದಾರೆ. ಕಲಘಟಗಿ ತಾಲೂಕಿನ ಮುತ್ತಿಗೆಯಲ್ಲಿ ೧೪.೫.೮೭ರಲ್ಲಿ ಶಾಸನ ಪರಿವೀಕ್ಷಣೆ ಕೈಗೊಂಡಾಗ ಲಭಿಸಿದ ಶಾಸನವಿದು. ವಿಜಯ ರಾಜಧಾನಿ ಎನಿಸಿದ ಗೋವಗೆಯನ್ನು (ಗೋವಾ) ಕದಂಬ ಚೂಡಾಮಣಿ ಜಯ ಕೇಶಿದೇವರಸ ಆಳುತ್ತಿರುವಾಗ ಈ ಶಾಸನ ರಚನೆಯಾಗಿದೆ. ಕೊಂಕಣ ಒಂಬೈನೂರು ಪಲಸಿಗೆ ಪನ್ನಿಛಾಸಿರ ವನ್ನು ಆಳುತ್ತಿದ್ದ ಬನವಾಸಿ ಪುರವರಾಧೀಶ್ವರನ ವರ್ಣನೆಯಿಂದ ಶಾಸನವು ಆರಂಭವಾಗುತ್ತದೆ. ಮುತ್ತಗಿಯ ಸಾಮಂತ ಚಾವುಂಡ ಚೋವಗಾಮುಂಡ ಅಲ್ಲಿಯ ಅಧಿಕಾರಿ ಅಱುವತ್ತೊಕ್ಕುಂದಿರ್ದ ಸೂಳೇಶ್ವರ ದೇವರ ಮಾಟಕೂಟ ಜೀರ್ಣೋದ್ಧಾರಕ್ಕೆಂದು ನಿತ್ಯ ನೈವೇದ್ಯಕ್ಕೆಂದು ಬಿಟ್ಟ ಸೀಗೆಗದ್ದೆ ಕೆರೆ ಒತ್ತಿನ ಬಡಗದೆಸೆಗದ್ದೆಯು ಅದರ ತೆರವನ್ನು ದಾನವಾಗಿ ನೀಡಿದ

ವಿವರಣೆ ಇಲ್ಲಿದೆ. ಇದೊಂದು ದಾನ ಶಾಸನವಾಗಿದೆ ಇರದಲ್ಲಿ ೧೪ ಶಾನಗಳಿವೆ. ಇಡೀ ಶಾಸನದ ಪಠ್ಯವನ್ನು ಡಾ. ಬಿ.ಆರ್. ಹಿರೇಮಠ ಅವರು ಕಟ್ಟಿಕೊಟ್ಟಿರುವುದು ವಿಶೇಷವಾಗಿದೆ.

**ಮುತ್ತಿಗೆ ಶಾಸನ - ೨ :**

ಇದರಲ್ಲಿ ೨೩ ಸಾಲುಗಳಿವೆ. ಮೇಲ್ಬಾಗ ಸಂಪೂರ್ಣ ಸವೆದಿದೆ. "ಶಾಸನದ ಕೆಳಭಾಗದಲ್ಲಿ ಬರೆಯಲು ಸಾಕಷ್ಟು ಸ್ಥಳವಿದೆ. ಆದರೆ ಶಾಸನ ಒಮ್ಮಿಂದೊಮ್ಮೆಲೆ ನಿಂತುಬಿಟ್ಟಿದೆ."[೬೫] ಈ ಶಾಸನ ಒಮ್ಮಿಂದೊಮ್ಮೆಲೆ ನಿಂತುಬಿಟ್ಟಿರುವುದು ಎಷ್ಟು ವಿಷಾದನೀಯ ಸಂಗತಿಯೋ ಅದಕ್ಕಿಂತಲೂ ದುರಂತವೆಂದರೆ ಈ ಲೇಖನ ಅರ್ಧಕ್ಕೆ ನಿಂತುಬಿಟ್ಟಿರುವುದು. ಮುತ್ತಿಗೆ ಎರಡು ಶಾಸನಗಳು ಎಂದು ತಲೆಬರಹವನ್ನು ಕೊಟ್ಟು ಬರೆಯದೇ ಹಾಗೇ ಬಿಟ್ಟಿದ್ದಾರೆ. ಬಹುಶಃ ಅವರ ಹಠಾತ್ ಆರೋಗ್ಯದಲ್ಲಿ ಕುಸಿತ ಮತ್ತು ಅಕಾಲಿಕ ಮರಣವೇ ಅರ್ಧ ಉಳಿಯಲು ಕಾರಣವಾಗಿಬಹುದು.

**IX. ಅಣ್ಣಿಗೇರಿ ಶಾಸನ :**

ಅಣ್ಣಿಗೇರಿ ಶಾಸನವು ಅಮೃತೇಶ್ವರ ಗುಡಿ ಪ್ರಾಕಾರದ ಬೊಮ್ಮ ದೇವರ ಗುಡಿಯ ಬಾಗಿಲ ಬಲ ಚೌಕಿನಲ್ಲಿದೆ. ಇದೊಂದು ಅಪ್ರಕಟಿತ ಶಾಸನ. ಇದರಲ್ಲಿ ೧೨ ಸಾಲುಗಳಿವೆ. ಶಾಸನದ ಯಥಾವತ್ ಪಠ್ಯವನ್ನು ಡಾ. ಬಿ. ಆರ್. ಅವರು ಒದಗಿಸಿದ್ದಾರೆ. ಶಾಸನ ಕುರಿತಾಗಿ ಯಾವ ವಿವರನ್ನು ನೀಡಿಲ್ಲ ಕೇವಲ ಪಠ್ಯವಷ್ಟೇ ಇದೆ.

**X. ಹೆರೂರು ಹಾಗೂ ಆಲದಕಟ್ಟೆ ಶಾಸನ :**

ಇದೂ ಕೂಡಾ ಅಪ್ರಕಟಿತ ಶಾಸನ. ಈ ಲೇಖನದಲ್ಲಿ ಹೆರೂರು ಹಾಗೂ ಆಲದಕಟ್ಟೆಯ ಶಾಸನಗಳನ್ನು ಒಟ್ಟಿಗೆ ಕಟ್ಟಿಕೊಟ್ಟಿದ್ದಾರೆ. ಆಲದಕಟ್ಟೆಗೆ ಸಂಬಂಧಿಸಿದ ಆರು ಶಾಸನಗಳಿವೆ. ಕ್ರಮವಾಗಿ 'ಬಸವಣ್ಣಯ್ಯ ಹಿರೇಮಠ'ರ ಹೊಲದ ಶಾಸನದಲ್ಲಿ ೬ ಸಾಲುಗಳಿವೆ. 'ಕೆಂಪನಗೌಡ ಗದಿಗೆಪ್ಪಗೌಡ ಗೌಡಪ್ಪನವರ ಹೊಲದ' ಶಾಸನದಲ್ಲಿ ೧೯ ಸಾಲುಗಳಿವೆ. 'ವೀರಬಸಣ್ಣಗೌಡ ಸಣ್ಣಬಸಣ್ಣಗೌಡ ಬಸಗೌಡರ ಹೊಲ'ದ ಶಾಸನದಲ್ಲಿ ೧೩ ಸಾಲುಗಳಿವೆ. 'ಮರದನ್ನವರ ಹೊಲ - ಸೀಮೆಯಕಲ್ಲು' ಈ ಶಾಸನದಲ್ಲಿ ೭ ಸಾಲುಗಳಿವೆ. ಕಲ್ಮೇಶ್ವರ ಗುಡಿಯ ಬಲದ ಕಂಬದ ಮೇಲಿರುವ ಶಾಸನದಲ್ಲಿ ೫ ಸಾಲುಗಳಿವೆ. 'ಹೊಳಿಬಸವಗೌಡ ನಿಂಗನಗೌಡ ಮಲ್ಲನಗೌಡರ' ಹೊಲದ ಶಾಸನದಲ್ಲಿ ೨೯ ಸಾಲುಗಳಿವೆ. ಈ ರೀತಿಯಾಗಿ ಆಲದಕಟ್ಟೆಯ ೭ ಶಾಸನಗಳ ಪಠ್ಯವನ್ನು ಇದರಲ್ಲಿ ಹೇಳಿದ್ದಾರೆ. ಹೆರೂರು ಶಾಸನಗಳು ೧) ನಾಗಪ್ಪ ಹನುಮಪ್ಪ ಬೆಟಗೇರಿ ಮನೆ ಹತ್ತಿರ ವೀರಗಲ್ಲು (ತುಣುಕು) ಕೆಳಭಾಗ ಒಡೆದು ಕಳೆದು ಹೋಗಿವೆ. ಲಭ್ಯವಿದ್ದ ಶಾಸನದಲ್ಲಿ ೪ ಸಾಲುಗಳಿವೆ. ೨) ಅಜ್ಜಪ್ಪ ಮಲ್ಲಪ್ಪ ಬಾಗಣ್ಣವರ ಹಿತ್ತಲು ಬೇವಿನ ಗಿಡದ ಕೆಳಗಿರುವ ವೀರಗಲ್ಲು ಇದರಲ್ಲಿ ಮೂರು ಸಾಲುಗಳಿವೆ. ೩)ಮೂರನೇ ಶಾಸನವನ್ನು ದಾಖಲಿಸಿರಬಹುದಾಗಿದ್ದರೂ ನಮಗದು ಲಭಿಸಿಲ್ಲ. ೪) ನಿಂಗನಗೌಡ

ಹೊನ್ನಗೌಡ ಪಾಟೀಲರ ಹಿತ್ತಲು ನಿಷಧಿಗಲ್ಲಿನಲ್ಲಿ ಮೂರು ಸಾಲುಗಳಿವೆ. ೫)ಅಜ್ಜಪ್ಪ ಮಲ್ಲಪ್ಪ ಬಾಗಣ್ಣವರ ಮನೆಯ ಹಿತ್ತಲು ಬೇವಿನಗಿಡದ ಕೆಳಗಿರುವ ತುಂಡುಗಲ್ಲು ಶಾಸನದಲ್ಲಿ ೫ ಸಾಲುಗಳಿವೆ. ೬) ಶಿವಾರಗಟ್ಟಿಯ ಹತ್ತಿರ ಮಾಸ್ತಿಕಲ್ಲು - ಇದರಲ್ಲಿ ೫ ಸಾಲುಗಳಿವೆ. ೬ ರಿಂದ ೧೨ ಸಾಲುಗಳು ನಾಶವಾಗಿವೆ. ಪ್ರಸ್ತುತ ಹೇರೂರು ಹಾಗೂ ಆಲದಕಟ್ಟೆ ಶಾಸನಗಳು ಲೇಖನದಲ್ಲಿ ಶಾಸನದ ಪಠ್ಯ ಮಾತ್ರವಿದ್ದು ಶಾಸನದ ವಿಷಯಕ್ಕೆ ಸಂಬಂಧಪಟ್ಟ ಯಾವುದೇ ಅಂಶ ದಾಖಲಾಗಿಲ್ಲ. ಹೇರೂರು ಹಾಗೂ ಆಲದಕಟ್ಟೆ ಶಾಸನಗಳು ಎಂದು ಶೀರ್ಷಿಕೆಯನ್ನಿಟ್ಟು ಎರಡು ಪುಟ ಖಾಲಿ ಬಿಟ್ಟಿದ್ದಾರೆ. ಬಹುಶಃ ಶಾಸನದ ಪಠ್ಯಗಳನ್ನು ಕೊಟ್ಟು ವಸ್ತು ವಿಷಯಗಳನ್ನು ನಿರೂಪಿಸುವ ಸಾಧ್ಯತೆ ಇತ್ತು. ಆದರೆ ಏಕೋ ಏನೋ ಯಾವ ವಿವರಣೆಯನ್ನೂ ನೀಡಿಲ್ಲ. ಈ ಕಾರ್ಯ ಅರ್ಧಕ್ಕೆ ನಿಂತಿದೆ. ಈ ೧೦ ಲೇಖನಗಳಲ್ಲದೆ ಇನ್ನೂ ಹಲವಾರು ಶಾಸನಗಳನ್ನು ಕುರಿತಾಗಿರುವ ಲೇಖನಗಳಿವೆ. ಪುಸ್ತಕ ರೂಪದಲ್ಲಿ ದಾಖಲಾಗಿರುವದರಿಂದ ಅವುಗಳನ್ನಿಲ್ಲಿ ಚರ್ಚಿಸಿಲ್ಲ. ಪ್ರಾಚೀನ ಕರ್ನಾಟಕದ ಶಾಸನೋಕ್ತ ಸಂಘಗಳು, ಪ್ರಾಚೀನ ಕರ್ನಾಟಕದ ವರ್ತಕ ಸಂಘ, ಐಯ್ಯಾ ಹೊಳೆ ಐನೂರ್ವರು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಂತೆಯ ಸುಂಕ, ಮುದನೂರು ಗ್ರಾಮಶಾಸನಗಳು, ಮಧ್ಯಕಾಲೀನ ಕರ್ನಾಟಕದ ವರ್ತಕರು ಹಾಗೂ ವರ್ತಕ ಸಂಘಗಳು ಒಂದು ಸಮೀಕ್ಷೆ, ಪ್ರಾಚೀನ ಕರ್ನಾಟಕದ ವರ್ತಕರ ವ್ಯಾಪಾರ ಸ್ವರೂಪ, ಪ್ರಾಚೀನ ಕರ್ನಾಟಕದ ವಾಣಿಜ್ಯ ಸ್ವರೂಪ ಮತ್ತು ವರ್ತಕರ ಧಾರ್ಮಿಕ ಕಾರ್ಯಗಳು, ಪ್ರಾಚೀನ ಕರ್ನಾಟಕದಲ್ಲಿ ಸಹಕಾರ ಹಾಗೂ ಆರ್ಥಿಕ ಚಟುವಟಿಕೆಗಳು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕರ ದಾನ ಕಾರ್ಯಗಳು, ಶಾಸನೋಕ್ತ ಕೃಷಿ ಸಂಘ ಅಜಿವತ್ತೊಕ್ಕಲು, ಐಯ್ಯಾಹೊಳೆ ಐನೂರ್ವರ ಪ್ರಶಸ್ತಿಗಳು ಮುಂತಾದವುಗಳು ಪ್ರಕಟವಾಗಿದ್ದು ಈಗಾಗಲೇ ಬಿ.ಆರ್. ಅವರ ಗ್ರಂಥಗಳಲ್ಲಿ ಪ್ರವೇಶ ಪಡೆದಿವೆ. ಕೃತಿ ಸಮೀಕ್ಷೆಯ ಕಾಲಕ್ಕೆ ಇವುಗಳನ್ನು ವಿವರಿಸಿರುವುದರಿಂದ ಮತ್ತೆ ಇಲ್ಲಿ ಚರ್ಚಿಸಿಲ್ಲ.

**೫.೨.೪. ನಾಮ ವಿಜ್ಞಾನ (ನಿಷ್ಪತ್ತಿ ಸಾಹಿತ್ಯ) :**

ಶಾಸ್ತ್ರ ಸಾಹಿತ್ಯದಲ್ಲಿ ನಿಷ್ಪತ್ತಿಯೂ ಒಂದಾಗಿದೆ. ಇದನ್ನು ರೂಪ ನಿಷ್ಪತ್ತಿ ಎಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ಪ್ರತಿ ಪದಕ್ಕೆ ನಿಷ್ಪತ್ತಿಯನ್ನು ಹೇಳುವುದುಂಟು. ಪುರಾಣನಾಮ ಚೂಡಾಮಣಿ, ಭಾರತ ಪದಕೋಶ, ಕಾವ್ಯಾರ್ಥ ಪದಕೋಶಗಳನ್ನಿಲ್ಲಿ ಹೆಸರಿಸಬಹುದು. ಸಂಸ್ಕೃತವನ್ನು ಕಣ್ಣು ಮುಂದಿಟ್ಟುಕೊಂಡು ವ್ಯಾಕರಣ ರಚಿಸಿದ ನಾಗವರ್ಮ ಮತ್ತು ಕೇಶಿರಾಜರೂ ಕೂಡಾ ತಮ್ಮ ತಮ್ಮ ವ್ಯಾಕರಣ ಗ್ರಂಥಗಳಲ್ಲಿ ನಿಷ್ಪತ್ತಿಯ ಕುರಿತಾಗಿ ವಿವರಿಸಿದ್ದಾರೆ. ಹೊಸಗನ್ನಡದ ಸಂದರ್ಭದಲ್ಲಿ ಡಾ. ಆ.ನೇ. ಉಪಾಧ್ಯೆ, ಡಾ. ಡಿ.ಎಲ್. ನರಸಿಂಹಾಚಾರ್. ಡಾ. ಎಂ. ಗೋವಿಂದ ಪೈ, ಡಾ. ಸೇಡಿಯಾಪು ಕೃಷ್ಣಭಟ್, ಡಾ. ಪಾ.ವೆಂ. ಆಚಾರ್ಯ ಮುಂತಾದ ಅದ್ವೈರ್ಯರು ಈ ನಿಷ್ಪತ್ತಿ ಶಾಸ್ತ್ರವನ್ನು ಬೆಳೆಸಿದ್ದಾರೆ, ಬೆಳಗಿಸಿದ್ದಾರೆ. ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ ಡಾ. ಟಿ.ವ್ಹಿ.

ವೆಂಕಟಾಚಲಶಾಸ್ತ್ರಿ, ಡಾ. ಹಂಪನಾ, ಡಾ. ವೆಂಕಟಸುಬ್ಬಯ್ಯ ಮೊದಲಾದವರು ಈ ಪರಂಪರೆಯನ್ನು ಮುಂದುವರೆಸಿದವರಲ್ಲಿ ಡಾ. ಬಿ.ಆರ್. ಹಿರೇಮಠ ಅವರು ಒಬ್ಬರಾಗಿದ್ದರು.

ಶಾಸನಗಳಲ್ಲಿ ಹದಿನೆಂಟು ಸಂತತಿ ತುಳಿಲಾಳು, ಶೆಟ್ಟಿ ಬಣಂಜಿಗ ಮತ್ತು ವೀರ ಬಣಂಜಿಗ, ಬೈಸಣಿಕೆ ನಿಷ್ಪತ್ತಿ ಹಾಗೂ ಅರ್ಥವಿವೇಚನೆ, ಬಸವಕಲ್ಯಾಣ ಪರಿವೀಕ್ಷಣೆ ಮುಂತಾದ ಲೇಖನಗಳು ನಿಷ್ಪತ್ತಿ ಶಾಸ್ತ್ರಕ್ಕೆ ಸಂಬಂಧಿಸಿವೆ.

**I. ಒರೆಗಲ್ಲು:**

ಶೀರ್ಷಿಕೆಯಡಿಯಲ್ಲಿ ೧೮ ಸಂತತಿ ಪದ ನಿಷ್ಪತ್ತಿಯನ್ನು ಈ ಲೇಖನದಲ್ಲಿ ಕೈಗೊಂಡಿದ್ದಾರೆ. ಕರ್ನಾಟಕ ಭಾರತಿ ಎಂಬ ತ್ರೈಮಾಸಿಕ ಪತ್ರಿಕೆಯಲ್ಲಿ ಇದು ಪ್ರಕಟವಾಗಿದೆ. "ಸಂತಾನವು, ಸಂತತಿಗಳು, ಸಮಸ್ತ ಸಂತಾನರು, ಸಮಸ್ತ ಸಂತತಿಗಳು ಎಂಬಿವು ಹದಿನೆಂಟು ಸಂತತಿಗೆ ಪರ್ಯಾಯವಾಗಿ ಶಾಸನಗಳಲ್ಲಿ ಬಳಕೆಯಾದ ಪದವಾಗಿವೆ. ಈ ಪದಪ್ರಯೋಗ ಶಿಲಾಹಾರದ ಶಾಸನದಲ್ಲಿ ಮಾತ್ರ ಕಂಡುಬರುವುದು. ಒಂದು ವೈಶಿಷ್ಟ್ಯವೆಂದೇ ಹೇಳಬೇಕು"[೪೬] ಎಂದು ಹೇಳುವಲ್ಲಿ ಹದಿನೆಂಟು ಸಂತತಿಯ ಪರ್ಯಾಯ ಪದಗಳನ್ನು ವಿವರಿಸಿದ್ದಾರೆ. ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಕ್ರಿ. ಶ. ೧೧೭೧ರ ಮುತ್ತಗೆಯ ಶಾಸನ, ಅಲ್ಲಿಯದೇ "೧೧೪೭ರ ಮುತ್ತಗೆಯ ಮತ್ತೊಂದು ಶಾಸನ ಎರಡನ್ನೂ ಆಧಾರವಾಗಿರಿಸಿಕೊಂಡು ೧೮ ಸಂತತಿ ಪದದ ನಿಷ್ಪತ್ತಿಯನ್ನು ಹೇಳಿದ್ದಾರೆ."[೪೭]

**II. ಶಾಸನಗಳಲ್ಲಿ ತುಳಿಲಾಳು :**

ಕರ್ನಾಟಕದ ಕ್ಷಾತ್ರ ಪರಂಪರೆಯಲ್ಲಿ ಜೋಳವಾಳಿ, ವೇಳೆವಾಳಿ, ಲೆಂಕವಾಳಿ ಮುಂತಾದವುಗಳು ಮಹತ್ವದ ವರ್ಗವೆನಿಸಿದ್ದವು. ಆ ಪರಂಪರೆಯಲ್ಲಿ ತುಳಿಲಾಳು ಒಂದಾಗಿದೆ. ತುಳಿಲಾಳ್ ತುಳಿಲಾಳತನ ಅಥವಾ ತುಳಿಲ ಸಂದಿಕೆ (=ವೀರಸಿದ್ಧಾಂತ) ಪದಗಳ ಸಾಮಾನ್ಯ ತಾತ್ವಿಕ ಅರ್ಥ ಹಾಗೂ ಸ್ವರೂಪಗಳನ್ನು ವಿವರಿಸಿದ್ದಾರೆ. ತುಳಿಲಾಳ್ ಪದವು ಜೋಳವಾಳಿ ವೇಳೆವಾಳಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ಪ್ರಸ್ತಾಪಿಸಿದ್ದಾರೆ. ಶ್ರವಣ ಬೆಳ್ಗೊಳ ಶಾಸನ, ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯ ಶಾಸನ, ನಂದಳಿಕೆಯ ಬೊಮ್ಮಿ ದೇವರಸನ ಶಾಸನ ಹಾಗೂ ಶಾಸನಗಳಲ್ಲಿ ಉಲ್ಲೇಖಗೊಂಡ ಕೆಲವು ವೃತ್ತಗಳನ್ನು ಆಧರಿಸಿ ತುಳಿಲಾಳ್ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. "ಶಾಸನೋಕ್ತ 'ತುಳಿಲಾಳ್'(ಅರಸನ ಅಂಗರಕ್ಷಕ)ಗಳನ್ನು ಹೆಸರಿಸಿದ್ದಾರೆ."[೪೮] ಈ ಲೇಖನ ಬೆಂಗಳೂರು ವಿಶ್ವವಿದ್ಯಾಲಯದ ಸಂಶೋಧನಾ ಪತ್ರಿಕೆಯಾದ ಸಾಧನೆಯ ಮಂಥನ ಅಂಕಣದಲ್ಲಿ ಪ್ರಕಟವಾಗಿದೆ. ೨ ಪುಟದ ಲೇಖನವಿದು.

**III. ಸೆಟ್ಟಿಬಣಂಜಿಗ ಮತ್ತು ವೀರಬಣಂಜಿಗ :**

ಪ್ರಸ್ತುತ ಲೇಖನವು ಜಾನಪದ ಗಂಗೋತ್ರಿಯಲ್ಲಿ ಪ್ರಕಟಿತವಾಗಿದೆ. ಒಟ್ಟು ೯ ಪುಟದ ಲೇಖನವಿದು. ಸೆಟ್ಟಿಬಣಂಜಿಗ, ಮತ್ತು ವೀರಬಣಂಜಿಗ ಈ ಮೂರು ಪದಗಳ ಉತ್ಪತ್ತಿ ಕುರಿತಾಗಿ

ಜಿಜ್ಞಾಸೆ ಮಾಡಿದ್ದಾರೆ. ವಾತುಲಾಗಮದ ವಿಜಯಭೈರವಿ ಪಟಲದಲ್ಲಿಯ ಪಂಚ ಸೆಟ್ಟಿಯರ ನಿಷ್ಪತ್ತಿ ವಿವರ ಹಾಗೂ ನಿರಂಜನ ವಂಶ ರತ್ನಾಕರದಲ್ಲಿರುವ ಸೆಟ್ಟಿಗಳ ಉತ್ಪತ್ತಿ ವಿವರ ಎಂದು ಉಪಶೀರ್ಷಿಕೆಗಳಲ್ಲಿ ದೀರ್ಘವಾಗಿ ಕನ್ನಡ ಸಾಹಿತ್ಯ ಮುಂತಾದವುಗಳನ್ನು ಆಧರಿಸಿ ಈ ಪದಗಳ ನಿಷ್ಪತ್ತಿಯನ್ನು ವಿವರಿಸಿದ್ದಾರೆ. "ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಸೆಟ್ಟಿ ಬಣಂಜಿಗ, ಪದಗಳು ಶುದ್ಧ ವ್ಯಾಪಾರ ವೃತ್ತಿ ಉಳ್ಳವರನ್ನು ಸೂಚಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ."[೨೯]

**IV. ಬೈಸಣಿಗೆ ; ನಿಷ್ಪತ್ತಿ ಹಾಗೂ ಅರ್ಥವಿವೇಚನೆ :**

ಈ ಲೇಖನವು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ಸಂ. ೬೯ ಸಂ. ೧ ರಲ್ಲಿ) ಜೂನ್ ೮೪ರಲ್ಲಿ ಪ್ರಕಟವಾಗಿದೆ. ೫ ಪುಟದ ಲೇಖನವಿದು. ಇದರಲ್ಲಿ ಬೈಸಣಿಗೆಯ ಅರ್ಥವನ್ನು ವಿವೇಚಿಸಲಾಗಿದೆ. ಈ ಮುಂಚೆ ಬಿ.ಎಲ್. ರೈಸ್, ಬಿ.ಎ. ಸಾಲೆತ್ತೊರೆ, ಆರ್. ರಾಮರಾವ, ಪಿ.ಬಿ. ದೇಸಾಯಿ ಮುಂತಾದವರು ಹೇಳಿರುವ ಅರ್ಥಗಳನ್ನು ಚರ್ಚಿಸಿದ್ದಾರೆ. ಶಾಸನಗಳು ಹಳಗನ್ನಡ ಸಾಹಿತ್ಯ ಎಫಿಗ್ರಾಫಿಯಾ ಕರ್ನಾಟಕ, ಸಂಭಾವನೆ ಗ್ರಂಥಗಳು, ಸ್ಮರಣ ಸಂಚಿಕೆಗಳು ಮೊದಲಾದ ಆಕರ ಸಾಮಗ್ರಿಯನ್ನಿರಿಸಿಕೊಂಡು ಬೈಸಣಿಗೆ ಪದಕ್ಕೆ ಸರಿಯಾದ ನಿಷ್ಪತ್ತಿ ಹೇಳಿದ್ದಾರೆ.

"ಬೈಸಣಿಗೆ ನೂಲಿನಿಂದ ನೇಯ್ದ ಕಟ್ಟಿಗೆ ಅಥವಾ ಲೋಹದಿಂದ (ಮಂಚದ ಹಾಗೆ) ತಯಾರಿಸಿದುದಾಗಿರಬೇಕು. ವಜ್ರ ರತ್ನಗಳನ್ನು ಕೂಡಿಸಿದ ಕಟ್ಟಿಗೆ ಅಥವಾ ಲೋಹದ ಬೈಸಣಿಗೆಯೇ ವಜ್ರ ಬೈಸಣಿಗೆ, ರತ್ನ ಸಿಂಹಾಸನವಾಗಿರಬಹುದು. ಹೀಗೆ ಬೈಸಣಿಗೆ, ವಜ್ರ ಬೈಸಣಿಗೆ ಅಥವಾ ವಜ್ರ ಸಿಂಹಾಸನ, ರತ್ನ ಸಿಂಹಾಸನಗಳು ವರ್ತಕ ವಿಶೇಷ ಸಾಮೂಹಿಕ ಆಸನಗಳೆಂದು ನಿರ್ಧರಿಸಲು ಸಾಧ್ಯವಾಗುತ್ತದೆ"[೩೦] ಎಂದು ಅರ್ಥೈಸಿರುವುದು ಗಮನಾರ್ಹವಾಗಿದೆ.

ಇದೇ ರೀತಿ ಐಹೊಳೆ ನಿಷ್ಪತ್ತಿ, ಮುಧೋಳ ಗ್ರಾಮನಾಮ ವಿವೇಚನೆ, ಶಿರೋಳ ಗ್ರಾಮ ವಿವೇಚನೆ, ಗೋಸಲ ಪೀಠ, ಎಳಮೇಲ ನಿಷ್ಪತ್ತಿ (ಆಲಮೇಲ) ಇಷ್ಟೆ ಮುಂತಾದ ಪದಗಳನ್ನು ಚರ್ಚಿಸಿ ಅವುಗಳ ನಿಷ್ಪತ್ತಿಯನ್ನು ವಿವರಿಸಿದ್ದಾರೆ. ಡಾ. ಬಿ.ಆರ್. ಹಿರೇಮಠ ಅವರು ಸಿದ್ಧಪಡಿಸಿದ ಪದ ನಿಷ್ಪತ್ತಿಯನ್ನು ಸಾರಸ್ವತ ಲೋಕವು ಆದರದಿಂದ ಸ್ವೀಕರಿಸಿದೆ. ಸಂಖ್ಯೆಯ ದೃಷ್ಟಿಯಿಂದ ವಿಪುಲವಾಗಿರದಿದ್ದರೂ ಸತ್ವದ ದೃಷ್ಟಿಯಿಂದ ಸಾರ್ಥಕವಾದ ಪ್ರಯತ್ನವಾಗಿದೆ. ಈ ಕ್ಷೇತ್ರದಲ್ಲಿ ತಮ್ಮನ್ನು ಇನ್ನಷ್ಟು ತೊಡಗಿಸಿಕೊಂಡಿದ್ದರೆ ನಾವು ವಿಜ್ಞಾನ ಕ್ಷೇತ್ರಕ್ಕೆ ಬಹು ದೊಡ್ಡ ಕೊಡುಗೆಯಾಗಬಹುದಿತ್ತು.

ಶಾಸನೋಕ್ತ ಗುಡ್ಡವ್ವೆ ಶಾಸನೋಕ್ತ ಮರುಳಸಿದ್ಧ ಹಾಗೂ ರೇವಣಸಿದ್ಧ ಈ ಎರಡೂ ಲೇಖನಗಳು ಸಾಧನೆಯಲ್ಲಿ ಪ್ರಕಟವಾಗಿವೆ. ಶಾಸನೋಕ್ತ ಗುಡ್ಡವ್ವೆ ಕಿರು ಟಿಪ್ಪಣಿಯಾಗಿದ್ದು ಅರ್ಧಪುಟದ

ವ್ಯಾಪ್ತಿಯಲ್ಲಿದೆ. ಶಾಸನೋಕ್ತ ಮರುಳಸಿದ್ಧ ಹಾಗೂ ರೇವಣಸಿದ್ಧ ಬಸವ ಪಥದಲ್ಲಿ ಪ್ರಕಟವಾಗಿದ್ದು, ೩ ಪುಟಗಳ ಕಿರು ಲೇಖನವಾಗಿದೆ.

**೫.೨.೫. ವಿಮರ್ಶೆ :**

ಸಂಶೋಧನೆ ಮತ್ತು ವಿಮರ್ಶೆ ಜೊತೆ ಜೊತೆಯಾಗಿ ಸಾಗುವಂತಹದು. ವಿಮರ್ಶೆಯಲ್ಲಿ ಸಂಶೋಧನೆಯ ಅಂಶವಿರುತ್ತದೆ. ಹಾಗೆ ಸಂಶೋಧನೆಯಲ್ಲಿ ವಿಮರ್ಶೆ ಸಂಗತಿಗಳು ಬೆರೆತಿರುತ್ತವೆ. ಡಾ. ಬಿ.ಆರ್. ಹಿರೇಮಠ ಅವರು ಖ್ಯಾತ ಸಂಶೋಧಕರಾಗಿದ್ದರಿಂದ ಅವರ ಸಂಶೋಧನಾ ಲೇಖನಗಳಲ್ಲಿ ವಿಮರ್ಶೆಯ ಅಂಶಗಳು ಹಾಸುಹೊಕ್ಕಾಗಿವೆ. ಸಂಶೋಧನೆಯಲ್ಲದೆ ಪ್ರತ್ಯೇಕವಾಗಿ ಅಪ್ಪಟ ವಿಮರ್ಶಾ ಲೇಖನಗಳನ್ನು ಕಟ್ಟಿಕೊಟ್ಟಿದ್ದಾರೆ. ಮೂಲತಃ ಕವಿಯಾಗಿದ್ದ ಡಾ. ಬಿ.ಆರ್. ಅವರು ಒಬ್ಬ ಒಳ್ಳೆಯ ವಿಮರ್ಶಕರೂ ಆಗಿದ್ದರು. "ಕಾವ್ಯ ಸೃಜನಶೀಲ ಮಾಧ್ಯಮ, ವಿಮರ್ಶೆ ಸೃಜನೇತರ ಮಾಧ್ಯಮವೆಂಬ ಪರಂಪರಾಗತ ಅಭಿಪ್ರಾಯವೂ ಸರಿಯಾದುದಲ್ಲ. ವಿಮರ್ಶೆಯೊಳಗೂ ಸೃಜನಕ್ರಿಯೆ ಇದ್ದೇ ಇರುತ್ತದೆ. ಭಾವನೆ ತೀವ್ರಗೊಂಡಾಗ, ಕಲ್ಪನೆಯು ಉತ್ತುಂಗಕ್ಕೆ ಏರಿದಾಗ, ಸ್ವಾನುಭವ ಕಾವ್ಯವಾಗಿ ಹೆಪ್ಪುಗಟ್ಟುತ್ತದೆ. ಅನುಭವದಲ್ಲಿ ಚಿಂತನೆ, ವಿವೇಚನೆ, ವಾಸ್ತವಿಕ ಅಂಶ ಹೆಚ್ಚಳಗೊಂಡಾಗ ವಿಮರ್ಶೆ ರೂಪಗೊಳ್ಳುತ್ತದೆ. ಕಾವ್ಯ ಗಗನಗಾಮಿಯಾಗಿ ವಿಹರಿಸಿದರೆ ವಿಮರ್ಶೆ ಭೂಮಿಯೊಡನೆ ಒಡನಾಟವಾಡುತ್ತದೆ. ಕಾವ್ಯ ವಿಮರ್ಶೆಗಳೆರಡೂ ಸಂಭವಿಸುವುದು ಭಾಷೆಯಲ್ಲಿ ಎಂಬುದು ಮಹತ್ತರವಾಗಿದೆ."[೫೧] ಈ ಮಾತುಗಳು ವಿಮರ್ಶೆಗೆ ಬರೆದ ವ್ಯಾಖ್ಯಾನವಾಗಿದೆ. ಡಾ. ಬಿ.ಆರ್. ಹಿರೇಮಠ ಅವರು ಬರೆದಿರುವ ವಿಮರ್ಶಾ ಲೇಖನಗಳನ್ನು ಕ್ರೋಢೀಕರಿಸಿ ವಿವೇಚಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ವಚನಸಾಹಿತ್ಯ, ಶರಣ ಸಾಹಿತ್ಯ, ಜೈನಸಾಹಿತ್ಯ ಮತ್ತು ಸಂಕೀರ್ಣ ಸಾಹಿತ್ಯವೆಂದು ವಿಭಾಗಿಸಿಕೊಂಡು ಚರ್ಚಿಸಲಾಗುವುದು.

**ಅ) ವಚನ ಸಾಹಿತ್ಯ :**

ಡಾ. ಬಿ.ಆರ್. ಹಿರೇಮಠ ಅವರು ವಚನ ವಾಙ್ಮಯದ ಕುರಿತಾಗಿ ಸಾಕಷ್ಟು ಕಾರ್ಯನಿರ್ವಹಿಸಿದ್ದಾರೆ. ಸಂಶೋಧನೆಯಂತೆಯೇ ವಿಮರ್ಶಾ ಲೇಖನಗಳೂ ಸಾಕಷ್ಟಿವೆ. ಇಲ್ಲಿ ವಚನ ವ್ಯಾಖ್ಯಾನಗಳು, ಹೊಸ ವಚನಗಳು ಮತ್ತು ವಚನಕಾರರು, ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ, ಮರುಳ ಶಂಕರದೇವರು, ಶಿವಾಗಮಗಳು ಮತ್ತು ಹಾವಿನಹಾಳ ಕಲ್ಲಯ್ಯ ವಚನ ಸಾಹಿತ್ಯದಲ್ಲಿ ಚಾರಿತ್ರಿಕ ಸಂಗತಿಗಳು ಬಸವೋತ್ತರ ಯುಗದ ಸ್ವರವಚನಕಾರರು, ಸುಖಸಂಪಾದನೆಯ ವಚನಗಳು, ಕಾಡಸಿದ್ಧೇಶ್ವರ ವಚನಗಳ ಸಾಹಿತ್ಯಿಕ ಅಧ್ಯಯನ, ಧರ್ಮಗುರು ಮತ್ತು ಕೃತಿಚೌರ್ಯ ಮೊದಲಾದವುಗಳನ್ನು ಪರಿಶೀಲಿಸಲಾಗುವುದು.

**I 'ವಚನ ವ್ಯಾಖ್ಯಾನಗಳು' :**

ಹತ್ತು ಪುಟದ ಲೇಖನವಿದು. ಇದು ಬೆಂಗಳೂರಿನ "ಸರ್ಪಭೂಷಣ ಶಿವಯೋಗೇಶ್ವರ ಗ್ರಂಥಮಾಲೆಯಿಂದ ಪ್ರಕಟವಾಗಿರುವ ವಚನಸಾಹಿತ್ಯದ ದ್ವಿತೀಯ ಘಟ್ಟ" ಪುಸ್ತಕದಲ್ಲಿ ಪ್ರಕಟವಾಗಿದೆ. ವಚನಸಾಹಿತ್ಯ ಈ ಸಾಹಿತ್ಯಕ್ಕೆ ಬೆಳೆದು ಬಂದ ವ್ಯಾಖ್ಯಾನ ಸಾಹಿತ್ಯವನ್ನು ವಿವೇಚಿಸಿದ್ದಾರೆ. "ಸೃಜನ ಸಾಹಿತ್ಯದ ಜೊತೆಯಲ್ಲಿಯೇ ಇಲ್ಲವೆ ತರುವಾಯ ವಿಮರ್ಶನ ಸಾಹಿತ್ಯ ಹುಟ್ಟುತ್ತದೆ. ಒಂದು ಕೃತಿಯ ಅರ್ಥ, ಭಾವ ಉದ್ದೇಶಗಳನ್ನು ಎಳೆ ಎಳೆಯಾಗಿ ಬಿಡಿಸಿ ಹೇಳುವುದು ವಿಮರ್ಶಾ ಸಾಹಿತ್ಯದ ಕಾರ್ಯ"[೫೨]ಎಂದು ಹೇಳಿ "ಕನ್ನಡ ಭಾಷೆಯ ಅವಸ್ಥಾಭೇದ ಹಾಗೂ ಅರ್ಥ ಜಟಿಲತೆಗಳು ಈ ವಿಮರ್ಶನ ಸಾಹಿತ್ಯ ವರ್ಗಕ್ಕೆ ಸೇರಿದ ವೀರಶೈವ ವ್ಯಾಖ್ಯಾನ ಸಾಹಿತ್ಯ ಹುಟ್ಟಿಗೆ ಕಾರಣ."[೫೩] ಮೇಲಿನ ಮಾತುಗಳಲ್ಲಿ ಕ್ರಮವಾಗಿ ವಿಮರ್ಶಾ ಸಾಹಿತ್ಯ ಮತ್ತು ವ್ಯಾಖ್ಯಾನ ಸಾಹಿತ್ಯವನ್ನು ತಮ್ಮದೇ ಆದ ರೀತಿಯಲ್ಲಿ ವಿವರಿಸಿದ್ದಾರೆ. ವ್ಯಾಖ್ಯಾನ ಸಾಹಿತ್ಯದಲ್ಲಿ ಮತ್ತೆ ಮೂರು ಭಾಗ ಮಾಡಿಕೊಂಡು ವಿಸ್ತೃತವಾಗಿ ಲೇಖನ ಕಟ್ಟಿಕೊಟ್ಟಿದ್ದಾರೆ. "ಸಮಗ್ರ ಕನ್ನಡ ವ್ಯಾಖ್ಯಾನ ಸಾಹಿತ್ಯದಲ್ಲಿ ವಚನ ವ್ಯಾಖ್ಯಾನ ಸಾಹಿತ್ಯ ಸತ್ವ ಹಾಗೂ ಸಂಖ್ಯೆಯ ದೃಷ್ಟಿಯಿಂದ ಅಗ್ರ ಸ್ಥಾನದಲ್ಲಿದೆ" [೫೪] ಎಂದಿರುವುದು ಅವರ ಆಳವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ.

**II. 'ಹೊಸ ವಚನಗಳು ಮತ್ತು ವಚನಕಾರರು' :**

೧೨ ಪುಟದ ವಿಮರ್ಶಾ ಲೇಖನವಿದು. ಬಸವಪಥದಲ್ಲಿ ಜೂನ್ ೧೯೮೪ರಲ್ಲಿ ಪ್ರಕಟವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರದ ಕಾಗದ ಪ್ರತಿಯನ್ನು ಆಧರಿಸಿ ೩೮ ಜನ ವಚನಕಾರರು ರಚಿಸಿದ ವಚನಗಳ ಪರಿಚಯ ಈ ಲೇಖನದ ವಸ್ತುವಾಗಿದೆ. ಸಕಲೇಶ, ಮಾದರಸ, ಶಂಕರದಾಸಿಮಯ್ಯ, ಮರುಳ ಶಂಕರದೇವ, ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮುಕ್ತಾಯಕ್ಕ ಮುಂತಾದ ವಚನಕಾರರಲ್ಲದೆ ಹೊಚ್ಚ ಹೊಸದಾಗಿ ಮೂವತ್ತೆಂಟು ವಚನಕಾರರು ರಚಿಸಿರುವ ವಚನಗಳ ಪರಿಚಯವಿಲ್ಲಿದೆ. ಅಮರೇಶ್ವರ ದೇವ, ಆಚಾರದ ಭೀಮಯ್ಯ, ಕಾಶಿಮಠದ ಮಹಾಂತ ದೇವ, ಕೈಲಾಸಮಠದ ಶಿವಲಿಂಗದೇವ, ಕೆಂಜಡೆಯ ಬಸವದೇವ, ಗಾರುಡಿ ಸಂಗಯ್ಯ, ಗುಂಡ ಬ್ರಹ್ಮಯ್ಯ, ಗುರುಪಾದದೇವ, ಗೌರಮ್ಮ, ದಾಸೋಹ ಮಠದ ಅನ್ನಪೂರ್ಣದೇವ, ನಿರಂಜನದೇವ, ನಿರ್ಗುಣದೇವ, ನಿರ್ಮಲದೇವ, ನಿರ್ವಾಣದೇವ, ನಿರಾಮಯ ದೇವ, ನಿಶ್ಚಿಂತದೇವ, ನೀರಮಠದ ನಾಗಲಿಂಗದೇವ, ನೀಲಮ್ಮ, ನೀಲಕಂಠದೇವ, ಪಂಚವಟಿರಾಮಲಿಂಗದೇವ, ಪುಸ್ತಕ ಮಠದ ಪಂಚಾಕ್ಷರ ದೇವ, ಮಂಗಳವಾಡದ ಕಂಬಳಿ ಸ್ವಾಮಿ, ರುದ್ರಾಕ್ಷಿಮಠದ ಸಿದ್ಧದೇವ, ಲಿಂಗಕಾಂತಯ್ಯ, ವಿಭೂತಿಮಠದ ಗುರುಲಿಂಗದೇವ, ಶಿಖರೇಶ್ವರ ಗುಡಿಯ

ಶಾಂತಲಿಂಗದೇವ, ಶಿವಪುರದ ಶಿವದೇವ, ಶಿವರಾತ್ರಿ ಸಂಗಣ್ಣ, ಶಿವಾಚಾರ ಸಂಗಯ್ಯ, ಶ್ರೀ ಗಿರಿಸಿದ್ಧರಾಮದೇವ, ಸೊನ್ನಲಾಪುರದ ಮಲ್ಲಿಕಾರ್ಜುನ, ಸೊಪ್ಪಿಮಠದ ಶಾಂತದೇವ, ಸೊಪ್ಪಯ್ಯ, ಹಂಪಿಮಠದ ವಿರೂಪಾಕ್ಷದೇವ, ಹಿಮಾಲಯದ ಹಿರಣ್ಯಲಿಂಗದೇವ, ಹಿಮಾಚಲದ ಕುಮಾರ ಸ್ವಾಮಿ, ಹೂವಿನಮಠದ ಶಂಕರದೇವ ಮುಂತಾದವರ ವಚನಗಳನ್ನಿಲ್ಲಿ ವಿವರಿಸಿದ್ದಾರೆ. "ಕೆಲವರು ಹನ್ನೆರಡನೇ ಶತಮಾನದವರು ಇನ್ನು ಕೆಲವರು ಹದಿನೈದನೆಯ ಹಾಗೂ ನಂತರದ ಶತಮಾನದವರು ಆಗಿರುವ ಸಾಧ್ಯತೆ ಇದೆ"[೨೫೪] ಎಂದಿದ್ದಾರೆ.

**III. ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ :**

ಕನ್ನಡ ಸಾಹಿತ್ಯದಲ್ಲಿ ದಾಸಿಮಯ್ಯ ಹೆಸರಿನವರು ಅನೇಕ ಜನರಿದ್ದಾರೆ. ಅವರಲ್ಲಿ ದೇವರ ದಾಸಿಮಯ್ಯ, ಜೇಡರದಾಸಿಮಯ್ಯ, ಶಂಕರ ದಾಸಿಮಯ್ಯ ಪ್ರಮುಖರು. ಇವರೊಂದಿಗೆ ದೇವಾಂಗ ದಾಸಿಮಯ್ಯ, ಶಿವದಾಸಿಮಯ್ಯರ ಹೆಸರುಗಳು ಸೇರಿಕೊಂಡಿವೆ. ಇವರೆಲ್ಲರೂ ವೃತ್ತಿ, ಕಾಲ, ದೇಶಗಳ ದೃಷ್ಟಿಯಿಂದ ಬೇರೆ ಬೇರೆಯಾಗಿದ್ದಾರೆ. ಡಾ. ಬಿ.ಆರ್. ಹಿರೇಮಠ ಅವರು ದೇವರ ದಾಸಿಮಯ್ಯ, ಜೇಡರ ದಾಸಿಮಯ್ಯ ಇಬ್ಬರೂ ಬೇರೆ ಬೇರೆ ಎಂಬುದನ್ನು ಆಧಾರಸಹಿತವಾಗಿ ಸಿದ್ಧಪಡಿಸಿದ್ದಾರೆ. ಇವರಿಬ್ಬರ ಬಗ್ಗೆ ದೊರೆಯುವ ಮಾಹಿತಿಗಳನ್ನೆಲ್ಲ ಒಗ್ಗೂಡಿಸಿ ವಿಶ್ಲೇಷಿಸಿದ್ದಾರೆ.

**IV. ಮರುಳ ಶಂಕರದೇವರ ವಚನಗಳು ಒಂದು ಅವಲೋಕನ :**

ಇದು ೨೦೦೩ರ ಸುಕುಮಾರ ಪತ್ರಿಕೆಯಲ್ಲಿ ಪ್ರಕಟವಾಗಿದೆ. ೩ ಪುಟಗಳ ವ್ಯಾಪ್ತಿಯುಳ್ಳ ಕಿರುಲೇಖನವಿದು. ಮರುಳ ಶಂಕರದೇವರು ೧೨ ನೇ ಶತಮಾನದ ಮಹಾ ಪ್ರಸಾದಿ. ಅವರ ವಚನಗಳ ಅವಲೋಕನ ಇಲ್ಲಿದೆ. "ಮರುಳ ಶಂಕರದೇವ ವಚನಗಳು ಮೃದುತ್ವ, ಲಾಲಿತ್ಯಸರಳತೆಯಿಂದ ಕೂಡಿದ್ದು ಅವುಗಳಲ್ಲಿ ಪ್ರಸಾದವಾಣಿ ಪ್ರವಹಿಸುತ್ತದೆ. ವಚನಗಳ ಭಾವ, ಭಾಷೆ, ಅಭಿವ್ಯಕ್ತಿ ಪದ, ವಾಕ್ಯ, ವಾಣಿಗಳಲ್ಲಿ ಪ್ರಸಾದತ್ವ ಕಂಡುಬರುತ್ತದೆ. ಅನುಭಾವದಲ್ಲಿ ಕಾವ್ಯವಾಗಿ ಅರಳಿದೆ. ಇವರ ವಚನಗಳಲ್ಲಿ ಲೋಕ ನೀತಿ ಇಲ್ಲ. ಅನುಭಾವ ತತ್ವಗಳ ಪ್ರತಿಪಾದನೆ ಇದೆ. ಮರುಳ ಶಂಕರದೇವರ ರೂಪಕ ನಿರ್ಮಾಣ ಶಕ್ತಿ ಅತ್ಯಂತ ಮಹತ್ವಪೂರ್ಣವಾಗಿದೆ. ಇವರ ವಚನಗಳು ಸಂಖ್ಯೆಯಿಂದ ಕಡಿಮೆ ಪ್ರಮಾಣದಲ್ಲಿದ್ದರೂ, ಸತ್ವ, ಶಕ್ತಿ, ನಿರೂಪಣೆ, ಅನುಭಾವ, ಭಾಷೆ, ಅಭಿವ್ಯಕ್ತಿಗಳಲ್ಲಿ ಉನ್ನತಿಕೆಯನ್ನು ಹೊಂದಿದವುಗಳಾಗಿರುತ್ತವೆ."[೨೫೬] ಇದು ಡಾ. ಬಿ. ಆರ್. ಹಿರೇಮಠ ಅವರ ವಿಮರ್ಶಾ ಮಾದರಿಯಾಗಿದೆ.

**V. ಕಾಡಸಿದ್ಧೇಶ್ವರ ವಚನಗಳ ಸಾಹಿತ್ಯಿಕ ಅಧ್ಯಯನ :**

ಈ ವಿಮರ್ಶಾ ಲೇಖನವು ೨೦೦೦ 'ಸೂರ್ಯ ಕೀರ್ತಿ' ಪತ್ರಿಕೆಯಲ್ಲಿ ಪ್ರಕಟವಾಗಿದ್ದು ೮ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಇದರಲ್ಲಿ ಕಾಡಸಿದ್ಧೇಶ್ವರ ವಚನಗಳನ್ನು ಸಾದ್ಯಂತವಾಗಿ

ಅಧ್ಯಯನಿಸಲಾಗಿದೆ. ೧೯೯೯ರಲ್ಲಿ ಬನಹಟ್ಟಿಯಲ್ಲಿ ಜರುಗಿದ ರಾಜ್ಯಮಟ್ಟದ ಕಾಡಸಿದ್ಧೇಶ್ವರ ವಚನ ಸಾಹಿತ್ಯವ ಸಮಾವೇಶದಲ್ಲಿ ಮಂಡಿಸಿದ ಪ್ರಬಂಧವಿದು. "ಕಾಡಸಿದ್ಧೇಶ್ವರರ ವಚನಗಳು ಸೃಜನ ಸಾಹಿತ್ಯ ವರ್ಗಕ್ಕೆ ಸೇರಿದಂತವುಗಳಾಗಿರುತ್ತವೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದವರಲ್ಲಿ ಕಾಡಸಿದ್ಧೇಶ್ವರರು ಅತ್ಯಂತ ಪ್ರಮುಖರೆನಿಸಿದ್ದಾರೆ"[೫೭] ಎಂದು ಹೇಳಿ ಅವರ ವಚನಗಳನ್ನು ಪರಿಚಯಿಸಿದ್ದಾರೆ. "ಕಾಡಸಿದ್ಧೇಶ್ವರರು ಪಾರಂಪರಿಕ ವಚನ ಪರಿಭಾಷೆಯನ್ನು ಚೆನ್ನಾಗಿ ಆತ್ಮಗತ ಮಾಡಿಕೊಂಡಿದ್ದರೂ ಸಮಕಾಲೀನ ಪ್ರಾದೇಶಿಕ ಭಾಷೆ, ದೇಶೀಯ ನುಡಿಗಟ್ಟು, ಲೋಕೋಕ್ತಿಗಳನ್ನು ಮುಕ್ತವಾಗಿ ಬಳಸಿ ವಚನಗಳು ಶಕ್ತಿಯುತವಾಗುವಂತೆ, ಸತ್ವಯುತವಾಗುವಂತೆ ನೋಡಿಕೊಂಡಿದ್ದಾರೆ. ಜೊತೆಗೆ ವಚನಗಳ ರಚನೆಗೆ ಜೀವಂತಿಕೆಯನ್ನು ತಂದುಕೊಟ್ಟಿದ್ದಾರೆ. ಕಾಡಸಿದ್ಧೇಶ್ವರರ ವಚನಗಳ ಪದಸಂಪತ್ತು, ಬೆಡಗಿನ ಪರಿಭಾಷೆ, ಕಾಯಕದ ಪರಿಭಾಷೆ, ಭಾಷೆಯ ಚೆಲುವು, ಅನ್ಯದೇಶಿ ಪದಗಳ ಪ್ರಯೋಗಗಳು ಸಾಹಿತ್ಯಿಕ ಸೊಗಸಿನ ಹೆಚ್ಚಳಕ್ಕೆ ಕಾರಣವೆನಿಸಿವೆ. ವಚನಗಳಲ್ಲಿ ಆದಿಪ್ರಾಸ, ಅನುಪ್ರಾಸ, ಅಂತ್ಯಪ್ರಾಸ, ಪಡಿಗಳನ್ನು ಅಳವಡಿಸಿ ಸೂತಕ ವಿಮುಕ್ತತೆ, ವಚನಗಳ ರಚನೆ, ಅಭಿವ್ಯಕ್ತಿಯ ವಿಧಾನಗಳಲ್ಲಿಯ ಸ್ವಚ್ಛಂದತೆಗಳಿಂದ ಕಾಡಸಿದ್ಧೇಶ್ವರರ ವಚನಗಳು ಹೆಚ್ಚು ಆತ್ಮೀಯವೆನಿಸಿಕೊಳ್ಳುತ್ತವೆ. ಇದೇ ಈ ವಚನಕಾರನ ವಚನಗಳ ಸಾಹಿತ್ಯಿಕ ಗುಣ."[೫೮] ಈ ಮಾತುಗಳು ಡಾ. ಬಿ.ಆರ್. ಹಿರೇಮಠರ ವಿಮರ್ಶಾ ಮಾದರಿಗೆ ನಿದರ್ಶನಗಳಾಗಿವೆ. ಈ ಲೇಖನಗಳಲ್ಲದೆ ಸುಖ ಸಂಪಾದನೆಯ ವಚನಗಳು, ಬಸವೋತ್ತರ ಯುಗದ ಎರಡನೆಯ ಘಟ್ಟದ ಸ್ವರ ವಚನಗಳು ಮುಂತಾದ ವಿಮರ್ಶಾ ಲೇಖನಗಳನ್ನು ಬರೆದಿದ್ದಾರೆ. ಪುಸ್ತಕದ ರೂಪದಲ್ಲಿ ಪ್ರಕಟವಾಗಿರುವ ವಿಮರ್ಶಾ ಲೇಖನಗಳನ್ನು ಹೊರತುಪಡಿಸಿ ಅಲ್ಲಲ್ಲಿ ಬಿಡಿ ಬಿಡಿಯಾಗಿ ಪ್ರಕಟವಾಗಿರುವ ಆದರೆ ಪುಸ್ತಕರೂಪದಲ್ಲಿ ಸಂಕಲನಗೊಳ್ಳದಿರುವ ವಿಮರ್ಶಾ ಲೇಖನಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

**ಬ) ಶರಣ ಸಾಹಿತ್ಯ :**

ಶರಣ ಸಾಹಿತ್ಯ ಮತ್ತು ಸಂಸ್ಕೃತಿ, ಸಿದ್ಧರಾಮೇಶ್ವರ ಪುರಾಣ, ವೀರಶೈವ ಪುರಾಣಗಳು ಮತ್ತು ವೀರಶೈವಾಮೃತ ಪುರಾಣ, ಹಾವೇರಿ ಶ್ರೀ ಶಿವಬಸವೇಶ್ವರ ಪುರಾಣ, ಬಸವಕಲ್ಯಾಣ ಪ್ರದೇಶದ ಪರಿವೀಕ್ಷಣೆ, ಫ.ಗು. ಹಳಕಟ್ಟಿಯವರ ಸಂಶೋಧನಾಕಾರ್ಯ ಕೃತಿಚೌರ್ಯ ಧರ್ಮಗುರು ಮತ್ತು ಮುಂತಾದವು ಪ್ರಸ್ತುತ ಭಾಗದಲ್ಲಿ ಸಮಾವೇಶಗೊಳ್ಳುತ್ತವೆ.

ಶರಣ ಸಾಹಿತ್ಯ ಮತ್ತು ಸಂಸ್ಕೃತಿಯು ಸುಕುಮಾರ ತ್ರೈಮಾಸಿಕ ಪತ್ರಿಕೆ (ಸಂ. ೩, ಸಂ -೪) ೨೦೦೫ರಲ್ಲಿ ಪ್ರಕಟಿತವಾಗಿದೆ. ಇದು ೯ ಪುಟದ ಲೇಖನವಾಗಿದೆ. ಶರಣ ಸಾಹಿತ್ಯ ಮತ್ತು ಸಂಸ್ಕೃತಿಯನ್ನು

ವಿಸ್ತೃತವಾಗಿ ಚರ್ಚಿಸಿದ್ದಾರೆ. 'ಶರಣ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳು ಪಂಡಿತರ ಹಾಗೂ ಸಂಶೋಧಕರ ಮಟ್ಟದಲ್ಲಿ ಮಾತ್ರ ಉಳಿಯದೆ, ಜನಸಾಮಾನ್ಯರಿಗೂ ತಿಳಿಯುವ 'ಸಂವಹನಶೀಲತೆ'ಯನ್ನು ಹೊಂದಿರಬೇಕು. ಅಂದರೆ ಪಾಂಡಿತ್ಯ ಮತ್ತು ಸಂಶೋಧನೆಗಳು ಕ್ರಿಯಾಶೀಲವಾಗಿರುವಂತೆ, ಜನಪರವಾಗಿರುವಂತೆ, ಜನಪ್ರಿಯವಾಗಿರುವಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿ ಇಂದಿನ ಶರಣ ಸಾಹಿತ್ಯ ಲೇಖಕರದಾಗಿರುತ್ತದೆ"[೫೮] ಎಂದು ಹೇಳಿ ಮುಂದುವರೆದು "ನಾವೀಗ ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲನ್ನು ಪ್ರವೇಶಿಸಿದ್ದೇವೆ. ಈ ಹೊಸ ಶತಮಾನ ನಮ್ಮ ಚಿಂತನ ಕ್ರಮವನ್ನು ತಿದ್ದುವಂತಾಗಲಿ, ವಿಚಾರಗಳನ್ನು ಅರಳಿಸುವಂತಾಗಲಿ, ವಿಚಾರಗಳನ್ನು ಉದ್ದೀಪನಗೊಳಿಸುವಂತಾಗಲಿ, ಬದುಕಿಗೆ ಹೊಸತು ಹೊಸತುಗಳನ್ನು ತಂದುಕೊಡುವಂತಾಗಲಿ, ಹೊಸ ಸವಾಲುಗಳನ್ನು ಎದುರಿಸುವ ಶಕ್ತಿಯನ್ನು ನೀಡುವಂತಾಗಲಿ, ಹೊಸ ಸಮಾಜ ನಿರ್ಮಿಸುವ ಸಾಹಸವನ್ನು ಹುಟ್ಟು ಹಾಕುವಂತಾಗಲಿ, ಈ ಶರಣ ಸಾಹಿತ್ಯ ಹಾಗೂ ಸಂಸ್ಕೃತಿಗಳು ಮನುಕುಲದ 'ಮನ್ವಂತರ'ಕ್ಕೆ ಪ್ರೇರಕವೂ, ಪೂರಕವೂ ಆಗಿ ಪರಿಣಮಿಸಲಿ"[೫೯]ಎಂಬ ಸದಾಶಯವು ಡಾ. ಬಿ.ಆರ್. ಹಿರೇಮಠರ ಚಿಂತನಾಕ್ರಮವನ್ನು ಪರಿಚಯಿಸುತ್ತದೆ.

**ಶ್ರೀ ಸಿದ್ಧರಾಮೇಶ್ವರ ಪುರಾಣ :**

ಪ್ರಸ್ತುತ ಲೇಖನವು ೨೦೦೧ರ 'ಅಭಿಜ್ಞ'ದಲ್ಲಿ ಪ್ರಕಟಿತವಾಗಿದೆ. ೧೫ ಪುಟಗಳ ಸುದೀರ್ಘ ವಿಮರ್ಶಾ ಲೇಖನವಿದು. ಮಾತೋಶ್ರೀ ಜಯದೇವಿತಾಯಿ ಲಿಗಾಡೆಯವರು ಬರೆದ ಶ್ರೀ ಸಿದ್ಧರಾಮೇಶ್ವರ ಪುರಾಣದ ಅವಲೋಕನವಿದು. "ಜನಸಾಮಾನ್ಯರಿಗೆ ತಿಳಿವ ತ್ರಿಪದಿಯ ಸಹಜಮಾಧ್ಯಮದಲ್ಲಿ ಪ್ರಪ್ರಥಮ ಬಾರಿಗೆ ರಚಿಸಿದ ಅಮೂಲ್ಯ ಕೃತಿರತ್ನ ಶ್ರೀ ಸಿದ್ಧರಾಮೇಶ್ವರ ಪುರಾಣ, ೨೧ನೇ ಶತಮಾನದ ಮೇರು ಕೃತಿ. ಇಂಥ ಮಹಾಕೃತಿಯ ನಿರ್ಮಾಣದ ಮೊದಲ ಶ್ರೇಯಸ್ಸು ಶಿವ ಶರಣೆಯರು, ತತ್ವನಿಷ್ಠರೂ, ಅನುಭಾವಿಗಳೂ ಆದ ಶ್ರೀಮತಿ ಜಯದೇವಿತಾಯಿ ಲಿಗಾಡೆಯವರಿಗೆ ಸಲ್ಲುತ್ತದೆ. ಬದುಕಿನ ಅನುಭಾವಪೂರ್ಣ ಮಹಾಕಾವ್ಯವಿದು. ತಾಯಿಯವರ ಅನುಭಾವ ತಾನೇ ತಾನಾಗಿ, ಬಚ್ಚಿಟ್ಟ ಬಯಕೆಯ ಫಲವಾದ ಕೃತಿ ಇದು. ಕನ್ನಡ ತಾಯಂದಿರು ಪ್ರಾಚೀನ ಕಾಲದಿಂದಲೂ ಉಳಿಸಿಕೊಂಡು ಬಂದ ತ್ರಿಪದಿಯ ಸಹಜಮಾಧುರ್ಯ ಇಲ್ಲಿದೆ. ಹಾಡಿನ ಬಂಧ, ಸತ್ಯ, ಛಂದ, ಬೆಡಗು, ಲಯಗತಿ, ಧಾಟಿ ಇವೆಲ್ಲವೂ ಕನ್ನಡದ ಪರಿಪಾಠ, ಕನ್ನಡ ಸಂಸ್ಕೃತಿಯ ರಸಘಟ್ಟಿ ಇಲ್ಲಿ ಘನೀಭೂತಗೊಂಡಿದೆ."[೬೦] ಈ ರೀತಿ ಜಯದೇವಿತಾಯಿಯವರನ್ನು ಪರಿಚಯಿಸುತ್ತ ಸಿದ್ಧರಾಮೇಶ್ವರರ ಮಹೋನ್ನತ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ. ೧೨ನೇ ಶತಮಾನದ ಸಮಕಾಲೀನ ಶಿವ ಶರಣರಲ್ಲಿ ಕಂಡುಬರುವ ಸಿದ್ಧರಾಮನ ವ್ಯಕ್ತಿತ್ವ, ಮಹಾಕವಿ ರಾಘವಾಂಕ ಚಿತ್ರಿಸಿದ ಸಿದ್ಧರಾಮ ಚಾರಿತ್ರ್ಯ ಕಥಾನಾಯಕನ ಸಿದ್ಧರಾಮ ಮತ್ತು ಜನಮಾನಸದಲ್ಲಿ ಪೂಜೆಗೊಳ್ಳುವ ಶಿವಯೋಗಿ

ಸಿದ್ಧರಾಮೇಶ್ವರ ಮತ್ತು ಜಯದೇವಿತಾಯಿಯವರು ಚಿತ್ರಿಸಿದ ಸಿದ್ಧರಾಮ ಈ ನಾಲ್ವರನ್ನು ಪರಸ್ಪರ ತೌಲನಿಕವಾಗಿ ವಿವರಿಸಿದ್ದಾರೆ. ಮುಂದೆ ಜಯದೇವಿತಾಯಿಯವರ ಸಿದ್ಧರಾಮೇಶ್ವರ ಉಳಿದವರಿಗಿಂತ ಹೇಗೆ ಭಿನ್ನವಾಗಿದ್ದಾನೆ ಎಂಬುದನ್ನು ವಿವರಿಸಿದ್ದಾರೆ. ಶಿವಯೋಗಿ ಸಿದ್ಧರಾಮೇಶ್ವರನ ಭವ್ಯ ವ್ಯಕ್ತಿತ್ವವನ್ನು ಜಯದೇವಿತಾಯಿ ಲಿಗಾಡೆಯವರು ಚಿತ್ರಿಸಿರುವ ಕ್ರಮವನ್ನಿಲ್ಲಿ ವಿವರಿಸಿದ್ದಾರೆ. ಸಿದ್ಧರಾಮೇಶ್ವರ ಪುರಾಣದ ವಿಶೇಷತೆಗಳನ್ನು ದಾಖಲಿಸಿದ್ದಾರೆ. ಇದೊಂದು ಮಹತ್ವದ ವಿಮರ್ಶಾ ಲೇಖನವಾಗಿದೆ.

**ವೀರಶೈವ ಪುರಾಣಗಳು ಮತ್ತು ವೀರಶೈವಾಮೃತ ಪುರಾಣ :**

ಈ ಲೇಖನವು 'ವೀರಶೈವಾಮೃತ ಪುರಾಣ ವಿವೇಚನೆ' ಎಂಬ ಗ್ರಂಥದಲ್ಲಿ ಪ್ರಕಟವಾಗಿದೆ. ಇದು ೧೮ ಪುಟಗಳ ಸುದೀರ್ಘ ವಿಮರ್ಶಾ ಲೇಖನ. ಭಾರತೀಯ ಸಂದರ್ಭದಲ್ಲಿ ಪುರಾಣಗಳು, ಪುರಾಣಗಳ ಮಹತ್ವ, ವೀರಶೈವ ಪುರಾಣಗಳನ್ನು ಕ್ರೋಢೀಕರಿಸಿ - ಏಕವ್ಯಕ್ತಿ ಪ್ರಧಾನ ಪುರಾಣಗಳು, ಬಹುವ್ಯಕ್ತಿ ಪ್ರಧಾನ ಪುರಾಣಗಳು, ತತ್ವಪ್ರಧಾನ ಪುರಾಣಗಳು ಎಂದು ಮೂರು ರೀತಿಯಾಗಿ ವಿಂಗಡಿಸಿಕೊಂಡಿದ್ದಾರೆ. "ವೀರಶೈವಾಮೃತ ಮಹಾಪುರಾಣವನ್ನು ವಿವಿಧ ಆಯಾಮಗಳಿಂದ ಅಧ್ಯಯನ ಮಾಡುವ ಅಗತ್ಯವಿದೆ. ಇದಲ್ಲದೆ ಶಿವತತ್ವ ಚಿಂತಾಮಣಿ, ವೀರಶೈವಾಮೃತ ಪುರಾಣ ಹಾಗೂ ಚೆನ್ನಬಸವ ಪುರಾಣಗಳಲ್ಲಿಯ ಶಿವನ ಪಂಚವಿಂಶತಿ ಲೀಲೆ, ಅರವತ್ತೂರು ಪುರಾತನರು ಕವಿಗಳ ಸಮಕಾಲೀನ ಶರಣರು ಇವುಗಳ ತೌಲನಿಕ ಅಧ್ಯಯನ ನಡೆಸುವುದು ಅಗತ್ಯವಿದೆ"[೬೧] ಎಂಬುದನ್ನು ಪ್ರಸ್ತಾಪಿಸಿ ಮುಂಬರುವ ಅಧ್ಯಯನಕಾರರಿಗೆ ವಿಷಯದ ಮಾರ್ಗದರ್ಶನ ಮಾಡಿದ್ದಾರೆ. ಕೊನೆಗೆ "ವೀರಶೈವಾಮೃತ ಮಹಾಪುರಾಣವು ಧಾರ್ಮಿಕ, ತಾತ್ವಿಕ ಹಾಗೂ ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ"[೬೨] ಎಂದಿರುವುದು ಸಮಂಜಸವಾಗಿದೆ.

**ಹಾವೇರಿ ಶ್ರೀ ಶಿವಬಸವೇಶ್ವರ ಪುರಾಣ :**

ಈ ಲೇಖನವು ವೀರಶೈವ ಪುಣ್ಯಾಶ್ರಮದ ಪುಂ. ಪುಟ್ಟರಾಜ ಗವಾಯಿಗಳ ಅಭಿನಂದನ ಗ್ರಂಥವಾದ 'ಜ್ಞಾನ ದೇಗುಲ'ದಲ್ಲಿ ೧೯೮೯ರಲ್ಲಿ ಪ್ರಕಟವಾಗಿದೆ. ೩ ಪುಟಗಳ ಲೇಖನವಿದು. ಗದುಗಿನ ಪಂ. ಪುಟ್ಟರಾಜಗವಾಯಿಗಳು ಬರೆದ ಕೃತಿ ಇದು. ಹಾವೇರಿಯ ಹುಕ್ಕೇರಿ ಮಠದ ಲಿಂಗೈಕ್ಯ ಶಿವಬಸವ ಸ್ವಾಮಿಗಳ ಚರಿತ್ರೆಯೇ ಈ ಪುರಾಣದ ವಸ್ತುವಾಗಿದೆ. ಈ ಪುರಾಣವು ೨೨ ಸಂಧಿಯನ್ನು ಒಳಗೊಂಡಿದೆ. ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಈ ಪುರಾಣದಲ್ಲಿ ಒಟ್ಟು ೧೯೫೫ ಭಾಮಿನಿ ಷಟ್ಪದಿಗಳಿವೆ. "ಕೃತಿಯ ಮೇಲೆ ಪುರಾಣವೆಂಬ ಹೆಸರಿದ್ದರೂ ಪುಟ್ಟರಾಜ ಗವಾಯಿಗಳು ಕೃತಿಯ ಒಡಲಲ್ಲಿ ಹೆಚ್ಚಾಗಿ ಚಾರಿತ್ರಿಕ ಸಂಗತಿಗಳನ್ನೇ ಬಿತ್ತುತ್ತ ನಡೆದಿರುವುದು ಕಂಡುಬರುತ್ತದೆ. ವೀರಶೈವ ಸಮಕಾಲೀನ ಚರಿತ್ರೆಯನ್ನು ಬರೆಯುವವರಿಗೆ ಇದು ಉಪಯುಕ್ತ ಆಕರ ಗ್ರಂಥವಾಗಿದೆ"[೬೩] ಎಂದು ವಿವರಿಸಿದ್ದಾರೆ. ಇದೊಂದು ಪರಿಚಯಾತ್ಮಕ ಲೇಖನ.

**ಬಸವಕಲ್ಯಾಣ ಪ್ರದೇಶದ ಪರಿವೀಕ್ಷಣೆ :**

ಡಾ. ಬಿ. ಆರ್. ಹಿರೇಮಠ ಅವರು ೧೯೭೭ರಲ್ಲಿ ಬೀದರ ಜಿಲ್ಲೆಯ ಬಸವಕಲ್ಯಾಣ ಪ್ರದೇಶದಲ್ಲಿ ಪರಿವೀಕ್ಷಣೆ ನಡೆಸಿ ಶಿವಶರಣರ ಬಗ್ಗೆ ತಿಳಿದು ಬರುವ ವಿಷಯಗಳನ್ನು ಈ ಲೇಖನದಲ್ಲಿ ಪರಿಚಯಿಸಿದ್ದಾರೆ. ಇದು ಬಸವ ಪಥದಲ್ಲಿ ಪ್ರಕಟವಾಗಿದೆ. ಸಕಲೇಶ ಮಾದರಸ, ಬಸವಣ್ಣ, ನೀಲಾಂಬಿಕೆ, ಅಂಬಿಗರ ಚೌಡಯ್ಯ, ಮೋಳಿಗೆ ಮಾರಯ್ಯ, ಹರಳಯ್ಯ, ಮುಗ್ಧ ಸಂಗಯ್ಯ, ಗಟ್ಟಿವಾಳಯ್ಯ ಮುಂತಾದ ಶಿವಶರಣರ ಕುರಿತಾಗಿ ಇರುವ ಸಂಗತಿಗಳನ್ನು ದಾಖಲಿಸಿದ್ದಾರೆ. "ಶರಣರ ಹೆಸರಿನಲ್ಲಿ ಗವಿರಚನೆ, ದೇವಾಲಯ ನಿರ್ಮಾಣ, ಸಮಾಧಿ ರಚನೆ, ವಿಗ್ರಹ ಪ್ರತಿಷ್ಠಾಪನಾ ಕಾರ್ಯಗಳು ನಡೆದಿರುವದು ಕಂಡುಬರುತ್ತದೆ. ಶರಣರ ಪುಣ್ಯನಾಮ ಜನತೆಯ ಹೃದಯದಲ್ಲಿ ಸದಾ ಹಸಿರಾಗಿರಲು ಇಂಥ ಸ್ಮಾರಕಗಳು ಅವಶ್ಯ ಹಾಗೂ ಅನಿವಾರ್ಯ ಎಂಬುದನ್ನು ಆಗಿನವರು ಭಾವಿಸಿರಬೇಕು. ಈ ಕುರುಹುಗಳು ಆ ಕಾಲದ ಜನರು ಶಿವಶರಣರಲ್ಲಿಟ್ಟ ಭಕ್ತಿ, ಶ್ರದ್ಧೆ, ಗೌರವಗಳ ಪ್ರತೀಕವಾಗಿವೆ"[೬೪] ಎಂದು ವಿವರಿಸಿದ್ದಾರೆ. ಈ ಲೇಖನವು ಪ್ರವಾಸ ಕಥನದ ಮಾದರಿಯಂತಿದೆ. ಈ ಲೇಖನದ ಪೂರ್ವಾರ್ಧ ಬಸವಕಲ್ಯಾಣ ಪ್ರದೇಶದ ಪರಿವೀಕ್ಷಣೆಯಾಗಿದ್ದರೆ ಉತ್ತರಾರ್ಧವು ಅಲ್ಲಿಯ (ಬಸವಕಲ್ಯಾಣದ) ಸ್ಮಾರಕ ಶಿಲೆ - ಐತಿಹ್ಯಗಳ ವಿವರಗಳನ್ನೊಳಗೊಂಡಿದೆ. ಇದರಲ್ಲಿ ವೀರಗಲ್ಲು, ಮಾಸ್ತಿಕಲ್ಲು, ತ್ರಿಪುರಾಂತಕೆರೆ, ಬೊಮ್ಮಯ್ಯನ ವಿಗ್ರಹ ಮುಂತಾದವುಗಳನ್ನು ವಿವರಿಸಿದ್ದಾರೆ. ಇದೊಂದು ವಿಶಿಷ್ಟವಾದ ಲೇಖನವಾಗಿದೆ.

**ಫ. ಗು. ಹಳಕಟ್ಟಿಯವರ ಸಂಶೋಧನಾ ಕಾರ್ಯ:**

ಈ ಲೇಖನವು ೨೦೦೩ರ 'ಚೈತನ್ಯ ಜಂಗಮ'ವೆಂಬ ಈ ವಿಶೇಷಾಂಕದಲ್ಲಿ ಪ್ರಕಟಿತವಾಗಿದೆ. ಇಲ್ಲಿ ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿಯವರ ಸಂಶೋಧನಾ ಸಾಹಿತ್ಯವನ್ನು ವಿವರಿಸಿದ್ದಾರೆ. ಹಳಕಟ್ಟಿಯವರ ಸಂಶೋಧನ ಕಾರ್ಯ ವಚನ ಸಾಹಿತ್ಯ, ಸಂಶೋಧನೆ, ವೀರಶೈವ ಕಾವ್ಯ ಸಾಹಿತ್ಯ ಸಂಶೋಧನೆ, ರಾಜ್ಯ ಮನೆತನಗಳ ಸಂಶೋಧನೆ, ದಾಖಲೆ ಸಂಶೋಧನೆ, ಶಿವಶರಣ ಚರಿತ್ರೆಗಳ ಸಂಶೋಧನೆ ಮಠಗಳ ಹಾಗೂ ಮಠಾಧೀಶರ ಕುರಿತಾಗಿರುವ ಸಂಶೋಧನೆ, ಪುಣ್ಯ ಕ್ಷೇತ್ರಗಳ ಸಂಶೋಧನೆ ಹೀಗೆ ವೈವಿಧ್ಯಪೂರ್ಣವಾಗಿರುವ ಸಂಶೋಧನಾ ಸಾಹಿತ್ಯವನ್ನು ಡಾ. ಬಿ.ಆರ್. ಹಿರೇಮಠ ಅವರು ಪರಿಚಯಿಸಿದ್ದಾರೆ.

**ಧರ್ಮ ಗುರು ಮತ್ತು ಕೃತಿ ಚೌರ್ಯ:**

ಈ ಲೇಖನವು ೨ ಪುಟಗಳಲ್ಲಿದೆ. ಇದರಲ್ಲಿ ೨ ಭಾಗಗಳಿವೆ. ಒಂದು ಧರ್ಮಗುರು ಇನ್ನೊಂದು ಕೃತಿಚೌರ್ಯ ಈ ಲೇಖನ "ವೀರಶೈವ ಧರ್ಮದ ಕುರಿತಾದ ವಿಶಿಷ್ಟ ಮಾಹಿತಿಯನ್ನು ಒದಗಿಸುತ್ತದೆ.

ವೀರಶೈವರಲ್ಲಿ ಧರ್ಮ ಗುರುಗಳಿಗೆ ಒಂದು ಪೂಜ್ಯನೀಯ ಸ್ಥಾನವಿದೆ. ಗುರುವಿಲ್ಲದೆ ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ ಲೇಖನದ ಆರಂಭದಲ್ಲಿ ವೀರಶೈವ ಧರ್ಮದ ಅಸ್ತಿತ್ವವನ್ನು ಹೇಳುತ್ತ ಆಗಮಗಳ ಕಾಲದಿಂದಲೂ ಈ ಧರ್ಮ ಅಸ್ತಿತ್ವದಲ್ಲಿತ್ತೆಂದು ಧೃಡಪಟ್ಟಿದೆ"[೬೫] ಎಂದು ಸ್ಪಷ್ಟಪಡಿಸುತ್ತಾರೆ. ವಚನಕಾರರಿಗೆ ಗುರು ದೀಕ್ಷೆಯನ್ನು ನೀಡುತ್ತಿದ್ದರೆಂದು ಕಂಡುಬರುತ್ತದೆ. ಶರಣ ಪರಂಪರೆಗೆ ಗುರು ಮಾರ್ಗದರ್ಶನವೇ ಮುಖ್ಯ ಕಾರಣವಾಗಿದೆ ಎಂದು ಸ್ಪಷ್ಟಪಡಿಸುತ್ತಾ ಬಸವಣ್ಣ, ಅಲ್ಲಮಪ್ರಭುಗಳ ಗುರುಗಳ ಹೆಸರನ್ನು ಉಲ್ಲೇಖಿಸುತ್ತಾರೆ. ಮುಂದಿನ ಭಾಗದಲ್ಲಿ ಬಸವಣ್ಣ ತಾವು ಧರ್ಮಗುರುವೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಸಮಕಾಲೀನ ವಚನಕಾರರು ಅವರನ್ನು ಗುರುವಾಗಿ ಸ್ವೀಕರಿಸಿದರೆಂದು ತಮ್ಮ ವಚನಗಳಲ್ಲಿ ಉಲ್ಲೇಖಿಸಿದ್ದಾರೆ ಎಂಬ ಮಾತು ಇಂದಿನ ಕೆಲವರ ತಿಳುವಳಿಕೆಗೆ ತಂದುಕೊಡುವ ಸಾಹಸವನ್ನು ಡಾ. ಬಿ.ಆರ್. ಹಿರೇಮಠ ಅವರು ಮಾಡಿದ್ದಾರೆ. ಇದು ಈ ಲೇಖನದ ತಿರುಳಾಗಿದೆ. ಇನ್ನೊಂದು ಭಾಗದಲ್ಲಿ ಡಾ. ಬಿ.ಆರ್. ಹಿರೇಮಠ ಅವರು ಕೃತಿ ಚೌರ್ಯದ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯ ಮಹತ್ವಪೂರ್ಣವಾಗಿದೆ. ಶಿವಯೋಗಿ ಶಿವಾಚಾರ್ಯರ ಕೃತಿಯಾದ 'ಸಿದ್ಧಾಂತ ಶಿಖಾಮಣಿ' ಕೃತಿ ಚೌರ್ಯವಲ್ಲ ಎಂಬುದಕ್ಕೆ "ಶಿವಯೋಗಿ ಶಿವಾಚಾರ್ಯರು ಈ ಕೃತಿಯ ಆರಂಭದಲ್ಲಿ ತಾವು ಪುರಾಣಗಳಿಂದ ವಿಷಯ ಸಂಗ್ರಹಿಸಿದುದಾಗಿಯೂ ಅವುಗಳ ಸಾರ ಸಂಗ್ರಹವೇ ಇದಾಗಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ"[೬೬] ಎಂಬ ಆಧಾರವನ್ನು ಒದಗಿಸಿದ್ದಾರೆ. ವಚನಕಾರರ ವಚನ ಸಾಹಿತ್ಯ ವೇದ ಆಗಮ - ಪುರಾಣ -ಉಪನಿಷತ್ತುಗಳ ಶ್ಲೋಕಗಳನ್ನು ಆಕರವಾಗಿಟ್ಟುಕೊಂಡೆ ರಚನೆಗೊಂಡಿವೆ ಎಂಬ ಮಾತೂ ಸತ್ಯವೇ ಆಗಿದೆ. ಕೆಲವು ವ್ಯಕ್ತಿಗಳ ವಿವಾದಾತ್ಮಕ ಹೇಳಿಕೆಗಳಿಗೆ ಎಚ್ಚರವೆಂಬಂತೆ "ಈ ರೀತಿ ವಾದ ಮಾಡುತ್ತ ಹೋದರೆ ವೀರಶೈವದ ಸಂಪತ್ತು ಕರಗಿ ಹೋಗುತ್ತದೆ." ಅಲ್ಲದೆ "ಕೆಲವು ವ್ಯಕ್ತಿಗಳು ವಿವಾದಾತ್ಮಕ ವಿಷಯಗಳನ್ನು ಮತ್ತೆ ಮತ್ತೆ ಕೆದಕದಿರುವುದು ವೀರಶೈವ ಸಮಾಜದ ಹಿತದ ದೃಷ್ಟಿಯಿಂದ ಅತ್ಯಂತ ಪ್ರಯೋಜನಕಾರಿಯೆನಿಸಿದೆ"[೬೭] ಎಂದು ಹೇಳುತ್ತ ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಒಬ್ಬ ವಿಮರ್ಶಕ ಮಾಡಬೇಕಾದ ಕರ್ತವ್ಯವನ್ನು ಈ ಮೂಲಕ ಡಾ. ಬಿ.ಆರ್. ಹಿರೇಮಠ ಅವರು ಕೈಕೊಂಡಿದ್ದಾರೆ. ಲೇಖಕನ ವ್ಯಕ್ತಿಗತ ಜವಾಬ್ದಾರಿ ಹಾಗೂ ಸಾಮೂಹಿಕ ಹೊಣೆಗಾರಿಕೆಯನ್ನಿದು ತಿಳಿಸುತ್ತದೆ.

ಶರಣಸಾಹಿತ್ಯದಲ್ಲಿ ಇಲ್ಲಿಯವರೆಗೆ ವಿವೇಚಿಸಿದ ಲೇಖನಗಳಲ್ಲದೆ ಇನ್ನೂ ಹಲವು ಲೇಖನಗಳು ಪ್ರಕಟವಾಗಿವೆ. ಮುರಗೆಯ ಶಾಂತವೀರ ಸ್ವಾಮಿಗಳು ನಿರೂಪಿಸಿದ ಕಟ್ಟಿಗೆಯ ತಾರಾವಳಿ, ಮಹಾಲಿಂಗ ಗುರು ಬಸವೇಶ್ವರ ಅಂಕಿತದ ಉಭಯ ಸ್ಥಲ ವಚನ, ವೀರಭದ್ರ ತಾರಾವಳಿ, ಮದಕರಿ ನಾಯಕ ಹೇಳಿದ ದಂಡಕ, ಸಿದ್ಧನಂಜೇಶನ ನೀಲಮ್ಮನ ಸ್ತೋತ್ರ, ಚೆನ್ನಪ್ಪ ಹಾಗೂ ಶರಣ ಲೀಲಾಮೃತದ ರಚನಾ ಕಾಲ, ಗುಂಡ ಬಸವಾಂಕಿತದ ಸ್ವರವಚನಗಳು, ಮೊರಟಗಿ ಸಿದ್ಧಲಿಂಗಪ್ಪನ ಇನ್ನೆರಡು ಕೃತಿಗಳು. ಮೇಲಿನ ಲೇಖನಗಳು ಬಸವ ಪಥದ ವಿವಿಧ ಸಂಚಿಕೆಗಳಲ್ಲಿ ಪ್ರಕಟವಾಗಿವೆ.

**ಕ) ಜೈನ ಸಾಹಿತ್ಯ :**

ಇದರಲ್ಲಿ ಭರತ ಚಕ್ರೇಶ್ವರನ ಧವಳ ಶೋಭನ, ಅಜಿತಸೇನನ ಪರಿಚಯ ಮತ್ತು ನಯಸೇನನ ಧರ್ಮಾಮೃತ, ಕೊಲ್ಹಾಪುರದ ಲಕ್ಷ್ಮೀಸೇನ ಭಟ್ಟಾರಕ ಹಸ್ತಪ್ರತಿ ಭಾಂಡಾರದ ಪರಿಚಯ ಇವು ಜೈನ ಸಾಹಿತ್ಯಕ್ಕೆ ಸಂಬಂಧಿಸಿದ ೪ ಲೇಖನಗಳಾಗಿವೆ.

**I. ಭರತ ಚಕ್ರೇಶ್ವರನ ಧವಳ ಶೋಭನ :**

ಈ ಲೇಖನವು ೧೯೭೭ರ ಕರ್ನಾಟಕ ವಿಶ್ವವಿದ್ಯಾಲಯದ ಸಂಶೋಧನ ಪತ್ರಿಕೆಯಾದ ಕರ್ನಾಟಕ ಭಾರತಿಯಲ್ಲಿ ಪ್ರಕಟವಾಗಿದೆ. (ಸಂ.-೯, ಸಂ-೩) ಇದು ೧೨ ಪುಟಗಳ ಲೇಖನ. ಇದರಲ್ಲಿ ಧವಳ, 'ಧವಳ ಹಾಡು' ಮುಂತಾದ ಜಾನಪದ ಸಾಹಿತ್ಯದ ಹೆಂಗಳೆಯರ ಹಾಡನ್ನು ಚರ್ಚಿಸುತ್ತ ಅಂಶಗಣಯುಕ್ತವಾದ ಧವಳ ಹಾಡು ಮುಂದೆ ಮಾತ್ರಾಗಣಯುಕ್ತವಾಗಿ ಪರಿವರ್ತನೆಗೊಂಡಿರುವುದನ್ನು ವಿವರಿಸಿದ್ದಾರೆ. ರನ್ನನ ಗದಾಯುದ್ಧ, ರಾಘವಾಂಕನ ಸಿದ್ಧರಾಮ ಚಾರಿತ್ರ್ಯ ಮುಂತಾದ ಕಾವ್ಯಗಳಲ್ಲಿ ಬಳಕೆಯಾಗಿರುವ ಧವಳ ಸಂಪ್ರದಾಯವನ್ನು ಪ್ರಸ್ತಾಪಿಸಿದ್ದಾರೆ. "ಪಂಪಪೂರ್ವಯುಗದಿಂದ ಹಿಡಿದು ರಾಘವಾಂಕನ ವರೆಗೆ ನಡೆದುಬಂದ ಧವಳದ ಲಕ್ಷಣ ಅದರ ಪ್ರಭೇದಗಳನ್ನು ಸೋಮೇಶ್ವರನ ಮಾನಸೋಲ್ಲಾಸ ಹೇಮಚಂದ್ರನ ಛಂದೋನುಶಾಸನ. ಶಾರ್ಙ್ಗದೇವನ ಸಂಗೀತ ರತ್ನಾಕರದಲ್ಲಿ ಹೇಳಲಾಗಿದೆ."[೬೮] ಈ ರೀತಿಯಾಗಿ ಧವಳ ಶೋಭನದ ಪ್ರಾಚೀನ ಪರಂಪರೆಯನ್ನು ಅದರ ಚಾರಿತ್ರಿಕ ವಿವರಣೆಯನ್ನು ನೀಡಿ ಭರತ ಚಕ್ರೇಶ್ವರನ ಧವಳ ಶೋಭನವನ್ನು ಪರಿಚಯಿಸಿದ್ದಾರೆ. ಕೊನೆಯಲ್ಲಿ ಭರತ ಚಕ್ರೇಶ್ವರನ ಧವಳ ಶೋಭನದ ಹಾಡನ್ನು ಕೊಟ್ಟಿದ್ದಾರೆ.

**ಅಜಿತಸೇನ ಪರಿಚಯ :**

ಈ ಲೇಖನ ಹೆಸರೇ ಸೂಚಿಸಿರುವಂತೆ ಅಜಿತ ಸೇನ ಮುನಿಯ ಸಂಕ್ಷಿಪ್ತ ಪರಿಚಯವನ್ನು ನೀಡುತ್ತದೆ. ಇದು ೪ ಪುಟದ ಲೇಖನವಾಗಿದ್ದು 'ಕರ್ನಾಟಕ ಭಾರತಿ' ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಡಾ. ಬಿ. ಆರ್. ಹಿರೇಮಠ ಅವರೇ ಹೇಳುವಂತೆ ಈ ಲೇಖನ ಮೂರ್ತರೂಪ ಪಡೆಯಲು ಡಾ. ಎಂ. ಎಂ. ಕಲಬುರ್ಗಿಯವರು ಪ್ರೇರಕ ಶಕ್ತಿಯಾಗಿದ್ದಾರೆ. ಈ ಲೇಖನದಲ್ಲಿ ಮೊದಲು ಕರ್ನಾಟಕದ ಜೈನ ಮುನಿ ಪರಂಪರೆಯನ್ನು ಉಲ್ಲೇಖಿಸುತ್ತಾ ಜಿನಸೇನ, ಗುಣಭದ್ರ, ಪೂಜ್ಯಪಾದ ತುಂಬುಲಾಚಾರ್ಯ, ಕುಂದಕುಂದಾಚಾರ್ಯ. ಅಜಿತಸೇನ ಮುನಿಗಳನ್ನು ಸ್ಮರಿಸುತ್ತಾ ಆತ್ಮಶ್ರೀಯೊಂದಿಗೆ ಸಾಹಿತ್ಯ ಶ್ರೀಯನ್ನು ಬೆಳೆಸಿದ ವಿದ್ವಾಂಸರು ಈ ಮುನಿಗಳಾಗಿದ್ದಾರೆ.

ರಾಮರಾಯನ ಆಳ್ವಿಕೆಯಲ್ಲಿ ಮುನಿಭದ್ರಯೋಗೀಶ್ವರರ ಶಿಷ್ಯನಾದ ಅಜಿತಸೇನನ ಪರಿಚಯ ಈ ಲೇಖನದಲ್ಲಿದೆ ಎಂಬುದನ್ನು ಡಾ. ಬಿ.ಆರ್. ಹಿರೇಮಠ ಅವರು ಸ್ಪಷ್ಟಪಡಿಸುತ್ತಾ ರನ್ನ

ಚಾವುಂಡರಾಯರ ಗುರು ಅಜಿತನೂ ಒಬ್ಬ ಎಂಬುದನ್ನು ಹೇಳುತ್ತಾರೆ. ಅಜಿತಸೇನ ಮುನಿ ಬರೆದ 'ನ್ಯಾಯಮಣಿ ದೀಪಿಕೆ ಟೀಕೆ' ಎಂಬ ಕೃತಿ ವಿಜಯನಗರ ಸಾಮ್ರಾಜ್ಯದ ಸಿಂಹಾಸನವೇರಿ ಗೌರವ ಪಡೆದಿತ್ತು ಮತ್ತು ಅಜಿತ ಸೇನ ಮುನಿಗಳಿಗೆ ಅರಮನೆಯಲ್ಲಿ ಅಪಾರ ಗೌರವವಿತ್ತು ಎಂಬುದನ್ನು ಹೇಳುತ್ತಾರೆ. ಅಜಿತಸೇನನ ಮರಣದ ಕೆಲವು ಕಾಲದಲ್ಲಿ ರಚಿತವಾದ 'ಚಿಂತಾಮಣಿ ಕೃತಿ' ಟೀಕೆಯೂ ರಚನೆಯಾಗಿತ್ತು ಎಂಬುದನ್ನು ತಿಳಿಸುವ ಒಂದು ಪದ್ಯವನ್ನು ಆಧಾರವಾಗಿ ಡಾ. ಬಿ.ಆರ್. ಹಿರೇಮಠರು ನೀಡುತ್ತಾರೆ. "ಅಜಿತ ಸೇನ ಮುನಿಗಳ ರಚನಾ ಕೃತಿಗಳನ್ನು ಕಾಲಗರ್ಭದಿಂದ ಹೊರತೆಗೆಯುವ ಕಾರ್ಯ ನಡೆಯಬೇಕಿದೆ"[೬೯] ಎಂಬುದನ್ನು ಹೇಳುತ್ತಾ ಮುಂಬರುವ ವಿದ್ವಾಂಸರಿಗೆ ಮಾರ್ಗದರ್ಶನ ಮಾಡುತ್ತಾರೆ. ಇದರೊಂದಿಗೆ ಜೈನ ವ್ಯಾಖ್ಯಾನ ಸಾಹಿತ್ಯದ ಅಧ್ಯಯನ ನಡೆಯದಿರುವುದನ್ನು ಹೇಳುತ್ತಾರೆ.

ಕನ್ನಡದಲ್ಲಿ ಜೈನ ಕವಿಗಳ ಗೀತ ಸಾಂಗತ್ಯವನ್ನು ರತ್ನಾಕರನ ಹಾಡುಗಳಂತೆ ಮುನಿಭದ್ರ ಯೋಗೀಶ್ವರನ ಶಿಷ್ಯ ಅಜಿತಸೇನನ ಜೀವನ ವ್ಯಕ್ತಿತ್ವದ ಬಗೆಗೆ ಮೂಡಿಬಂದ ಒಂದು ಸಾಂಗತ್ಯ ಹಾಗೂ ೬ ವಾರ್ಧಕ ಷಟ್ಪದಿಗಳಲ್ಲಿದೆ. ಈ ಹಾಡನ್ನು ಇಡಿಯಾಗಿ ಯಥಾವತ್ತಾಗಿ ಲೇಖನದ ಮುಂದಿನ ಭಾಗದಲ್ಲಿ ಈ ಹಾಡು ಮೂಲ ತಾಳೆಗರಿಯಲ್ಲಿ ಬಿಟ್ಟು ಹೋದ ಉಲ್ಲೇಖವನ್ನು ಅಡಿಟಿಪ್ಪಣಿಯಲ್ಲಿ ಮಾಡುತ್ತಾರೆ.

**ಡ) ಸಂಕೀರ್ಣ ಸಾಹಿತ್ಯ :**

ಈ ಭಾಗದಲ್ಲಿ ಬೀಳಗಿ : ತಾಲೂಕಾ ಸಾಂಸ್ಕೃತಿಕ ಪರಂಪರೆ ಗುರು ಒಂದು ವಿವೇಚನೆ, ದಯೆ:ಧರ್ಮದ ಮೂಲದ್ರವ್ಯ, ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಸಂಶೋಧನೆ, ದಲಿತರ ಸಮಸ್ಯೆ ನಿವಾರಣೆ, ಜಾಗತೀಕರಣ;ಕನ್ನಡ ಸಮಸ್ಯೆ ಸವಾಲುಗಳು, ೧೯೮೦ರ ಸಂಶೋಧನೆ ಒಂದು ಸಮೀಕ್ಷೆ, ಡಾ. ಆರ್.ಸಿ. ಹಿರೇಮಠರ ಸಾಹಿತ್ಯ ಒಂದು ಅವಲೋಕನ ಮುಂತಾದ ಲೇಖನಗಳನ್ನು ವಿವೇಚಿಸಲಾಗಿದೆ.

**I. ಬೀಳಗಿ :ತಾಲೂಕಾ ಸಾಂಸ್ಕೃತಿಕ ಪರಂಪರೆ :**

ಇದು ೬ ಪುಟಗಳ ಲೆಖನವಾಗಿದೆ. ಸಾಮರಸ್ಯ ಸ್ಮರಣಸಂಚಿಕೆಯಲ್ಲಿ ಇದು ಪ್ರಕಟಗೊಂಡಿದೆ. ಬೀಳಗಿ ತಾಲೂಕಿನ ಶಾಸನಗಳು, ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಅಂಶಗಳನ್ನು ವಿವರವಾಗಿ ದಾಖಲೆಗೊಳಿಸಿದ್ದಾರೆ. "ಒಟ್ಟಿನಲ್ಲಿ ಬೀಳಗಿ ತಾಲೂಕಿಗೆ ವೈವಿಧ್ಯಪೂರ್ಣವಾದ, ವೈಶಿಷ್ಟ್ಯ ಪೂರ್ಣವಾದ ಪ್ರಾಚೀನ ಸಾಂಸ್ಕೃತಿಕ ಪರಂಪರೆ ಇರುವ ಶಾಸನಗಳ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ. ಈ ಸಾಂಸ್ಕೃತಿಕ ಪರಂಪರೆಯಲ್ಲಿಯ ಉತ್ತಮವಾದ ಅಂಶಗಳನ್ನು ಉಳಿಸುವ, ಮುಂದುವರಿಸುವ ಗುರುತರ ಜವಾಬ್ದಾರಿ ಈ ಪ್ರದೇಶದ ಇಂದಿನ ಜನಾಂಗದ ಮೇಲಿರುತ್ತದೆ. 'ಪರಂಪರೆಯ ಪ್ರಜ್ಞೆ'ಯನ್ನು

ಜಾಗೃತಗೊಳಿಸುವುದು ಆ ಮೂಲಕ ನಮ್ಮ ಪರಂಪರೆಯನ್ನು ಪರಿಚಯಿಸುವ ಅಗತ್ಯ ಕಾರ್ಯಗಳು ಇಂದು ನೆರವೇರಬೇಕಾಗಿದೆ. ಈ ನಿಟ್ಟಿನಲ್ಲಿ ಇದು ಒಂದು ಪ್ರಯತ್ನವಾಗಿದೆ."[೬೦]ಆ ಮಾತುಗಳು ಬೀಳಗಿ ತಾಲೂಕಿನ ಸಾಂಸ್ಕೃತಿಕ ಪರಂಪರೆಯನ್ನು ಸೊಗಸಾಗಿ ಪರಿಚಯಿಸುತ್ತವೆ.

**II. ಗುರು :ಒಂದು ವಿವೇಚನೆ :**

ಈ ಲೇಖನ ತ್ರೈಮಾಸಿಕ ಪತ್ರಿಕೆ ಸುಕುಮಾರದಲ್ಲಿ ೨೦೦೬ ರಲ್ಲಿ ಪ್ರಕಟವಾಗಿದ್ದು ೬ ಪುಟವನ್ನು ಒಳಗೊಂಡಿದೆ. ಇದರಲ್ಲಿ ಗುರು, ಗುರುವಿನ ಸ್ಥಾನ, ಗುರುವಿನ ವೈಶಿಷ್ಟ್ಯಗಳನ್ನು ಚರ್ಚಿಸಿದ್ದಾರೆ. 'ಶಿವಪಥವನ್ನು ಅರಿಯಲು ಗುರುಪಥವೇ ಮೊದಲು' ಅಂದರೆ ಗುರುವನ್ನು ಅರಿತುಕೊಳ್ಳದ ಹೊರತು ಶಿವನನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಯಾಕೆಂದರೆ ಗುರು ಸಾಕ್ಷಾತ್ ಶಿವಸ್ವರೂಪಿ ಆಗಿರುತ್ತಾನೆ. ಆದುದರಿಂದ ವೀರಶೈವ ಧರ್ಮದಲ್ಲಿ ಗುರುವಿಗೆ ವಿಶೇಷವಾದ ಮಹತ್ವವಿದೆ"[೬೧] ಎಂದು ಹೇಳುವ ಮೂಲಕ ಗುರುವಿನ ವೈಶಿಷ್ಟ್ಯತೆಯನ್ನು ವಿವರಿಸಿದ್ದಾರೆ. "ಕೊನೆಗೆ ಗುರುವಾದವನು ವ್ಯಕ್ತಿಯ ಶುದ್ಧೀಕರಣ, ಸಮಾಜ ಶುದ್ಧೀಕರಣವೆಂಬ ಉಭಯ ಶುದ್ಧೀಕರಣವನ್ನು ನೆರವೇರಿಸಿಕೊಡುತ್ತಾನೆ. ಆಚಾರವಂತ, ಹೃದಯವಂತ, ಸಮಾಜನಿರ್ಮಾಣ ಕಾರ್ಯವನ್ನು ಪೂರೈಸಿ ಕೊಡುತ್ತಾನೆ. ಹೀಗೆ ವೀರಶೈವ ಧರ್ಮದಲ್ಲಿ ಗುರು ಸಾಮಾಜಿಕ ಧಾರ್ಮಿಕ ಮೌಲ್ಯವಾಗಿ ಕಂಡು ಬರುತ್ತಾನೆ"[೬೨] ಎಂದು ಹೇಳುವ ಮೂಲಕ ಗುರುವಿನ ಮಹತ್ವವನ್ನು ತಿಳಿಯಪಡಿಸಿದ್ದಾರೆ.

**III. ದಯೆ:ಧರ್ಮದ ಮೂಲದ್ರವ್ಯ :**

ಇದು ಸುಕುಮಾರದಲ್ಲಿ ಪ್ರಕಟವಾಗಿರುವ ಲೇಖನವಾಗಿದೆ. ಒಟ್ಟು ೫ ಪುಟದ ಲೇಖನವಿದು. ದಯೆ ಮಾನವೀಯ ಅಂಶಗಳಲ್ಲಿ ಒಂದಾಗಿದೆ. ಧರ್ಮದ ಮೂಲ ಅಂಶವೇ ದಯೆ, ಇದು ಧರ್ಮದ ತಳಪಾಯವಾಗಿದೆ. ಇದನ್ನು ವಚನಕಾರರು 'ದಯವೇ ಧರ್ಮದ ಮೂಲವಯ್ಯ' ಎಂದಿರುವುದು ದಯೆ, ಕರುಣೆ, ಪ್ರೀತಿ, ಅನುಗ್ರಹ, ರಕ್ಷಣೆ, ಸ್ನೇಹ, ಸೌಹಾರ್ದತೆಗಳು ಮಾನವೀಯ ಮೌಲ್ಯಗಳಾಗಿವೆ. ಹಾಗೆಯೇ ದಯೆಯು ಸಮಾನತೆ, ಸಮನ್ವಯತೆ, ಸಾಮರಸ್ಯದ ಸಂಕೇತವೂ ಹೌದು. ಈ ದಯೆಯ ಕುರಿತಾಗಿ ವಿಸ್ತೃತವಾಗಿ ಡಾ. ಬಿ.ಆರ್. ಹಿರೇಮಠ ಅವರು ಈ ಲೇಖನದಲ್ಲಿ ಚರ್ಚಿಸಿದ್ದಾರೆ. "ದಯೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರದಲ್ಲಿ ಅಗ್ರಸ್ಥಾನ ಪಡೆಯುವಂತಾಗಬೇಕು. ಹೀಗಾದರೆ ಮಾತ್ರ 'ಸಮಾಜ'ದಲ್ಲಿ 'ದೇಶ'ದಲ್ಲಿ ಶಾಂತಿ, ಸಮಾಧಾನ, ನೆಮ್ಮದಿ, ನೆಲೆಸಲು ಸಾಧ್ಯವಿದೆ. 'ದಯೆ' ಎಂಬುದು 'ಮಾನವೀಯ ಮೌಲ್ಯಗಳನ್ನು ಪ್ರತಿಪಾದಿರುವ 'ಕರುಳಬಳ್ಳಿ' ಸಂಬಂಧವನ್ನು ಸಂವರ್ಧಿಸುವ, ಮನುಕುಲದ ಮಹತಿಯನ್ನು ಎತ್ತಿಹಿಡಿಯುವ 'ಜೀವನ ಮೌಲ್ಯ' ಎನಿಸಿದೆ"[೬೩] ಎಂದು ದಯೆಯ ಕುರಿತು ವ್ಯಾಖ್ಯಾನಿಸುವುದು ಸಮರ್ಥನೀಯವಾಗಿದೆ.

**IV. ದಲಿತರ ಸಮಸ್ಯೆ ನಿವಾರಣೆ :**

ದಲಿತ ಸಮಸ್ಯೆ ನಿವಾರಣೆ ಇದೊಂದು ಚಿಂತನಾ ಪ್ರಧಾನ ಲೇಖನ. ೧೯೭೪ರಲ್ಲಿ ಪ್ರಪಂಚ ವಾರ ಪತ್ರಿಕೆಯಲ್ಲಿ ಪ್ರಕಟವಾಗಿದೆ. ದಲಿತರು ಸಮಾಜದ ಮಹತ್ವದ ಘಟಕ, ಅವರಿಗೂ ಸ್ವಚ್ಛಂದವಾದ ಬದುಕು ಇರಬೇಕು. ಯಾರದೋ ದಾಸ್ಯದಲ್ಲಿ ಸಿಲುಕಿರಬಾರದು. ಆಧುನಿಕ ಯುಗದಲ್ಲಿ ಸರ್ವರೂ ಸಮಾನರು. ಮಾನವರಲ್ಲಿ ತರತಮಭಾವ ಸಲ್ಲದು. ಇತ್ಯಾದಿಯಾಗಿ ಹೇಳಿ "ದಲಿತ ಆಂದೋಲನ ಪಟ್ಟಣವನ್ನು ಬಿಟ್ಟು ಹಳ್ಳಿಗಳಿಗೂ ಕಾಲಿಡಬೇಕು. ಅಂದಾಗ ದಲಿತೋದ್ಧಾರ, ದಲಿತ ಆಂದೋಲನ ಸಿದ್ಧಿಗೊಳ್ಳುತ್ತವೆ. ದಲಿತ ಜನಾಂಗದ ಹೊಸ ಜೀವನ ತುಂಬಿಕೊಳ್ಳುವಂತಾಗುತ್ತದೆ"[೭೪] ಎಂದು ವಿವರಿಸಿದ್ದಾರೆ.

ದಲಿತರ ಸಮಸ್ಯೆಗಳ ನಿವಾರಣೆಗೆ "ಸಮರ್ಥರಾದವರು ಮುಖಂಡತ್ವ ವಹಿಸಬೇಕು. ದಲಿತರ ಸಮಸ್ಯೆಗಳ ಪೂರ್ಣದರ್ಶನ ಅವನಿಗಿರಬೇಕು. ದಲಿತರ ಸಮಸ್ಯೆಗಳ ನಿವಾರಣೆಗೆ ತಮ್ಮನ್ನೇ ಧಾರೆಯೆರೆದು ಕೊಡಬೇಕು. ಅಂದರೆ ಇಡೀ ಜೀವನವನ್ನೇ ಆ ಕಾರ್ಯಕ್ಷೇತ್ರಕ್ಕೆ ಮೀಸಲಾಗಿಡಬೇಕು. ಜೊತೆಗೆ ಇಂಥ ಮುಖಂಡತ್ವದಲ್ಲಿ ಎಲ್ಲ ಅನುಯಾಯಿಗಳು ಶ್ರದ್ಧೆ, ನಿಷ್ಠೆಗಳನ್ನಿಟ್ಟು ಪ್ರಾಮಾಣಿಕತೆಯಿಂದ ಕಾರ್ಯಪ್ರವೃತ್ತರಾಗಬೇಕು"[೭೫] ಎಂದು ಸಲಹೆ ನೀಡಿದ್ದಾರೆ. ದಲಿತರ ಸಮಸ್ಯೆಗಳನ್ನು ಪ್ರಸ್ತಾಪಿಸಿ, ಎಂತಹ ವಿಪತ್ತಿನಲ್ಲಿ ಆ ಜನಾಂಗವಿದೆಯೆಂಬುದನ್ನು ಪರಿಚಯಿಸುತ್ತಾರೆ. "ಅಜ್ಞಾನ, ಆಲಸ್ಯ-ದಾರಿದ್ರ್ಯತನಗಳನ್ನೇ ಬೆನ್ನಿಗೆ ಕಟ್ಟಿಕೊಂಡು ನಡೆದಿರುವ ದಲಿತ ಜನಾಂಗವು ಈ ಸಮಾಜದಲ್ಲಿರುವ ಪ್ರಬಲ ಶಕ್ತಿಯ ಹಿಡಿತದಿಂದ ಜಾರಿಕೊಂಡು ಮಾನವರಾಗಿ ಬಾಳುವುದು ಮಾನವತೆಯನ್ನು ಪಡೆಯುವುದು ಯಾವಾಗ?"[೭೬] ಎಂದು ಪ್ರಶ್ನಿಸಿದ್ದಾರೆ. ಹತ್ತು ಹಲವು ಪ್ರಶ್ನೆಗಳನ್ನು ಎತ್ತಿ; ದಲಿತರ ಸಮಸ್ಯೆಗಳನ್ನು ಹೇಳಿ ಬಿಡುವುದಿಲ್ಲ. ಡಾ. ಬಿ.ಆರ್. ಹಿರೇಮಠರ ಹೆಗ್ಗಳಿಕೆಯಿರುವುದು ಸಮಸ್ಯೆಗಳಿಗೆ ಸೂಕ್ತ ಪರಿಹಾರ ಸೂಚಿಸುವಲ್ಲಿ "ಸಮಾಜದಲ್ಲಿರುವ ಅಜ್ಞಾನ, ಆಲಸ್ಯ, ದಾರಿದ್ರ್ಯತನಗಳ ಬೀಜಗಳನ್ನು ಸುಡಬೇಕಾದರೆ, ಹಳ್ಳಿಗಳಲ್ಲಿ ಶಿಕ್ಷಣ ಪ್ರಸಾರ ಸಾಕಷ್ಟು ನಡೆದಿದ್ದರೂ ತೃಪ್ತಿದಾಯಕವಾಗಿಲ್ಲ. ಆ ಸಾಮಾನ್ಯ ಜನರಲ್ಲಿ ಜ್ಞಾನೋದಯ ಮೂಡಿಬರುವಂತಾಗಬೇಕು. ಅಂದಾಗ ಸಮಾಜ ಹದಗೊಂಡು ಹೊಸ ವಾತಾವರಣ ಸೃಷ್ಟಿಯಾಗುತ್ತದೆ. ಅರಿವಿನ ಬೆಳಕಿನಲ್ಲಿ ಒಬ್ಬರನ್ನೊಬ್ಬರು ಅರಿತುಕೊಂಡು ತಮ್ಮತನದಿಂದ ಮಾನವತೆಯ ಹೊಸ ಮೌಲ್ಯಗಳನ್ನು ರೂಪಿಸಿಕೊಳ್ಳುವಂತಾಗುತ್ತದೆ. ಇಂಥ ಹಸನಾದ ಬದುಕು, ಆರೋಗ್ಯಕರವಾದ ಸಮಾಜಗಳಿಂದ ಮಾತ್ರ ವರ್ಣಾತೀತ, ಜಾತ್ಯಾತೀತ ಹಾಗೂ ಶೋಷಣಾತೀತ ದೇಶದ ನಿರ್ಮಾಣ ಸಾಧ್ಯವಾಗುತ್ತದೆ"[೭೭] ಎಂದಿರುವುದು ಅವರ ಚಿಂತನಾಕ್ರಮವಾಗಿದೆ.

ಸರಕಾರಗಳು ದಲಿತರ ಏಳಿಗೆಗೆ ಏನೆಲ್ಲ ಯೋಜನೆಗಳನ್ನು ರೂಪಿಸಿದ್ದರೂ ಅವುಗಳ ಪ್ರಯೋಜನವಾಗುತ್ತಿಲ್ಲ. ಕೆಲವೇ ಕೆಲವು ಜನರ ಪಾಲಾಗಿಬಿಡುತ್ತವೆ. ಮಧ್ಯಸ್ಥಗಾರರ ಕೈಸೇರುತ್ತಿವೆ.

ದಲಿತರಿಗೆ ನಿಜವಾದ ಪ್ರಯೋಜನವಾಗಬೇಕಾದರೆ; ಯುವಜನಾಂಗವು ಎಚ್ಚೆತ್ತುಕೊಳ್ಳಬೇಕೆಂದು ಎಚ್ಚರಿಸಿದ್ದು ಗಮನಾರ್ಹವಾಗಿದೆ. ಲೇಖನದ ಕೊನೆಯಲ್ಲಿ "ನಿಸ್ವಾರ್ಥ ಬುದ್ಧಿಯ ಮುಖಂಡರು, ಅನುಯಾಯಿಗಳು, ಸರಕಾರ, ಯುವಜನಾಂಗದ ಸಮಾಜದ ವಿವಿಧ ರಂಗಗಳಲ್ಲಿರುವ ಜನ ಸಾವಿರಾರು ಕೈಗಳಾಗಿ ಕಾರ್ಯ ಮಾಡಿದಾಗ ದಲಿತರ ಸಮಸ್ಯೆಗಳ ನಿವಾರಣೆ ಸಾಧ್ಯವಾಗುತ್ತದೆ"[೨೮] ಎಂದಿರುವುದು ಸಮಂಜಸವಾಗಿದೆ. ಡಾ. ಬಿ.ಆರ್. ಹಿರೇಮಠ ಅವರು ೧೯೭೪ರಲ್ಲಿ ಲೇಖನ ಬರೆದಿರುವುದನ್ನು ಗಮನಿಸಿದರೆ ಅವರ ಚಿಂತನೆ ಎತ್ತರ, ಅವರ ಸಾಮಾಜಿಕ ಕಾಳಜಿಯ ಅರ್ಥವಾಗುತ್ತದೆ. ಡಾ. ಬಿ.ಆರ್. ಅವರ ಸಾಹಿತ್ಯದ ವಿಭಿನ್ನ ನೆಲೆಗಳಲ್ಲಿ ಈ ಲೇಖನದ ಪಾತ್ರ ಮಹತ್ವವೆನಿಸುತ್ತದೆ.

**V. ಜಾಗತೀಕರಣ : ಕನ್ನಡ ಸಮಸ್ಯೆ ಸವಾಲುಗಳು :**

ಈ ಲೇಖನದಲ್ಲಿ ಜಾಗತೀಕರಣದಿಂದಾಗುವ ದುಷ್ಪರಿಣಾಮಗಳು ಅದರಲ್ಲಿಯೂ ಕನ್ನಡ ಭಾಷೆಗೆ ಒದಗುವ ಕುತ್ತುಗಳನ್ನು ವಿವರಿಸಿದ್ದಾರೆ. ೨೧.೧೧.೨೦೦೪ರ ಬೆಳಗಾವಿಯ ಲಿಂಗರಾಜ ಕಾಲೇಜನಲ್ಲಿ ಜರುಗಿದ ರಾಷ್ಟ್ರೀಯ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧವಿದು. ಡಾ. ಬಿ.ಆರ್. ಹಿರೇಮಠರ ಸಮಕಾಲೀನ ಚಿಂತನೆಗೆ ಇದೊಂದು ಉತ್ತಮ ಉದಾಹರಣೆಯಾಗಿದೆ. ಕನ್ನಡ ಭಾಷೆ ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗೂ ಸಮಸ್ಯೆಗಳನ್ನು ಎದುರಿಸುತ್ತ ಸವಾಲುಗಳನ್ನು ಸ್ವೀಕರಿಸುತ್ತ ಬೆಳೆಯುತ್ತ ಬಂದಿರುವುದು ಚರಿತ್ರೆಯಿಂದ ತಿಳಿದು ಬರುತ್ತದೆ. ಆದರೆ ಜಾಗತೀಕರಣದ ಸವಾಲು ಬೇರೆಯಾಗಿದೆ. "ನಮ್ಮ ಬದುಕನ್ನೇ ಅಲ್ಲಾಡಿಸಲಿರುವ ದೇಶಿಗರಿಗೆ ತಲ್ಲಣಗಳನ್ನು ತಂದೊಡ್ಡಲಿರುವ ಜಾಗತೀಕರಣಕ್ಕಿಂತ ಕನ್ನಡಿಗರ ಔದಾರೀಕರಣವೇ ಕನ್ನಡ ಭಾಷೆಗೆ ಕೆಟ್ಟ ಶಾಪವಾಗಿ ಪರಿಣಮಿಸಿದೆ" [೨೯] ಎಂದು ಹೇಳಿ ಜಾಗತೀಕರಣದ ನಿವಾರಣೆಗಾಗಿ ಪರಿಹಾರ ಸೂಚಿಸಿದ್ದು ಹೀಗೆ. "ಕರ್ನಾಟಕದಲ್ಲಿ ಮೊದಲು ಕನ್ನಡೀಕರಣ ಪ್ರಕ್ರಿಯೆ ಪೂರ್ಣಪ್ರಮಾಣದಲ್ಲಿ ಅನುಷ್ಠಾನಗೊಳ್ಳುವಂತಾಗಬೇಕು. ರಾಜಕೀಯ, 'ಇಚ್ಛಾಶಕ್ತಿ' ಜನತೆಯ 'ಸಂಕಲ್ಪಶಕ್ತಿ' , 'ಭಾಷಾ ಪ್ರೀತಿ'ಗಳ ಕೊರತೆಯಿಂದಾಗಿ ಕನ್ನಡ ಭಾಷೆ ದಿನದಿಂದ ದಿನಕ್ಕೆ ಕರ್ನಾಟಕದಲ್ಲಿ ಸೊರಗುತ್ತಿದೆ. ಜಾಗತೀಕರಣವೇ ಇರಲಿ, ಉದಾರೀಕರಣವೇ ಇರಲಿ, ಕರ್ನಾಟಕದಲ್ಲಿ ಕನ್ನಡೀಕರಣ ನಿರಂತರ ಸಾಗುತ್ತಿರಬೇಕು. ಕರ್ನಾಟಕದಲ್ಲಿ ಚಳುವಳಿ ಮತ್ತು ಹೋರಾಟ ಮಾಡದೆ ಕನ್ನಡಿಗರು ಯಾವುದನ್ನೂ ಪಡೆದಿಲ್ಲ. ಹೀಗಾಗಿ ಕನ್ನಡ ಭಾಷೆಯ ಅಸ್ತಿತ್ವ ಅಗ್ರಮಾನ್ಯತೆ ಮತ್ತು ಬೆಳವಣಿಗೆಗಳಿಗೆ ಜಾಗತೀಕರಣ ಅಡ್ಡ ಬಂದರೆ ಹೋರಾಟದ ಹಾದಿ ಹಿಡಿಯುವುದು ಅನಿವಾರ್ಯವಾಗಿ ಬಿಡುತ್ತದೆ."[೩೦] ಮುಂದುವರೆದು "ಜಾಗತೀಕರಣದಿಂದ ಕನ್ನಡ ಭಾಷೆಗೆ ಉಂಟಾಗಲಿರುವ ದುಷ್ಪರಿಣಾಮಗಳನ್ನು ಎದುರಿಸಲು ಸಮಸ್ತ ಕನ್ನಡಿಗರು ಸಿದ್ಧವಾಗಿರಬೇಕು. ಸರ್ವ ತ್ಯಾಗಕ್ಕೂ ಸನ್ನದ್ಧರಾಗಬೇಕು"[೩೧] ಎಂದು ಕರೆಕೊಟ್ಟಿರುವುದು ಯಥೋಚಿತವಾಗಿದೆ. "ಕನ್ನಡಿಗರಿಗೆ ಕನ್ನಡ ಕೇವಲ ಭಾಷೆಯಲ್ಲ ಅದು ಅವರ ಬದುಕು, ಕನ್ನಡ ಭಾಷೆ ನಾಶವಾದರೆ ಕನ್ನಡಿಗರ ಬದುಕೇ ನಾಶವಾದಂತೆ.

ಆದುದರಿಂದ ಕನ್ನಡ ಭಾಷೆ ಅಳಿವು ಉಳಿವಿನಲ್ಲಿ ಕನ್ನಡಿಗರ ಭವಿಷ್ಯತ್ತು ಅಡಗಿದೆ"[೮೨] ಎಂದು ವ್ಯಾಖ್ಯಾನಿಸಿದ್ದಾರೆ. "ಜಾಗತೀಕರಣದಿಂದ ಕನ್ನಡ ಭಾಷೆಯ ವ್ಯವಹಾರಿಕತೆ, ಪ್ರಯೋಜಕತೆ, ಪ್ರಾಧಾನ್ಯತೆಗಳು ಅಧಿಕಗೊಂಡರೆ, ಅದು ಜಾಗತೀಕರಣದ ಯಶಸ್ಸಿಗೆ ಕಾರಣೀಭೂತವೆನಿಸುತ್ತದೆ. ರಾಜಕೀಯ ಶಕ್ತಿ, ಜನಶಕ್ತಿ, ಆಡಳಿತಶಕ್ತಿಗಳು ಒಮ್ಮನಸ್ಸಿನಿಂದ ಕಾರ್ಯ ನಿರ್ವಹಿಸಿದರೆ, ಜಾಗತೀಕರಣ ಕನ್ನಡ ಭಾಷೆಗೆ ಅನುಕೂಲಕರವೇ ಆಗಿ ಪರಿಣಮಿಸುತ್ತದೆ"[೮೩] ಎಂದು ಅದರ ಧನ್ಯಾತ್ಮಕ ಅಂಶಗಳನ್ನು ಪ್ರಸ್ತಾಪಿಸಿರುವುದು ಮುಖ್ಯವೆನಿಸುತ್ತದೆ. ಸಮಕಾಲೀನ ಚಿಂತನೆ, ಜಾಗತಿಕ ಆಗುಹೋಗುಗಳಿಗೆ ಹೇಗೆ ಸ್ಪಂದಿಸುತ್ತಿದ್ದಾರೆಂಬುದಕ್ಕೆ ಈ ಲೇಖನ ಶ್ರೇಷ್ಠ ನಿದರ್ಶನವನ್ನೊದಗಿಸುತ್ತದೆ.

**VI. ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಸಂಶೋಧನೆ, ೧೯೮೫ರ ಸಂಶೋಧನೆ ಒಂದು ಸಮೀಕ್ಷೆ :**

ಈ ಎರಡೂ ಲೇಖನಗಳು ಸಂಶೋಧನ ಸಾಹಿತ್ಯವನ್ನು ಪರಿಚಯಿಸುತ್ತವೆ. ಮೊದಲ ಲೇಖನ ಕನ್ನಡ ಸಾಹಿತ್ಯದಲ್ಲಿ ಸಂಶೋಧನೆಯ ಉಗಮ ಮತ್ತು ವಿಕಾಸವನ್ನು ವಿವರಿಸಿ ಸಂಶೋಧನೆಯ ಪ್ರಕಾರಗಳು ಕನ್ನಡ ಸಂಶೋಧನಾ ಕ್ಷೇತ್ರದ ಪ್ರಮುಖ ಸಂಗತಿಗಳು ಮತ್ತು ಪ್ರಮುಖ ಸಂಶೋಧಕರನ್ನು ಈ ಲೇಖನದಲ್ಲಿ ಸ್ಥೂಲವಾಗಿ ಪರಿಚಯಿಸಿದ್ದಾರೆ. ಇದು ಎಂಟು ಪುಟದ ಲೇಖನವಾಗಿದ್ದು ಹಲವಾರು ಸಂದರ್ಭದಲ್ಲಿ ಪ್ರಕಟವಾಗಿದೆ. ೧೯೮೫ರ ಸಂಶೋಧನಾ ಸಮೀಕ್ಷೆ ಈ ಲೇಖನವು ಕನ್ನಡ ಪ್ರಾಧ್ಯಾಪಕರ ಪರಿಷತ್ತಿನ ಸಮಾವೇಶದಲ್ಲಿ ಮಂಡನೆಯಾದ ಪ್ರಬಂಧವಾಗಿದೆ. ೧೨ ಪುಟಗಳಷ್ಟು ಸುದೀರ್ಘವಾದ ಲೇಖನ ೧೯೮೯ರ 'ಸಾಧನೆ' ಪತ್ರಿಕೆಯಲ್ಲಿ ಪ್ರಕಟವಾಗಿದೆ. "೧೯೮೫ ರ ಸಂಶೋಧನೆ ಸ್ವತಂತ್ರ ಗ್ರಂಥ, ಬಿಡಿಲೇಖನ, ಗೌರವ ಗ್ರಂಥ ಹಾಗೂ ಪ್ರಸ್ತಾವನೆಗಳ ರೂಪದಲ್ಲಿ ಪ್ರಕಟವಾಗಿದೆ. ನೂರಾರು ಬಿಡಿಲೇಖನಗಳು, ಹತ್ತೊಂಬತ್ತು ಗೌರವ ಗ್ರಂಥಗಳು, ಹಲವಾರು ಪ್ರಸ್ತಾವನೆಗಳು, ಎಂಟು ಸ್ವತಂತ್ರ ಗ್ರಂಥಗಳು ಈ ವರ್ಷ ಹೊರಬಂದಿರುತ್ತವೆ. ಇದು ೧೯೮೫ನೆಯ ವರ್ಷದ ಸಂಶೋಧನೆಯ ಒಲವು ಮತ್ತು ವೈಶಿಷ್ಟ್ಯ. ಇಲ್ಲಿ ಬಿಡಿಲೇಖನ ಗೌರವ ಗ್ರಂಥ ಹಾಗೂ ಪ್ರಸ್ತಾವನೆಗಳ ರೂಪದಲ್ಲಿ ಪ್ರಕಟವಾದ ಸಂಶೋಧನೆಗಳು ಹೊರತುಪಡಿಸಿ. ಕೇವಲ ಗ್ರಂಥರೂಪದಲ್ಲಿರುವ ಸಂಶೋಧನೆಯ ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿದೆ."[೮೪] ಇದು ಈ ಲೇಖನದ ಆಶಯವಾಗಿದೆ. ೧೯೮೫ನೆಯ ವರ್ಷದ ಸಂಶೋಧನೆ ಕನ್ನಡ ಸಾಹಿತ್ಯ ಚರಿತ್ರೆ ಶಾಸನ ಜಾನಪದ ಹಾಗೂ ದಾಖಲೆ ಮುಂತಾದ ಕ್ಷೇತ್ರಗಳಲ್ಲಿಯೂ ನಡೆದಿದೆ. ಪ್ರಾದೇಶಿಕ ಅರಸು ಮನೆತನಗಳು ಕೈಫಿಯತ್ತು, ಶಿಷ್ಟಪದ - ಜಾನಪದ ಸಾಹಿತ್ಯಗಳ ಸಮಾಜೋಧಾರ್ಮಿಕ, ಸಾಂಸ್ಕೃತಿಕ ಅಧ್ಯಯನ ಹಾಗೂ ಕವಿ ಕೃತಿಗಳ ತೌಲನಿಕ ಅಧ್ಯಯನ ನಡೆದಿರುವುದು ವಿಶೇಷವಾಗಿದೆ. ಡಾ. ಬಿ. ಆರ್. ಹಿರೇಮಠ ಅವರು ಎಲ್ಲ ಅಂಶಗಳನ್ನು ಪ್ರಸ್ತುತ ಲೇಖನದಲ್ಲಿ ಸಾದರ ಪಡಿಸಿದ್ದಾರೆ. "೧೯೮೫ನೇ ವರ್ಷದ ಸಂಶೋಧನೆ ಹಲವಾರು ಹೊಸ ಮುಖಗಳಲ್ಲಿ ಮುನ್ನಡೆದಿರುವುದು ಅತ್ಯಂತ ಗಮನಾರ್ಹ ಸಂಗತಿಯಾಗಿದೆ"[೮೫] ಎಂದಿರುವುದು ಶ್ರೀಯುತರ ವಿಸ್ತೃತವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ.

**VII.ಡಾ. ಆರ್.ಸಿ. ಹಿರೇಮಠ -ಸಾಹಿತ್ಯ ಒಂದು ಅವಲೋಕನ :**

ಈ ಲೇಖನವು ೨೦೦೬ರ ಸುಕುಮಾರ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಡಾ. ಆರ್.ಸಿ. ಅವರ ಭವ್ಯ ವ್ಯಕ್ತಿತ್ವವನ್ನು ದರ್ಶನ ಮಾಡುವ ಹಾಗೂ ಅವರ ಸಾಹಿತ್ಯವನ್ನು ಪರಿಚಯಿಸುವ ಲೇಖನವಿದು. ೭ ಪುಟಗಳ ವ್ಯಾಪ್ತಿಯುಳ್ಳ ಈ ಲೇಖನ ಮೌಲಿಕವಾಗಿದೆ.

ಹೀಗೆ ಡಾ. ಬಿ.ಆರ್. ಹಿರೇಮಠ ಅವರ ವಿಮರ್ಶಾ ಸಾಹಿತ್ಯ ವಿಪುಲ ಹಾಗೂ ವೈವಿಧ್ಯಪೂರ್ಣವಾಗಿದೆ. ಡಾ. ಬಿ.ಆರ್. ಅವರ ವಿಮರ್ಶಾ ಲೇಖನಗಳು ಕನ್ನಡ ವಿಮರ್ಶಾ ಸಾಹಿತ್ಯವನ್ನು ವಿಸ್ತರಿಸುತ್ತವೆ ಎಂದು ಹೇಳಿದರೆ ಖಂಡಿತ ಅತಿಶಯೋಕ್ತಿಯಲ್ಲ.

**೫.೨.೫ : ವ್ಯಕ್ತಿ ಚಿತ್ರಗಳು :**

ಡಾ. ಬಿ. ಆರ್. ಹಿರೇಮಠ ಅವರು ಸಾಂದರ್ಭಿಕವಾಗಿ ವ್ಯಕ್ತಿಚಿತ್ರಗಳನ್ನು ಅರ್ಥಪೂರ್ಣವಾಗಿ ಬಿಡಿಸಿದ್ದಾರೆ. ಹಾವಿನಹಾಳ ಕಲ್ಲಯ್ಯ, ಶಿವಾನುಭಾವಿ ನಿಜಗುಣ ಶಿವಯೋಗಿ, ಹುಬ್ಬಳ್ಳಿಯಲ್ಲಿದ್ದ ಅನುಭಾವಿ ಸಿದ್ಧಾರೂಢರು. ಸಮಾಜೋಧಾರ್ಮಿಕ ಸೂರ್ಯ ಮೃತ್ಯುಂಜಯ ಅಪ್ಪಗಳು, ವೈರಾಗ್ಯ ಮೂರುತಿ ಮಹಾಂತ ಶಿವಯೋಗಿಗಳು, ಯುಗಪುರುಷ ಮೃತ್ಯುಂಜಯ ಅಪ್ಪಗಳು, ಫ.ಗು. ಹಳಕಟ್ಟಿ, ಸಿ.ಸಿ. ಬಸವನಾಳರು, ಶಿ.ಚ.ನಂದೀಮಠ, ಮಲ್ಲಿಕಾರ್ಜುನರು, ಡಾ. ಆರ್.ಸಿ. ಹಿರೇಮಠರು ನಾನು ಕಂಡಂತೆ, ಮಾನವೀಯ ಗುಣಗಳ ನಾಯಕ ಮಸ್ಕೇರಿ ಎಂ.ಕೆ. ನಾಯಕ, ಅಜಿತಸೇನ, ವೈರಾಗ್ಯನಿಧಿ, ಹೀಗೆ ಹಲವಾರು ಕ್ಷೇತ್ರದ ಮಹನೀಯರ ವ್ಯಕ್ತಿ ಚಿತ್ರವನ್ನು ಡಾ. ಬಿ.ಆರ್. ಹಿರೇಮಠ ಅವರು ನಿರೂಪಿಸಿದ್ದಾರೆ. ಅವುಗಳನ್ನಿಲ್ಲಿ ಪರಿಶೀಲಿಸಲಾಗುವುದು.

**I. ಹಾವಿನಹಾಳ ಕಲ್ಲಯ್ಯ:**

ಈ ಲೇಖನವು ಸುಕುಮಾರದಲ್ಲಿ ಪ್ರಕಟಿತವಾಗಿದ್ದು ೮ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ೧೨ ಶತಮಾನದ ಶಿವಶರಣ ಮತ್ತು ವಚನಕಾರ ಹಾವಿನಹಾಳ ಕಲ್ಲಯ್ಯನು ಕಲ್ಯಾಣ ಕ್ರಾಂತಿಯ ತರುವಾಯವೂ ಬದುಕಿದ್ದನು. ಶಿವಯೋಗಿ ಸಿದ್ಧರಾಮೇಶ್ವರನ ನಿಕಟವರ್ತಿಯಾಗಿ, ಶಿಷ್ಯನಾಗಿ, ಅನುಯಾಯಿಯಾಗಿ ಸೊನ್ನಲಾಪುರದಲ್ಲಿ ಕಾರ್ಯನಿರ್ವಹಿಸುತ್ತಿದ್ದನು. ಸಮಕಾಲೀನ ವಚನಕಾರರಲ್ಲಿ ಹಾವಿನಹಾಳ ಕಲ್ಲಯ್ಯ, ಹರಿಹರ ರಚಿಸಿರುವ ಹಾವಿನಹಾಳ ಕಲ್ಲಯ್ಯನ ರಗಳೆ, ಏಕೋತ್ತರ ಶತಸ್ಥಲ, ಜ್ಞಾನ ಷಟಸ್ಥಲಸಾರ, ಬಸವೋತ್ತರ ಯುಗದ ವಚನಗಳು, ಲಿಂಗಲೀಲಾ ವಿಲಾಸ ಚಾರಿತ್ರ್ಯ, ವೀರಶೈವ ಚಿಂತಾಮಣಿ, ಶರಣಚಾರಿತ್ರ್ಯದ ವಚನಗಳು, ಶಿವಯೋಗ ಚಿಂತಾಮಣಿ, ಶೀಲಸಂಪಾದನೆ, ಷಟ್‌ಸ್ಥಲಸ್ತೋತ್ರದ ವಚನಗಳು, ಸಕಲಪುರಾತನರ ವಚನಗಳು, ಸುಖಸಂಪಾದನೆಯ ವಚನಗಳು ಮುಂತಾದ ಆಕರ ಗ್ರಂಥಗಳಲ್ಲಿ ಕಂಡುಬರುವ ಹಾವಿನಹಾಳಕಲ್ಲಯ್ಯನ ವ್ಯಕ್ತಿತ್ವವನ್ನು ಡಾ. ಬಿ.ಆರ್. ಹಿರೇಮಠ ಅವರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

**II. ನಿಜಗುಣ ಶಿವಯೋಗಿ :**

ಕರ್ನಾಟಕದ ಅನುಭಾವಿಗಳು ಶಿವಯೋಗಿಗಳ ಪರಂಪರೆಯಲ್ಲಿ ನಿಜಗುಣಶಿವಯೋಗಿಗಳಿಗೆ ಹಿರಿಯ ಸ್ಥಾನಮಾನವಿದೆ. ಲೌಕಿಕ ಪಾರಮಾರ್ಥಗಳೆರಡನ್ನೂ ಮೇಳೈಸಿಕೊಂಡ ಸಾಧಕನೀತ. ಅನುಭಾವದ ಪರಿಮಳವನ್ನು ಶಿವಯೋಗದ ಬೆಳಕನ್ನು ತನ್ನ ಕೃತಿಗಳ ಮೂಲಕ ಜನರಿಗೆ ಪರಿಚಯಿಸಿದಾತ. ನಿಜಗುಣರ ವ್ಯಕ್ತಿತ್ವ ಸಾಹಿತ್ಯ ಸಾಧನೆ, ಸಮಾಜ ಸುಧಾರಣೆ, ಅನುಭಾವಿಕ ನೆಲೆ ಮುಂತಾದ ಅಂಶಗಳನ್ನು ಈ ವ್ಯಕ್ತಿಚಿತ್ರದಲ್ಲಿ ನಿರೂಪಿಸಿದ್ದಾರೆ.

**III. ಅನುಭಾವಿ ಸಿದ್ಧಾರೂಢರು :**

ಇದು ಹುಬ್ಬಳ್ಳಿಯ ಸಿದ್ಧಾರೂಢರ ವ್ಯಕ್ತಿತ್ವವನ್ನು ಪರಿಚಯಿಸುವ ಲೇಖನ ೧೦೩೬ ರ ಕನ್ನಡ ನುಡಿಯಲ್ಲಿ (ಸಂ. ೩೯ ಸಂ. ೧೭) ಪ್ರಕಟಿತವಾಗಿದೆ. ಒಂದು ಪುಟದ ಪುಟ್ಟ ಲೇಖನವಿದು. ಸಿದ್ಧಾರೂಢರು ಕರ್ನಾಟಕದ ಅನುಭಾವಿ ಪರಂಪರೆಯಲ್ಲಿ ಮಹೋನ್ನತ ವ್ಯಕ್ತಿತ್ವವುಳ್ಳವರು. "ಎತ್ತರದ ನಿಲುವು, ಬಡಕಲು ದೇಹಧಾರಿಯಾದ ಸಿದ್ಧಾರೂಢರು ತಮ್ಮ ಮಠದಲ್ಲಿ ನಿಜಗುಣರ ಶಾಸ್ತ್ರ ಭಗವದ್ಗೀತೆ, ಉಪನಿಷತ್ ಮೊದಲಾದ ವಿಷಯ ತತ್ವಗಳನ್ನೇ ಪ್ರತಿಪಾದಿಸುತ್ತಿದ್ದರು. ಜೊತೆಗೆ ಸಂಗೀತ, ಶಾಸ್ತ್ರ ಮತ್ತು ಎಲ್ಲ ಧರ್ಮಗಳ ಜಿಜ್ಞಾಸುಗಳಿಗೆ ಅವಕಾಶ ಕಲ್ಪಿಸಿಕೊಟ್ಟಿದ್ದರು. ಉಚ್ಚ ನೀಚ ಎಂಬ ಭೇದ ಭಾವವಿಲ್ಲದೆ ಸಚಾದಾರದಿಂದ ಸ್ವರೂಪಜ್ಞಾನವನ್ನು ಸಂಪಾದಿಸಬೇಕು. ಅದರಿಂದ ಭವದುಃಖ ಅಳಿದು ಶಾಶ್ವತ ಸುಖ ಲಭಿಸುವುದು.ಇದೇ ಮುಕ್ತಿ ಎಂಬ ಸರಳ ಶುದ್ಧ ಅದ್ವೈತವನ್ನೇ ಜಗತ್ತಿಗೆ ಬೋಧಿಸಿದರು" [೬೬] ಎನ್ನುವಲ್ಲಿ ಸಿದ್ಧಾರೂಢರ ವ್ಯಕ್ತಿತ್ವ ಮತ್ತು ಅವರ ಕಾರ್ಯವನ್ನು ಅನಾವರಣಗೊಳಿಸಿದ್ದಾರೆ.

**IV. ಸಮಾಜೋ ಧಾರ್ಮಿಕ ಸೂರ್ಯ, ಯುಗಪುರುಷ :**

ಇವೆರಡೂ ಪೂಜ್ಯ ಶ್ರೀ ಮೃತ್ಯುಂಜಯ ಅಪ್ಪಗಳನ್ನು ಕುರಿತಾಗಿರುವ ವ್ಯಕ್ತಿ ಚಿತ್ರ ಲೇಖನಗಳಾಗಿವೆ. ಸಮಾಜೋಧಾರ್ಮಿಕ ಸೂರ್ಯ ಲೇಖನವು ೨೦೦೨ರ ಸುಕುಮಾರ ತ್ರೈಮಾಸಿಕದಲ್ಲಿ ಪ್ರಕಟವಾದ ಲೇಖನವಾಗಿದೆ. ಇದು ನಾಲ್ಕು ಪುಟಗಳ ಲೇಖನವಾಗಿದೆ. ಯುಗಪುರುಷ ಶ್ರೀ ಮೃತ್ಯುಂಜಯ ಅಪ್ಪಗಳು ಈ ಲೇಖನ ವಿಜಯ ಕರ್ನಾಟಕದ ಸಾಪ್ತಾಹಿಕ ವಿಜಯದಲ್ಲಿ ಪ್ರಕಟವಾಗಿದೆ. ಇವೆರಡೂ ಲೇಖನಗಳು ಬೇರೆ ಬೇರೆ ಸಂದರ್ಭದಲ್ಲಿ ಬಂದಿದ್ದರೂ ಪೂಜ್ಯ ಮೃತ್ಯುಂಜಯ ಶ್ರೀಗಳ ಕುರಿತಾಗಿವೆ. "ಪರಮಪೂಜ್ಯ ಮೃತ್ಯುಂಜಯ ಅಪ್ಪಗಳು ಶ್ರೀ ಮುರುಘಾಮಠದ ಕಾರುಣ್ಯ ಮೂರುತಿಗಳಾಗಿದ್ದರು. ಪೂಜ್ಯರು ಶ್ರೀಮಠದ ಅಧಿಪತಿಗಳಾಗಿ, ವೈರಾಗ್ಯ ನಿಧಿಯಾಗಿ, ಮಾನವತೆಯ ಆರಾಧಕರಾಗಿ, ಸಮಾಜೋದ್ಧಾರಕರಾಗಿ, ಮಾನವ ಧರ್ಮದ ಪ್ರತಿಪಾದಕರಾಗಿ, ಸಾಹಿತ್ಯ-ಸಂಸ್ಕೃತಿಗಳ ಸಂರಕ್ಷಕರಾಗಿ, ಮಾನವೀಯ ಮೌಲ್ಯಗಳ ಪ್ರಸಾರಕರಾಗಿ ಮಾಡಿದ ಕಾರ್ಯ ಅನನ್ಯ ಹಾಗೂ ಅನುಪಮವಾದುದಾಗಿದೆ."[೬೭] ಎಂಬುದು ಸಮಂಜಸವಾಗಿದೆ.

**V. ವೈರಾಗ್ಯ ಮೂರ್ತಿ :**

ಮಹಾಂತ ಶ್ರೀಗಳು ೨೦೦೨ ರ ಧರೆಗಿಳಿದ ಬಸವ ಬೆಳಕು ಅಭಿನಂದನಾ ಗ್ರಂಥದಲ್ಲಿ ಪ್ರಕಟವಾಗಿದೆ. ಇಳಕಲ್ ಚಿತ್ತರಗಿಯ ಶ್ರೀ ವಿಜಯ ಮಹಾಂತೇಶಮಠದ ಪೂಜ್ಯ ಮಹಾಂತ ಸ್ವಾಮಿಗಳ ವ್ಯಕ್ತಿ ಚಿತ್ರಣವಿದು. "ಪೂಜ್ಯರು ತಮ್ಮ ಸಮಾಜೋಧಾರ್ಮಿಕ ಕಾರ್ಯಗಳ ಮೂಲಕ ನಾಡಿನಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ನವ ಜಾಗೃತಿಯನ್ನು ಉಂಟುಮಾಡಿದ್ದಾರೆ. ಹೊಸ ಹೊಸ ಉಪಕ್ರಮವಿನೂತನ ಕಾರ್ಯ ಶೈಲಿಗಳ ಮೂಲಕ ಜನರಲ್ಲಿ ನವ ಮನ್ವಂತರವನ್ನು ಉಂಟುಮಾಡಿದ್ದಾರೆ. ವೀರಶೈವ ಮಠಗಳು ಜನಪರವಾಗುವಂತೆ, ಮಠಾಧೀಶರು ಆತ್ಮಕಲ್ಯಾಣದಲ್ಲಿ ಮಾತ್ರ ಜನಪರವಾಗುವಂತೆ, ವಿಹರಿಸದೆ ಲೋಕಕಲ್ಯಾಣ ಕಾರ್ಯದಲ್ಲಿ ತೊಡಗುವಂತೆಯೇ ಪ್ರೇರೇಪಿಸಿದ್ದಾರೆ. ಬಸವ ಮೌಲ್ಯವನ್ನು ಬದುಕಿ ಆ ಕಾಲಕ್ಕೆ ದೃಷ್ಟಾಂತವಾಗಿ ನಿಂತವರು ಪೂಜ್ಯ ಮಹಾಂತ ಸ್ವಾಮಿಗಳು ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲಿಯೂ ಬಸವನನ್ನು ಕಂಡವರು, ಬಸವ ಬೆಳಕನ್ನು ಆನಂದಿಸಿದವರು, ಆ ಬೆಳಕಿನ ಮೂಲಕ ಸಮಾಜವನ್ನು ಬೆಳಕಾಗಿಸಲು ನಿರಂತರ ಪ್ರಯತ್ನಿಸಿದವರು ಪೂಜ್ಯ ಶ್ರೀ ಮಹಾಂತಸ್ವಾಮಿಗಳು"[೮೮] ಈ ಮಾತುಗಳು ಇಳಕಲ್ ಶ್ರೀಗಳ ವ್ಯಕ್ತಿತ್ವ ಹಾಗೂ ಕಾರ್ಯ ವೈಖರಿಯನ್ನು ಪರಿಚಯಿಸುತ್ತವೆ.

**VI. ಫ.ಗು. ಹಳಕಟ್ಟಿ :**

ಇದು ೬.೨.೨೦೦೨ ರ ಆಕಾಶವಾಣಿ ಧಾರವಾಡ ನಿಲಯದಿಂದ ಪ್ರಸಾರಿತಗೊಂಡ ಲೇಖನ. ೬ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಫ.ಗು. ಹಳಕಟ್ಟಿಯವರ ಜೀವನ, ಸಾಧನೆ, ವಚನ ಸಾಹಿತ್ಯಕ್ಕೆ ಅವರ ಕೊಡುಗೆ ಮುಂತಾದವುಗಳನ್ನು ಪರಿಚಯಿಸುವ ಸಾಂದರ್ಭಿಕ ಲೇಖನವಾಗಿದೆ.

**VII. ಶಿ.ಶಿ. ಬಸವನಾಳರ ಮಾಧ್ಯಮಿಕ ಶಿಕ್ಷಣ ಪ್ರಸಾರ :**

ಈ ಲೇಖನವು ಕರ್ನಾಟಕ ಭಾರತಿಯಲ್ಲಿ ಪ್ರಕಟವಾಗಿದೆ. ಈ ಲೇಖನವು ೧೫ ಪುಟಗಳ ವ್ಯಾಪ್ತಿಯುಳ್ಳ ದೀರ್ಘ ಲೇಖನವಾಗಿದೆ. ಶಿ.ಶಿ.ಬಸವನಾಳರ ಜನನ, ಬಾಲ್ಯ, ಶಿಕ್ಷಣ, ವೃತ್ತಿ, ಪ್ರವೃತ್ತಿ ಮುಂತಾದವುಗಳನ್ನು ವಿವರಿಸಿದ್ದಾರೆ. "ಸಾಹಿತ್ಯಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಮೊದಲಾದ ತಮ್ಮ ಬಹುಮುಖ ಸೇವೆಯ ಮೂಲಕ ಕನ್ನಡವನ್ನು, ಕನ್ನಡಿಗರನ್ನು, ಕರ್ನಾಟಕವನ್ನು ಬೆಳೆಸಿದ, ಬೆಳಗಿಸಿದ ಪುಣ್ಯಪುರುಷರಲ್ಲಿ ಶಿ.ಶಿ. ಬಸವನಾಳರು ಅಗ್ರಗಣ್ಯವೆನಿಸಿದ್ದಾರೆ. ಬಸವನಾಳರು ತಮ್ಮ ಒಂದೇ ಬದುಕಿನಲ್ಲಿ ಹಲವು ಬದುಕನ್ನು ಬಾಳಿದವರು. ಹೀಗಾಗಿ ಬಸವನಾಳರ ಅಧ್ಯಯನವೆಂದರೆ ಅವರ ಹಲವು ಬದುಕಿನ ಬಹು ಶ್ರುತತೆಯ ಅಧ್ಯಯನವೆಂದೇ ಹೇಳಬೇಕಾಗುತ್ತದೆ. ಹಲವು ಜೀವ ಮಾನವಗಳಲ್ಲಿ ಸಾಧಿಸಬೇಕಾಗಿದ್ದುದನ್ನು ತಮ್ಮ ಬದುಕಿನ ಒಂದೇ ಅವಧಿಯಲ್ಲಿ ಸಾಧಿಸಿ ತೋರಿಸಿದ ಅಪ್ರತಿಮ ಸಾಹಸಿ ಎನಿಸಿದ್ದಾರೆ"[೮೯] ಎಂದು ಬಸವನಾಳರ ವ್ಯಕ್ತಿತ್ವದ ವಿಶೇಷತೆಯನ್ನು ಸೆರೆಹಿಡಿದಿದ್ದಾರೆ.

**VIII. ಡಾ. ಶಿ.ಚ. ನಂದಿಮಠರು :**

ಈ ಲೇಖನವು 'ಬಯಲುಕಾರಣಿಕ' ಎಂಬ ಅಭಿನಂದನಾ ಗ್ರಂಥದಲ್ಲಿ ಬಂದಿದೆ. ಡಾ. ಶಿ.ಚ. ನಂದಿಮಠರು ಸಾಹಿತ್ಯಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಪತ್ರಿಕೋದ್ಯಮ ಸಂಶೋಧನೆ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನನ್ಯ ಅನುಪಮ ಸೇವೆ ಸಲ್ಲಿಸಿದವರು. "ಡಾ. ನಂದಿಮಠರು ತಮ್ಮ ಬಹುಶ್ರುತ ಪ್ರತಿಭೆ, ಕ್ರಿಯಾಶೀಲ ಪಾಂಡಿತ್ಯ, ಬಹುಶಿಸ್ತೀಯ ಉತ್ಪತ್ತಿ, ಪಾರದರ್ಶಕ ವ್ಯಕ್ತಿತ್ವ ಉದಾತ್ತ ಬದುಕು ಮತ್ತು ಪವಿತ್ರ ಸಂಕಲ್ಪಗಳಿಂದ ವಿವಿಧ ಕ್ಷೇತ್ರಗಳಲ್ಲಿ ಮನಮುಟ್ಟಿ ದುಡಿದಿದ್ದಾರೆ. ಕನ್ನಡ, ಕನ್ನಡಿಗ, ಕರ್ನಾಟಕದ ಶೈಕ್ಷಣಿಕ ಸಂಘ, ಸಂಸ್ಥೆ ಧರ್ಮ ಸಮಾಜ ಸಂಸ್ಕೃತಿಯನ್ನು ಬೆಳೆಸಿದ, ಬೆಳಕಾಗಿಸಿದ ಪುಣ್ಯ ಚೇತನರೆನಿಸಿದ್ದಾರೆ. ಇಂಥ ಪುಣ್ಯವ್ಯಕ್ತಿಗಳು ಕರ್ನಾಟಕವನ್ನೇ ತಮ್ಮ ಬಹುಮುಖ ಚಟುವಟಿಕೆಗಳ ಕಾರ್ಯಕ್ಷೇತ್ರವನ್ನಾಗಿಸಿರುವದು ಕನ್ನಡಿಗರ ಸೌಭಾಗ್ಯ"[೬೦] ಎಂದು ಡಾ. ಶಿ. ಚ. ನಂದಿಮಠರ ಬಹುಮುಖ ವ್ಯಕ್ತಿತ್ವವನ್ನು ಪರಿಚಯಿಸಿದ್ದಾರೆ. ಮುಂದೆ ವೀರಶೈವರ ಇತಿಹಾಸ ಮತ್ತು ಧರ್ಮ, ಶಬ್ದಕೋಶ ಕಿಟೆಲ್ ಕೋಶ, ಸಂಶೋಧನೆ ಹಾಗೂ ಸಂಶೋಧನಾ ಕ್ಷೇತ್ರ, ಬೋಧ ಭಾಷೆ, ಕನ್ನಡಿಗರಲ್ಲಿ ಐಕ್ಯತೆ ಮುಂತಾದ ಉಪಶೀರ್ಷಿಕೆಗಳನ್ನು, ಅವರ ಸಾಹಿತ್ಯವನ್ನು ಪರಿಚಯಿಸಿದ್ದಾರೆ. ಅತ್ಯುತ್ತಮ ವ್ಯಕ್ತಿ ಚಿತ್ರಕ್ಕೆ ಈ ಲೇಖನವು ಉದಾಹರಣೆಯಾಗಿದೆ.

**IX. ಚೆನ್ನಮಲ್ಲಿಕಾರ್ಜುನರು :**

೧೯ನೇ ಶತಮಾನದ ವೀರಶೈವ ಪುಣ್ಯ ಪುರುಷರಲ್ಲಿ ಇವರು ಶಿಖರಪ್ರಾಯರಾಗಿದ್ದಾರೆ. ಜೀವನಿಷ್ಠೆ, ಕಾಯಕನಿಷ್ಠೆ, ತತ್ವನಿಷ್ಠೆಗಳ ಮೂಲಕ ದುಡಿದ ಒಬ್ಬ ವ್ಯಕ್ತಿ ಹೇಗೆ ಸಮಾಜ ಪೂಜ್ಯನಾಗುತ್ತಾನೆ ಎಂಬುದಕ್ಕೆ ಶ್ರೀ ಚೆನ್ನಮಲ್ಲಿಕಾರ್ಜುನರು ಶ್ರೇಷ್ಠ ನಿದರ್ಶನರಾಗಿದ್ದಾರೆ ಎನ್ನುವುದನ್ನು ಡಾ. ಬಿ. ಆರ್. ಹಿರೇಮಠ ಅವರು ನಿರೂಪಿಸಿದ್ದಾರೆ. ಪ್ರಸ್ತುತ ಲೇಖನವು ೧೯೮೮ರ ಬಸವಪಥದಲ್ಲಿ ಪ್ರಕಟವಾಗಿದೆ. ೭ ಪುಟಗಳ ಲೇಖನವಿದು.

**X. ಡಾ. ಆರ್.ಸಿ. ನಾನು ಕಂಡಂತೆ :**

ಇದು ಡಾ. ಆರ್.ಸಿ. ಹಿರೇಮಠ ಅವರ ಕುರಿತಾಗಿರುವ ಲೇಖನ ೧೯೯೩ರಲ್ಲಿ ಪ್ರಕಟವಾಗಿದೆ. ಡಾ. ಆರ್.ಸಿ. ಅವರನ್ನು ಕುರಿತಾಗಿ ಚಿತ್ರಿಸಿರುವ ಚಿಕ್ಕ ಮತ್ತು ಚೊಕ್ಕದಾದ ವ್ಯಕ್ತಿ ಚಿತ್ರವಿದು. ಪ್ರಾಧ್ಯಾಪಕರಾಗಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಭಾಷಾವಿಜ್ಞಾನಿಗಳಾಗಿ, ವಚನ ಸಂಪಾದಕರಾಗಿ, ಗ್ರಂಥಸಂಪಾದಕರಾಗಿ ನಿರ್ವಹಿಸಿದ ಕಾರ್ಯ ಅನುಪಮವಾಗಿದೆ ಎಂಬುದನ್ನು ಡಾ. ಬಿ. ಆರ್. ಹಿರೇಮಠ ಅವರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

**XI. ಪ್ರಭಾವಶಾಲಿ ಮತ್ತು ಹೃದಯವಂತಿಕೆಯ ಪಾಪು :**

ಡಾ. ಬಿ. ಆರ್. ಹಿರೇಮಠ ಅವರು ಬರೆದಿರುವ ಮತ್ತೊಂದು ಗಮನಾರ್ಹ ವ್ಯಕ್ತಿ ಚಿತ್ರವೆಂದರೆ ಡಾ. ಪಾಟೀಲ ಪುಟ್ಟಪ್ಪನವರ ಕುರಿತಾಗಿರುವ ಲೇಖನ. ಇದು ಪಾಪು ಅಭಿನಂದನಾ ಗ್ರಂಥದಲ್ಲಿ ಪ್ರಕಟವಾಗಿದೆ. ೩ ಪುಟಗಳುಳ್ಳ ಕಿರು ಲೇಖನವಿದು. ಪಾಟೀಲ ಪುಟ್ಟಪ್ಪ ಅವರ ಭವ್ಯ ವಕ್ತಿತ್ವವನ್ನು ಹಾಗೂ ಅವರು ಕೈಗೊಂಡ ಮಹೋನ್ನತ ಕಾರ್ಯಗಳನ್ನು ತಿಳಿಸುವುದು ಈ ಲೇಖನದ ಆಶಯವಾಗಿದೆ. ಪಾಪು ಅವರನ್ನು ಕುರಿತಾಗಿ ಡಾ. ಬಿ. ಆರ್. ಅವರು ತಮ್ಮ ಅನುಭವಕ್ಕೆ ಬಂದಿರುವ ಗೋಕಾಕ ಚಳುವಳಿಯ ಸಂದರ್ಭ ಡಾ. ಆರ್. ಸಿ. ಹಿರೇಮಠ ಅವರ ಒಡನಾಟ ಮತ್ತು ಡಾ. ಎಚ್. ಜಿ. ದಡ್ಡಿ ಅವರ ಪುಸ್ತಕ ಬಿಡುಗಡೆಯ ಸಂದರ್ಭ ಮೂರನ್ನು ದಾಖಲಿಸುತ್ತ ಪಾಪು ಅವರ ವ್ಯಕ್ತಿ ಚಿತ್ರವನ್ನು ತುಂಬಾ ಆಕರ್ಷಕವಾಗಿ ನಿರೂಪಿಸಿದ್ದಾರೆ. "ಪಾಪು ಜೀವನ ಮೌಲ್ಯಗಳ ಪ್ರತೀಕ ಮಾನವತೆಯ ಆರಾಧಕ ನಾಡು ನುಡಿ ಸಂಸ್ಕೃತಿಗಳ ಮಹಾಪ್ರತಿಪಾದಕ"[೯೧] ಎಂದು ವ್ಯಾಖ್ಯಾನಿಸಿರುವುದು ಪಾಟೀಲ ಪುಟ್ಟಪ್ಪನವರ ವ್ಯಕ್ತಿತ್ವಕ್ಕೆ ಬರೆದ ಭಾಷ್ಯವಾಗಿದೆ.

**XII. ಮಾನವೀಯ ಗುಣಗಳ ಮಾಸ್ಕೇರಿ ಎಂ.ಕೆ. ನಾಯಕ :**

ಇದು ಮಾಸ್ಕೇರಿ ಐವತ್ತು 'ಬೆವರು ಬೆಳಕು' ಕೃತಿಯಲ್ಲಿ ಬಂದಿರುವ ಮೂರು ಪುಟದ ಕಿರುಲೇಖನವಾಗಿದೆ. ದಾಂಡೇಲಿಯ ಕಾಗದ ಕಾರ್ಖಾನೆಯ ಅಧಿಕಾರಿಗಳಾದ ಮಾಸ್ಕೇರಿ ನಾಯಕ ಅವರ ವ್ಯಕ್ತಿತ್ವ ಚಿತ್ರಿಸುವ ಲೇಖನವಿದು. "ಮಾನವೀಯ ಗುಣಗಳಲ್ಲಿ ಬದುಕಿದ ಮನುಷ್ಯ ಪ್ರೀತಿ, ಸಮಾಜ ಪ್ರೀತಿ, ಸಾಹಿತ್ಯ ಪ್ರೀತಿ, ಗುರುಪ್ರೀತಿಗಳನ್ನು ಹೊಂದಿದವರಿರುವರು. ಇವರ ಉತ್ಸಾಹ ಸಂಘಟನಾ ಶಕ್ತಿ, ಪಾರದರ್ಶಕ ವ್ಯಕ್ತಿತ್ವ, ಸೇವಾ ಮನೋಭಾವಗಳು ಇಂದಿನ ಯುವಕರಿಗೆ ಅನುಕರಣ ನಿಯಮವೆನಿಸಿವೆ. ಮಾನವೀಯ ಗುಣಗಳ ನಾಯಕ ವ್ಯಕ್ತಿತ್ವದ ಮಾಸ್ಕೇರಿ ಎಂ.ಕೆ. ನಾಯಕ ಅವರು ಸಮಾಜದ ಸಾಂಸ್ಕೃತಿಕ ಲೋಕದ ಸಾಹಿತ್ಯ ವಲಯದ ಸಂಪತ್ತು ಎನಿಸಿದ್ದಾರೆ."[೯೨]

ಈ ರೀತಿಯಾಗಿ ಡಾ. ಬಿ. ಆರ್. ಹಿರೇಮಠ ಅವರು ಹಲವಾರು ವ್ಯಕ್ತಿಚಿತ್ರಗಳನ್ನು ಸರಳ, ಸಹಜ, ಸುಂದರವಾಗಿ ಬಿಡಿಸಿದ್ದಾರೆ. ಒಂದೊಂದು ವ್ಯಕ್ತಿಚಿತ್ರಗಳು ವಿಭಿನ್ನವಾಗಿದ್ದು ತಮ್ಮದೇ ಆದ ರೀತಿಯಲ್ಲಿ ರೂಪಗೊಂಡಿವೆ. ಒಂದರಂತೆ ಒಂದಿಲ್ಲ. ಒಬ್ಬ ವ್ಯಕ್ತಿಯ ಜೀವನ ಸಾಧನೆ ಕಾರ್ಯ ವೈಖರಿ ಪಡೆದ ಗೌರವ ಮೊದಲಾದವುಗಳನ್ನು ವಿಶೇಷವೆನ್ನುವಂತೆ ನಿರೂಪಿಸಿದ್ದಾರೆ. ವರ್ಣನೆ ತುಸು ಹೆಚ್ಚೆನಿಸಿದರೂ ವಾಸ್ತವದಿಂದ ತುಂಬಾ ದೂರವಾಗದಿರುವುದು ಈ ಲೇಖನಗಳ ವಿಶೇಷತೆಯಾಗಿದೆ. ಈ ಲೇಖನಗಳು ನಾಡು, ನುಡಿ, ಭಾಷೆ, ಗಡಿಗೆ ಸಲ್ಲಿಸಿದ ನುಡಿ ನಮನವಾಗಿವೆ.

**೫.೨.೬. ಜಾನಪದ ಸಾಹಿತ್ಯ ;**

ಡಾ. ಬಿ. ಆರ್. ಹಿರೇಮಠ ಅವರು ಜಾನಪದ ಸಾಹಿತ್ಯದ ಕುರಿತಾಗಿಯೂ ಕೃಷಿಗೈದಿದ್ದಾರೆ. "ಶಾಸನಗಳೊಂದಿಗೆ ಅನುಸಂಧಾನಗೈದವರು ಜಾನಪದದಲ್ಲಿ ಕೃಷಿ ಮಾಡಿರುವುದು ತುಂಬಾ ವಿರಳ."* ಹಾಗೆಯೇ ಜಾನಪದ ಸಾಹಿತ್ಯದಲ್ಲಿ ತೊಡಗಿಸಿಕೊಂಡವರು ಶಾಸನ ಮತ್ತು ಹಸ್ತಪ್ರತಿಗಳಂತಹ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿರುವ ಉದಾಹರಣೆಗಳು ತುಂಬಾ ಕಡಿಮೆ. ಹೀಗೆ ಪರಸ್ಪರ ವಿರುದ್ಧ ಧೃವದಲ್ಲಿರುವ ಶಾಸನ ಮತ್ತು ಜಾನಪದ ಒಟ್ಟೊಟ್ಟಿಗೆ ಕಟ್ಟಿಕೊಟ್ಟಿರುವುದು ಅಪರೂಪವಾಗಿದೆ. ಒಬ್ಬ ವ್ಯಕ್ತಿಯ ಆಸಕ್ತಿ ಕ್ಷೇತ್ರದ ವಿಭಿನ್ನ ನೆಲೆಗಳನ್ನಿದು ಪರಿಚಯಿಸುತ್ತದೆ. ಕರ್ನಾಟಕದ ಜಾನಪದ ಕಲೆಗಳು, ಜಾನಪದ ಕಲೆ ಪರಿಶೀಲನಾ ವಿಧಾನಗಳು, ಉತ್ತರಕರ್ನಾಟಕದ ಜಾನಪದ ಸಾಹಿತ್ಯ, ಜಾನಪದ ಒಗಟುಗಳು, ಆಭರಣಗಳು, ಉತ್ತರ ಕರ್ನಾಟಕದ ಜಾನಪದ ಚಿತ್ರಕಲೆಗಳು, ಜಾನಪದ ಕಲೆಯಾಗಿ ಹಚ್ಚೆ ಮುಂತಾದವುಗಳು ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳಾಗಿವೆ.

**I. ಕರ್ನಾಟಕ ಜಾನಪದ ಕಲೆಗಳು :**

ಈ ಲೇಖನವು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಕರ್ನಾಟಕ ಭಾರತಿಯಲ್ಲಿ ಪ್ರಕಟವಾದ ಲೇಖನವಾಗಿದೆ. ೧೯೮೦ ಮೇ ತಿಂಗಳಲ್ಲಿ ಪ್ರಕಟವಾದ ಈ ಲೇಖನ (ಸಂ. ೧೨, ಸಂ. ೪)ವು ೫ ಪುಟಗಳ ವ್ಯಾಪ್ತಿಯನ್ನು ಒಳಗೊಂಡಿದೆ. "ಒಂದು ನಾಡಿನ ಸಂಸ್ಕೃತಿಕ ಇತಿಹಾಸವನ್ನು ತಿಳಿಸಿಕೊಡುವಲ್ಲಿ ಜಾನಪದ ಕಲೆಗಳು ಪ್ರಧಾನ ಪಾತ್ರ ವಹಿಸುತ್ತವೆ. ಸಾಹಿತ್ಯ ಕಲೆಗಳು ಈ ನಾಡಿನ ಸಂಸ್ಕೃತಿಯ ಸತ್ವವನ್ನು ಪರಿಚಯಿಸಿಕೊಡುತ್ತವೆ. ಸಂಸ್ಕೃತಿ ಎನ್ನುವುದು ಜನಪದಕ್ಕೆ ಸೇರಿದಂತಹದು. ಜಾನಪದ ಕಲೆ ಎನ್ನುವುದು ಇಂಥ ಸಂಸ್ಕೃತಿಯ ಒಂದು ಅಂಶ. ಆದುದರಿಂದ ಜಾನಪದ ಕಲೆಗಳಲ್ಲಿ ವ್ಯಷ್ಟಿ ಪ್ರಭಾವಕ್ಕಿಂತ ಸಮಷ್ಟಿ ಪ್ರಭಾವ ಅಧಿಕ ಪ್ರಮಾಣದಲ್ಲಿ ಪ್ರಕಟಗೊಳ್ಳುತ್ತದೆ"* ಎಂಬ ಲೇಖನದ ಆರಂಭವೇ ತುಂಬಾ ಆಕರ್ಷಕವಾಗಿದೆ. ಜಾನಪದ ಕಲೆಗಳು ಮಾನವನ ಮೂಲ ಸಂವೇದನೆಗಳಿಗೆ ತೀರ ಹತ್ತಿರವಾದವುಗಳು. ವ್ಯಕ್ತಿ ತನ್ನ ಅನುಭವಗಳಿಗೆ ಜೀವಕೊಟ್ಟಿದ್ದು, ಬಣ್ಣ ತುಂಬಿದ್ದು ಇಂಥ ಕಲೆಗಳ ಮೂಲಕ. ಜನಪದರ ಅನುಭವ ಅರಳಿದುದು, ಸುಗಂಧ ಸೂಸಿದುದು ಈ ಕೃತಿಗಳಲ್ಲಿ ಜಾನಪದ ಕಲಾ ಪರಂಪರೆ ಹೃದಯ ಶ್ರೀಮಂತಿಕೆ, ಭಾವಗಮ್ಯತೆ, ಸಂಸ್ಕಾರವಂತಿಕೆಗಳು ಕಲೆಗಳಲ್ಲಿ ಥಳತಳಿಸುತ್ತಿವೆ ಎಂದು ಜಾನಪದ ಕಲೆಗಳ ವೈಶಿಷ್ಟ್ಯತೆಯನ್ನು ವಿವರಿಸಿದ್ದಾರೆ. ಕರ್ನಾಟಕದ ಸಮಗ್ರ ಜಾನಪದ ಕಲೆಗಳನ್ನು ವರ್ಗೀಕರಿಸಿ ವಿಸ್ತೃತವಾಗಿ ವಿವರಿಸಿದ್ದಾರೆ. ಜಾನಪದ ಕಲೆಗಳ ವರ್ಗೀಕೃತ ಸೂಚಿಯನ್ನು ರೇಖಾಚಿತ್ರದ ಮೂಲಕ ದಾಖಲಿಸಿದ್ದಾರೆ. ಉತ್ತರ ಕರ್ನಾಟಕದ ಪ್ರಮುಖ ಜಾನಪದ ಕಲೆಗಳ ಪಟ್ಟಿ ಮಾಡುತ್ತಾರೆ. ಜಾನಪದ ಚಿತ್ರಕಲೆ, ಜಾನಪದ ವಸ್ತುಶಿಲ್ಪ, ಜಾನಪದ ಮೂರ್ತಿಕಲೆಗಳು ಮುಂತಾದ ವಿಷಯಗಳ ಕುರಿತಾಗಿ ಪ್ರತ್ಯೇಕ ಅಧ್ಯಯನವಾಗಬೇಕಿದೆ ಎಂಬುದನ್ನು ಸೂಚಿಸುತ್ತಾರೆ. "ನಾಡಿನ ಅಮೂಲ್ಯ ಆಸ್ತಿಗಳಾದ ಜಾನಪದ ಕಲೆಗಳನ್ನು ಸಂರಕ್ಷಿಸುವ ಗುರುತರವಾದ ಹೊಣೆಗಾರಿಕೆ ನಮ್ಮ ಮೇಲಿದೆ. ನಾಳಿನ ಜನಾಂಗ ಹಳಿಯದಂತೆ

ಎಚ್ಚರವಹಿಸಬೇಕಾಗಿದೆ. ಕರ್ನಾಟಕದ ಜಾನಪದ ಕಲೆಗಳು ಅಕ್ಷಯವಾಗಿ ನಿಂತು ಸಂಸ್ಕೃತಿಯ ಸುಗಂಧವನ್ನುಹರಡಿಸುವಂತಾಗಲಿ"[೯೪]ಎಂಬ ಹಾರೈಕೆಯೊಂದಿಗೆ ಲೇಖನ ಮುಗಿಯುತ್ತದೆ.

**II. ಜಾನಪದ ಕಲೆಯ ಪರಿಶೀಲನಾ ವಿಧಾನಗಳು :**

ಹುಬ್ಬಳ್ಳಿ ಮೂರು ಸಾವಿರ ಮಠದ ಸಂಸ್ಮರಣಾ ಗ್ರಂಥವಾದ ಈ ಲೇಖನವು ರಜತ ದೀಪ್ತಿಯಲ್ಲಿ ೧೯೮೭ರಲ್ಲಿ ಪ್ರಕಟವಾಗಿದೆ. ೯ ಪುಟಗಳ ಲೇಖನವಿದು. "ಜಾನಪದ ಕಲೆಗಳ ಅಧ್ಯಯನ ಅತ್ಯಂತ ಸ್ವಾರಸ್ಯಕರ. ವೈವಿಧ್ಯಮಯವಾದ ವರ್ಣರಂಜಿತವಾದುದು. ಈ ಕಲೆಗಳನ್ನು ಅಭ್ಯಸಿಸುವುದು ಪರಮ ಸಂತೋಷ"[೯೫] ಎಂದು ಹೇಳಿ ಜಾನಪದ ಕಲೆಗಳನ್ನು ಪರಿಶೀಲನೆಗೆ ಎತ್ತಿಕೊಂಡಾಗ ಹಲವು ಸಮಸ್ಯೆಗಳು ಉದ್ಭವಿಸುತ್ತವೆ. ಪರಿಶೀಲನಾ ವಿಧಾನಗಳು ಪ್ರಚಲಿತವಾಗಿಲ್ಲ. ಶಿಷ್ಟಸಾಹಿತ್ಯದ ಸಿದ್ಧ ಮಾದರಿಯನ್ನು ಜಾನಪದ ಕಲೆಗಳ ಪರಿಶೀಲನೆಗೆ ಬಳಸಲು ಸಾಧ್ಯವಿಲ್ಲ. ಹೀಗಾಗಿ ಜಾನಪದ ಕಲೆಗಳ ಪರಿಶೀಲನೆಗಾಗಿಯೇ ಹೊಸ ವಿಧಾನವನ್ನು ರೂಪಿಸಬೇಕಾಗುತ್ತದೆ ಎಂದು ಹೇಳಿ ತಮ್ಮದೇ ಆದ ಕ್ರಮವೊಂದನ್ನಿಲ್ಲಿ ನೀಡಿದ್ದಾರೆ. ೧) ಹಿನ್ನೆಲೆ ೨) ಪ್ರಚಲಿತವಿರುವ ಪ್ರದೇಶ ಜನಾಂಗ ೩) ಕಲಾ ಪ್ರದರ್ಶನ ಸ್ಥಳ ರೀತಿ ೪) ವೇಷಭೂಷಣ ವಾದ್ಯ ಪರಿಕರ ೫) ಇದರ ಕಲೆಗಳೊಂದಿಗೆ ಹೊಂದಿರುವ ಸಂಬಂಧ ಸಂಪರ್ಕ ೬) ಕಲಾ ಮೌಲ್ಯ ೭) ಸಾಹಿತ್ಯಿತ ಮೌಲ್ಯ ೮) ಕಲೆಯಿಂದ ತಿಳಿದುಬರುವ ಅಂಶಗಳು ೯) ಸಂರಕ್ಷಣೆ, ಬೆಳವಣಿಗೆ ಕ್ರಮಗಳು - ಹೀಗೆ ಒಂಬತ್ತು ವಿಧಾನಗಳನ್ನು ಒದಗಿಸಿ ಒಂದೊಂದಾಗಿ ಪರಿಚಯಿಸಿದ್ದಾರೆ. ಕೊನೆಗೆ "ಇಲ್ಲಿ ವಿವೇಚಿಸಿರುವ ನವ ವಿಧಾನಗಳು ಜಾನಪದ ಕಲೆಯ ಪರಿಶೀಲನೆಯ ಒಂದು ಪ್ರಯತ್ನವಷ್ಟೇ. ಈ ಕ್ಷೇತ್ರದಲ್ಲಿ ಇನ್ನೂ ಕೆಲಸ ನಡೆಯಬೇಕಾಗಿದೆ. ಅನೇಕ ಜನ ವಿದ್ವಾಂಸರು ವಿವಿಧ ದೃಷ್ಟಿಕೋನಗಳಿಂದ ವಿವರಿಸುವ ವಿಮರ್ಶಿಸುವ ಅಗತ್ಯ ಇನ್ನೂ ಇದೆ"[೯೬] ಎಂದಿರುವುದು ಅವರ ಪ್ರಾಮಾಣಿಕತನಕ್ಕೆ ಸಾಕ್ಷಿಯಾಗಿದೆ.

**III. ಉತ್ತರ ಕರ್ನಾಟಕದ ಜಾನಪದ ಸಾಹಿತ್ಯ :**

ಈ ಲೇಖನ ಕರ್ನಾಟಕ ಭಾರತಿಯಲ್ಲಿ ೧೯೮೨ರಲ್ಲಿ ಪ್ರಕಟವಾಗಿದೆ. (ಸಂ. ೧೪, ಸಂ. ೪) ೬ ಪುಟದ ಕಿರು ಲೇಖನವಿದು. ಉತ್ತರ ಕರ್ನಾಟಕದ ಜಾನಪದ ಸಾಹಿತ್ಯವನ್ನು ಪರಿಚಯಿಸುವ ಲೇಖನವಿದು. "ಜಾನಪದ ಕಲಾವಿದರನ್ನು ಗುರುತಿಸುವ ಅವರ ಸಾಹಿತ್ಯವನ್ನು ಸಂಗ್ರಹಿಸುವ, ಸಂಕಲಿಸುವ, ಪ್ರಕಟಿಸುವ ಕಾರ್ಯವಾಗಬೇಕಿದೆ. ಜಾನಪದ ಸಾಹಿತ್ಯದ ರಕ್ಷಣೆ, ಸಂರಕ್ಷಣೆ ಕಾರ್ಯದಲ್ಲಿ ಸರಕಾರ, ವಿಶ್ವವಿದ್ಯಾಲಯ, ಸಾಹಿತ್ಯ ಪರಿಷತ್ತು, ಸ್ಥಾನಿಕ ಸಂಸ್ಥೆಗಳು ಹಲವು ವ್ಯಾಪಕ ಯೋಜನಗಳನ್ನು ಹಾಕಿಕೊಂಡು ಕಾರ್ಯಮಗ್ನವಾಗಬೇಕಾಗಿದೆ. ಜಾನಪದ ವಸ್ತು ಸಂಗ್ರಹಾಲಯಗಳ ನಿರ್ಮಾಣವಾಗಬೇಕಾಗಿದೆ"[೯೭] ಎಂದು ಹೇಳಿರುವುದು ಡಾ. ಬಿ. ಆರ್. ಅವರ ದೂರದೃಷ್ಟಿಗೆ ನಿದರ್ಶನವಾಗಿದೆ.

**IV. ಜಾನಪದ ಒಗಟುಗಳು :**

ಈ ಲೇಖನವು ೧೯೭೬ರಲ್ಲಿ ಪ್ರಕಟವಾಗಿರುವ 'ಬೆಳ್ಳಿ ಬೆಳಕು' ಸ್ಮರಣ ಸಂಚಿಕೆಯಲ್ಲಿ ಪ್ರಕಟಿತವಾಗಿದೆ. ಎಲಿವಾಳ ಪ್ರಾಥಮಿಕ ಪತ್ತಿನ ವ್ಯವಸಾಯ ಸಹಕಾರಿ ಸಂಘದ ಸ್ಮರಣ ಸಂಚಿಕೆಯಾಗಿ 'ಬೆಳ್ಳಿ ಬೆಳಕು' ರೂಪಗೊಂಡಿದೆ. ಒಗಟು ಒಂದು ಪುಟದ ಕಿರು ಲೇಖನವಾಗಿದೆ. "ಜಾನಪದ ಸಾಹಿತ್ಯದಲ್ಲಿ ಒಗಟು ಒಂದು ಪ್ರಕಾರ ಗಾದೆಗಳಂತೆ ಒಗಟು ಕೂಡಾ ಜನ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಒಗಟಿಗೆ ಒಂಟು, ಒಡಕು, ಒಡಗತೆ, ಒಡಚುಕಥೆ ಎಂಬ ಪರ್ಯಾಯ ಪದಗಳಿವೆ."[೯೮] ಒಗಟು, ಒಗಟಿನ ಪ್ರಕಾರಗಳು, ಒಗಟು ಬೆಳೆದು ಬಂದ ಬಗೆ ಮುಂತಾದವುಗಳನ್ನು ವಿವರಿಸಿದ್ದಾರೆ. "ಒಗಟುಗಳು ಅಸ್ಪಷ್ಟವಾದ ಅರ್ಥದಿಂದ ಕೂಡಿದ್ದು ಒಗಟಿನ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಒಗಟು ಮತ್ತು ರೂಪಕ ಹತ್ತಿರದ ಸಂಬಂಧಿಗಳು ಉದಾಹರಣೆ ಸಂಭಾಷಣೆಯನ್ನು ರೂಪಕಗಳ ಮೂಲಕ ಪ್ರಾರಂಭಿಸಿದರೆ ಅದು ಒಗಟಾಗುತ್ತದೆ. ಸಂಭಾಷಣೆ ರೂಪಕಗಳ ಸರಣಿಯಾಗುತ್ತದೆ"[೯೯] ಎಂದು ವಿಶಿಷ್ಟವಾಗಿ ವ್ಯಾಖ್ಯಾನಿಸಿದ್ದಾರೆ. ಅಮ್ಮನ ಸೀರೆ ಮಡಿಸಲು ಆಗೋಲ್ಲ (ಆಕಾಶ) ಅಪ್ಪನ ದುಡ್ಡು ಎಣಿಸಲು ಆಗೋಲ್ಲ (ನಕ್ಷತ್ರ) ಈ ಎರಡು ಒಗಟುಗಳನ್ನು ಉದಾಹರಿಸಿದ್ದಾರೆ. ಕಲ್ಪಿಸುವುದರಲ್ಲಿ ಶಿಷ್ಟ ಕವಿಗಳಿಗಿಂತ ಜಾನಪದ ಕವಿಗಳ ಪ್ರತಿಭೆ ಹಿರಿದಾಗಿದೆ ಎಂದು ಲೇಖನ ಮುಗಿಸುತ್ತಾರೆ.

**V. ಆಭರಣಗಳು :**

ಡಾ. ಬಿ. ಆರ್. ಹಿರೇಮಠ ಅವರ ಜಾನಪದಕ್ಕೆ ಸಂಬಂಧಿಸಿದ ಮತ್ತೊಂದು ಲೇಖನವಾಗಿದೆ. "ಆದಿಮಾನವನು ಆಹಾರ ಅನ್ವೇಷಣೆಗಾಗಿ ಅಲೆದಾಡುವ ಪ್ರಸಂಗ, ಗಡ್ಡೆ ಗೆಣಸು, ಹಣ್ಣು ಹಂಪಲು, ಪ್ರಾಣಿಗಳ ಬೇಟೆ ಇವುಗಳಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇದು ಆದಿ ಮಾನವನ ಮೊದಲನೆಯ ಹಂತ. ಎರಡನೇ ಹಂತ ಗುಹೆಯಲ್ಲಿ ಒಂದೆಡೆ ಸ್ಥಿರವಾಗಿ ನೆಲೆಸಿ ಪ್ರಕೃತಿಯ ಮೇಲೆ ಹಿಡಿತ ಸಾಧಿಸಿದ. ಆಹಾರ ಅನ್ವೇಷಣೆಗಾಗಿ ಬಳಸುವ ವಸ್ತುಗಳಲ್ಲಿ ಮಾಂತ್ರಿಕ ಶಕ್ತಿ ಇದೆ ಎಂದು ನಂಬಿದ. ಹೀಗಾಗಿ ಅವುಗಳನ್ನು ತನ್ನೊಂದಿಗೆ ಒಯ್ಯುತೊಡಗಿದ. ಈ ಮಾಂತ್ರಿಕ ಶಕ್ತಿಯ ವಸ್ತುಗಳೇ ಮುಂದೆ ಆಭರಣಗಳಾದವು."[೧೦೦] ಹೀಗೆ ಆಭರಣಗಳ ಉಗಮವನ್ನು ವಿವರಿಸಿದ್ದಾರೆ. ಮುಂದೆ ಸೌಂದರ್ಯ ಪ್ರಜ್ಞೆಯ ಪರಿಜ್ಞಾನವಾಗಿ ಆಭರಣಗಳು ಬೆಳವಣಿಗೆಯಾದವು. ಪ್ರಕೃತಿಯ ಚಲುವು, ಪುರುಷ ಸ್ತ್ರೀಯರ ಪರಸ್ಪರ ಆಕರ್ಷಣೆ, ದೇಹಾಲಂಕಾರ, ಕೇಶಾಲಂಕಾರ ಇವುಗಳು ಆಭರಣಗಳ ಮಾರ್ಪಾಡಿಗೆ ಕಾರಣವಾದವು. ದೇಹಾಲಂಕಾರಕ್ಕಾಗಿ ಒಣಗಿದ ಹುಲ್ಲು, ಬಳ್ಳಿ, ಹಣ್ಣು, ಬೀಜ, ಎಲುವಿನ ಚೂರು, ಆನೆ ಕೋರೆ, ಹುಲಿಯುಗುರು, ಗಾಜಿನ ಮಣಿ, ಸಿಂಪಿ, ಕವಡೆ ಮುಂತಾದವುಗಳು ಬಳಕೆಗೆ ಬಂದವು. ಇವೇ ಮುಂದೆ

ಬೆಲೆಯುಳ್ಳ ಹರಳು, ಹವಳ, ಮಣಿ, ಲೋಹಗಳಿಂದ ರಚಿಸುವ ಆಭರಣಗಳಿಗೆ ಪೂರಕವಾದವು. ಮುಂದುವರೆದು ತಾಮ್ರ, ಹಿತ್ತಾಳೆ, ಸತುವು, ಕಬ್ಬಿಣ, ಬೆಳ್ಳಿ, ಬಂಗಾರ ಮುಂತಾದ ಲೋಹಗಳಿಂದ ಹೂವು, ಹಣ್ಣು, ಬೀಜ, ಬಳ್ಳಿ ಮುಂತಾದವುಗಳನ್ನು ನಿರ್ಮಿಸಿ ಆಭರಣಗಳನ್ನಾಗಿ ಬಳಸಿಕೊಳ್ಳತೊಡಗಿದರು ಎಂದು ಆಭರಣಗಳ ಉಗಮ ಮತ್ತು ವಿಕಾಸವನ್ನು ವಿವರಿಸಿದ್ದಾರೆ.

ಆಭರಣಗಳು ಅವುಗಳ ತಯಾರಿಕೆ ಹಿಂದಿನ ರಹಸ್ಯ ಆಭರಣ ಧರಿಸುವ ವರ್ಗಗಳು, ಸಂದರ್ಭಗಳು, ಆಭರಣ ಸಂಸ್ಕೃತಿ ಹಿನ್ನೆಲೆ, ಅಂದ ಚಲುವು ಆಕರ್ಷಣೆಗಾಗಿ ಬಳಸುವ ಆಭರಣಗಳು, ಆಭರಣಗಳ ಧಾರ್ಮಿಕ, ಸಾಮಾಜಿಕ ಮಾಂತ್ರಿಕ ಉದ್ದೇಶಗಳನ್ನು ವಿವರಿಸುತ್ತಾರೆ.

ಆಭರಣಗಳನ್ನು ಬಳಸುವ ಕಾರಣ ಹಾಗೂ ಪರಿಣಾಮಗಳು ಧಾರ್ಮಿಕ ನಂಬಿಕೆ, ರೋಗನಿವಾರಣೆಗಾಗಿ, ರಕ್ಷಣಾ ವಿಧಾನವಾಗಿ, ದೇಹಶುದ್ಧಿಗಾಗಿ, ದೇವರ ಕಾಟ ನಿವಾರಣೆಗಾಗಿ, ಭೂತ ಪಿಶಾಚಿಗಳ ಬಿಡುಗಡೆಗಾಗಿ, ಗ್ರಹದೋಷ ನಿವಾರಣೆಗಾಗಿ ಎಲ್ಲಕ್ಕೂ ಮುಖ್ಯವಾಗಿ ಆರ್ಥಿಕ ಭದ್ರತೆಗಾಗಿ ಆಭರಣಗಳನ್ನು ಮಾಡುವ, ಬಳಸುವ, ಸಂಗ್ರಹಿಸುವ ವೃತ್ತಿ ಜನಪದರಲ್ಲಿ ಬೆಳೆದು ಬಂದಿತ್ತು ಎಂಬುದನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. ಇದು ೨೦ ಪುಟಗಳ ಸುದೀರ್ಘ ಲೇಖನ. ಎಲ್ಲಿಯೂ ಪ್ರಕಟವಾಗದಿರುವುದು ಸೋಜಿಗದ ಸಂಗತಿಯಾಗಿದೆ.*

ಡಾ. ಬಿ.ಆರ್.ಹಿರೇಮಠರು ಗ್ರಾಮೀಣ ಪರಿಸರದಿಂದ ಬಂದವರಾಗಿರುವುದರಿಂದ ಜಾನಪದ ಲೇಖನಗಳಿಗೆ ಒಂದು ಅಧಿಕೃತತೆ ಇದೆ. ಗ್ರಾಮೀಣರ ಬದುಕೇ ಜನಪದವಾಗಿರುವುದರಿಂದ ಅವರು ರಚಿಸಿದ್ದು ಜಾನಪದಕ್ಕೆ ಹತ್ತಿರವಾಗಿರುತ್ತದೆ. ಅವರ ಜಾನಪದ ಬದುಕು ಅವರನ್ನು ಜಾನಪದ ಕ್ಷೇತ್ರದತ್ತ ಕರೆದುಕೊಂಡು ಹೋಗಿದೆ. ಇಲ್ಲಿ ಮೂಡಿ ಬಂದಿರುವ ಜಾನಪದ ಲೇಖನಗಳು ಜಾನಪದ ಕ್ಷೇತ್ರಕ್ಕೆ ಮಹತ್ವದ ಕೊಡುಗೆಗಳಾಗಿವೆ.



## ಕೊನೆ ಟಿಪ್ಪಣಿಗಳು :

* ಡಾ. ಬಿ.ಆರ್. ಅವರು ಗತಿಸಿದ ಮೇಲೆ ಅವರ ಸಮಗ್ರ ಸಾಹಿತ್ಯದ ಕುರಿತಾಗಿ ಸಂಶೋಧನೆ ಕೈಕೊಂಡೆ ಕ್ಷೇತ್ರಕಾರ್ಯ ನಿಮಿತ್ಯವಾಗಿ ಡಾ. ಬಿ. ಆರ್. ಅವರ ಮನೆಯಲ್ಲಿ ಸಮಗ್ರ ಸಾಹಿತ್ಯವನ್ನು ಪರಿಶೀಲಿಸುವ ಸಂದರ್ಭದಲ್ಲಿ ಆಕಸ್ಮಿಕವಾಗಿ ಈ ಸೃಜನಸಾಹಿತ್ಯ ಕಣ್ಣಿಗೆ ಬಿತ್ತು. ಅವರ ಬರೆಬರೆದು ಇಟ್ಟಿರುವ ಹಸ್ತಪ್ರತಿಗಳನ್ನೆಲ್ಲ ಕೂಲಂಕುಷವಾಗಿ ನೋಡಿದಾಗ ೨೫ ಕವಿತೆಗಳು ಒಂದು ಕಥೆ ೩ ನಾಟಕಗಳು ಲಭ್ಯವಾದವು. ಇದೊಂದು ಅಪರೂಪದ ಸಂಶೋಧನೆಯಾಗಿದೆ.
* ಬಿ.ಆರ್. ಅವರ ರಚನೆಗಳು ಇನ್ನು ಹೆಚ್ಚಾಗಿರಬಹುದು. ೧೯೭೨ರಿಂದ ೧೯೭೬ರ ವರೆಗಿನ ಪತ್ರಿಕೆಗಳನ್ನು ಜಾಲಾಡಿಸಿದರೆ ಅವರ ಖಾಸಗಿ ಬರವಣಿಗೆ ಡೈರಿಗಳನ್ನು ಪರಿಶೀಲಿಸಿದರೆ ಇನ್ನೂ ಹೆಚ್ಚಿನ ಕವಿತೆಗಳು ಸಿಗುವ ಸಂಭಾವ್ಯತೆ ಇದೆ.

೧. ಪರಂಜ್ಯೋತಿ ಸಂ. ೮, ಸಂಚಿಕೆ -೧೧, ಜೂನ ೧೯೭೬ ಪುಟ - ೪೩೫
೨. ಡಾ. ಬಿ.ಆರ್. ಹಿರೇಮಠ :ನೇಮಿನಾಥನ ಕೋಲುಪದ ಸನ್ಮತಿ ಸಂಪುಟ-೨೩, ಸಂಚಿಕೆ-೧೧ ನವೆಂಬರ ೧೦೭೯ ಪುಟ - ೧೧
೩. ಡಾ. ಬಿ.ಆರ್. ಹಿರೇಮಠ : ಯಜ್ಞಪಶು ಪುಟ - ೩೩೦
೪. ಅದೇ, ಪುಟ - ೧೩೦
೫. ಅದೇ, ಪುಟ - ೧೩೧
೬. ಅದೇ, ಪುಟ - ೩೩೧
೭. ಡಾ. ಬಿ.ಆರ್. ಹಿರೇಮಠ :ಶಿಲೆಯಲ್ಲಿ ಸಾಹಿತ್ಯ ಪುಟ - ೪
೮. ಅದೇ, ಪುಟ - ೪
೯. ಅದೇ, ಪುಟ - ೪
೧೦. ಅದೇ, ಪುಟ - ೮
೧೧. ಡಾ. ಬಿ.ಆರ್. ಹಿರೇಮಠ : ವಚನ ಸಾಹಿತ್ಯ ಪುಟ - ೭
೧೨. ಅದೇ, ಪುಟ - ೧೨
೧೩. ಡಾ. ಬಿ.ಆರ್. ಹಿರೇಮಠ :ದಾಸ ಸಾಹಿತ್ಯ ಪುಟ - ೬
೧೪. ಅದೇ, ಪುಟ - ೬
೧೫. ಡಾ. ಬಿ.ಆರ್. ಹಿರೇಮಠ :ಶರಣಧರ್ಮ ೯ ಜೂನ್ ೧೯೮೦
೧೬. ಡಾ. ಬಿ.ಆರ್. ಹಿರೇಮಠ :ಕ್ರಾಂತಿದರ್ಶಿ ಬಸವಜಯಂತಿ ವಿಶೇಷಾಂಕ - ೧೯೮೦
೧೭. ಡಾ. ಬಿ.ಆರ್. ಹಿರೇಮಠ :ಸಂಯುಕ್ತ ಕರ್ನಾಟಕ ಪುಟ - ೧
೧೮. ಡಾ. ಬಿ.ಆರ್. ಹಿರೇಮಠ :ಸಂಯುಕ್ತ ಕರ್ನಾಟಕ ೨೫-೩-೭೭
೧೯. ಡಾ. ಬಿ.ಆರ್. ಹಿರೇಮಠ :ಹರತಿ ಸಿರಿ ಪುಟ-೧೧೬೦
೨೦. ಡಾ. ಬಿ.ಆರ್. ಹಿರೇಮಠ : ವಚನ ಸಾಹಿತ್ಯದಲ್ಲಿ ಚಾರಿತ್ರಿಕ ಅಂಶಗಳು ಪುಟ - ೪
೨೧. ಡಾ. ಬಿ.ಆರ್. ಹಿರೇಮಠ : ಕನ್ನಡ ಸಾಹಿತ್ಯದ ಮೇಲೆ ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ ಹೇಮಕೂಟ ಪುಟ - ೧೧
೨೨. ಡಾ. ಬಿ.ಆರ್. ಹಿರೇಮಠ : ಇತಿಹಾಸ ದರ್ಶನ ಪುಟ -೨೦೭
೨೩. ಡಾ. ಬಿ.ಆರ್. ಹಿರೇಮಠ : ಸುವರ್ಣಝುರಿ ಪುಟ - ೩೫
೨೪. ಡಾ. ಬಿ.ಆರ್. ಹಿರೇಮಠ : ಕಳಚೂರಿ ಬಿಜ್ಜಳನ ಶಿರೋಳ ಶಾಸನ ಸಾಧನೆ ಪುಟ - ೩೨
೨೫. ಡಾ. ಬಿ.ಆರ್. ಹಿರೇಮಠ : ಮಹಾನಾಡ ಪ್ರಭುಗಳು
೨೬. ಡಾ. ಬಿ.ಆರ್. ಹಿರೇಮಠ :ಬಿಜ್ಜಾವರ ಪ್ರಭುಗಳ ಆಶ್ರಿತ ಮಲ್ಲಿಕಾರ್ಜುನನ ಕೃತಿಗಳು - ಅಪ್ರಕಟಿತ ಲೇಖನ ಪುಟ - ೫
೨೭. ಅದೇ, ಪುಟ - ೫
೨೮. ಡಾ. ಬಿ.ಆರ್. ಹಿರೇಮಠ : ಬಿಜ್ಜಾವರದ ಮುಮ್ಮಡಿ ಚಿಕ್ಕಪ್ಪ ದೊರೆಗಳ ಸೂತಕಾದಿಗಳಿಗೆ ಒಳಗಾದ ಜನರು ಪುಟ - ೧
೨೯. ಅದೇ, ಪುಟ - ೧
೩೦. ಡಾ. ಬಿ.ಆರ್. ಹಿರೇಮಠ : ಹಾಗಲವಾಡಿ ರಾಜಾಶ್ರಯದ ಶಿವಯೋಗಿ ಸೋಸಲೆ ರೇವಣಾರಾಧ್ಯರು ಪುಟ - ೧೦
೩೧. ಅದೇ, ಪುಟ - ೧೦
೩೨. ಅದೇ, ಪುಟ - ೧೨
೩೩. ಡಾ. ಬಿ.ಆರ್. ಹಿರೇಮಠ : ಸೋದೆಸದಾಶಿವರಾಯನ ಸದಾಶಿವ ನೀತಿ ಪುಟ - ೫೨
೩೪. ಡಾ. ಬಿ.ಆರ್. ಹಿರೇಮಠ : ಶಾಸನ ಅಧ್ಯಯನ, ಶಾಸನಗಳಲ್ಲಿ ದೇವದಾಸಿಯರು ಪುಟ - ೨೨೨
೩೫. ಡಾ. ಬಿ.ಆರ್. ಹಿರೇಮಠ : ಬಸವಪಥ ಸಂ. ಹೊಸ ಶಿಲಾ ಶಾಸನ ಪುಟ -೨೨
೩೬. ಡಾ. ಬಿ.ಆರ್. ಹಿರೇಮಠ : ಇಮ್ಮಡಿ ಜಗದೇಕಮಲ್ಲನ ಕಳಸಾಪುರ ಶಾಸನ ಪುಟ - ೨
೩೭. ಡಾ. ಬಿ.ಆರ್. ಹಿರೇಮಠ : ನವನಾಡು ೧೯೯೦ ಕಳಚೂರಿ ಸೋವಿದೇವನ ಹೊಸ ಶಾಸನ ಪುಟ - ೪
೩೮. ಅದೇ, ಪುಟ - ೫
೩೯. ಡಾ. ಬಿ.ಆರ್. ಹಿರೇಮಠ : ಬಾಗಿಲು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ ಪುಟ - ೧೦

೪೦. ಡಾ.ಬಿ.ಆರ್.ಹಿರೇಮಠ; ಕನ್ನಡ ಶಾಸನಗಳ ಓದುವಿಕೆ ಮತ್ತು ಭಾಷೆ ಪುಟ - ೨
೪೧, ಅದೇ, ಪುಟ - ೩
೪೨. ಅದೇ, ಪುಟ - ೪
೪೩. ಡಾ. ಬಿ.ಆರ್. ಹಿರೇಮಠ : ಶಾಸನಗಳಲ್ಲಿ ನೇಕಾರರು ಪುಟ - ೧
೪೪. ಅದೇ, ಪುಟ - ೪೫
೪೫. ಡಾ. ಬಿ.ಆರ್. ಹಿರೇಮಠ : ಮುತ್ತಿಗೆ ಶಾಸನ (ಅಪ್ರಕಟಿತ) ಪುಟ - ೯
೪೬. ಡಾ. ಬಿ.ಆರ್. ಹಿರೇಮಠ : ಒರೆಗಲ್ಲು ಕರ್ನಾಟಕ ಭಾರತಿ ಪುಟ - ೮
೪೭. ಡಾ. ಬಿ.ಆರ್. ಹಿರೇಮಠ : ಶಾಸನ ಅಧ್ಯಯನ ಹದಿನೆಂಟು ಸಂತತಿ ಪುಟ -೨೨೬
೪೮. ಡಾ. ಬಿ.ಆರ್. ಹಿರೇಮಠ : 'ಸಾಧನೆ' ಸಂ.೧೦. ಸಂ. ೧ ೧೯೮೧ ಪುಟ - ೧೬೦
೪೯. ಡಾ. ಬಿ.ಆರ್. ಹಿರೇಮಠ : ಜಾನಪದ ಗಂಗೋತ್ರಿ ಪುಟ - ೯
೫೦. ಡಾ. ಬಿ.ಆರ್. ಹಿರೇಮಠ : ಬೈಸಣಿಗೆ ನಿ.ಹಾ. ಅರ್ಥ ವಿ. ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ ಸಂ. ೬೯. ಸಂ. ೧ ಪುಟ -೫
೫೧. ಡಾ. ಅಶೋಕ ನರೋಡೆ : ಕಾವ್ಯ ಸಂಗಾತಿ ಪುಟ -೭
೫೨. ಡಾ. ಬಿ.ಆರ್. ಹಿರೇಮಠ : ವಚನ ವ್ಯಾಖ್ಯಾನಗಳು ಪುಟ -೨೯೯
೫೩. ಅದೇ, ಪುಟ - ೨೯೯
೫೪. ಅದೇ, ಪುಟ - ೩೦೭
೫೫. ಡಾ. ಬಿ.ಆರ್. ಹಿರೇಮಠ : ಬಸವ ಪಥ ಪುಟ - ೧೨
೫೬. ಡಾ. ಬಿ.ಆರ್. ಹಿರೇಮಠ : ಮರುಳ ಶಂಕರದೇವರ ವಚನಗಳು ಒಂದು ಅವಲೋಕನ ಪುಟ - ೩
೫೭. ಡಾ. ಬಿ.ಆರ್. ಹಿರೇಮಠ : ಕಾಡಶಿದ್ಧೇಶ್ವರ ವಚನಗಳ ಸಾಹಿತ್ಯಿಕ ಅಧ್ಯಯನ ಪುಟ - ೧. ೮
೫೮. ಡಾ. ಬಿ.ಆರ್. ಹಿರೇಮಠ : ಶರಣ ಸಾಹಿತ್ಯ ಸುಕುಮಾರ ಪುಟ - ೨೩
೫೯. ಅದೇ, ಪುಟ - ೩೧
೬೦. ಡಾ. ಬಿ.ಆರ್. ಹಿರೇಮಠ : ಶ್ರೀ ಸಿದ್ಧರಾಮೇಶ್ವರ ಪುರಾಣ ಅಭಿಜ್ಞ ಪುಟ - ೫೯
೬೧. ಡಾ. ಬಿ.ಆರ್. ಹಿರೇಮಠ : ವೀರಶೈವಾಮೃತ ಪುರಾಣ ವಿವೇಚನೆ ವೀ.ಪು. ಪುಟ - ೨೨
೬೨. ಅದೇ, ಪುಟ - ೬೨
೬೩. ಡಾ. ಬಿ.ಆರ್. ಹಿರೇಮಠ : ಹಾವೇರಿ ಶ್ರೀ ಶಿವಬಸವೇಶ್ವರ ಪುರಾಣ ಅದೇ ಪುಟ - ೧೮೨
೬೪. ಡಾ. ಬಿ.ಆರ್. ಹಿರೇಮಠ :ಬಸವಕಲ್ಯಾಣ ಪ್ರದೇಶದ ಪರಿವೀಕ್ಷಣೆ ಬಸವ ಪಥ ಪುಟ - ೭೭
೬೫. ಡಾ. ಬಿ.ಆರ್. ಹಿರೇಮಠ :ಧರ್ಮ ಗುರು ಮತ್ತು ಕೃತಿ ಚೌರ್ಯ ಪುಟ - ೬೩
೬೬. ಅದೇ, ಪುಟ - ೯
೬೭. ಅದೇ, ಪುಟ - ೯
೬೮. ಡಾ. ಬಿ.ಆರ್. ಹಿರೇಮಠ : ಕರ್ನಾಟಕ ಭಾರತಿ, ಭರತ ಚಕ್ರೇಶ್ವರನ ಧವಳ ಶೋಭನ ಪುಟ - ೧೦೨
೬೯. ಡಾ. ಬಿ.ಆರ್. ಹಿರೇಮಠ : ಕರ್ನಾಟಕ ಭಾರತಿ, ಅಜಿತ ಸೇನ ಪರಿಚಯ ಪುಟ - ೪೯
೭೦. ಡಾ. ಬಿ.ಆರ್. ಹಿರೇಮಠ : ಬೀಳಗಿ ತಾಲೂಕಾ ಸಾಂಸ್ಕೃತಿಕ ಪರಂಪರೆ ಸಾಮರಸ್ಯ ಪುಟ - ೯
೭೧. ಡಾ. ಬಿ.ಆರ್. ಹಿರೇಮಠ : ಗುರು ಒಂದು ವಿವೇಚನೆ ಸುಕುಮಾರ ಪುಟ - ೧೧
೭೨. ಅದೇ, ಪುಟ - ೧೫
೭೩. ಅದೇ, ಪುಟ -೩೪
೭೪. ಡಾ. ಬಿ.ಆರ್. ಹಿರೇಮಠ : ದಲಿತರ ಸಮಸ್ಯೆ ನಿವಾರಣೆ ಪ್ರಪಂಚ, ಪುಟ - ೧೭
೭೫. ಅದೇ, ಪುಟ - ೧೭
೭೬. ಅದೇ, ಪುಟ - ೧೭
೭೭. ಅದೇ, ಪುಟ - ೧೭
೭೮. ಅದೇ, ಪುಟ - ೧೭
೭೯. ಡಾ. ಬಿ.ಆರ್. ಹಿರೇಮಠ :ಜಾಗತೀಕರಣ ಕನ್ನಡ ಸಮಸ್ಯೆ ಸವಾಲುಗಳು ಪುಟ- ೧
೮೦. ಅದೇ, ಪುಟ - ೩
೮೧. ಅದೇ, ಪುಟ - ೩
೮೨. ಅದೇ, ಪುಟ - ೧೭
೮೩. ಅದೇ, ಪುಟ - ೫
೮೪. ಡಾ. ಬಿ.ಆರ್. ಹಿರೇಮಠ : ಸಾಧನೆ, ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಸಂಶೋಧನೆ, ಪುಟ - ೨೬೫
೮೫. ಡಾ. ಬಿ.ಆರ್. ಹಿರೇಮಠ : ಸಾಧನೆ, ೧೯೮೫ರ ಸಂಶೋಧನೆ ಒಂದು ಸಮೀಕ್ಷೆ ಸಾಧನೆ ಪುಟ - ೨೬೬
೮೬. ಡಾ. ಬಿ.ಆರ್. ಹಿರೇಮಠ : ಕನ್ನಡನುಡಿ, ಅನುಭಾವಿ ಸಿದ್ಧಾರೂಢರು ಪುಟ-೧
೮೭. ಡಾ. ಬಿ.ಆರ್. ಹಿರೇಮಠ : ಸುಕುಮಾರ, ಸಮಾಚೋ ಧಾರ್ಮಿಕ ಸೂರ್ಯ, ಯುಗಪುರುಷ ಪುಟ - ೩೬

೮೮. ಡಾ. ಬಿ.ಆರ್. ಹಿರೇಮಠ : ಧರೆಗಿಳಿದ ಬಸವ ಬೆಳಕು, ವೈರಾಗ್ಯ ಮೂರ್ತಿ ಪುಟ - ೪೭

೮೯. ಡಾ. ಬಿ.ಆರ್. ಹಿರೇಮಠ : ಕರ್ನಾಟಕ ಭಾರತಿ, ಶಿ.ಶಿ. ಬಸವನಾಳರ ಮಾಧ್ಯಮಿಕ ಶಿಕ್ಷಣ ಪ್ರಸಾರ ಪುಟ -೬೦

೯೦. ಡಾ. ಬಿ.ಆರ್. ಹಿರೇಮಠ : ಬಯಲ ಕಾರಣಿಕ ಡಾ. ಶಿ.ಚ. ನಂದಿಮಠರು ಪುಟ - ೨೪೫

೯೧. ಡಾ. ಬಿ.ಆರ್. ಹಿರೇಮಠ, ಪ್ರೊ. ಬಿ.ವ್ಹಿ. ಗುಂಜೆಟ್ಟಿ, ಜಿ.ಎಂ.ಹೆಗಡೆ : ಕನ್ನಡ ಪ್ರಪಂಚ ಪುಟ - ೧೮೭

೯೨. ಡಾ. ಬಿ.ಆರ್. ಹಿರೇಮಠ : ಬೆವರು ಬೆಳಕು ಮಾನವೀಯ ಗುಣಗಳ ಮಾಸ್ಕೇರಿ ಎಂ. ಕೆ. ನಾಯಿಕ ಪುಟ-೨೩

* ಡಾ. ಎಂ. ಚಿದಾನಂದಮೂರ್ತಿ ಡಾ. ಎಂ. ಎಂ. ಕಲಬುರ್ಗಿ ಇದಕ್ಕೆ ಅಪವಾದವಾಗಿದ್ದಾರೆ

೯೩. ಡಾ. ಬಿ.ಆರ್. ಹಿರೇಮಠ : ಕರ್ನಾಟಕ ಭಾರತಿ ಕರ್ನಾಟಕ ಜಾನಪದ ಕಲೆಗಳು ಪುಟ -೬೪

೯೪. ಅದೇ, ಪುಟ - ೧೦೨

೯೫. ಡಾ. ಬಿ.ಆರ್. ಹಿರೇಮಠ :ರಜತ ದೀಪ್ತಿ ಕರ್ನಾಟಕ ಜಾನಪದ ಕಲೆಗಳ ಪರಿಶೀಲನಾ ವಿಧಾನ ಪುಟ -೧೫೭

೯೬. ಅದೇ, ಪುಟ - ೮೯

೯೭. ಡಾ. ಬಿ.ಆರ್. ಹಿರೇಮಠ : ಕರ್ನಾಟಕ ಭಾರತಿ ಉತ್ತರ ಕರ್ನಾಟಕದ ಜಾನಪದ ಸಾಹಿತ್ಯ ಪುಟ - ೧೧೨

೯೮. ಡಾ. ಬಿ.ಆರ್. ಹಿರೇಮಠ :ಬೆಳ್ಳಿ ಬೆಳಕು ಜಾನಪದ ಒಗಟುಗಳು ಪುಟ - ೩೭

೯೯. ಅದೇ, ಪುಟ -೩೭

೧೦೦. ಡಾ. ಬಿ.ಆರ್. ಹಿರೇಮಠ :ಆಭರಣಗಳು ಅಪ್ರಕಟಿತ ಪುಟ -೧

# ಅಧ್ಯಾಯ - ೬ :
# ಮಾರ್ಗದರ್ಶನ

**೬.೦. ಪ್ರವೇಶ :**

ಅಧ್ಯಯನ ಅಧ್ಯಾಪನಗಳ ಜೊತೆಗೆ ಸಂಶೋಧನಾ ಕಾರ್ಯ ಸಂಶೋಧನೆ ಕೈಗೊಳ್ಳುವವರಿಗೆ ಮಾರ್ಗದರ್ಶನ ಈ ನಾಲ್ಕು ಅಂಶಗಳು ಬಹಳ ಮಹತ್ವದವುಗಳು. ವಿಶ್ವವಿದ್ಯಾಲಯವಾದಂತಹ ಘನವೆತ್ತ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವವರು ಈ ನಾಲ್ಕೂ ನಿಟ್ಟಿನಲ್ಲಿ ತೊಡಗಿಸಿಕೊಳ್ಳುವುದುಂಟು. ಪಾಠ ಪ್ರವಚನದಷ್ಟೇ ಸಂಶೋಧನೆಗೆ ಮಾರ್ಗದರ್ಶನವು ಅತ್ಯಂತ ಅಮೂಲ್ಯವಾದ ವಿಷಯವಾಗಿದೆ. ತಾವು ಸ್ವತಃ ಸಂಶೋಧನೆ ಕೈಗೊಳ್ಳುವುದಲ್ಲದೆ ಸಂಶೋಧನೆ ಮಾಡಬಯಸುವ ಯುವಕರಿಗೆ ಸೂಕ್ತ ಮಾರ್ಗದರ್ಶನ ಮಾಡುವದೂ ಕೂಡಾ ಜವಾಬ್ದಾರಿಯುತ ಕಾರ್ಯವಾಗಿದೆ. ಕುವೆಂಪು, ದೇಜಗೌ, ಶಿವರುದ್ರಪ್ಪ, ಚಿದಾನಂದಮೂರ್ತಿ, ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಂ. ಕಲಬುರ್ಗಿ, ಡಾ. ವಿವೇಕ ರೈ ಮೊದಲಾದ ಪ್ರಭೃತಿಗಳು ಈ ಮೇಲೆ ಪ್ರಸ್ತಾಪಿಸಿದ ನಾಲ್ಕೂ ನಿಟ್ಟಿನಲ್ಲಿಯೂ ಕಾರ್ಯ ನಿರ್ವಹಿಸಿದ್ದಾರೆ. ಈ ವಿದ್ವತ್ ಪರಂಪರೆಗೆ ಡಾ. ಬಿ.ಆರ್. ಹಿರೇಮಠರು ಸೇರಿಕೊಂಡಿದ್ದಾರೆ. ಡಾ. ಬಿ.ಆರ್. ಹಿರೇಮಠ ಅವರು ೧೭ ಪಿಎಚ್.ಡಿ ಮಹಾಪ್ರಬಂಧಗಳಿಗೆ ೮ ಎಂ.ಫಿಲ್ ನಿಬಂಧಗಳಿಗೆ ಸೂಕ್ತ ಮಾರ್ಗದರ್ಶನ ಮಾಡಿದ್ದಾರೆ. ಸಂಶೋಧನೆ ಎಂದರೆ ಸತ್ಯದ ಶೋಧನೆ ಹೊಸ ವಿಷಯಗಳ ಅನ್ವೇಷಣೆಯಾಗಿದೆ. ಡಾ. ಬಿ.ಆರ್. ಹಿರೇಮಠ ಅವರು ಮಾಡಿದ ಮಾರ್ಗದರ್ಶನ ೧೭ ಕ್ಷೇತ್ರದ ಅನಾವರಣವಾಗಿದೆ. ಇದರಲ್ಲಿ ಶಾಸನ, ವ್ಯಕ್ತಿಚಿತ್ರ, ಇತಿಹಾಸ, ಛಂದಸ್ಸು, ಜಾನಪದ, ವಚನವಾಙ್ಮಯ ಮೊದಲಾದ ಸಾಂಸ್ಕೃತಿಕ ಜಗತ್ತಿನ ಪರಿಚಯವಿದೆ. ಸಂಶೋಧನಾ ಮಾರ್ಗದರ್ಶನದಲ್ಲಿಯೂ ಕನ್ನಡ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಕಾಣಬಹುದಾಗಿದೆ.

**೬.೧. ಎಂ.ಫಿಲ್ ನಿಬಂಧಗಳು :**

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಕನ್ನಡ ಅಧ್ಯಯನ ಪೀಠದಲ್ಲಿ ೧೯೯೦-೯೧ರ ಶೈಕ್ಷಣಿಕ ವರ್ಷದಲ್ಲಿ ಎಂ.ಫಿಲ್ ಅಧ್ಯಯನ ಆರಂಭವಾಯಿತು. ಡಾ. ಬಿ.ಆರ್. ಹಿರೇಮಠರು ೧೯೯೩ - ೯೪ನೆಯ ಸಾಲಿನಲ್ಲಿ ಎಂ.ಫಿಲ್ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದರು.

**ಡಾ. ಬಿ. ಆರ್. ಹಿರೇಮಠರ ಮಾರ್ಗದರ್ಶನದ ಎಂ.ಫಿಲ್ ನಿಬಂಧಗಳು :**

೧. ಡಾ. ಆರ್.ಸಿ. ಹಿರೇಮಠರ ವಚನ ಸಾಹಿತ್ಯ ಸಂಪಾದನೆ.

ಡಾ. ವಿಜಯಕುಮಾರ ಕಟಗಿಹಳ್ಳಿಮಠ

೨. ಚಾಯಣ ಭಾರತ ಒಂದು ತೌಲನಿಕ ಅಧ್ಯಯನ

ಶ್ರೀಮತಿ ಕಲ್ಲಮ್ಮ ಸರೋಜನವರ

೩. ಬಿಜಾಪುರ ತಾಲೂಕಿನ ಶಾಸನಗಳು : ಒಂದು ಅಧ್ಯಯನ

ಶ್ರೀ ಎ. ಬಿ. ಕಲಘುಟಗಿ

೪. ಪಟ್ಟ ಮಹಾದೇವಿ ಶಾಂತಲಾದೇವಿ ಕಾದಂಬರಿ : ಒಂದು ಅಧ್ಯಯನ

ಶ್ರೀಮತಿ ಮಹಾನಂದಾ ಪಾಟೀಲ

೫. ಸುಜನಾ ಅವರ ಯುಗ ಸಂಧ್ಯಾ ಮಹಾಕಾವ್ಯ : ಒಂದು ಅಧ್ಯಯನ

ಶ್ರೀ ಎಂ. ರಾಮಕೃಷ್ಣ

೬. ಬಸವೇಶ್ವರ ವಿದ್ಯಾವರ್ಧಕ ಸಂಘ : ಒಂದು ಅಧ್ಯಯನ

ಶ್ರೀಮತಿ ಯಮುನಾಬಾಯಿ ಹಿರಗಣ್ಣವರ

೭. ಬಾದಾಮಿ ತಾಲೂಕಿನ ವೀರಶೈವ ಮಠಗಳು

ಶ್ರೀ ವ್ಹಿ. ಬಿ. ಮುತ್ತಿನಮಠ

೮. ಏಕಲವ್ಯ ಉಪಾಖ್ಯಾನ : ಒಂದು ತೌಲನಿಕ ಅಧ್ಯಯನ

ಶ್ರೀಮತಿ ಶಕುಂತಲಾ ಸಿಂಧೂರ

**ಡಾ. ಆರ್. ಸಿ. ಹಿರೇಮಠರ ವಚನಸಾಹಿತ್ಯ ಸಂಪಾದನೆ :**

ಇದು ವಿಜಯಕುಮಾರ ಕಟಗಿಹಳ್ಳಿಮಠರ ಎಂಫಿಲ್ ನಿಬಂಧವಾಗಿದೆ. ಇದರಲ್ಲಿ ಒಟ್ಟು ೬ ಅಧ್ಯಾಯಗಳಿವೆ. ಮೊದಲನೆಯದು ಆರ್.ಸಿ. ಹಿರೇಮಠರ ಬದುಕು ಬರಹ, ಎರಡು ವಚನ ಸಾಹಿತ್ಯ ಸಂಪಾದನೆಯ ಇತಿಹಾಸ, ಮೂರು - ಆರ್.ಸಿ. ಹಿರೇಮಠ ವಚನಸಾಹಿತ್ಯ ಸಂಪಾದನೆಯ ವ್ಯಾಪ್ತಿ, ನಾಲ್ಕು - ಆರ್.ಸಿ. ಹಿರೇಮಠರ ವಚನ ಸಾಹಿತ್ಯ ಸಂಪಾದನೆಯ ಕಾರ್ಯವಿಧಾನ ಐದು - ವಚನ ಸಾಹಿತ್ಯ ಸಂಪಾದನೆಗೆ ಆರ್.ಸಿ. ಹಿರೇಮಠರ ಕೊಡುಗೆ ಆರನೆ ಅಧ್ಯಾಯ ಸಮಾರೋಪವಾಗಿದೆ. ಇದಿಷ್ಟು

ಎಂ.ಫಿಲ್ ಪ್ರಬಂಧದ ಚೌಕಟ್ಟು. ಕೊನೆಯಲ್ಲಿ ಅನುಬಂಧಗಳಿವೆ. "ವಚನ ಸಾಹಿತ್ಯ ಸಂಪಾದನೆಯ ಇತಿಹಾಸದೊಂದಿಗೆ ತೆರೆದುಕೊಳ್ಳುವ ಈ ಅಧ್ಯಯನ ಡಾ. ಆರ್.ಸಿ. ಯವರ ವಚನ ಸಾಹಿತ್ಯ ಸಂಪಾದನೆಯ ವ್ಯಾಪ್ತಿಯನ್ನು ಗುರುತಿಸುತ್ತದೆ. ಮತ್ತೊಂದು ನೆಲೆಯಲ್ಲಿ ವಚನಸಾಹಿತ್ಯ ಸಂಪಾದನೆಯ ಕಾರ್ಯ ವಿಧಾನವನ್ನು ವಿವರಿಸುತ್ತದೆ. ಅಂತಿಮವಾಗಿ ವಚನಸಾಹಿತ್ಯ ಸಂಪಾದನೆಗೆ ಅವರ ಅಮೂಲ್ಯವೂ, ಚಾರಿತ್ರಿಕವೂ ಆದ ಕೊಡುಗೆಯನ್ನು ಕುರಿತು ಹೇಳುತ್ತದೆ. ಒಟ್ಟಾರೆ ಅಂದಿನ ಬಹುಶಃ ಇಂದಿಗೂ ಅಪರೂಪದ ಕ್ಷೇತ್ರವೇ ಆದ ಗ್ರಂಥ ಸಂಪಾದನೆ, ಒಬ್ಬ ವಿದ್ವಾಂಸರ ಒಂದು ಸಾಹಿತ್ಯ ಪ್ರಕಾರದ ಹಿನ್ನೆಲೆಯಲ್ಲಿನ ಅವರ ಸಾಮರ್ಥ್ಯ ಸಾಧನೆ ಕುರಿತಾದ ಒಟ್ಟು ನೋಟವನ್ನು ಕೊಡುವಲ್ಲಿ ಸಫಲತೆ ಪಡೆಯುತ್ತದೆ. ಡಾ. ಆರ್. ಸಿ. ಅವರ ಸಂಪಾದನಾ ಕಾರ್ಯ ಮುಂದೊಂದು ದಿನ ಸಮಗ್ರ ಅಧ್ಯಯನಕ್ಕೆ ಆಕರವಾಗಿ ನಿಲ್ಲಬಲ್ಲವು"[7] ಎಂದು ಡಾ. ಬಿ.ಕೆ. ಹಿರೇಮಠ ಅವರು ಹೇಳಿರುವುದು ಸಾರ್ಥಕವಾಗಿದೆ. ವಿಜಯಕುಮಾರ ಕಟಗಿಹಳ್ಳಿಮಠ ಅವರ ನಿಬಂಧದ ಮೌಲಿಕತೆಯನ್ನು ಅಪರೋಕ್ಷವಾಗಿ ಮೇಲಿನ ಮಾತುಗಳು ಸೂಚಿಸುತ್ತವೆ.

**ಚಾಯಣ ಭಾರತ :**

ಶ್ರೀಮತಿ ಕಲ್ಲಮ್ಮ ಸರೋಜನವರ ಅವರ ಎಂ.ಫಿಲ್ ನಿಬಂಧವಿದು. ಇದರಲ್ಲಿ ಚಾಯಣ ಕವಿಯು ಚಿತ್ರಿಸಿದ ಭಾರತದ ವಿವೇಚನೆಯಿದೆ. ಚಾಯಣ ಭಾರತದಲ್ಲಿ ಆರು ಅಧ್ಯಾಯಗಳಿವೆ. ಕನ್ನಡದಲ್ಲಿ ಹಲವಾರು ಮಹಾಭಾರತ ವಸ್ತುವನ್ನುಳ್ಳ ಕಾವ್ಯಗಳು ಮೂಡಿಬಂದಿವೆ. ಮುಖ್ಯವಾಗಿ ಪಂಪ, ರನ್ನ, ಕುಮಾರವ್ಯಾಸ, ಪರಮದೇವ ರಚಿಸಿರುವ ಪರಂಪರಾಗತ ಭಾರತದೊಂದಿಗೆ ತೌಲನಿಕವಾಗಿ ಚರ್ಚಿಸಿದ್ದು ಇದರ ವಿಶೇಷತೆಯಾಗಿದೆ.

**ಬಿಜಾಪುರ ತಾಲೂಕಿನ ಶಾಸನಗಳು :**

ಶ್ರೀ ಎ.ಬಿ. ಕಲಘುಟಗಿಯವರ ಸಂಶೋಧನಾ ನಿಬಂಧವಿದು. ಡಾ. ಬಿ. ಆರ್. ಹಿರೇಮಠರು ತಮ್ಮ ಆಸಕ್ತಿಯ ಕ್ಷೇತ್ರವನ್ನು ತಮ್ಮ ವಿದ್ಯಾರ್ಥಿಯ ಮೂಲಕ ಅಧ್ಯಯನ ಮಾಡಿಸಿದ್ದಾರೆ. ನಿಬಂಧದ ಶೀರ್ಷಿಕೆ ಸೂಚಿಸುವಂತೆ ಬಿಜಾಪುರ ತಾಲೂಕಿನ ಶಾಸನಗಳನ್ನು ಇದರಲ್ಲಿ ತಲಸ್ಪರ್ಶಿಯಾಗಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ನಿಬಂಧದಲ್ಲಿ ಆರು ಅಧ್ಯಾಯಗಳಿದ್ದು, ಬಿಜಾಪುರದ ಇತಿಹಾಸ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರದ ದರ್ಶನ ಮಾಡಿಸುತ್ತದೆ.

**ಪಟ್ಟ ಮಹಾದೇವಿ ಶಾನ್ತಲದೇವಿ : ಕಾದಂಬರಿ ಒಂದು ಅಧ್ಯಯನ :**

ಇದು ಶ್ರೀಮತಿ ಮಹಾನಂದಾ ಪಾಟೀಲ ಅವರ ಎಂ.ಫಿಲ್ ನಿಬಂಧವಾಗಿದೆ. ಕನ್ನಡ ಖ್ಯಾತ ಕಾದಂಬರಿಕಾರರಾದ ಡಾ. ಸಿ.ಕೆ. ನಾಗರಾಜರಾವ್ ಅವರು ರಚಿಸಿರುವ ಕಾದಂಬರಿಯಿದು. ಹೊಯ್ಸಳ

ದೊರೆ ವಿಷ್ಣುವರ್ಧನನ ಪಟ್ಟ ಮಹಿಷಿಯಿವಳು. ಹೊಯ್ಸಳ ಸಾಮ್ರಾಜ್ಯದ ಕಲೆ, ಶಿಲ್ಪಕಲೆ, ಸಂಗೀತ, ನಾಟ್ಯ ಇವುಗಳ ಪರಿಚಯವಿದೆ. ಇದರಲ್ಲಿ ಒಟ್ಟು ಆರು ಅಧ್ಯಾಯಗಳಿದ್ದು ಭವ್ಯ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ.

**ಸುಜನಾ ಅವರ ಯುಗಸಂಧ್ಯಾ ಮಹಾಕಾವ್ಯ :ಒಂದು ಅಧ್ಯಯನ :**

ಇದು ಶ್ರೀ ಎಂ. ರಾಮಕೃಷ್ಣ ಅವರ ಎಂ.ಫಿಲ್ ನಿಬಂಧವಿದು. ಸು.ಜ. ನಾರಾಯಣಶೆಟ್ಟಿ ಅವರು ರಚಿಸಿದ ಮಹಾಕಾವ್ಯ ಯುಗಸಂಧ್ಯಾ.ಇದು ಯುದ್ಧೋತ್ತರ ಭಾರತದ ಕಥೆಯನ್ನು ಒಳಗೊಂಡಿದೆ. ಎಂ. ರಾಮಕೃಷ್ಣ ಅವರು ಯುಗಸಂಧ್ಯಾವನ್ನು ಸಾದ್ಯಂತವಾಗಿ ಅಧ್ಯಯನಿಸಿದ್ದಾರೆ. ಸಮಕಾಲೀನ ಭಾರತದ ಸ್ಥಿತಿಗತಿಗಳನ್ನು ಚರ್ಚಿಸಿದ್ದು ಇದರ ವಿಶೇಷತೆಯಾಗಿದೆ.

**ಬಸವೇಶ್ವರ ವಿದ್ಯಾವರ್ಧಕ ಸಂಘ :ಒಂದು ಅಧ್ಯಯನ :**

ಶ್ರೀಮತಿ ಯಮುನಾಬಾಯಿ ಹಿರಗಣ್ಣವರ ಅವರ ಎಂ.ಫಿಲ್ ನಿಬಂಧವಿದು. ಬಾಗಲಕೋಟ ಬಸವೇಶ್ವರ ವಿದ್ಯಾವರ್ಧಕ ಸಂಘವು ಶತಮಾನಗಳಷ್ಟು ಪುರಾತನವಾದ ಶೈಕ್ಷಣಿಕ ಸಂಸ್ಥೆಯಾಗಿದೆ. ಶ್ರೀಮತಿ ಯಮುನಾಬಾಯಿ ಅವರು ಬಸವೇಶ್ವರ ಸಂಘದ ಶೈಕ್ಷಣಿಕ ಚಟುವಟಿಕೆಗಳನ್ನು ಇದರಲ್ಲಿ ದಾಖಲುಗೊಳಿಸಿದ್ದಾರೆ. ಶಿಕ್ಷಣ, ಆಡಳಿತ, ಪತ್ರಿಕೆ, ಪಠ್ಯ, ಪಠ್ಯಪೂರಕ ಸಂಗತಿಗಳು ಇದರಲ್ಲಿ ಚರ್ಚಿತವಾಗಿವೆ.

**ಬದಾಮಿ ತಾಲೂಕಿನ ವೀರಶೈವ ಮಠಗಳು : ಒಂದು ಅಧ್ಯಯನ :**

ಶ್ರೀ ವ್ಹಿ. ಬಿ. ಮುತ್ತಿನಮಠರ ಎಂ.ಫಿಲ್ ನಿಬಂಧವಿದು. ವೀರಶೈವ ಧರ್ಮದಲ್ಲಿ ಗುರು ಪರಂಪರೆ ಮತ್ತು ಆಚಾರ್ಯ ಪರಂಪರೆಯ ಮಠಗಳಿವೆ. ಪಂಚಪೀಠಾಧೀಶರನ್ನು ಆಚಾರ್ಯ ಪರಂಪರೆಯೆಂದು ವಿರಕ್ತಮಠದವರನ್ನು ಗುರುಪರಂಪರೆಯವರೆಂದು ಕರೆಯುತ್ತ ಬರಲಾಗಿದೆ. ವಿರಕ್ತವರ್ಗ ಮಠಗಳಲ್ಲಿ ಮುರುಘಾಸಮಯ, ಕುಮಾರ ಸಮಯ, ಚೀಲಾಳ ಸಮಯ, ಸಂಪಾದನಾ ಸಮಯ ಮತ್ತು ಕೆಂಪಿನ ಚೀಲಾಳ ಸಮಯಗಳೆಂದು ಪ್ರಭೇದಗಳಿವೆ. ಇವೆಲ್ಲ ಅಂಶಗಳನ್ನು ಚರ್ಚಿಸಿ ಅಧ್ಯಯನಿಸಿರುವುದು ಇದರ ವಿಶೇಷವಾಗಿದೆ. ಇದರಲ್ಲಿ ಬಾದಾಮಿ ತಾಲೂಕಿನ ವೀರಶೈವ ಮಠಗಳನ್ನು ಪ್ರಧಾನವಾಗಿರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಬಾದಾಮಿ ತಾಲೂಕಿನ ಮಠಗಳ ಧಾರ್ಮಿಕ, ಸಾಮಾಜಿಕ ಸುಧಾರಣೆಗಳನ್ನು ವಿವರಿಸಲಾಗಿದೆ ಮತ್ತು ವೀರಶೈವ ಮಠಗಳ ವಿಶಿಷ್ಟ ಕಾರ್ಯಗಳನ್ನು ವಿವರಿಸಲಾಗಿದೆ.

**ಏಕಲವ್ಯನ ಉಪಾಖ್ಯಾನ ಒಂದು ತೌಲನಿಕ ಅಧ್ಯಯನ :**

ಶ್ರೀಮತಿ ಎಸ್.ಸಿ. ಸಿಂಧೂರ ಅವರು ನಿಬಂಧವಿದು. ಪ್ರಸ್ತುತ ನಿಬಂಧದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿವೆ. ಮೊದಲನೆಯದು ಅಧ್ಯಯನದ ಉದ್ದೇಶ ಮತ್ತು ಸ್ವರೂಪವಾಗಿದೆ. ಅಧ್ಯಾಯ

ಎರಡು ಕಥಾಸಾರವಾಗಿದೆ. ಇದರಲ್ಲಿ ಸಂಸ್ಕೃತ ಕಥೆಗಳು, ಕನ್ನಡ ಕೃತಿಗಳು ಎಂಬೆರಡು ಭಾಗಗಳಿವೆ. ಸಂಸ್ಕೃತದಲ್ಲಿ ವ್ಯಾಸ ಭಾರತ, ಕನ್ನಡದಲ್ಲಿ ಪಂಪಭಾರತ, ಕುಮಾರ ವ್ಯಾಸ ಭಾರತ ಪ್ರಮುಖವಾಗಿವೆ. ಹೊಸಗನ್ನಡ ಸಾಹಿತ್ಯದಲ್ಲಿ ಕೈಲಾಸಂ, ಗೋವಿಂದ ಪೈ., ಕುವೆಂಪು, ಅಣ್ಣಯ್ಯ, ತ್ರಿವಿಕ್ರಮ, ಕಾಶಿವಿಶ್ವನಾಥಶೆಟ್ಟಿ, ಡಿ.ವಿ.ಶೇಷಗಿರಿರಾವ, ಡಾ. ಸಿದ್ಧಲಿಂಗಯ್ಯ ಮುಂತಾದವರ ನಾಟಕಗಳಿವೆ. ಬಿ. ಎಸ್. ಶಾಮರಾವ್, ಎಸ್. ಕೃಷ್ಣಭಟ್ಟರ ಅನುವಾದಗಳಿವೆ. ಮಲ್ಲಿಕಾರ್ಜುನ ಹಿರೇಮಠರ ಬಿಡಿಗವನವು ವಿವೇಚನೆಗೆ ಒಳಗಾಗಿವೆ. ಅಧ್ಯಾಯ ಮೂರು ಮಾರ್ಪಾಡುಗಳು ಮತ್ತು ಮಾರ್ಪಾಡುಗಳ ಔಚಿತ್ಯವಾಗಿದೆ. ಇದರಲ್ಲಿ ವ್ಯಾಸ ಭಾರತದಿಂದ ನಡುಗನ್ನಡ, ಹೊಸಗನ್ನಡ ಕಾಲಘಟ್ಟಕ್ಕೆ ಮಾರ್ಪಾಡುಗೊಂಡಿರುವ ಏಕಲವ್ಯನ ಪಾತ್ರವನ್ನು ವಿವೇಚಿಸಲಾಗಿದೆ. ಅಧ್ಯಾಯ ನಾಲ್ಕು ಸಮಾರೋಪವಾಗಿದೆ. ಪ್ರಸ್ತುತ ಪ್ರಬಂಧದ ಫಲಿತಾಂಶಗಳನ್ನು ಸಮಾರೋಪದಲ್ಲಿ ದಾಖಲಿಸಲಾಗಿದೆ. ಏಕಲವ್ಯ ಉಪಾಖ್ಯಾನ ತೌಲನಿಕ ಅಧ್ಯಯನಕ್ಕೆ ಒಂದು ನಿದರ್ಶನವಾಗಿದೆ.

ಡಾ. ಬಿ.ಆರ್. ಹಿರೇಮಠ ಅವರು ಯಾವುದೇ ಕಾರ್ಯ ಕೈಗೊಳ್ಳಲಿ ಅಲ್ಲೊಂದು ಅಚ್ಚುಕಟ್ಟುತನ ಮತ್ತು ಶಾಸ್ತ್ರೀಯ ಶಿಸ್ತು ಇದ್ದೇ ಇರುತ್ತದೆ. ಪ್ರಸ್ತುತ ಎಂಫಿಲ್ ನಿಬಂಧಗಳ ಮಾರ್ಗದರ್ಶನದಲ್ಲಿಯೇ ಸಂಶೋಧನೆಯ ಶಿಸ್ತನ್ನು ಕಾಣಬಹುದಾಗಿದೆ.

**೬.೨. ಪಿಎಚ್.ಡಿ. ಮಹಾ ಪ್ರಬಂಧಗಳು :**

೧. ತಿಂಥಣಿ ಮೌನೇಶ್ವರ : ಒಂದು ಅಧ್ಯಯನ - (೧೯೯೦)

ಶ್ರೀ ಎಂ.ಎಂ. ಪಡಶೆಟ್ಟಿ

೨. ಕರ್ನಾಟಕದ ಜನಪದ ಚಿತ್ರಕಲೆ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) (೧೯೯೧)

ಶ್ರೀ ಎಸ್.ಸಿ. ಪಾಟೀಲ

೩. ಮೊಗ್ಗೆಯ ಮಾಯಿದೇವ ; ಒಂದು ಅಧ್ಯಯನ. (೧೯೯೨)

ಶ್ರೀ ಡಿ.ವ್ಹಿ. ಪುರಾಣಿಕಮಠ

೪. ಕನ್ನಡ ಸಾಹಿತ್ಯದಲ್ಲಿ ಕರ್ಣ (೧೯೯೩)

ಶ್ರೀ ವ್ಹಿ ಎಸ್. ಮಾಳಿ

೫. ಶಿ.ಶಿ. ಬಸವನಾಳ ಜೀವನ ಸಾಧನೆ (೧೯೯೫ )

ಮಹೇಶ ಚಿಂತಾಮಣಿ

೬. ಸೋದೆ ಅರಸು ಮನೆತನ : ಒಂದು ಅಧ್ಯಯನ (೧೯೯೬)

ಶ್ರೀ ಎಂ. ಜಿ. ವಾರಿ

೭. ಸಿರುಮನ ಸಂಗತಿಗಳು : ಒಂದು ಅಧ್ಯಯನ (೧೯೯೭)

ಶ್ರೀಮತಿ ಎಸ್. ಎಸ್. ಹೊಸಳ್ಳೇರ

೮. ಏಕಲವ್ಯನ ಪಾತ್ರ : ಒಂದು ಅಧ್ಯಯನ (೧೯೯೭)

ಶ್ರೀ ಎ.ಎಮ್. ನರೋಡೆ

೯. ಪ್ರಾಚೀನ ಕನ್ನಡ ಭಗವದ್ಗೀತಾ ಸಾಹಿತ್ಯ (೨೦೦೦)

ಎಸ್. ದಿಕ್ಷೀತ

೧೦. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಂಬೇಡ್ಕರರ ಪ್ರಭಾವ (ಕಾವ್ಯವನ್ನು ಅನುಲಕ್ಷಿಸಿ ೨೦೦೦)

ಶ್ರೀಮತಿ ಎ.ಕೆ. ಕಾಂಬಳೆ

೧೧. ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳು : ಒಂದು ಅಧ್ಯಯನ (೨೦೦೩)

ಶ್ರೀ ವಾಯ್. ಎಂ. ಯಾಕೊಳ್ಳಿ

೧೨. ವಚನ ಸಾಹಿತ್ಯದ ಪ್ರಕಟಣೆ ಮತ್ತು ಪರಂಪರೆ (೨೦೦೬)

ಶ್ರೀ ಬಿ. ಎಸ್. ಬಿರಾದಾರ

೧೩. ಮುಂಡರಗಿ ಶ್ರೀ ಜಗದ್ಗುರು ಅನ್ನದಾನಿ ಸ್ವಾಮಿಗಳ ಸಮಗ್ರ ಸಾಹಿತ್ಯ (೨೦೦೮)

ಶ್ರೀಮತಿ ವ್ಹಿ.ಜಿ. ಹಿರೇಮಠ

೧೪. ಹಚ್ಚೆ : ಒಂದು ಅಧ್ಯಯನ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) (೨೦೦೮)

ಶ್ರೀ ಎಚ್. ಬಿ. ಹೊಸಮನಿ

೧೫. ಶಿಕಾರಿಪುರ ತಾಲೂಕಿನ ಜಾತ್ರೆಗಳು : ಒಂದು ಅಧ್ಯಯನ (೨೦೦೮)

ಶ್ರೀ ಎಸ್.ಡಿ. ಬಂದಮ್ಮನವರ

೧೬. ಕನ್ನಡದಲ್ಲಿ ಯುದ್ಧೋತ್ತರ ಭಾರತ ಕಥೆ -(೨೦೦೮)

ಶ್ರೀಮತಿ ಪಿ.ಎ. ಹೊಸಟ್ಟಿ

೧೭. ಹಾನಗಲ್ ಕುಮಾರಸ್ವಾಮಿಗಳು : ಒಂದು ಅಧ್ಯಯನ (೨೦೦೮)

ಶ್ರೀ ಜಿ. ಕೆ. ಹಿರೇಮಠ

ಇವಿಷ್ಟು ಬಿ.ಆರ್. ಹಿರೇಮಠ ಅವರ ಮಾರ್ಗದರ್ಶನ ಪಡೆದ ಎಚ್.ಡಿ. ಮಹಾಪ್ರಬಂಧಗಳಾಗಿವೆ. ಕರ್ನಾಟಕ ಜಾನಪದ ಚಿತ್ರಕಲೆ, ಉತ್ತರಕರ್ನಾಟಕದ ಹಚ್ಚೆ ಒಂದು ಅಧ್ಯಯನ, ಶಿಕಾರಿಪುರ ತಾಲೂಕಿನ ಜಾತ್ರೆಗಳು ಒಂದು ಅಧ್ಯಯನ ಇವು ಮೂರೂ ಮಹಾಪ್ರಬಂಧಗಳು - ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದವುಗಳಾಗಿವೆ. ತಿಂತಿಣಿ ಮೌನೇಶ್ವರ : ಒಂದು ಅಧ್ಯಯನ, ಮೊಗ್ಗೆಯ ಮಾಯಿದೇವ: ಒಂದು ಅಧ್ಯಯನ ಶಿ. ಶಿ. ಬಸವನಾಳರು: ಜೀವನ ಸಾಧನೆ, ಇವು ಮೂರು ವ್ಯಕ್ತಿಗತ ಸಂಶೋಧನೆಯಾಗಿದೆ. ತಿಂತಿಣಿ ಮೌನೇಶ್ವರ ಕೋಮು ಸೌಹಾರ್ದತೆಯ ಭಾವೈಕ್ಯ ಬೆಸುಗೆಯ ಅಧ್ಯಯನವಾಗಿದ್ದರೆ ಉಳಿದೆರಡು ಪ್ರಬಂಧಗಳು ಕವಿ ಕಾವ್ಯ ಪರಂಪರೆಗೆ ಸೇರುತ್ತವೆ. ಕನ್ನಡ

ಸಾಹಿತ್ಯದಲ್ಲಿ ಕರ್ಣ, ಏಕಲವ್ಯನ ಪಾತ್ರ: ಒಂದು ಅಧ್ಯಯನ, ಕನ್ನಡದಲ್ಲಿ ಯುದ್ಧೋತ್ತರ ಭಾರತ ಈ ಮೂರೂ ಮಹಾಪ್ರಬಂಧಗಳು ಮಹಾಭಾರತಕ್ಕೆ ಸಂಬಂಧಿಸಿದ ವಿಷಯವನ್ನು ಒಳಗೊಂಡಿವೆ. ಕನ್ನಡ ಸಾಹಿತ್ಯದಲ್ಲಿ ಕರ್ಣ ಮತ್ತು ಏಕವಲ್ಯನ ಪಾತ್ರ ಒಂದು ಅಧ್ಯಯನ ಇವೆರಡೂ ತೌಲನಿಕ ಸಾಹಿತ್ಯದ ಅಧ್ಯಯನಕ್ಕೆ ಶ್ರೇಷ್ಠ ನಿದರ್ಶನಗಳಾಗಿವೆ. ಪ್ರಾಚೀನ ಕನ್ನಡ ಭಗವದ್ಗೀತಾ ಸಾಹಿತ್ಯ, ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳು ಇವೆರಡೂ ಮಹಾಪ್ರಬಂಧಗಳು ಹಳಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದವುಗಳಾಗಿವೆ. ಮುಂಡರಗಿ ಶ್ರೀ ಜಗದ್ಗುರುಗಳು ಅನ್ನದಾನಿ ಸ್ವಾಮಿಗಳು; ಸಮಗ್ರ ಸಾಹಿತ್ಯ ಹಾನಗಲ್ ಕುಮಾರಸ್ವಾಮಿಗಳು ಒಂದು ಅಧ್ಯಯನ, ವಚನಸಾಹಿತ್ಯ ಪ್ರಕಟಣೆ ಮತ್ತು ಪರಂಪರೆ, ಶಿ.ಶಿ.ಬಸವನಾಳರ ಜೀವನ ಸಾಧನೆ ಇವು ನಾಲ್ಕು ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಮಹಾಪ್ರಬಂಧಗಳಾಗಿವೆ. ಮುಂಡರಗಿ ಶ್ರೀ ಜಗದ್ಗುರು ಅನ್ನದಾನಿಸ್ವಾಮಿಗಳು, ಹಾನಗಲ್ ಕುಮಾರಸ್ವಾಮಿಗಳು ಇವೆರಡು ಹೆಸರೇ ಸೂಚಿಸಿರುವಂತೆ ಶ್ರೀಮಠಗಳ ಪರಂಪರೆ ಮಠಾಧೀಶರ ವ್ಯಕ್ತಿತ್ವ ಹಾಗೂ ಅವರ ಸಾಹಿತ್ಯ ಸಾಧನೆಯನ್ನು ಪರಿಚಯಿಸುವ ಪ್ರಬಂಧಗಳಾಗಿವೆ. ಸೋದೆ ಅರಸು ಮನೆತನ: ಒಂದು ಅಧ್ಯಯನ, ಸಿರುಮನ ಸಂಗತಿಗಳು : ಒಂದು ಅಧ್ಯಯನ ಇವೆರಡು ಇತಿಹಾಸಕ್ಕೆ ಸಂಬಂಧಿಸಿದ ಚಾರಿತ್ರಿಕ ವ್ಯಕ್ತಿಗಳ ಅಧ್ಯಯನಗಳಾಗಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಂಬೇಡ್ಕರರ ಪ್ರಭಾವ ಇದು ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಮಹಾಪ್ರಬಂಧವಾಗಿದೆ. ಇದರಲ್ಲಿ ಅಂಬೇಡ್ಕರರ ವ್ಯಕ್ತಿತ್ವ ಹಾಗೂ ಅವರು ಪ್ರತಿಪಾದಿಸಿದ ತತ್ವಗಳು ಕನ್ನಡ ಸಾಹಿತ್ಯವನ್ನು ಹೇಗೆ ಪ್ರಭಾವಿಸಿವೆ ಎಂಬುದನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಹೀಗೆ ವಿಭಿನ್ನ ನೆಲೆಯ ವೈವಿಧ್ಯಮಯ ವಿಷಯಗಳನ್ನಾಯ್ದು ಅವುಗಳಿಗೆ ಸಮರ್ಪಕವಾದ ಮಾರ್ಗದರ್ಶನ ಮಾಡಿದ್ದಾರೆ. "ಸಂಶೋಧನೆ ಎಂಬುದು ಸಂಶೋಧಕನ ವ್ಯವಸ್ಥಿತ ಶ್ರಮದ ಕಾರ್ಯವಾಗಿದೆ. ಅದು ಕೇವಲ ಜ್ಞಾನಾರ್ಜನೆಯಲ್ಲ. ಸಾಹಿತ್ಯಿಕ ಸಮಸ್ಯೆಗಳನ್ನು ಗುರುತಿಸಿ ಪರಿಹರಿಸುವುದು ತಾಳ್ಮೆಯಿಂದ ಸಂಶೋಧನಾ ಸಮಸ್ಯೆಯ ಸ್ವರೂಪವನ್ನು ಅರಿತು ಪರಿಹಾರಕ್ಕೆ ಯತ್ನಿಸುವುದು ಸಂಶೋಧಕನ ಕೆಲಸ"[3]ವಾಗಿದೆ. ಈ ನೆಲೆಯಲ್ಲಿ ಡಾ. ಬಿ.ಆರ್. ಹಿರೇಮಠ ಅವರು ಸಂಶೋಧನೆಯ ಮಾರ್ಗದರ್ಶನಕ್ಕಾಗಿ ತಮ್ಮದೇ ಆದ ವಿಧಾನಗಳನ್ನು ಅಳವಡಿಸಿಕೊಂಡಿದ್ದಾರೆ. ಸಮಸ್ಯೆಯನ್ನು ಗುರುತಿಸುವುದು, ಸಮಸ್ಯೆಗಳ ಸ್ಪಷ್ಟೀಕರಣ, ದತ್ತಾಂಶಗಳ ಸಂಗ್ರಹ, ತಾತ್ಕಾಲಿಕ ನಿರ್ಣಯ ಕೈಕೊಳ್ಳುವುದು, ಸಮಸ್ಯೆಯ ಪರಿಹಾರ ಕಾರ್ಯ ಈ ಅಂಶಗಳನ್ನು ಅಳವಡಿಸಿಕೊಂಡು ತಾವು ಕಂಡುಕೊಂಡ ಫಲಿತಗಳನ್ನು ಸಮಕಾಲೀನ ವಿದ್ಯಮಾನಗಳಿಗೆ ಅನುಗುಣವಾಗಿ ಬಳಸಿ, ಪರೀಕ್ಷಿಸಿ ಹಾಗೂ ಪ್ರಮಾಣೀಕರಿಸುತ್ತಾರೆ. ತಾವು ಶೋಧಿಸಿದ ಅಂಶಗಳನ್ನು ಮುಕ್ತವಾಗಿ ಸಂವಾದಕ್ಕೆ ಬಿಟ್ಟುಕೊಡುತ್ತಾರೆ. ಪುನರ್ ಪರಿಶೀಲನೆಗೂ ಒಳಪಡಿಸುತ್ತಾರೆ. ತಮ್ಮ ನಿರ್ಣಯದ ನೆಲೆಗಳನ್ನೂ ಬೇರೆ ಬೇರೆ ನಿಟ್ಟಿನಿಂದಲೂ ಶೋಧಿಸಲು ಯತ್ನಿಸುತ್ತಾರೆ. ತಮ್ಮದೇ ಅಂತಿಮ ನಿಲುವು ಎಂಬುದನ್ನು ಎಲ್ಲಿಯೂ

ಪ್ರತಿಪಾದಿಸುವುದಿಲ್ಲ. ಕಾಲಕಾಲಕ್ಕೆ ಪರಿಷ್ಕರಣೆಗೆ ಒಳಪಡಿಸಿರುವುದನ್ನು ಕಾಣುತ್ತೇವೆ. "ಡಾ. ಬಿ. ಆರ್. ಹಿರೇಮಠ ಅವರು ಈ ಮಹಾಪ್ರಬಂಧಕ್ಕೆ ಮಾರ್ಗದರ್ಶನ ಮಾಡಿದರು, ತಾವೂ ಹಗಲಿರುಳೂ ದುಡಿದರು. ನನ್ನನ್ನು ಬಿಟ್ಟುಬಿಡದೆ ದುಡಿಸಿದರು. ಯಾವ ಅಭಿಪ್ರಾಯವನ್ನು ಒತ್ತಾಯದಿಂದ ನನ್ನ ಮೇಲೆ ಹೇರಲಿಲ್ಲ. ಲಭ್ಯವಿದ್ದ ಸಾಮಗ್ರಿಯ ಮೇಲಿಂದ ನಾನು ಕೈಗೊಂಡ ನಿರ್ಣಯಕ್ಕೆ ಸಮ್ಮತಿ ಸೂಚಿಸಿದರು. ಡಾ. ಬಿ.ಆರ್. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಗೊಳ್ಳುವುದೇ ಒಂದು ಚೇತೋಹಾರಿ ಅನುಭವವಾಗಿದೆ."[5] ಈ ಮಾತುಗಳು ಮಾರ್ಗದರ್ಶನಕ್ಕೆ ಕನ್ನಡಿ ಹಿಡಿದಂತಿವೆ.

ಡಾ. ಬಿ. ಆರ್. ಹಿರೇಮಠ ಅವರ ಸಂಶೋಧನೆಯ ಮಾರ್ಗದರ್ಶನವು ತಾತ್ವಿಕ ನೆಲೆಗಳಿಂದ ಕೂಡಿದೆ. ಒಂದು ತಾತ್ವಿಕ ಸಂಶೋಧನೆ ಎರಡು ಅನ್ವಯಿಕ ಸಂಶೋಧನೆ ಮೂರು ವಿವರಣಾತ್ಮಕ ಸಂಶೋಧನೆ ನಾಲ್ಕು ತೌಲನಿಕ ಸಂಶೋಧನೆ ಐದು ಐತಿಹಾಸಿಕ ಸಂಶೋಧನೆ ಆರು ಅಂತರ್ ಶಿಸ್ತೀಯ ಸಂಶೋಧನೆ ಈ ಆರು ಪ್ರಮುಖ ನೆಲೆಗಳಲ್ಲಿ ಡಾ. ಬಿ. ಆರ್. ಹಿರೇಮಠ ಅವರು ತಮ್ಮ ಕೈಕೆಳಗೆ ಕೈಗೊಂಡ ಸಂಶೋಧಕರಿಗೆ ಮಾರ್ಗದರ್ಶನ ಮಾಡಿದ್ದಾರೆ. ವಿಷಯದ ಸಂದರ್ಭ ಮತ್ತು ಅವುಗಳ ಗುಣಲಕ್ಷಣಕ್ಕನುಗುಣವಾಗಿ ಅಧ್ಯಯನ ವಿಧಾನವನ್ನು ಅಳವಡಿಸಿದ್ದಾರೆ. ವಚನ ಸಾಹಿತ್ಯ, ಜಾನಪದ ಸಾಹಿತ್ಯ ವಿಷಯಗಳ ಪ್ರಬಂಧಗಳಿಗೆ ಮಾರ್ಗದರ್ಶನ ಮಾಡಲು ಬಳಸಿದ ವಿಧಿವಿಧಾನಗಳು ವಿಭಿನ್ನವಾಗಿವೆ. ಅರಸು ಮನೆತನಗಳು, ಪೌರಾಣಿಕ ಕಾವ್ಯಗಳು, ಕಾವ್ಯಸಂಕಲನಗಳು ಇವುಗಳ ಅಧ್ಯಯನಕ್ಕೆ ಮಾರ್ಗದರ್ಶನ ಮಾಡುವಾಗ ಬಳಸಿದ ಮಾನದಂಡಗಳು ಬೇರೆಯಾಗಿವೆ. ಇದರಿಂದ ಒಂದು ಅಂಶ ಸ್ಪಷ್ಟವಾಗುವುದೇನೆಂದರೆ ಎಲ್ಲಾ ಸಂಶೋಧನಾ ಪ್ರಬಂಧಗಳಿಗೆ ಒಂದೇ ಮಾನದಂಡವನ್ನು ಬಳಸುವುದಿಲ್ಲ. ವಿಷಯಕ್ಕನುಗುಣವಾಗಿ ಸಂದರ್ಭಾನುಸಾರಿಯಾಗಿ ಬೇರೆ ಬೇರೆ ವಿಧಾನವನ್ನು ಬೋಧಿಸಿದ್ದಾರೆ.

"ನಾನು ಪಿಎಚ್.ಡಿ ಮಾಡಬೇಕು ಎಂಬ ಭಾವ ಮೂಡಿಸಿದವರು ಡಾ. ಎಂ.ಎಂ. ಕಲಬುರ್ಗಿಯವರು. ಈ ಯೋಚನೆಯನ್ನು ಯೋಜನೆಯನ್ನಾಗಿ ರೂಪಿಸಿದ ಶ್ರೇಯಸ್ಸು ನನ್ನ ವಿದ್ಯಾ ಗುರುಗಳೂ, ಮಾರ್ಗದರ್ಶಕರೂ ಆಗಿರುವ ಡಾ. ಬಿ.ಆರ್. ಹಿರೇಮಠ ಅವರಿಗೆ ಸಲ್ಲಬೇಕು. ಅವರ ಪ್ರೇರಣೆ ಮಾರ್ಗದರ್ಶನ ಹಾಗೂ ಆತ್ಮೀಯತೆಯ ಫಲವೇ ಈ ಮಹಾಪ್ರಬಂಧ. ಡಾ. ಬಿ.ಆರ್. ಹಿರೇಮಠರು ನನಗೆ ಪಿಎಚ್.ಡಿ. ಮಾಡಿಸಲಿಲ್ಲ. ನನ್ನ ಬದುಕಿನ ಮಹಾಮಾರ್ಗವನ್ನೇ ರೂಪಿಸಿದರು. ಅವರ ಮಾರ್ಗದರ್ಶನ ಆತ್ಮೀಯತೆಯ ರಸಾನುಭವ"[6] ಎಂದು ಹೇಳಿರುವ ಡಾ. ವ್ಹಿ. ಎಸ್. ಮಾಳಿಯವರ ಮಾತುಗಳು ಡಾ. ಬಿ. ಆರ್. ಹಿರೇಮಠರ ಮಾರ್ಗದರ್ಶನಕ್ಕೆ ಉಜ್ವಲ ಉದಾಹರಣೆಗಳಾಗಿವೆ.

**ಡಾ. ಬಿ. ಆರ್. ಹಿರೇಮಠರು ಮಾರ್ಗದರ್ಶನ ಮಾಡಿದ ಮಹಾ ಪ್ರಬಂಧಗಳು**

**೧. ತಿಂತಣಿ ಮೌನೇಶ್ವರ : ಒಂದು ಅಧ್ಯಯನ :**

ಇದು ಸಿಂದಗಿಯ ಶ್ರೀ ಎಂ. ಎಂ. ಪಡಶೆಟ್ಟಿಯವರ ಮಹಾಪ್ರಬಂಧವಾಗಿದೆ. ಇದರಲ್ಲಿ ೮ ಅಧ್ಯಾಯಗಳಿವೆ. ಧರ್ಮ ಸಮನ್ವಯತೆಯಲ್ಲಿ ಕೋಮು ಸೌಹಾರ್ದತೆಯನ್ನು ಎತ್ತಿ ಹೇಳಿದ ಅಂಶವಿಲ್ಲಿದೆ. ಇದರಲ್ಲಿ ಕ್ಷೇತ್ರ ಕಾರ್ಯ ಮಾಡಿ ಆಕರ ಸಾಮಗ್ರಿಯನ್ನು ದೊರಕಿಸಿಕೊಂಡಿರುವುದು ವಚನಗಳ ಅಧ್ಯಯನ ಜಾತ್ರೆ, ಆರಾಧನೆ, ಆಚರಣೆಗಳನ್ನು ಬಳಸಿಕೊಂಡಿರುವುದು ಹಿಂದೂ ಧರ್ಮವನ್ನು ಚರ್ಚಿಸಿರುವುದು ಪಂಥ ಮತ್ತು ಪ್ರಭಾವಗಳನ್ನು ಗುರುತಿಸುವುದು ಸಂಶೋಧನೆಯ ಸಾಫಲ್ಯವಾಗಿದೆ.

ಪುರಾತನ ಸಂಸ್ಕೃತಿಯ ಬುತ್ತಿಯನ್ನು ಅಂದಿನ ಜನಾಂಗಕ್ಕೆ ಉಣಬಡಿಸುತ್ತಾ, ಮುಂದಿನ ಜನಾಂಗಕ್ಕೆ ನೀಡಿ ಹೋದವರು ಹಲವಾರು ಮಹಾತ್ಮರು. ಧರ್ಮಸಮನ್ವಯದ ನೇತಾರರಾಗಿ ನಾಡಿಗೆ ವಿಶಿಷ್ಟ ಸಂಸ್ಕೃತಿ ಒದಗಿಸಿಕೊಟ್ಟವರು. ಮುಸ್ಲಿಂ ದಬ್ಬಾಳಿಕೆಯ ಕಾಲದಲ್ಲಿ ಜನತೆಯನ್ನು ಭಯದ ವಾತಾವರಣದಿಂದ ಮುಕ್ತಗೊಳಿಸಿದರು. ಮೋನಪ್ಪನ ವಚನಗಳು, ಶರಣ ಮೋನಪ್ಪನ ಚರಿತ್ರೆ, ಶ್ರೀ ಮೌನೇಶ್ವರ ಬಾಲಲೀಲೆ, ಮೋನಪ್ಪನ ಕುರಿತಾದ ಆಧುನಿಕ ಸಾಹಿತ್ಯ, ಜನಪದ ಗೀತ ಸಾಹಿತ್ಯದಲ್ಲಿ ಮೋನಪ್ಪ, ಐತಿಹ್ಯಗಳು, ಆಚರಣೆ ಹಾಗೂ ಸಂಪ್ರದಾಯಗಳು, ಹಿರಿಯರೊಂದಿಗೆ ಜಿಜ್ಞಾಸೆ, ಅನುಭಾವಿಗಳೊಂದಿಗೆ ಚರ್ಚೆ ಮಾಡಿ ಲಭಿಸಿದ ಸಾಮಗ್ರಿಗಳ ಬಲದಿಂದ ಪ್ರಸ್ತುತ ಮಹಾಪ್ರಬಂಧವನ್ನು ಎಂ.ಎಂ. ಪಡಶೆಟ್ಟಿಯವರು ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ.

**ಮೊಗ್ಗೆಯ ಮಾಯಿದೇವ ; ಒಂದು ಅಧ್ಯಯನ :**

ಇದು ಸಂಕೇಶ್ವರದ ಶ್ರೀ ಡಿ.ವಿ. ಪುರಾಣಿಕಮಠ ಅವರ ಮಹಾಪ್ರಬಂಧವಾಗಿದೆ. ಇದರಲ್ಲಿ ೭ ಅಧ್ಯಾಯಗಳಿವೆ. ಯುಗದ ಪರಿಚಯ, ಚಾರಿತ್ರಿಕ ವಿವೇಚನೆ, ಕೃತಿಗಳ ಸಮಗ್ರ ಅಧ್ಯಯನ, ಸಾಹಿತ್ಯ ಸೌರಭ. ಮೊಗ್ಗೆಯ ಮಾಯಿದೇವನ ಸಮಕಾಲೀನ ತತ್ವ ಸಾಹಿತ್ಯ ಮತ್ತು ವೀರಶೈವ ತತ್ವಶಾಸ್ತ್ರ ಸಾಹಿತ್ಯದಲ್ಲಿ ಮಾಯಿದೇವನ ಸಾಧನೆ ಮುಂತಾದವುಗಳ ವಿವೇಚನೆ ಇದೆ. ಪ್ರಸ್ತುತ ಮಹಾ ಪ್ರಬಂಧದಲ್ಲಿ ರಾಜಾಶ್ರಯದಿಂದ ಸಾಹಿತ್ಯದ ಬೆಳವಣಿಗೆ, ಪ್ರೌಢದೇವರಾಯನ ಕಾಲದ ಸಾಹಿತ್ಯ, ವೀರಶೈವ ಸಾಹಿತ್ಯ, ವಚನ ಸಾಹಿತ್ಯ ಟೀಕೆ-ಟಿಪ್ಪಣಿಗಳು, ನೂರೊಂದು ವಿರಕ್ತರು, ಕವಿಗಳು ವಚನ ಸಂಕಲನಕಾರರು, ಲಕ್ಕಣ ದಂಡೇಶನ ಕಾಲದ ಸಾಹಿತ್ಯ, ಮಹಾಲಿಂಗದೇವ, ಬಂಕನಾಥ ಕಲ್ಲುಮಠದ ಪ್ರಭುದೇವ ಮೊಗ್ಗೆಯ ಮಾಯಿದೇವರ ಸಾಹಿತ್ಯ, ಮೊಗ್ಗೆಯ ಮಾಯಿದೇವನ ಕುರಿತಾಗಿ ಬಂದಿರುವ ಸಾಹಿತ್ಯ. ಮೊದಲಾದ ಅಂಶಗಳನ್ನು ಚರ್ಚಿಸಿದ್ದಾರೆ. ಸಮಾರೋಪದಲ್ಲಿ ಷಟ್‌ಸ್ಥಲ ಸಿದ್ಧಾಂತ, ವೀರಶೈವ ಆಚರಣಾ ವಿಧಿ, ನಿಯಮಗಳ ತೌಲನಿಕ ಸಮೀಕ್ಷೆ ಇದೆ. ಬಸವಾದಿಗಳ ಗಾಢ ಪ್ರಭಾವ, ಅದ್ವೈತ, ಶಿವಾದ್ವೈತಗಳ ತೌಲನಿಕ ಅಧ್ಯಯನವು ವಿನೂತನ ಉಪಕ್ರಮವಾಗಿದೆ. ಸ್ವರ ವಚನಗಳ ರಚನೆ ಆಚಾರ್ಯರ ವೇದಾಂತ,

ಶರಣರ, ಅವಧೂತರ ವಿರಕ್ತ-ಸಂಪ್ರದಾಯ, ವೀರಶೈವ ಸಾಮಾಜಿಕ ಸಿದ್ಧಾಂತಗಳಿಗಿಂತ ಧಾರ್ಮಿಕ ಸಿದ್ಧಾಂತಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದನ್ನು ವಿಶ್ಲೇಷಿಸಿದ್ದಾರೆ. ೧೯ನೆಯ ಶತಮಾನದ ವೀರಶೈವ ಧರ್ಮ, ತತ್ವ, ಸಾಹಿತ್ಯ, ಸಂಸ್ಕೃತಿಗಳ ಅಧ್ಯಯನಕ್ಕೆ ಪ್ರಸ್ತುತ ಮಹಾಪ್ರಬಂಧವು ಪ್ರಮುಖ ಆಧಾರ ಸಾಮಗ್ರಿಯನ್ನು ಒದಗಿಸುತ್ತದೆ. ತತ್ವ ಶಾಸ್ತ್ರ, ಜಿಜ್ಞಾಸೆಗಳಿಗೆ ಒಂದೊಂದು ಉತ್ತಮ ಮಾದರಿಯಾಗಿದೆ.

**ಕನ್ನಡ ಸಾಹಿತ್ಯದಲ್ಲಿ ಕರ್ಣ :**

ಹಾರೂಗೇರಿಯ ಬಿ. ಆರ್. ಸಂಶೋಧನಾ ಸಂಸ್ಥೆಯ ಸಂಯೋಜಕರಾದ ಡಾ. ವ್ಹಿ. ಎಸ್. ಮಾಳಿ ಅವರ ಸಂಶೋಧನಾ ಮಹಾಪ್ರಬಂಧವಿದು. ಇದರಲ್ಲಿ ೮ ಅಧ್ಯಾಯಗಳಿವೆ. ಮೊದಲನೇ ಅಧ್ಯಾಯ ಪರಂಪರಾಗತವಾಗಿದೆ. ಅನುಕ್ರಮವಾಗಿ ಕನ್ನಡ ಭಾರತ ಬಾಂಧವ್ಯ, ಕರ್ಣ ಘಟ್ಟ ಒಂದು ರಾಧೇಯ, ಕರ್ಣಘಟ್ಟ ಎರಡು ಅಂಗಾಧಿಪತಿ, ಕರ್ಣಘಟ್ಟ ಮೂರು ಕೌಂತೇಯ ಕರ್ಣ, ಕನ್ನಡ ಆಗಮಿಕ ಜೈನ ಸಾಹಿತ್ಯದಲ್ಲಿ ಕರ್ಣ, ಹೊಸಗನ್ನಡ ಸಾಹಿತ್ಯದಲ್ಲಿ ಕರ್ಣ. ಹೀಗೆ ಆರು ಅಧ್ಯಾಯಗಳಲ್ಲಿ ಕರ್ಣನ ಸಮಗ್ರ ವ್ಯಕ್ತಿತ್ವವನ್ನು ತೌಲನಿಕವಾಗಿ ಕಟ್ಟಿಕೊಡಲಾಗಿದೆ. ಎಂಟನೆಯದು ಸಮಾರೋಪವಾಗಿದೆ. "ಇದರಲ್ಲಿ ಕರ್ಣ ಒಬ್ಬ ವ್ಯಕ್ತಿಯಲ್ಲಿ ಸಾಂಪ್ರದಾಯಕವಲ್ಲದ ಒಂದು ಪರಂಪರೆಯ ಶಕ್ತಿ ಸಾಮಾಜಿಕ ಮನ್ನಣೆಯಿಂದ ವಂಚಿತಗೊಂಡ ವ್ಯವಸ್ಥೆಯ ಶೋಷಣೆಗೆ ಒಳಗಾದ ಆ ಪ್ರಚಂಡ ಶಕ್ತಿಯ ವ್ಯಥೆಯೇ ಮಹಾಭಾರತದ ಕರ್ಣನ ಬದುಕಿನ ಕಥೆ, ಕರ್ಣ ಅಂದಿನ ವ್ಯವಸ್ಥೆಯ ಬಲಿಪಶು ಆತ ಮಹಾಭಾರತ ಕಾಲದ ವರ್ಗ ಮತ್ತು ವರ್ಣ ಸಂಘರ್ಷದಲ್ಲಿಯ ಒಬ್ಬ ಹೋರಾಟಗಾರ. ಅವನ ಹೋರಾಟದ ಸ್ವರೂಪ ವ್ಯಕ್ತಿಗತವಾದುದು. ಆ ಹೋರಾಟವೇ ಅವನ ಬದುಕಿನಲ್ಲಿಯ ದುರಂತವನ್ನು ಪ್ರಕಟಿಸಿತು"[೫] ಎಂದು ಸಮಾರೋಪದಲ್ಲಿ ಹೇಳಿರುವ ಮಾತುಗಳು ಹೊಸ ಸಾಧ್ಯತೆಯತ್ತ ಗಮನ ಸೆಳೆಯುತ್ತವೆ. ವ್ಯಾಸ, ಪಂಪ, ರನ್ನ ಮತ್ತು ಕುಮಾರವ್ಯಾಸರು ಚಿತ್ರಿಸಿದ ಕರ್ಣನ ವ್ಯಕ್ತಿತ್ವದ ವೈಶಿಷ್ಟ್ಯತೆಯನ್ನು ಈ ಮಹಾಪ್ರಬಂಧದಲ್ಲಿ ತೌಲನಿಕವಾಗಿ ಅಧ್ಯಯನಿಸಲಾಗಿದೆ. ಜೈನ ಆಗಮಿಕ ಸಾಹಿತ್ಯ ಹಾಗೂ ಹೊಸಗನ್ನಡ ಸಾಹಿತ್ಯವನ್ನು ಮಹಾ ಪ್ರಬಂಧದ ಸಾಹಿತ್ಯಕ್ಕೆ ಬಳಸಿಕೊಂಡಿರುವುದು ಈ ಮಹಾಪ್ರಬಂಧದ ಹೆಚ್ಚುಗಾರಿಕೆಯಾಗಿದೆ.

**ಶಿ. ಶಿ. ಬಸವನಾಳರ ಜೀವನ ಸಾಧನೆ :**

ಬಿಜಾಪುರದ ಮಹಿಳಾ ವಿಶ್ವವಿದ್ಯಾಲಯದ ಮೌಲ್ಯಮಾಪನ ಕುಲಸಚಿವರಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ. ಮಹೇಶ ಚಿಂತಾಮಣಿಯವರ ಪಿಎಚ್.ಡಿ. ಮಹಾಪ್ರಬಂಧವಿದು. ಬಸವನಾಳರ ಬದುಕಿನಷ್ಟೇ ಬೆಲೆಯುಳ್ಳದ್ದು, ಅವರು ಮಾಡಿದ ಸಾಧನೆ ಈ ಸಾಧನೆ ಅನಂತ ಮುಖವಾಗಿದೆ. ಇವರ ಪರುಷ ವ್ಯಕ್ತಿತ್ವದ ಸ್ಪರ್ಶದಿಂದ ಕೈಗೆತ್ತಿಕೊಂಡ ಪ್ರತಿಯೊಂದು ಕ್ಷೇತ್ರವು ಘನತೆ ಗೌರವಗಳನ್ನು ಪಡೆದುಕೊಂಡಿದ್ದು, ಇವುಗಳಲ್ಲಿ ಶಿಕ್ಷಣವೂ ಒಂದಾಗಿದೆ. ಬಸವಳಾನರು ಅಂದಿನ ಕಾಲದಲ್ಲಿ

ಯೋಜಿಸಿಕೊಂಡಿದ್ದ, ಮಾಡಿದ ಶಿಕ್ಷಣ ಪ್ರಸಾರದ ಚಟುವಟಿಕೆಗಳು ವೈವಿಧ್ಯಮಯವಾಗಿವೆ. ಶಿಕ್ಷಣ ಸಂಸ್ಥೆಗಳ ಸ್ಥಾಪಕರಾಗಿ, ಶಿಕ್ಷಕರಾಗಿ, ಶಿಕ್ಷಣ ತಜ್ಞರಾಗಿ, ಶಿಕ್ಷಣ ಪ್ರೇಮಿಗಳಾಗಿ ಇವರು ಸಲ್ಲಿಸಿದ ಅನುಪಮ ಸೇವೆಯನ್ನೂ, ಸಾಧಿಸಿದ ಸಾಧನೆಗಳನ್ನು ಈ ಮಹಾಪ್ರಬಂಧದಲ್ಲಿ ಸಮರ್ಪಕವಾಗಿ ಸಾದರಪಡಿಲಾಗಿದೆ. ಬಸವನಾಳರ ಜನನ, ಬಾಲ್ಯ, ಶಿಕ್ಷಣ, ವೃತ್ತಿ, ಸಾಹಿತ್ಯ ಸಾಧನೆ. ಶೈಕ್ಷಣಿಕ ಸೇವೆ, ಕರ್ನಾಟಕ ಲಿಂಗಾಯತ ಅಭಿವೃದ್ಧಿ ಸಂಸ್ಥೆಯಲ್ಲಿ ಸಲ್ಲಿಸಿದ ಸೇವೆ, ಗ್ರಂಥ ಸಂಪಾದನೆ, ಪುಸ್ತಕ ಪ್ರಕಟಣೆ ಮತ್ತು ಅವುಗಳ ಪ್ರಸಾರದಲ್ಲಿ ನಿರ್ವಹಿಸಿದ ಕಾರ್ಯವನ್ನು ಈ ಗ್ರಂಥ'ವು ಅನಾವರಣಗೊಳಿಸುತ್ತದೆ. ಉತ್ತರ ಕರ್ನಾಟಕದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾದ ಕೆ. ಎಲ್.ಇ. ಸಂಸ್ಥೆಯ ಸಂಸ್ಥಾಪಕರಾದ ಸಪ್ತರ್ಷಿಗಳಲ್ಲಿ ಒಬ್ಬರಾದ ಶಿ.ಶಿ. ಬಸವನಾಳರ ಶೈಕ್ಷಣಿಕ ಸೇವೆಯನ್ನು ಸಮಾಜದ ಕಾಳಜಿಯನ್ನು ಇದರಲ್ಲಿ ಚಿತ್ರಿಸಲಾಗಿದೆ. ವ್ಯಕ್ತಿಯ ಜೀವನ ಮತ್ತು ಸಾಧನೆ ಕುರಿತಾಗಿ ಮೂಡಿಬಂದ ವ್ಯಕ್ತಿಗತ ಪ್ರಬಂಧಗಳಲ್ಲಿದು ಗಮನಾರ್ಹವಾಗಿದೆ.

**ಸೋದೆ ಅರಸು ಮನೆತನ ಒಂದು ಅಧ್ಯಯನ :**

ಬದಾಮಿ ಪದವಿ ಕಾಲೇಜಿನ ಪ್ರಾಧ್ಯಾಪಕರಾದ ಎಂ.ಜಿ. ವಾರಿಯರ ಪಿಎಚ್.ಡಿ. ಮಹಾಪ್ರಬಂಧವಿದು. ಸೋದೆ ಅರಸು ಮನೆತನಗಳು ವಿಜಯನಗರ ಅರಸು ಮನೆತನಗಳಿಗೆ ಅಧೀನರಾಗಿಯೂ ಆಮೇಲೆ ಸ್ವತಂತ್ರರಾಗಿಯೂ ರಾಜ್ಯಭಾರ ನಡೆಸಿದ ಪ್ರಾಚೀನ ಕರ್ನಾಟಕದ ವೀರಶೈವ ಅರಸು ಮನೆತನಗಳಲ್ಲಿ ಒಂದಾಗಿದೆ. ೧೫ನೆಯ ಶತಮಾನದ ಆರಂಭದಲ್ಲಿ ಉದಯಗೊಂಡ ಈ ಅರಸು ಮನೆತನ ಸೋದೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿತು. ಈ ಅರಸು ಮನೆತನದ ದೊರೆಗಳು ನಾಯಕ, ನಾಡಪ್ರಭು, ಒಡೆಯ, ಮಹಿಪಾಲ, ಮಹಾಪ್ರಭು, ಭೂಪಾಲ ಮತ್ತು ರಾಯ ಹೆಸರಿನಿಂದ ಪ್ರಸಿದ್ಧರಾಗಿದ್ದರು. ೧೭೬೦ರ ಸುಮಾರಿಗೆ ಈ ಅರಸು ಮನೆತನ ಪತನಗೊಂಡಿತು. ಪಶ್ಚಿಮ ಕರ್ನಾಟಕದ ಸ್ವಾದಿಯಲ್ಲಿ ಸುಮಾರ ೩೫೦ ವರ್ಷಗಳ ಕಾಲ ರಾಜ್ಯಭಾರ ಮಾಡಿದ ಸೋದೆ ಅರಸು ಮನೆತನ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ಹಾಗೂ ಶಿಲ್ಪಸಂಗೀತ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಅಪಾರವಾಗಿದೆ. ಇವೆಲ್ಲಾ ಕ್ಷೇತ್ರಗಳ ಕುರಿತಾಗಿ ಈ ಮಹಾಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಸೋದೆ ಅರಸು ಮನೆತನ ಕೊಡುಗೆಯನ್ನು ಸಮಾರೋಪದಲ್ಲಿ ದಾಖಲಿಸಲಾಗಿದೆ. ಅರಸು ಮನೆತನಕ್ಕೆ ಸಂಬಂಧಿಸಿದ ಡಾ. ಎಂ. ಜಿ. ವಾರಿಯವರ ಈ ಮಹಾ ಪ್ರಬಂಧ ಚಾರಿತ್ರಿಕ ಸಂಶೋಧನೆಗೆ ಮೌಲಿಕ ಕೊಡುಗೆಯಾಗಿದೆ.

**ಸಿರುಮನ ಸಾಂಗತ್ಯಗಳು ಒಂದು ಅಧ್ಯಯನ :**

ಶ್ರೀಮತಿ ಎಸ್. ಎಸ್. ಹೊಸಳ್ಳೇರ ಅವರ ಪಿಎಚ್.ಡಿ. ಮಹಾಪ್ರಬಂಧವಿದು. ಇದು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಆರಂಭಿಕ ಅಧ್ಯಾಯ ಸಂಶೋಧನೆಯ ಶಿಸ್ತಿಗೆ ಅನುಗುಣವಾಗಿದೆ.

ಅನುಕ್ರಮವಾಗಿ ಇದರಲ್ಲಿ ಕರ್ನಾಟಕದ ಪಾಳೆಗಾರರು, ಸಿರುಮನ ಸಾಂಗತ್ಯಗಳ ಸಮೀಕ್ಷೆ, ಸಿರುಮನ ಸಾಂಗತ್ಯಗಳ ತೌಲನಿಕ ಅಧ್ಯಯನ ಸಿರುಮನ ಸಾಂಗತ್ಯಗಳು ಚಾರಿತ್ರಿಕ ಅಧ್ಯಯನ, ಸಿರುಮನ ಸಾಂಗತ್ಯಗಳು ಸಾಹಿತ್ಯಿಕ ಅಧ್ಯಯನ, ಸಿರುಮನ ಸಾಂಗತ್ಯದಲ್ಲಿ ಆಡಳಿತಾತ್ಮಕ ಅಧ್ಯಯನ ಮುಂತಾಗಿ ಅಧ್ಯಾಯಗಳಿವೆ. ಇದು ಸಿರುಮನಾಯಕನ ರಾಜಕೀಯ ವ್ಯಕ್ತಿತ್ವದ ಕುರಿತಾಗಿ ರಚನೆಗೊಂಡ ಸಾಂಗತ್ಯ ಕೃತಿಗಳ ವಿಸ್ತೃತವಾದ ಅಧ್ಯಯನವಾಗಿದೆ. ವಿಜಯನಗರ ಪತನನಾನಂತರ ಕರ್ನಾಟಕದಲ್ಲಿ ತಲೆ ಎತ್ತಿದ ಪಾಳೆಗಾರರು ಅವರ ಐತಿಹಾಸಿಕ ಹಿನ್ನೆಲೆ, ಸಂಸ್ಕೃತಿ, ಬದುಕು, ಜನಾಂಗಿಕ ಜೀವನ ವಿಧಾನ ಇವೆಲ್ಲವುಗಳನ್ನು ಸಾಂಗತ್ಯ ಕೃತಿಯ ಹಿನ್ನೆಲೆಯಲ್ಲಿ ಅಧ್ಯಯನದ ಚೌಕಟ್ಟಿಗೆ ಅಳವಡಿಸಲಾಗಿದೆ.

ಈ ಮಹಾ ಪ್ರಬಂಧದ ಸಿರುಮನ ಸಾಂಗತ್ಯಗಳು ತೌಲನಿಕ ಅಧ್ಯಯನ, ಸಿರುಮನ ಸಾಂಗತ್ಯಗಳು ಚಾರಿತ್ರಿಕ ಅಧ್ಯಯನ ಇತ್ಯಾದಿ ಅಧ್ಯಾಯಗಳು ಮಹತ್ತರವಾದವುಗಳಾಗಿವೆ. ಚಾರಿತ್ರಿಕ ಅಂಶಗಳನ್ನಿಲ್ಲಿ ಆಮೂಲಾಗ್ರವಾಗಿ ದಾಖಲಿಸಲಾಗಿದೆ. ಸಿರುಮನ ಸಾಂಗತ್ಯ ಸಾಹಿತ್ಯಿಕ ಅಧ್ಯಯನದಲ್ಲಿ ವಸ್ತು, ಪಾತ್ರ, ವರ್ಣನೆ, ಶೈಲಿ ಇತ್ಯಾದಿಯಾಗಿ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲಾಗಿದೆ. ಹಾಗೆಯೇ ರಾಜ್ಯಾಡಳಿತದಲ್ಲಿ ಆಡಳಿತ ವಿಭಾಗ, ರಾಜ, ರಾಜನ ಆಸ್ಥಾನ, ರಾಜರ ಕರ್ತವ್ಯ, ರಾಣಿಯ ಪಾತ್ರ, ಮಂತ್ರಿಗಳು ಅಧಿಕಾರಿಗಳು, ನ್ಯಾಯಾಂಗ ವ್ಯವಸ್ಥೆ ಮುಂತಾದವುಗಳನ್ನು ಚರ್ಚಿಸಲಾಗಿದೆ. ಆರ್ಥಿಕ ಅಧ್ಯಯಾದಲ್ಲಿ ಉತ್ಪಾದನೆ, ವ್ಯಾಪಾರ, ತೆರಿಗೆ ಪದ್ಧತಿ, ನಾಣ್ಯ ಪದ್ಧತಿ ಮತ್ತು ಅಳತೆಗಳು ಮೊದಲಾದವುಗಳನ್ನು ಚರ್ಚಿಸಲಾಗಿದೆ. ಸಾಮಾಜಿಕ ಅಧ್ಯಯನದಲ್ಲಿ ಜಾತಿವರ್ಗವ್ಯವಸ್ಥೆ, ಸ್ತ್ರೀ ಸ್ಥಾನಮಾನ, ವೇಶ್ಯಾಪದ್ಧತಿ, ಕಲೆ ವಿದ್ಯಾಭ್ಯಾಸ, ವಾಸ್ತುಶಿಲ್ಪ, ವೇಷ ಭೂಷಣ, ಆಹಾರ ಗ್ರಹಸಾಧನಗಳು, ನಂಬಿಕೆ, ಇತರ ಸಂಪ್ರದಾಯಗಳು ಮನರಂಜನೆ, ಸತಿಪದ್ಧತಿ ಮೊದಲಾದ ಅಂಶಗಳ ವಿವೇಚನೆ ಇದೆ. ಯುದ್ಧ ವ್ಯವಸ್ಥೆಯಲ್ಲಿ ಸೈನ್ಯ ಸಂಘಟನೆ, ಸೇನೆಯ ಇತರ ಪರಿವಾರ, ಯುದ್ಧವಾದ್ಯಗಳು, ರಾಜ ಲಾಂಛನಗಳು, ಆಯುಧಗಳು ಮತ್ತು ಇತರ ಸಾಮಗ್ರಿ ಯುದ್ಧ ಸಿದ್ಧತೆ, ರಣವೀಳ್ಯ ವೀರಪಂಥವಾಡುಗಳು ಯುದ್ಧ ನಿಯಮಗಳು, ಗಾಯಾಳುಗಳ ಚಿಕಿತ್ಸೆ ವೀರರಿಗೆ ಆಶ್ರಯದಾತನಿಂದ ಉಡುಗೊರೆ, ವೀರರ ಆರಾಧನೆ, ಯುದ್ಧ ಹಾಗೂ ಸಂಧಾನ ಮೊದಲಾದ ಅಂಶಗಳನ್ನು ಇದರಲ್ಲಿ ವಿವರಿಸಲಾಗಿದೆ. ಶ್ರೀಮತಿ ಶೈಲಜಾ ಹೊಸಳ್ಳೇರ ಅವರ ಸಿರುಮನ ಸಾಂಗತ್ಯಗಳು ಮಹಾಪ್ರಬಂಧವು ಚಾರಿತ್ರಿಕ ದೃಷ್ಟಿಯಿಂದ ಮಹತ್ವದ ಅಧ್ಯಯನವಾಗಿದೆ. ಡಾ. ಬಿ.ಆರ್.ಹಿರೇಮಠ ಸಮರ್ಥ ಮಾರ್ಗದರ್ಶನಕ್ಕೆ ಇದೊಂದು ಮಾದರಿಯಾಗಿದೆ.

**ಏಕಲವ್ಯನ ಪಾತ್ರ ಒಂದು ಅಧ್ಯಯನ :**

ಇದು ಮಹಾಲಿಂಗಪುರದ ಡಾ. ಅಶೋಕ ನರೋಡೆಯವರ ಪಿಎಚ್.ಡಿ ಪ್ರಬಂಧವಾಗಿದೆ. ಇದರಲ್ಲಿ ಒಟ್ಟು ೬ ಅಧ್ಯಾಯಗಳಿವೆ. ಮೊದಲ ಅಧ್ಯಾಯ ಉದ್ದೇಶ, ಸ್ವರೂಪ, ವ್ಯಾಪ್ತಿಯನ್ನು

ಒಳಗೊಂಡಿದೆ. ಅಧ್ಯಾಯ ಎರಡು ಏಕಲವ್ಯನ ಕಥಾ ಪರಂಪರೆ ಅಧ್ಯಾಯ ಮೂರು ಏಕಲವ್ಯನ ಮೊದಲ ಘಟ್ಟವಾಗಿದೆ. ಇದರಲ್ಲಿ ಏಕಲವ್ಯನ ಬಾಲ್ಯ ಹಸ್ತಿನಾವತಿಗೆ ಏಕಲವ್ಯನ ಆಗಮನ, ದ್ರೋಣಾಚಾರ್ಯರ ಭೇಟಿ. ದ್ರೋಣರಿಂದ ನಿರಾಕರಣೆ, ದ್ರೋಣ ಪ್ರತಿಮೆಯ ಪ್ರತಿಷ್ಠಾಪನೆ. ಬಿಲ್ವಿದ್ಯೆ ಸಂಪಾದನೆ. ಶಬ್ದವೇದಿ ಪ್ರಸಂಗ, ಏಕಲವ್ಯ ಅರ್ಜುನರ ಮುಖಾಮುಖಿ, ಏಕಲವ್ಯನ ಮೊದಲ ಘಟ್ಟದಲ್ಲಿ ಸಮಾವೇಶಗೊಂಡಿವೆ. ಅಧ್ಯಾಯ ನಾಲ್ಕು ಏಕಲವ್ಯನ ಗುರುದಕ್ಷಿಣೆ, ತಾಯಿಯ ಶಾಪ ಹೀಗೆ ಹತ್ತು ಉಪ ಅಧ್ಯಾಯಗಳು ಏಕಲವ್ಯನ ಮೊದಲ ಘಟ್ಟದಲ್ಲಿ ಸಮಾವೇಶಗೊಂಡಿವೆ. ಅಧ್ಯಾಯ ನಾಲ್ಕು ಏಕಲವ್ಯನ ಘಟ್ಟ ಎರಡು ಎಡಗೈ ಪ್ರಾವೀಣ್ಯತೆಯಾಗಿದೆ. ಇದರಲ್ಲಿ ಕಳೆದುಕೊಂಡ ಬಿಲ್ವಿದ್ಯೆಗಾಗಿ ಹುಡುಕಾಟ, ಎಡಗೈ ಪ್ರಾವೀಣ್ಯತೆ, ಕೌರವ ಪಾಂಡವರೊಡನೆ ಮುಖಾಮುಖಿ, ಕುರುಕ್ಷೇತ್ರಯುದ್ಧ ಮತ್ತು ಏಕಲವ್ಯ, ಕುರುಕ್ಷೇತ್ರ ಯುದ್ಧಾನಂತರದ ಏಕಲವ್ಯ ಹೀಗೆ ಐದು ಉಪ ಅಧ್ಯಾಯಗಳು ಈ ನಾಲ್ಕನೇ ಅಧ್ಯಾಯದಲ್ಲಿವೆ. ಅಧ್ಯಾಯ ೫ ಏಕಲವ್ಯನ ಘಟ ಮೂರು ಅವಸಾನ ಪ್ರಸಂಗವಾಗಿದೆ. ಇದರಲ್ಲಿ ಕೃಷ್ಣ ಏಕಲವ್ಯರ ಭೇಟಿ, ಕೃಷ್ಣ ಏಕಲವ್ಯನಿಗೆ ಇರಿದಿದ್ದು, ಏಕಲವ್ಯ ಪ್ರಾಣಬಿಟ್ಟ ಪ್ರಸಂಗ, ಏಕಲವ್ಯನ ತಾಯಿಯ ಕೊಲೆ, ಏಕಲವ್ಯ ಸುತ ಕೇತು ಮಂತನಿಂದ ಕೃಷ್ಣ ಸಂಹಾರ, ಇವೈದು ಐದನೆ ಅಧ್ಯಾಯದ ಉಪಅಧ್ಯಾಯಗಳಾಗಿವೆ. ಅಧ್ಯಾಯ ಆರು ಸಮಾರೋಪವಾಗಿದೆ. ಗುರುದಕ್ಷಿಣೆಗೆ ಬಲಿಯಾಗಿ ಬಲಗೈ ಹೆಬ್ಬೆರಳನ್ನು ಕಳೆದುಕೊಂಡ ಕಥೆ ಚಿರಪರಿಚಿತ ಆದರೆ. ಈ ಮಹಾ ಪ್ರಬಂಧದಲ್ಲಿ ಏಕಲವ್ಯನ ಉತ್ತರಾರ್ಧ ಬದುಕಿನ ಚಿತ್ರಣ ರೋಚಕವಾಗಿದೆ. ವಾಮಾಂಗುಷ್ಟ ಧನುರ್ಧಾರಿಯಾಗಿ ಸವ್ಯಸಾಚಿ ವ್ಯಕ್ತಿತ್ವ ಪಡೆದ ಏಕಲವ್ಯನು ಅಪ್ರತಿಮ ಬಿಲ್ಲುಗಾರಿಕೆ ಕೌರವ ಪಾಂಡವ ಮುಖಾಮುಖಿ ಕುರುಕ್ಷೇತ್ರ ಯುದ್ಧಾನಂತರ ಏಕಲವ್ಯ. ಕೃಷ್ಣನ ಕಪಟತನಕ್ಕೆ ಬಲಿಯಾದ ದುರಂತ ಈ ಮಹಾಪ್ರಬಂಧದ ಹೊಸ ಶೋಧನೆಗಳಾಗಿವೆ. ಯುಗಾವತಾರಿ ಎನಿಸಿದ ಕೃಷ್ಣ ಪರಮಾತ್ಮ ಏಕಲವ್ಯನ ಮಗನಿಂದ ಸಂಹಾರಗೊಂಡ ಸಂಗತಿ ಹೊಚ್ಚ ಹೊಸದಾಗಿ ಈ ಪ್ರಬಂಧದ ಮೂಲಕ ಪ್ರಥಮ ಬಾರಿಗೆ ಬೆಳಕು ಕಂಡಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಚಾರಿತ್ರಿಕ, ಸಾಸ್ಕೃತಿಕ, ತೌಲನಿಕ ವಿಮರ್ಶಾತ್ಮಕ ಹಾಗೂ ಸಂಶೋಧನಾತ್ಮಕ ಅಧ್ಯಯನ ನಡೆಸಿರುವುದು ಅತ್ಯಂತ ಮಹತ್ವಪೂರ್ಣವೆನಿಸಿದೆ. ಆದುದರಿಂದ ಪ್ರಸ್ತುತ ಮಹಾ ಪ್ರಬಂಧಕ್ಕೆ ಚಾರಿತ್ರಿಕ ಸಾಂಸ್ಕೃತಿಕ ವಿಮರ್ಶಾತ್ಮಕ ಹಾಗೂ ತೌಲನಿಕ ವಿವೇಚನೆ ವೈಶಿಷ್ಟ್ಯವೂ ಸಂಪ್ರಾಪ್ತವಾಗಿದೆ. ಈ ಅಧ್ಯಯನದ ಮೂಲಕ ಡಾ. ನರೋಡೆಯವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹೊಸ ಆಯಾಮವನ್ನು ನೀಡಿದಂತಾಗಿದೆ."[೭] ಎಂಬ ಮಾರ್ಗದರ್ಶಕರಾದ ಡಾ. ಬಿ. ಆರ್. ಹಿರೇಮಠ ಅವರ ಮಾತುಗಳು ಪ್ರಸ್ತುತ ಮಹಾ ಪ್ರಬಂಧದ ಅಂತಃಸತ್ವಕ್ಕೆ ಸಾಕ್ಷಿಯಾಗಿವೆ.

**ಪ್ರಾಚೀನ ಕನ್ನಡ ಭಗವದ್ಗೀತಾ ಸಾಹಿತ್ಯ :**

ಶ್ರೀಮತಿ ಎಸ್. ದಿಕ್ಷೀತ ಅವರ ಪಿಎಚ್.ಡಿ ಮಹಾ ಪ್ರಬಂಧವಾಗಿದೆ. ಮೊದಲ ಅಧ್ಯಾಯ ಪರಂಪರಾಗತವಾಗಿದ್ದು ಅಧ್ಯಯನದ ಉದ್ದೇಶ ವ್ಯಾಪ್ತಿಯನ್ನು ಒಳಗೊಂಡಿದೆ. ಎರಡನೆಯ ಅಧ್ಯಾಯ

ಭದವದ್ಗೀತೆಯ ಹಿನ್ನೆಲೆ, ಮಹಿಮೆ, ಪರಂಪರೆಯಾಗಿದೆ. ಇದರಲ್ಲಿ ಪಂಪ, ಕುಮಾರವ್ಯಾಸ, ಪರಮದೇವ ಇವರು ಚಿತ್ರಿಸಿದ ಭಾರತದೊಳಗಿರುವ ಭಗವದ್ಗೀತೆಯ ಚರ್ಚೆ ಇದೆ. ಅಧ್ಯಾಯ ನಾಲ್ಕು ಕನ್ನಡ ಆಧ್ಯಾತ್ಮಿಕ ಕೃತಿಗಳಲ್ಲಿ ಭಗವದ್ಗೀತೆ ಇದರಲ್ಲಿ ಸ್ವತಂತ್ರ ಆಧ್ಯಾತ್ಮಿಕ ಕೃತಿಗಳಲ್ಲಿ ಭಗವದ್ಗೀತೆ, ವೀರಶೈವ, ವಚನ, ದಾಸ ಸಾಹಿತ್ಯದಲ್ಲಿ ಭಗವದ್ಗೀತೆಯ ಪ್ರಭಾವ, ಮಹಾಲಿಂಗರಂಗರ ಅನುಭವಾಮೃತದಲ್ಲಿ ಭಗವದ್ಗೀತೆ, ಚಿದಾನಂದದೂತರ ಜ್ಞಾನ ಸಿಂಧುವಿನಲ್ಲಿ ಭಗವದ್ಗೀತೆ ಮುಂತಾದವುಗಳು ನಾಲ್ಕನೇ ಅಧ್ಯಾಯದಲ್ಲಿವೆ. ಅಧ್ಯಾಯ ಐದರಲ್ಲಿ ಕನ್ನಡ ಭಗವದ್ಗೀತಾ ಕೃತಿಗಳ ಪ್ರತ್ಯಕ್ಷ ಅವತರಣ ಇದರಲ್ಲಿ ನಾಗರಸಕೃತಿ, ಹರಿದಾಸಕೃತಿ, ನೈರಕ್ಷರ ಸುರುಕ್ಷಿತ ಕೃತಿ ಇವುಗಳ ಜಿಜ್ಞಾಸೆ ಇದೆ. ಅಧ್ಯಾಯ ಆರು ಪ್ರಾಚೀನ ಕನ್ನಡ ಭಗವದ್ಗೀತಾ ಟೀಕಾ ಸಾಹಿತ್ಯದ ವಿವರಣೆ ಇದೆ. ಅಧ್ಯಾಯ ಏಳು ಉಪಸಂಹಾರವಾಗಿದೆ. ಈ ಮಹಾಪ್ರಬಂಧದ ಒಟ್ಟು ಅಧ್ಯಾಯಗಳ ಫಲಿತಾಂಶವೇ ಸಮಾರೋಪವಾಗಿ ರೂಪಗೊಂಡು ಶ್ರೀಮತಿ ಸುನಿತಾ ಆರ್.ದಿಕ್ಷೀತ್ ಅವರ ಪ್ರಾಚೀನ ಕನ್ನಡ ಭಗವದ್ಗೀತಾ ಸಾಹಿತ್ಯವು ಸಂಶೋಧನಾ ಸಾಹಿತ್ಯಕ್ಕೆ ಮೌಲಿಕ ಕೊಡುಗೆಯಾಗಿದೆ.

**ಯುದ್ಧೋತ್ತರ ಮಹಾಭಾರತ ಕಾವ್ಯಗಳು : ಒಂದು ಅಧ್ಯಯನ :**

ಇದು ಶ್ರೀಮತಿ ಪಿ.ಎ. ಹೊಸಟ್ಟಿಯವರ ಪಿಎಚ್.ಡಿ. ಮಹಾ ಪ್ರಬಂಧವಾಗಿದೆ. ಹಳಗನ್ನಡ ಕಾವ್ಯಗಳನ್ನು ಅನುಲಕ್ಷಿಸಿ ಕೈಗೊಂಡ ಸಂಶೋಧನೆಯು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯವು ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿಯನ್ನು ಒಳಗೊಂಡಿದೆ. ಎರಡನೆಯ ಅಧ್ಯಾಯವು ಯುದ್ಧೋತ್ತರ ಮಹಾಭಾರತ ಕಾವ್ಯಗಳ ಕಥಾಸರಣಿಯಿದೆ. ಮೂರನೆಯ ಅಧ್ಯಾಯವು ಯುದ್ಧೋತ್ತರ ಮಹಾಭಾರತ ಕವಿಗಳಾದ ತಿಮ್ಮಣ್ಣ, ಪರಮದೇವ, ಲಕ್ಷ್ಮೀಶ, ಹೆಳವನಕಟ್ಟೆ ಗಿರಿಯಮ್ಮ, ಶ್ರೀನಿವಾಸ ಮುಂತಾದ ಕವಿಗಳ ಕವಿ-ಕಾವ್ಯದ ಪರಿಚಯವಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕವಿಗಳ ಕವಿ-ಕಾವ್ಯದ ಪರಿಚಯವಿದೆ. ನಾಲ್ಕನೆಯ ಅಧ್ಯಾಯದಲ್ಲಿ ತಿಮ್ಮಣ್ಣ ಕವಿಯ ಭಾರತ, ಪರಮದೇವನ ತುರಂಗ ಭಾರತ, ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತ, ಹೆಳವನ ಕಟ್ಟೆ ಗಿರಿಯಮ್ಮನ ಮಹಾಭಾರತ, ಶ್ರೀನಿವಾಸ ಕವಿಯ ಸೂತ್ರಭಾರತ (ಸ್ತ್ರೀ ಪರ್ವ) ಮುಂತಾದ ಕಾವ್ಯಗಳ ವಿಸ್ತೃತವಾದ ಅಧ್ಯಯನವಿದೆ. ಇದರಲ್ಲಿ ಪ್ರತಿಯೊಂದು ಕಾವ್ಯದ ಪ್ರತ್ಯೇಕ ಅಧ್ಯಯನವಿದ್ದು, ಕೊನೆಯಲ್ಲಿ ಪರಸ್ಪರ ತೌಲನಿಕವಾಗಿ ಹೋಲಿಸಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಯುದ್ಧ ಪೂರ್ವ ಕಾವ್ಯಗಳಲ್ಲಿ ಬಂದಿರುವ ಯುದ್ಧೋತ್ತರ ಭಾರತದ ವಿವರಣೆಯಿದೆ. ಪಂಪ -ರನ್ನ ಕುಮಾರವ್ಯಾಸ, ಸಾಳ್ವ, ಚಾಯಣರ ಕಾವ್ಯಗಳನ್ನು ಚರ್ಚಿಸಲಾಗಿದೆ. ಜೊತೆಗೆ ಕೃಷ್ಣನ ಕಥೆ, ಸೀತಾ ಪರಿತ್ಯಾಗದಂತಹ ಉಪಾಖ್ಯಾನಗಳನ್ನು ವಿವರಿಸಲಾಗಿದೆ. ಆರನೆಯ ಅಧ್ಯಾಯವು ಸಮಾರೋಪವಾಗಿದೆ. ಹಳಗನ್ನಡ ಕಾವ್ಯಗಳನ್ನು ಹೊಸಟ್ಟಿಯವರು ಗಂಭೀರವಾಗಿ ಅಧ್ಯಯನಿಸಿದ್ದಾರೆ.

**ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಅಂಬೇಡ್ಕರರ ಪ್ರಭಾವ (ಕಾವ್ಯವನ್ನು ಅನುಲಕ್ಷಿಸಿ) :**

ಇದು ಕು. ಅನಸೂಯಾ ಕಾಂಬಳೆ ಪಿಎಚ್.ಡಿ ಮಹಾಪ್ರಬಂಧವಾಗಿದೆ. ಇದರಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ. ಮೊದಲ ಅಧ್ಯಾಯ ಪರಂಪರಾಗತವಾಗಿದೆ. ಎರಡನೆಯ ಅಧ್ಯಾಯ ಅಂಬೇಡ್ಕರರ ಸಮಕಾಲೀನ ಭಾರತೀಯ ಪ್ರಮುಖ ಸಾಮಾಜಿಕ ಚಿಂತಕರು. ಇದರಲ್ಲಿ ಜ್ಯೋತಿಬಾ ಫುಲೆ, ನಾರಾಯಣ ಗುರು, ಮಹಾತ್ಮಾ ಗಾಂಧೀಜಿ, ಬಿ. ಶಾಮಸುಂದರ, ಡಾ. ರಾಮಮನೋಹರ ಲೋಹಿಯಾ ಮುಂತಾದವರ ಚಿಂತನೆಗಳು ಹರಳುಗಟ್ಟಿವೆ. ಅಧ್ಯಾಯ ಮೂರು ಅಂಬೇಡ್ಕರ ವಾದವಾಗಿದೆ. ಅಧ್ಯಾಯ ನಾಲ್ಕು ಅಬೇಂಡ್ಕರ ವಾದ ಕನ್ನಡಕ್ಕೆ ಬಂದ ಹಿನ್ನೆಲೆ ಅಧ್ಯಾಯ ಐದು ಕನ್ನಡ ಸಾಹಿತ್ಯದ ಮೇಲೆ ಅಂಬೇಡ್ಕರರ ಪ್ರಭಾವ, ಅಧ್ಯಾಯ ಆರು ಕನ್ನಡ ಕವಿಗಳು ಕಂಡ ಅಂಬೇಡ್ಕರರ ಪ್ರಭಾವ. ಅಧ್ಯಾಯ ಏಳು ಕನ್ನಡ ಕಾವ್ಯದ ಮೇಲೆ ಅಂಬೇಡ್ಕರರ ಪ್ರಭಾವ. ಅಧ್ಯಾಯ ಎಂಟು ಸಮಾರೋಪವಾಗಿದೆ. ಆಧುನಿಕ ಕನ್ನಡ ಸಾಹಿತ್ಯ ಅಂಬೇಡ್ಕರರ ವಾದವನ್ನು ತನ್ನ ಒಡಲಲ್ಲಿ ಹೇಗೆ ಅರಗಿಸಿಕೊಂಡಿದೆ ಎಂಬುದು ತೀರಾ ಕುತೂಹಲ ಮೂಡಿಸುವ ಸಂಗತಿಯಾಗಿದೆ. ಡಾ.ಅನಸೂಯಾ ಕಾಂಬಳೆಯವರು ಇದನ್ನು ಸೊಗಸಾಗಿ ಅನಾವರಣಗೊಳಿಸಿದ್ದಾರೆ.

**ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳು : ಒಂದು ಅಧ್ಯಯನ :**

ಶ್ರೀ ವಾಯ್. ಎಮ್. ಯಾಕೊಳ್ಳಿ ಇವರ ಮಹಾಪ್ರಬಂಧವಾಗಿದೆ. ಇದು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯ ಪರಂಪರಾಗತವಾಗಿದೆ. ಎರಡನೆಯ ಅಧ್ಯಾಯ ಸಂಕಲನ ಸಾಹಿತ್ಯವಾಗಿದೆ. ಇಲ್ಲಿ ಸಂಕಲನ ಸಾಹಿತ್ಯವನ್ನು ಪರಿಚಯಿಸಲಾಗಿದೆ. ಮೂರನೆಯ ಅಧ್ಯಾಯ ಪ್ರಾಚೀನ ಕನ್ನಡ ಸಂಕಲನಕಾರರು, ಇದರಲ್ಲಿ ಮಲ್ಲಿಕಾರ್ಜುನ, ಅಭಿನವವಾದಿ ವಿದ್ಯಾನಂದ ಹಾಗೂ ಮಲ್ಲ ಕವಿಯ ಕಾಲ, ದೇಶ, ಮತ, ಆಶ್ರಯ ಮುಂತಾದವುಗಳನ್ನು ಚರ್ಚಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳನ್ನು ಆಶ್ವಾಸಗಳಿಗನುಗುಣವಾಗಿ ಅಧ್ಯಯನಿಸಲಾಗಿದೆ. ಅಧ್ಯಾಯ ಐದು ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳ ತೌಲನಿಕ ಸಮೀಕ್ಷೆಯಾಗಿದೆ. ಇದರಲ್ಲಿ ಮೂರು ಕಾವ್ಯ ಸಂಕಲನಗಳನ್ನು ಪರಸ್ಪರ ತೌಲನಿಕವಾಗಿ ಅಧ್ಯಯನ ಮಾಡಿ ಮೂರರ ಸ್ವರೂಪ ಒಂದಕ್ಕಿಂತ ಇನ್ನೊಂದು ಹೇಗೆ ವಿಭಿನ್ನವಾಗಿದೆ ಎಂಬುದನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ. ಅಧ್ಯಾಯ ಆರು ಸಮಾರೋಪವಾಗಿದೆ. ಇದು ಪ್ರಾಚೀನ ಸಾಹಿತ್ಯವನ್ನು ಕುರಿತು ಬರೆದಿರುವ ಮಹತ್ವದ ಮಹಾಪ್ರಬಂಧವಾಗಿದೆ. ಕನ್ನಡ ಸಾಹಿತ್ಯದಲ್ಲಿ ಸಂಕಲನಗಳ ಸ್ಥಾನ ಹಿರಿದಾದುದು. ಮಹಾಪ್ರಬಂಧದಲ್ಲಿ "ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಸ್ತುತ ಸಂಕಲನಗಳ ಮಹತ್ವ ಎಷ್ಟು ಹಿರಿದಾದುದೊ ಅಷ್ಟೇ ಹಿರಿದಾದುದು ಅವನ್ನು ಆಳವಾದ ಶ್ರದ್ಧೆ ಶ್ರಮಗಳಿಂದ ಪರಿಚಯಿಸಿಕೊಟ್ಟಿರುವ ಮಹಾಪ್ರಬಂಧವಾಗಿದೆ"[2] ಎಂದು ಮುನ್ನುಡಿಯಲ್ಲಿ ಹೇಳಿರುವ ಶ್ರೀರಾಮ ಇಟ್ಟಣ್ಣವರ ಮಾತುಗಳು ಡಾ. ವಾಯ್.ಎಮ್. ಯಾಕೊಳ್ಳಿಯವರ ಮಹಾಪ್ರಬಂಧದ ಮಹತ್ವವನ್ನು ಸಾರುತ್ತವೆ.

**ವಚನ ಸಾಹಿತ್ಯದ ಪ್ರಕಟಣೆ ಮತ್ತು ಪರಂಪರೆ :**

ಇದು ಬಿ.ಎಸ್. ಬಿರಾದಾರ ಅವರ ಪಿಎಚ್.ಡಿ ಮಹಾಪ್ರಬಂಧವಾಗಿದೆ. ಇದರಲ್ಲಿ ಒಟ್ಟು ೯ ಅಧ್ಯಾಯಗಳಿವೆ. ಅಧ್ಯಾಯ ಒಂದು ಅಧ್ಯಯನದ ಅಗತ್ಯ, ಸ್ವರೂಪ ಹಾಗೂ ವಿಧಾನ. ಮುಂದೆ ಅನುಕ್ರಮವಾಗಿ ವಚನಸಾಹಿತ್ಯದ ಪ್ರಕಟಣೆಯ ಪ್ರಥಮ ಘಟ್ಟ ವಚನ ಸಾಹಿತ್ಯದ ಪ್ರಕಟಣೆಯ ದ್ವಿತೀಯ ಘಟ್ಟ ವಚನ ಸಾಹಿತ್ಯದ ಪ್ರಕಟಣೆಯ ತೃತೀಯ ಘಟ್ಟ ಇವು ಮೊದಲ ನಾಲ್ಕು ಅಧ್ಯಾಯಗಳಾಗಿವೆ.

ಮುಂದೆ ಅನುಕ್ರಮವಾಗಿ ವಚನಸಾಹಿತ್ಯದ ಪ್ರಕಟಣೆಯ ಪ್ರಥಮ ಘಟ್ಟ - ವಚನ ಸಾಹಿತ್ಯದ ಪ್ರಕಟಣೆಯ ದ್ವಿತೀಯ ಘಟ್ಟ - ವಚನ ಸಾಹಿತ್ಯದ ಪ್ರಕಟಣೆಯ ತೃತೀಯ ಘಟ್ಟ- ಇವು ಮೊದಲ ನಾಲ್ಕು ಅಧ್ಯಾಯಗಳಾಗಿವೆ. ಅಧ್ಯಾಯ ಐದು ವಚನ ಸಾಹಿತ್ಯದ ಅಧ್ಯಯನ, ಪರಂಪರೆ, ಧಾರ್ಮಿಕ, ತಾತ್ವಿಕ ನೆಲೆ. ಅಧ್ಯಾಯ ಆರು ವಚನ ಸಾಹಿತ್ಯದ ಅಧ್ಯಯನ ಪರಂಪರೆ, ಸಾಮಾಜಿಕ ನೆಲೆ, ಅಧ್ಯಾಯ ಏಳು - ವಚನ ಸಾಹಿತ್ಯ ಅಧ್ಯಯನ ಪರಂಪರೆಯ ಸಾಹಿತ್ಯಿಕ ನೆಲೆ, ಅಧ್ಯಾಯ ಎಂಟು ವಚನ ಸಾಹಿತ್ಯ ಅಧ್ಯಯನದ ಪರಂಪರೆಯ ಇತರ ನೆಲೆ, ಅಧ್ಯಾಯ ಒಂಭತ್ತು ಸಮಾರೋಪವಾಗಿದೆ. ಹೀಗೆ ಒಟ್ಟು ಒಂಬತ್ತು ಅಧ್ಯಾಯಗಳಲ್ಲಿ ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸವನ್ನು ಕಟ್ಟಿಕೊಡಲಾಗಿದೆ. ವಚನ ಸಾಹಿತ್ಯ ಮತ್ತು ಅಧ್ಯಯನ ಪರಂಪರೆಯ ವಿವಿಧ ಆಯಾಮಗಳನ್ನು ಇದರಲ್ಲಿ ಪರಿಚಯಿಸಲಾಗಿದೆ. ಸಮಾರೋಪದಲ್ಲಿ ಜನಮುಖಿ, ಜೀವನಮುಖಿ, ಸಮಾಜಮುಖಿಯಾದ ಸಾಹಿತ್ಯವನ್ನು ಜನತೆಗೆ ತಲುಪಿಸಿದ ಅಧ್ಯಯನ ಪರಂಪರೆಯನ್ನು ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ.

**ಉತ್ತರ ಕರ್ನಾಟಕದ ಜಾನಪದ ಚಿತ್ರಕಲೆ :**

ಇದು ಡಾ. ಎ.ಸಿ. ಪಾಟೀಲರ ಪಿಎಚ್.ಡಿ. ಪ್ರಬಂಧವಾಗಿದೆ. ಇದರಲ್ಲಿ ಕರ್ನಾಟಕದ ಜಾನಪದ ಕಲೆಗಳು, ಉತ್ತರ ಕರ್ನಾಟಕದ ಜಾನಪದ ಕಲೆಗಳು, ಅದರಲ್ಲಿ ಉತ್ತರ ಕರ್ನಾಟಕದ ಚಿತ್ರಕಲೆ, ಶಾಸನಗಳಲ್ಲಿ ಜಾನಪದ ಚಿತ್ರಕಲೆ, ಜಾನಪದ ಮೂಲಕ ಹಸ್ತಪ್ರತಿ ಚಿತ್ರಕಲೆ, ಹಚ್ಚೆ ಚಿತ್ರಕಲೆ, ಕಸೂತಿ ಚಿತ್ರ ಕಲೆ, ಕೌದಿ ಚಿತ್ರಕಲೆ, ರಂಗೋಲಿ ಚಿತ್ರಕಲೆ, ಕಿನ್ನಾಳ ಚಿತ್ರಕಲೆ, ಮುಂತಾದ ವಿಷಯಗಳನ್ನೊಳಗೊಂಡ ಅಧ್ಯಾಯಗಳಿವೆ.

ಜನಪದ ಕಲೆಗಳು ಜನಸಾಮಾನ್ಯರ ಓದು, ಬರಹದ ಬಾರದ ಹಳ್ಳಿಯ ಜನರಿಂದ ಮೂಡಿಬಂದಂತವುಗಳು. ಜನಪದ ಕಲೆಗಳು ಸರಳ ಹಾಗೂ ಸಹಜವಾಗಿವೆ. ಕಲಿತವನ್ನು ಕಲಿಯದವರನ್ನು ಇವು ಆಕರ್ಷಿಸುತ್ತವೆ. ಜನಪದ ಕಲೆಗಳು ನಮ್ಮ ಜನಪದರಿಗೆ ಮನರಂಜನೆಯ ಸಾಧನೆಗಳಾಗಿವೆ. ಜನಪದ ಕಲೆಗಳು ಆಯಾ ಜನಾಂಗದ ಧಾರ್ಮಿಕ ಸಂಕೇತವೂ ಆಗಿವೆ. ಜಾನಪದ ಕಲೆಗಳಲ್ಲಿ ಕುಣಿತ, ನಾಟಕ ಚಿತ್ರ ಮೊದಲಾದ ಪ್ರಕಾರಗಳಿವೆ. ಇವುಗಳಲ್ಲಿ ಜಾನಪದ ಚಿತ್ರಕಲೆಯೂ ಎಂಬುದನ್ನು ವಿವರಿಸಿದ್ದಾರೆ.

ಕಸೂತಿ ಚಿತ್ರಕಲೆಯ ಹುಟ್ಟು ಬೆಳವಣಿಗೆಯನ್ನು ವಿವರಿಸಿದ್ದು ಉತ್ತರ ಕರ್ನಾಟಕದ ಕಸೂತಿ ಕಲೆಯ ಪ್ರಮುಖ ಪ್ರಕಾರಗಳಾದ ಗಾವಂತಿ (ಗಂಟು ಹೆಣಿಕೆ) ಮಗ್ಗಿ, ನೇಗಿ ಮತ್ತು ಮೆಂತೆ ಮೊದಲಾದವುಗಳನ್ನು ವಿವರಿಸಿ ಕಸೂತಿ ಕಲೆಯ ವೈಶಿಷ್ಟವನ್ನು ನಿರೂಪಿಸಿದ್ದಾರೆ.

ಉತ್ತರ ಕರ್ನಾಟಕದ ಅಪರೂಪದ ಚಿತ್ರಕಲೆಗಳಲ್ಲಿ ಕೌದಿಯೂ ಒಂದು ವಿವಿಧ ಬಣ್ಣದ ಬಟ್ಟೆಯ ತುಂಡುಗಳಿಂದ ತಯಾರಿಸುವ ಹೊದಿಕೆ ಇದು. ಕೌದಿಯ ಪ್ರಕಾರಗಳು, ವೈವಿಧ್ಯಗಳನ್ನು, ವೈಷಿಷ್ಟ್ಯಗಳನ್ನು ವಿವರಿಸಿದ್ದಾರೆ.

ರಂಗೋಲಿಯು ಉತ್ತರ ಕರ್ನಾಟಕದ ವಿಶಿಷ್ಟ ಕಲೆಯಾಗಿದೆ. ದಿನಂಪ್ರತಿ ಬೆಳಗಿನ ಜಾವ ಅಂಗಳದಲ್ಲಿ ಹೆಣ್ಣುಮಕ್ಕಳು ಬಿಡುವ ಚಿತ್ರಕಲೆ ಇದು. ಹಬ್ಬ ಹರಿದಿನಗಳಲ್ಲಿ ಸಾಂದರ್ಭಿಕವಾಗಿ ರೂಪಾಂತರಗೊಳ್ಳುತ್ತ ಹೋಗುತ್ತಿದೆ. ರಂಗೋಲಿಯ ಪ್ರಕಾರಗಳನ್ನು ಹೇಳಿದ್ದಾರೆ.

ಕಿನ್ನಾಳವು ಕೊಪ್ಪಳ ಜಿಲ್ಲೆಯ ಕಿನ್ನಾಳ ಗ್ರಾಮದಿಂದ ಉದಿಸಿ ಬಂದ ಜಾನಪದ ಚಿತ್ರಕ. ಕಿನ್ನಾಳ ಕಲೆಯ ಹುಟ್ಟು ಬೆಳವಣಿಗೆಗೆ ಪ್ರಾದೇಶಿಕ ವೈಶಿಷ್ಟ್ಯತೆಗಳನ್ನು ಇದರಲ್ಲಿ ಚರ್ಚಿಸಿದ್ದಾರೆ.

ಈ ರೀತಿಯಾಗಿ ಉತ್ತರ ಕರ್ನಾಟಕದ ಜಾನಪದ ಚಿತ್ರಕಲೆಯ ಎಲ್ಲಾ ಮಗ್ಗಲುಗಳನ್ನು ಅನಾವರಣಗೊಳಿಸಿದ್ದಾರೆ.

**ಶಿಕಾರಿಪುರ ತಾಲೂಕಿನ ಜಾತ್ರೆಗಳು : ಒಂದು ಅಧ್ಯಯನ :**

ಪ್ರಸ್ತುತ ಮಹಾಪ್ರಬಂಧವನ್ನು ಎಸ್.ಡಿ. ಬಂದಮ್ಮನವರ ಅವರ ರಚನೆಯಾಗಿದೆ. ಸಂಸ್ಕೃತದ 'ಯಾತ್ರೆ'ಯು ಕನ್ನಡದಲ್ಲಿ ತದ್ಭವಗೊಂಡು ಜಾತ್ರೆಯಾಗಿರುತ್ತದೆ. ಜಾತ್ರೆಗಳೆಂದರೆ ಹಳ್ಳಿಗರಿಗೆ ಹಬ್ಬದ ಸಂಭ್ರಮವಾಗಿದೆ. ಚಿಕ್ಕಮಕ್ಕಳಿಂದ ಮೊದಲುಗೊಂಡು ವಯೋವೃದ್ಧರವರೆಗೆ ಎಲ್ಲರೂ ಜಾತ್ರೆಗಳನ್ನು ಇಷ್ಟಪಡುತ್ತಾರೆ. ಜಾತ್ರೆಗಳು ನಮ್ಮ ಸಂಸ್ಕೃತಿಯ ಸಂಕೇತಗಳು, ಪರಂಪರೆಯ ಪ್ರತೀಕಗಳಾಗಿವೆ.

"ಜಾತ್ರೆ ಎಂದರೆ ಯಾವುದೋ ನಿಗದಿತವಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದು. ಯಾವುದೇ ಒಂದು ಜಾತಿಗೆ ಸಂಬಂಧಿಸಿದಂತೆ ಜಾತ್ರೆ ನಡೆಯುತ್ತಿರುವಾಗಲೂ ಎಲ್ಲಾ ವರ್ಗದವರು ಭಾಗವಹಿಸಿ, ಅದು ದೈವವೇ ಎಂದು ಭಾವಿಸುವ ಜನತೆ, ಗ್ರಾಮೀಣರು ಆಚರಿಸುವ ಜಾತ್ರೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಜಾತ್ರೆಗೆ ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಖಗಳಿವೆ. ಹಳೆ ಚರಿತ್ರೆಯನ್ನು ಭಕ್ತರು ಪ್ರತಿ ಜಾತ್ರೆಯಲ್ಲಿ ಅಭಿನಯಿಸಿ ಪುನರಾವರ್ತಿ ಮಾಡುತ್ತಾರೆ"[100] ಎಂಬ ಹಂಪನಾ ಅವರ ಮಾತುಗಳು ಜಾತ್ರೆಯನ್ನು ವ್ಯಾಖ್ಯಾನಿಸುತ್ತವೆ.

ಜಾತ್ರೆ ಪದ ನಿಷ್ಪತ್ತಿ, ಜಾತ್ರೆಯ ಹುಟ್ಟು ಬೆಳವಣಿಗೆ ಕಾಲ ಕಾಲಕ್ಕೆ ಆಗಿರುವ ಮಾರ್ಪಾಡುಗಳು, ದೇವತಾರಾಧನೆ, ಜನಾಂಗದ ಮನೋಭಾವನೆಗಳು, ಜಾತ್ರೆಯ ವಿಧಿ ವಿಧಾನಗಳು, ಆಚರಣೆಯ

ವಿಶೇಷತೆಗಳು ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಕರ್ನಾಟಕದ ಜಾತ್ರೆಗಳು ಶಿವಮೊಗ್ಗದ ಪ್ರಮುಖ ಜಾತ್ರೆಗಳನ್ನು ಸ್ಥೂಲವಾಗಿ ಪರಿಚಯಿಸಿದ ಶ್ರೀಯುತರು ಶಿಕಾರಿಪುರ ತಾಲೂಕಿನ ಜಾತ್ರೆಗಳ ಕುರಿತಾಗಿ ಸೋದಾಹರಣವಾಗಿ ವಿವರಿಸಿದ್ದಾರೆ. ಜಾನಪದ ಜಾತ್ರೆಗಳ ಅಧ್ಯಯನಕ್ಕೆ ಇದೊಂದು ಮಾದರಿಯಾಗಿದೆ. ಸ್ಥಳ ಪುರಾಣಗಳು, ಐತಿಹ್ಯಗಳು ದಂತಕಥೆಗಳನ್ನು ಸಾಂದರ್ಭಿಕವಾಗಿ ಅಳವಡಿಸಿಕೊಂಡಿದ್ದಾರೆ. ಶಿಕಾರಿಪುರ ತಾಲೂಕಿನ ಕ್ಷೇತ್ರಕಾರ್ಯ ಕೈಗೊಂಡು, ಆಯಾ ಜಾತ್ರೆಗಳ ಸಂದರ್ಶನ ಕೈಗೊಂಡು ಸಿದ್ಧಪಡಿಸಿದ ಮಹಾ ಪ್ರಬಂಧವಿದು.

**ಉತ್ತರ ಕರ್ನಾಟಕದ ಹಚ್ಚೆ : ಒಂದು ಅಧ್ಯಯನ :**

ಇದು ಪ್ರೊ. ಎಚ್.ಬಿ. ಹೊಸಮನಿಯವರ ಪಿ.ಎಚ್.ಡಿ. ಮಹಾಪ್ರಬಂಧವಾಗಿದೆ. ಮುತ್ತೈದೆತನದ ಸಂಕೇತವಾಗಿರುವ'ಹಣಚೆ' ಅಥವಾ 'ಹಚ್ಚೆ' ಎಂಬುದು ಒಂದು ಜಾನಪದ ಕಲೆಯಾಗಿದೆ. ನಮ್ಮ ಜಾನಪದ ಜನಾಂಗದಲ್ಲಿ ಇಂದಿಗೂ ಜೀವಂತವಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಹಚ್ಚೆಯ ಕುರಿತಾಗಿ ವಿಸ್ತೃತವಾದ ಅಧ್ಯಯನವಿದೆ. ಹಚ್ಚೆ ಎನ್ನುವ ಪದವು ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆದಿದೆ.' ಇದನ್ನು ಕರ್ನಾಟಕದ ಬೇರೆ ಬೇರೆ ಕಡೆಗೆ ಅಚ್ಚೆ, ಹಂಚೆ, ಹಂಚಿ, ಹಣಚಿ, ಅಣಚಿ, ಅಣಚೆ, ಅಂಚಿ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ ಎಂದು ವಿವರಿಸಿದ್ದಾರೆ. 'ಪಚ್ಚೆ' (ಹಸಿರು) ಎಂಬುದರಿಂದ 'ಹಚ್ಚೆ' ಎಂಬ ಹೆಸರು ಬಂದಿದೆ ಎಂದು ಇದರ ನಿಷ್ಪತ್ತಿಯನ್ನು ವಿವರಿಸಿದ್ದಾರೆ.

ಹಚ್ಚೆಯ ಹುಟ್ಟು ಮತ್ತು ಬೆಳವಣಿಗೆ, ಹಚ್ಚೆ ಹಾಕುವ ಕಸುಬು, ಹಚ್ಚೆ ಹಾಕಲು ಉಪಯೋಗಿಸುವ ಸಾಧನೆ ಸಲಕರಣೆಗಳು, ಬಣ್ಣ ತಯಾರಿಕೆ, ಬಣ್ಣ-ಬಣ್ಣದ ಮಾದರಿಗಳು, ಹಚ್ಚೆ ಹಾಕುವ ಬಗೆ, ಹಚ್ಚೆಯ ಬಗೆಗಿರುವ ನಂಬಿಕೆಗಳು, ಕೆಲವು ವಿಶಿಷ್ಟ ನಂಬಿಕೆಗಳು ದೇಹದ ಭಾಗಗಲು ಹಾಗೂ ಹಚ್ಚೆ ಚಿತ್ರಗಳು, ಕೆಲವು ಜನಾಂಗಗಳ ಹಚ್ಚೆಯ ವಿಶಿಷ್ಟತೆಗಳು, ಹಚ್ಚೆ ಹಾಡುಗಳು, ಹಚ್ಚೆ ಒಗಟುಗಳು ಮುಂತಾದ ಅಂಶಗಳನ್ನು ಚರ್ಚಿಸಿದ್ದಾರೆ. ಇತ್ತೀಚಿನ ಅಕ್ಯುಪಂಕ್ಚರ ಶಸ್ತ್ರ ಚಿಕಿತ್ಸೆ ಇದಾಗಿರಬಹುದೆಂದು ತರ್ಕಿಸಿದ್ದು ಯಥೋಚಿತವಾಗಿದೆ. 'ಹಚ್ಚೆ'ಯಂಥ ಪುಟ್ಟ ವಸ್ತುವನ್ನಿಟ್ಟುಕೊಂಡು ಪಿಎಚ್.ಡಿ. ಮಾರ್ಗದರ್ಶನ ಮಾಡಿದ್ದು ಡಾ.ಬಿ.ಆರ್. ಹಿರೇಮಠ ಅವರ ಸೂಕ್ಷ್ಮ ದೃಷ್ಟಿಗೆ ನಿದರ್ಶನವಾಗಿದೆ.

ಇವು ಮೂರು ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದ ಮಹಾ ಪ್ರಬಂಧಗಳಾಗಿವೆ. ಜಾನಪದವನ್ನು ಕುರಿತು ಸಂಶೋಧನೆಗಳು ಸಮಾಜೋ ಸಾಂಸ್ಕೃತಿಕ ಅಧ್ಯಯನ ಕ್ಷೇತ್ರಕ್ಕೆ ಮಹತ್ವದ ಕೊಡುಗೆಗಳಾಗಿವೆ. ಈ ಮಹಾ ಪ್ರಬಂಧಗಳಲ್ಲಿ ಸ್ವತಂತ್ರ ಚಿಂತನೆ ಹೊಸತನದ ಹುಡುಕಾಟವಿದೆ. ಇಂದಿನ ಜನಜೀವನದಲ್ಲಿ ನಡೆಯುತ್ತಿರುವ ಬದಲಾವಣೆ ಇದರಲ್ಲಿ ಪ್ರಸ್ತಾಪಗೊಂಡಿದೆ. ಜನಪದರ ಜೀವನ ನೆಮ್ಮದಿ ಮುಂತಾದವುಗಳನ್ನು ವಿವರಿಸಲಾಗಿದೆ. ಜಾನಪದರ ಜನಾಂಗಿಕ ಜೀವನ ವಿಧಾನವನ್ನು ಹಲವು ನಿಟ್ಟಿನಿಂದ ಶೋಧಿಸಲಾಗಿದೆ. ಜಾನಪದ ಅಧ್ಯಯನವು ತುಂಬಾ ಶ್ರಮದಾಯಕವಾಗಿದ್ದು ಕ್ಷೇತ್ರ ಕಾರ್ಯವನ್ನು

ಅವಲಂಬಿಸಿರುತ್ತದೆ. ಸಂಶೋಧಕರು ಸಂಗ್ರಹಿಸಿದ ಆಕರ ಸಾಮಗ್ರಿಗಳನ್ನು ರೂಪಿಸಿರುವುದು ಗಮನಾರ್ಹವಾಗಿದೆ. ಈ ಮೂರೂ ಮಹಾಪ್ರಬಂಧಗಳು ಜಾನಪದ ಸಾಹಿತ್ಯಕ್ಕೆ ಉತ್ತಮ ಕೊಡುಗೆಗಳಾಗಿವೆ.

**ಮುಂಡರಗಿ ಶ್ರೀ ಜಗದ್ಗುರು, ಅನ್ನದಾನಿ ಸ್ವಾಮಿಗಳ ಸಮಗ್ರ ಸಾಹಿತ್ಯ :**

ಇದು ವ್ಹಿ.ಜಿ. ಹಿರೇಮಠ ಅವರ ಪಿಎಚ್.ಡಿ. ಮಹಾಪ್ರಬಂಧ ಮುಂಡರಗಿ ಶ್ರೀ ಜಗದ್ಗುರು ಅನ್ನದಾನೀಶ್ವರ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ, ಸಂಘಟನಾತ್ಮಕ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಮೋಘವಾಗಿದೆ. ವ್ಯಕ್ತಿಯಾಗಿದ್ದರೂ ಒಂದು ಮಹಾನ್ ಶಕ್ತಿಯಾಗಿ, ಒಂದು ಸಂಸ್ಥೆಯಾಗಿ, ಒಂದು ತತ್ವವಾಗಿ ಮಾಡಿದ ಕಾರ್ಯ ಅನುಪಮವಾಗಿದೆ. ಮುಂಡರಗಿ ಶ್ರೀಮಠದ ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳಾಗಿ ಅಧಿಕಾರ ಸ್ವೀಕರಿಸಿದುದು, ಪ್ರಸಾದ ನಿಲಯ, ಗ್ರಂಥಾಲಯ, ಪ್ರೌಢಶಾಲೆ, ಪದವಿಪೂರ್ವ ಕಾಲೇಜು, ಪದವಿ ಮಹಾವಿದ್ಯಾಲಯ ಮುಂತಾಗಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ ಸುವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿರುವುದು ಶೈಕ್ಷಣಿಕ ಕ್ಷೇತ್ರದ ಸಾಧನೆಯಾಗಿದೆ. ಶಿವಾನುಭವಗೋಷ್ಠಿ. ಗುರು ವಿರಕ್ತರ ಸಾಮರಸ್ಯ ಉಪನ್ಯಾಸ ಮಾಲೆ, ಧರ್ಮ ಜಾಗೃತಿ ಸಭೆ, ಶಿವಯೋಗ ಮಂದಿರದ ಅಧ್ಯಕ್ಷತೆ, ಹತ್ತು ಹಲವು ವಿಧಾಯಕ ಕಾರ್ಯಗಳು ಧಾರ್ಮಿಕ ಕ್ಷೇತ್ರದ ಚಟುವಟಿಕೆಗಳಾಗಿವೆ.

ಮೈಲಾರ ಬಸವಲಿಂಗ ಶರಣರು, ವೈರಾಗ್ಯ ನಿಧಿ ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿ, ಜಂಗಮ ಪುಂಗವ ಅಲ್ಲಮ ಪ್ರಭುದೇವರ ನೂರೆಂಟು ವಚನಗಳು, ಚಿನ್ಮಯ ಚೇತನ, ಲಿಂಗ ನಾಯಕನ ಹಳ್ಳಿಯ ಶ್ರೀ ಚೆನ್ನವೀರ ಶಿವಯೋಗಿ, ಮೃಡಗಿರಿ ಮಹಾಪುರುಷ, ಮಾನವಧರ್ಮ, ಕಾರಣಿಕ ಪುರುಷ ಹಾನಗಲ್ಲ ಶ್ರೀಗಳು, ಪ್ರಸಾದಿ ಚೆನ್ನಬಸವಣ್ಣನವರು, ನಿಜಗುಣರ ವೀರಶೈವ ಸಿದ್ಧಾಂತ, ವೀರಶೈವ ಧರ್ಮ ಒಂದು ಅಧ್ಯಯನ, ಇಷ್ಟಲಿಂಗಾರ್ಚನೆ ಮತ್ತು ಶ್ರೀ ರುದ್ರ ಮುಂತಾಗಿ ಸುಮಾರು ೫೦ಕ್ಕಿಂತಲೂ ಹೆಚ್ಚಿನ ಗ್ರಂಥ ರಚಿಸಿದ್ದಾರೆ. ಭಾರತಯಾತ್ರೆ ಮತ್ತು ದಕ್ಷಿಣೋತ್ತರ ಭಾರತಯಾತ್ರೆಗಳು. ಪ್ರವಾಸ ಕಥನಗಳಾಗಿವೆ. ಬೆಡಗು, ಬಿನ್ನಾಣ, ಬೆಡಗಿನ ವಚನಗಳ ವಿಶ್ಲೇಷಣೆಯಾಗಿದೆ. ವಚನವಲ್ಲರಿ, ವಚನ ಸಂಪುಟ ಮೃಡಗಿರಿ ವಚನಗಳು ಮುಂತಾದವು ಆಧುನಿಕ ವಚನ ಸಂಕಲನಗಳಾಗಿವೆ. ಶ್ರೀಯುತರ ಸಂಪಾದನಾ ಸಾಹಿತ್ಯವು ವಿಪುಲವು ವೈವಿಧ್ಯಪೂರ್ವವೂ ಆಗಿದೆ. ಇಂತಹ ಪೂಜ್ಯ ಶ್ರೀಗಳ ಸಮಗ್ರ ಸಾಹಿತ್ಯವನ್ನು ಪ್ರಸ್ತುತ ಮಹಾ ಪ್ರಬಂಧವು ಪರಿಚಯಿಸುತ್ತದೆ. ಡಾ. ವ್ಹಿ.ಜಿ. ಹಿರೇಮಠ ಅವರು ಮುಂಡರಗಿ ಜಗದ್ಗುರುಗಳ ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ಸಮಗ್ರವಾಗಿ ಕಟ್ಟಿಕೊಟ್ಟಿದ್ದಾರೆ.

**ಹಾನಗಲ್ ಕುಮಾರಸ್ವಾಮಿಗಳು- ಒಂದು ಅಧ್ಯಯನ :**

ಜಿ.ಕೆ. ಹಿರೇಮಠರ ಪಿಎಚ್.ಡಿ. ಮಹಾಪ್ರಬಂಧವಾಗಿದೆ. ಹಾನಗಲ್ ಕುಮಾರ ಸ್ವಾಮಿಗಳಿಗೆ ಕರ್ನಾಟಕದಲ್ಲಿ ವಿಶೇಷ ಮನ್ನಣೆ ಇದೆ. ಶಿವಯೋಗ ಮಂದಿರವೆಂಬ ವೀರಶೈವ ವಿಶ್ವವಿದ್ಯಾಲಯದ ಸ್ಥಾಪನಾಚಾರ್ಯರು ಈ ಪೂಜ್ಯರು. ಶ್ರೀಮದ್ ವೀರಶೈವ ಶಿವಯೋಗ ಮಂದಿರದ ಸಂಸ್ಥೆ ಒಂದು ಅನನ್ಯವಾದ ಸಂಸ್ಥೆ ಹಾನಗಲ್ ಶ್ರೀಗಳ ನೇತೃತ್ವದಲ್ಲಿ ಇದು ಉತ್ತರೋತ್ತರವಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಮಠಾಧಿಕಾರಿಗಳನ್ನು ರೂಪಿಸಲೆಂದೇ ನಿರ್ಮಿತವಾಗಿರುವಂತಹದು, ಹಾನಗಲ್ ಶ್ರೀಗಳ ದೂರದೃಷ್ಟಿಯ ಪರವಾಗಿ ರೂಪಗೊಂಡ ಈ ಸಂಸ್ಥೆ ಕರ್ನಾಟಕದ ವೀರಶೈವ ಮಠಗಳಿಗೆ ನೀಡಿದ ಕಾಣಿಕೆ ಅನುಪಮವಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಜಿ.ಕೆ. ಹಿರೇಮಠರು ಹಾನಗಲ್ಲ ಕುಮಾರಸ್ವಾಮಿಗಳ ಭವ್ಯ ಜೀವನ ಹಾಗೂ ವೀರಶೈವ (ಶಿವಯೋಗ) ಮಂದಿರ ಚಟುವಟಿಕೆಗಳನ್ನು ವಿಸ್ತೃತವಾಗಿ ಪರಿಚಯಿಸಿದ್ದಾರೆ. ಇವೆರಡೂ ಕೃತಿಗಳು ಶ್ರೀಮಠ ಮತ್ತು ಮಠಾಧೀಶರನ್ನು ಪರಿಚಯಿಸುವ ಅವರ ಕಾರ್ಯತತ್ಪರತೆಯನ್ನು ವಿವರಿಸುವ ಮೌಲಿಕ ಕೃತಿಗಳಾಗಿವೆ.

ಲಿಂ. ಹಾನಗಲ್ಲ ಶ್ರಿ ಕುಮಾರ ಶಿವಯೋಗಿಗಳು ಕನ್ನಡ ನಾಡು ಕಂಡ ಅಪೂರ್ವ ತ್ಯಾಗಯೋಗಿಗಳು. ಸಮಗ್ರ ಸಮಾಜವನ್ನು ಉದ್ಧರಿಸಿದ ಯುಗಾವತಾರಿಗಳು. ಬಸವಾದಿ ಶರಣರ ಸದಾಶಯದ ಜಾತಿ, ವರ್ಗ, ವರ್ಣರಹಿತ ರಾಷ್ಟ್ರ ನಿರ್ಮಾಣಕ್ಕೆ ಅಹೋರಾತ್ರಿ ಪರಿಶ್ರಮಿಸಿದ ದಿವ್ಯ ಚೇತನರು. ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ಔದ್ಯೋಗಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಪೂಜ್ಯರು ಸಲ್ಲಿಸಿದ ನಿಸ್ವಾರ್ಥ ಸೇವೆಯನ್ನು ಈ ಮಹಾಪ್ರಬಂಧದಲ್ಲಿ ವಿವರಿಸಲಾಗಿದೆ.

ಡಾ. ಬಿ.ಆರ್. ಹಿರೇಮಠರು ಸಂಶೋಧಕರಿಗೆ ಮಾರ್ಗದರ್ಶಕರಾಗಿ ನೀಡಿದ ಕೊಡುಗೆ ಅಪಾರವಾಗಿದೆ. ಅವರ ಅನುಭವ ಕೃತಿಗಳಲ್ಲಿ ಮೂರ್ತರೂಪ ಪಡೆದಿದೆ. ವಿಷಯದ ಆಯ್ಕೆ ಆಕರಗಳ ಶೋಧ ಮೊದಲುಗೊಂಡು ಅವುಗಳ ವರ್ಗೀಕರಣ, ಸಂಯೋಜನೆ, ವಿಶ್ಲೇಷಣೆ, ಸಂಶ್ಲೇಷಣೆ ಬಹಳ ಮುಖ್ಯವಾಗಿದೆ. "ಒಂದು ಕಟ್ಟಡ ನಿರ್ಮಾಣಕ್ಕೆ ಅನೇಕ ಪರಿಕಗಳು ಬೇಕಾದಂತೆ ಮಹಾಪ್ರಬಂಧ ಕಟ್ಟಡಕ್ಕೆ ಪರಿವಿಡಿ ಪ್ರಸ್ತಾವನೆ ಮೊದಲುಗೊಂಡು ಪ್ರಕರಣ, ಉಪಪ್ರಕರಣ, ವಿಭಜನೆ, ಸಂಯೋಜನೆ, ಅಗತ್ಯ ಛಾಯಾಚಿತ್ರಗಳು, ಅಡಿಟಿಪ್ಪಣಿ, ಸಂಕೇತ, ಸಂಕ್ಷೇಪ, ಅನುಬಂಧ ಇವೆಲ್ಲ ಇರಲೇಬೇಕು. ಒಟ್ಟು ಅದು ವಿಷಯದ ದೃಷ್ಟಿಯಿಂದ ಪರಿಪೂರ್ಣವಾಗಿ, ವಿನ್ಯಾಸ ದೃಷ್ಟಿಯಿಂದ ಕಲಾತ್ಮಕವಾಗಿ ಸಂಯೋಜಿಸಬೇಕು"[6] ಎನ್ನುವುದು ಡಾ. ಎಂ.ಎಂ. ಕಲಬುರ್ಗಿಯವರು ಸಂಶೋಧನ ಶಿಸ್ತಿಗೆ ನೀಡುವ ವ್ಯಾಖ್ಯಾನವಾಗಿದೆ. ಡಾ. ಎಂ.ಎಂ. ಕಲಬುರ್ಗಿಯವರು ಮಾರ್ಗದರ್ಶನ ಕಾರ್ಯಕ್ಕೆ ವ್ಯಾಖ್ಯಾನ ಮಾಡಿರುವಂತೆಯೆ ಡಾ. ಬಿ. ಆರ್. ಹಿರೇಮಠರು ತಮ್ಮ ಸಂಶೋಧನಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ. ಮಾರ್ಗದರ್ಶನವನ್ನು ಡಾ. ಬಿ.ಆರ್. ಅವರು ಒಂದು ವ್ರತದಂತೆ ಸ್ವೀಕರಿಸಿದ್ದು ಎಲ್ಲ ಮಹಾ ಪ್ರಬಂಧಗಳಲ್ಲಿ ಗುರುತಿಸುವ ಅಂಶವಾಗಿದೆ. ಹೀಗಾಗಿ ಅವರು ಮಾರ್ಗದರ್ಶನ ಮಾಡಿದ ಮಹಾಪ್ರಬಂಧಗಳಲ್ಲಿ ಸಂಶೋಧನೆಯ ಶಿಸ್ತು ತಾನೇ ತಾನಾಗಿದೆ.



**ಕೊನೆ ಟಿಪ್ಪಣಿಗಳು :**

೧. ಡಾ. ವಿಜಯಕುಮಾರ ಕಟಗಿಹಳ್ಳಿಮಠ : ಡಾ. ಆರ್. ಸಿ. ಹಿರೇಮಠರ ವಚನಸಾಹಿತ್ಯ ಸಂಪಾದನೆ ಮುನ್ನುಡಿ ಪುಟ - ೫
೨. ಡಾ. ಎಸ್.ಎಸ್. ಅಂಗಡಿ : ಕನ್ನಡ ಸಂಶೋಧನೆ ಪುಟ - ೧೨೪
೩ ಡಾ. ಅಶೋಕ ನರೋಡೆ : ಏಕಲವ್ಯ ಪಾತ್ರ ಒಂದು ಅಧ್ಯಯನ - ನನ್ನ ಮಾತು, ಪುಟ - IX
೪. ಡಾ. ವ್ಹಿ.ಎಸ್. ಮಾಳಿ : ಕನ್ನಡ ಸಾಹಿತ್ಯದಲ್ಲಿ ಕರ್ಣ- ನಿವೇದನೆ, ಪುಟ - IX
೫. ಅದೇ, ಪುಟ - ೩೦೬
೬. ಡಾ. ಬಿ. ಆರ್. ಹಿರೇಮಠ : ಏಕಲವ್ಯನ ಪಾತ್ರ ಒಂದು ಅಧ್ಯಯನ ಮುನ್ನುಡಿ, ಪುಟ - ೮
೭. ಶ್ರೀ ರಾಮ ಇಟ್ಟಣ್ಣವರ : ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳು ಒಂದು ಅಧ್ಯಯನ ಮುನ್ನುಡಿ, ಪುಟ - x
೯. ಡಾ. ಎಂ.ಎಂ. ಕಲಬುರ್ಗಿ : ಮಹಾಮಾರ್ಗ ಪುಟ - ೮೧೩
೧೦. ಡಾ. ಹಂಪನಾ : ಕರ್ನಾಟಕ ಜಾತ್ರೆಗಳು, ಪುಟ - ೧೭

# ಅಧ್ಯಾಯ - ೭ :
# ಸಮಾರೋಪ

ಡಾ. ಬಿ. ಆರ್. ಹಿರೇಮಠರು ಕನ್ನಡ ಸಾರಸ್ವತ ಲೋಕಕ್ಕೆ ಸಂಶೋಧಕರೆಂದೇ ಚಿರಪರಿಚಿತರಾಗಿದ್ದಾರೆ. ಆದರೆ ಕುತೂಹಲದ ಸಂಗತಿ ಎಂದರೆ ಡಾ. ಬಿ. ಆರ್. ಹಿರೇಮಠರು ಮೂಲತಃ ಸೃಜನಶೀಲ ಸಾಹಿತಿ. ಅವರು ಕಾವ್ಯ, ಕಥೆ, ನಾಟಕಗಳನ್ನು ರಚಿಸಿರುವುದು ತಿಳಿದುಬರುತ್ತದೆ. ಈ 'ತಲಸ್ಪರ್ಶಿ ಅಧ್ಯಯನ'ದಲ್ಲಿ ಡಾ. ಬಿ. ಆರ್. ಅವರ ಸೃಜನಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯ ಎರಡನ್ನೂ ಅಧ್ಯಯನಿಸಲಾಗಿದೆ. ಅದರ ಫಲಿತಗಳು ಹೀಗಿವೆ. ಡಾ. ಬಿ. ಆರ್. ಹಿರೇಮಠ ೨೫ ಕವಿತೆಗಳು, ೩ ನಾಟಕಗಳು, ೧ ಕಥೆ ಲಭಿಸಿವೆ. ಅವರ ಮನೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತ ಅಮೂಲ್ಯ ಸಾಮಗ್ರಿ ಇದು. ತಮ್ಮ ರಚನೆಗಳನ್ನು ಪದೇ ಪದೇ ಪರಿಷ್ಕರಿಸುವ ಮನೋಧರ್ಮ ಡಾ. ಹಿರೇಮಠ ಅವರದಾಗಿತ್ತು. ಅವರ ಹಲವಾರು ರಚನೆಗಳು ಪರಿಷ್ಕರಣಗೊಂಡಿದ್ದು ನಿದರ್ಶನವಾಗಿದೆ. ಲಭ್ಯವಾದ ೨೫ ಕವಿತೆಗಳಲ್ಲಿ ೧೮ ರಚನೆಗಳು ನಾಡಿನ ಪತ್ರಿಕೆಗಳಲ್ಲಿ ಪ್ರಕಟಿತವಾಗಿವೆ.

- ಬರಹಗಾರರ ಒಕ್ಕೂಟ ಉದ್ಘಾಟನೆಯಾಗಿದ್ದು ೧೯೭೪ರಲ್ಲಿ. ರಾಜ್ಯ ಬಂಡಾಯ ಸಾಹಿತ್ಯ ಸಂಘಟನೆ ಅಸ್ತಿತ್ವಕ್ಕೆ ಬಂದದ್ದು ೧೯೭೮ರಲ್ಲಿ. ಆದರೆ ಬಿ. ಆರ್. ಹಿರೇಮಠ ಅವರು ೧೯೭೩ರಲ್ಲಿಯೇ ಬಂಡಾಯ ಧೋರಣೆಯ ಕಾವ್ಯಕಟ್ಟಿರುವುದು ಕುತೂಹಲಕರವಾಗಿದೆ. 'ನಮ್ಮ ಸರಕಾರ'ವೆಂಬ ಕವಿತೆಯಲ್ಲಿ ಬಂಡಾಯ ಮನೋಧರ್ಮ ದಾಖಲಾಗಿರುವುದು ಐತಿಹಾಸಿಕ ಸಂಗತಿಯಾಗಿದೆ. ೧೯೭೬ರ ಹೊತ್ತಿಗೆ ಸಂಶೋಧನೆಯ ಪ್ರಭಾವ ಗಾಢವಾಗಿದ್ದು ಮಾರ್ಗದರ್ಶಕರಾದ ಡಾ. ಎಂ.ಎಂ. ಕಲಬುರ್ಗಿಯವರ ನಿಕಟ ಸಂಪರ್ಕದಿಂದಾಗಿ ಸಂಶೋಧಕರಾಗಿ ರೂಪುಗೊಂಡರು. ಕಾವ್ಯ ಕ್ಷೇತ್ರಕ್ಕಾದ ಹಾನಿ ಸಂಶೋಧನ ಕ್ಷೇತ್ರಕ್ಕೆ ಲಾಭವಾಗಿ ಪರಿಣಮಿಸಿದೆ.

- 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಡಾ. ಬಿ. ಆರ್.ಹಿರೇಮಠ ಅವರ ಸಂಶೋಧನ ಮಹಾಪ್ರಬಂಧವಾಗಿದ್ದು ಮೌಲಿಕವಾಗಿದೆ. ಡಾ. ಎಂ. ಚಿದಾನಂದಮೂರ್ತಿಯವರ 'ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ'ದ ಮುಂದುವರಿಕೆಯಾಗಿದೆ. ಅದರಲ್ಲಿ ಮಧ್ಯಕಾಲೀನ ಅವಧಿಯೊಳಗೆ ಚಲಾವಣೆಯಲ್ಲಿರುವ ವಿವಿಧ ನಾಣ್ಯಗಳು ಅವುಗಳ ಮುಖ ಬೆಲೆಯನ್ನು ದಾಖಲಿಸಿದ್ದಾರೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಾಂಸ್ಕೃತಿಕ ಜೀವನವನ್ನು ಪರಿಚಯಿಸಿಕೊಳ್ಳಲು ಪ್ರಸ್ತುತ ಮಹಾಪ್ರಬಂಧ

ಪ್ರಮಾಣ ಗ್ರಂಥವಾಗಿ ನಿಲ್ಲುತ್ತದೆ. ಶಾಸನಗಳಲ್ಲಿ ವರ್ತಕರ ಸೇನಾಪಡೆ, ವೀರಜೀವನ, ಧಾರ್ಮಿಕ, ಸಾಮಾಜಿಕ ಚಿತ್ರಣಗಳು ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುತ್ತವೆ. ಪ್ರಾಚೀನ ಮತ್ತು ಮಧ್ಯಕಾಲೀನ ವರ್ತಕರ ಸಂಘ ಸಂಸ್ಥೆಗಳು, ಅವು ಕೈಗೊಳ್ಳುವ ವ್ಯಾಪಾರ, ಸಂತೆಯ ಸ್ಥಿತಿಗತಿ, ಮಾರುಕಟ್ಟೆಯ ನಿಯಮಾವಳಿಗಳು ಮೊದಲಾದ ಅಂಶಗಳನ್ನು ಪ್ರಸ್ತಾಪಿಸಿರುವುದು ಗಮನಾರ್ಹವಾಗಿದೆ. ಪ್ರಸ್ತುತ ಮಹಾಪ್ರಬಂಧವು 'ಪ್ರಾಚೀನ ವಾಣಿಜ್ಯಕೋಶ'ವಾಗಿ ನಿಲ್ಲುತ್ತದೆ. ಇಂದಿನ ವ್ಯಾಪಾರ ವಾಣಿಜ್ಯದ ಭರಾಟೆಯಲ್ಲಿ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ವಾಣಿಜ್ಯವಿಜ್ಞಾನಕ್ಕೆ ಮಾರ್ಗದರ್ಶಿಯಾಗಿದೆ. ಸಾಹಿತ್ಯ ಮತ್ತು ವಾಣಿಜ್ಯಶಾಸ್ತ್ರ ಎರಡೂ ವಿಭಿನ್ನ ಅಧ್ಯಯನಗಳು. ಅವೆರಡನ್ನೂ ಡಾ. ಬಿ. ಆರ್. ಹಿರೇಮಠರು ಗಂಭೀರವಾಗಿ ಅಧ್ಯಯನಿಸಿರುವುದು ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಇದೊಂದು ಮಹತ್ತರವಾದ ಕೊಡುಗೆಯಾಗಿದೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ವಾಣಿಜ್ಯೀಕರಣ ಮತ್ತು ಕಂಪ್ಯೂಟರೀಕರಣಗಳ ಸಮಕಾಲೀನ ಜಗತ್ತಿನಲ್ಲಿ ದುಡ್ಡಿಗೆ ಪ್ರಾಶಸ್ತ್ಯವಿದೆ. ಒಂದು ದೇಶದ ಜೀವನಾಡಿ ಆರ್ಥಿಕ ನೆಲೆಗಟ್ಟಿನ ಮೇಲೆ ನಿಂತಿರುತ್ತದೆ. ದುಡ್ಡಿನ ಜೊತೆಗೆ ಮಾನವೀಯ ಅಂತಃಕರಣವು ಮುಖ್ಯವಾಗಿರಬೇಕು. ಪ್ರಾಚೀನ ಮತ್ತು ಮಧ್ಯಕಾಲೀನ ವರ್ತಕರು ಅಳವಡಿಸಿಕೊಂಡ ಮಾನವೀಯ ಮೌಲ್ಯಗಳು ಇಂದಿನವರಿಗೆ ಮಾರ್ಗದರ್ಶಿ ಸೂತ್ರಗಳಾಗುತ್ತವೆ ಎಂದು ಹೇಳಿರುವುದು ಉಲ್ಲೇಖನೀಯವಾಗಿದೆ. ಕವಿಳಾಸಪುರ ಗ್ರಾಮದ ಶೋಧ ಕಿರುಲೇಖನದಲ್ಲಿ ಬಸವಣ್ಣನವರನ್ನು 'ದಣ್ಣಾಯಕ' ಎಂದು ಕರೆದ ಪ್ರಥಮ ಶಾಸನವೆಂದು ಬಿ. ಆರ್. ಅವರು ಶೋಧಿಸಿದ್ದಾರೆ. ಕೂಡಲಸಂಗಮನಲ್ಲಿ ಸಂಶೋಧಿಸಿದ ಪ್ರಾಚೀನ ಶಾಸನ ಮತ್ತು ಇಮ್ಮಡಿ ಜಗದೇಕಮಲ್ಲನ ಕಳಸಾಪುರ ಶಾಸನ ಡಾ. ಬಿ. ಆರ್. ಹಿರೇಮಠ ಅವರ ಮಹತ್ವದ ಸಂಶೋಧನೆಯಾಗಿದೆ. ಯಳಮೇಲ ಸಿಂಹಪರ್ಷೆಯ ಕುರಿತಾಗಿ ಹೊಸ ಸಂಗತಿಗಳನ್ನು ಸಾರಸ್ವತ ಲೋಕಕ್ಕೆ ಪರಿಚಯಿಸಿದ್ದಾರೆ. ಸಿಂಹಪರ್ಷೆ ಮೊದಲಿನದು, ಶಕ್ತಿಪರ್ಷೆ ಆಮೇಲಿನದು ಎಂದು ನಿರ್ಣಯಿಸಿದ್ದಾರೆ. ಇದು ಬಸವಪೂರ್ವ ವೀರಶೈವ ಅಧ್ಯಯನಕ್ಕೆ ಉಪಯುಕ್ತ ಆಕರವಾಗಿದೆ. ಇತಿಹಾಸಕಾರರಾಗಿ, ಶಾಸನತಜ್ಞರಾಗಿ, ಸಾಹಿತ್ಯಕೋವಿದರಾಗಿ, ಭಾಷಾ ವಿಜ್ಞಾನಿಯಾಗಿ, ಕಾರ್ಯನಿರ್ವಹಿಸಿದ ಡಾ. ಬಿ. ಆರ್. ಹಿರೇಮಠ ಅವರ ಶಾಸನಗಳ ಸಂಶೋಧನೆ ತುಂಬಾ ಮೌಲಿಕವಾಗಿದೆ.

- ಕನ್ನಡ ಹಸ್ತಪ್ರತಿ ಲಿಪಿಕಾರರು ಪ್ರಶಸ್ತಿಗಳ ಕುರಿತಾಗಿ ಮಾಡಿರುವ ಸಂಶೋಧನೆ ಅಪ್ರತಿಮವಾಗಿದೆ. ಯಾರೂ ಗಮನಿಸದ ಅಂಶಗಳನ್ನು; ಶ್ರೀಯುತರು ಶೋಧಿಸಿದ್ದು ಮಹತ್ತರವೆನಿಸುತ್ತದೆ. ವಾಲೆ ಶಾಂತಯ್ಯನೇ ಹಸ್ತಪ್ರತಿಯ ಪ್ರಥಮ ಲಿಪಿಕಾರ. ಕನ್ನಡದ ಹಸ್ತಪ್ರತಿಯ ಪ್ರಪ್ರಥಮ ಲಿಪಿಕಾರರನ್ನು ಶೋಧಿಸಿದ ಶ್ರೇಯಸ್ಸು ಡಾ. ಬಿ. ಆರ್. ಅವರದಾಗಿದೆ. ಹಸ್ತಪ್ರತಿ, ಹಸ್ತ ಪ್ರತಿಗಳ ಆರಂಭ, ಅಂತ್ಯ,

ವಿಷಯ, ಪ್ರಶಸ್ತಿ ಮತ್ತು ವಿಶೇಷ ಸಂಗತಿಗಳ ಕ್ರೋಢೀಕರಣ ಹೊಸತನದಿಂದ ಕೂಡಿದೆ. ಹಸ್ತಪ್ರತಿ ಸಾಹಿತ್ಯಕ್ಕೆ ಇದು ವಿನೂತನ ಸೇರ್ಪಡೆಯಾಗಿದೆ.

- ಸೋದೆ ಸದಾಶಿವರಾಯನ ಸ್ವರ ವಚನ ಸಾಹಿತ್ಯ ಐತಿಹಾಸಿಕ ಸಂಗತಿಯನ್ನು ಅನಾವರಣಗೊಳಿಸಿದೆ. ಬಿ. ಆರ್. ಅವರು ತಾಳೆಗರಿ ಹಸ್ತಪ್ರತಿಯೊಂದರಲ್ಲಿ ೧೭ ಸಾಹಿತ್ಯ ಕೃತಿಗಳು ಅಡಕವಾಗಿರುವುದನ್ನು ಶೋಧಿಸಿ, ಪರಿಷ್ಕರಿಸಿ, ಸಂಪಾದಿಸಿ, ಪ್ರಕಟಿಸಿರುವುದು ಚಾರಿತ್ರಿಕ ದಾಖಲೆಯಾಗಿದೆ. ಹಾಗಲವಾಡಿ ಅರಸು ಮನೆತನದ ಅಧ್ಯಯನವನ್ನು ಪ್ರಪ್ರಥಮಬಾರಿಗೆ ಕೈಗೊಂಡು ಹಲವಾರು ಹೊಸ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಗೋವೆಯ ಗೋವಲದೇವನ ಮುತ್ತಿಗೆಯ ಶಾಸನವು ಪ್ರಾಚೀನ ಶಾಸನವೆಂದು ಆಧಾರಗಳೊಂದಿಗೆ ನಿರೂಪಿಸಿದ್ದು ವಿನೂತನವಾಗಿದೆ. ಈ ಶಾಸನದಲ್ಲಿರುವ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಪ್ರಪ್ರಥಮ ಬಾರಿಗೆ ವಿವರಿಸಿದ್ದಾರೆ. ಡಾ. ಫ.ಗು. ಹಳಕಟ್ಟಿಯವರ ನಂತರ ವೀರಶೈವ ಅರಸು ಮನೆತನಗಳಾದ ಸೋದೆ, ಬೀಳಗಿ, ಹಾಗಲವಾಡಿ ಮುಂತಾದವುಗಳ ಕುರಿತಾಗಿ ಡಾ. ಬಿ. ಆರ್. ಹಿರೇಮಠ ಅವರು ತಲಸ್ಪರ್ಶಿಯಾದ ಅಧ್ಯಯನ ಕೈಕೊಂಡಿದ್ದಾರೆ.ಅರಸು ಮನೆತನಗಳ ಕುರಿತಾಗಿ ಅಧ್ಯಯನಿಸುವವರಿಗೆ ಡಾ. ಬಿ.ಆರ್. ಹಿರೇಮಠ ಅವರ ಸಂಶೋಧನೆಯು ಮಾರ್ಗದರ್ಶಿಯಾಗಿದೆ.

- ಕನ್ನಡ ಆಡಳಿತ ಭಾಷೆಗೆ ಸಂಬಂಧಿಸಿದಂತೆ ೧೯ನೆಯ ಶತಮಾನದ ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರ ೧೬ ಸಾಲಿನ ಜಹಾಗೀರನಾಮೆ ಪತ್ರದಲ್ಲಿ, ಮ್ಯಾಜಿಸ್ಟ್ರೇಟರ ಮುದ್ರೆ ಕನ್ನಡದಲ್ಲಿದ್ದು ಇಡೀ ಪತ್ರವನ್ನು ಕನ್ನಡದಲ್ಲೇ ಬರೆದಿರುವುದನ್ನು ಡಾ. ಬಿ. ಆರ್. ಹಿರೇಮಠ ಅವರು ಸಾದರಪಡಿಸಿದ್ದಾರೆ. ಆಂಗ್ಲರ ಪ್ರಾದೇಶಿಕ ಆಡಳಿತ ಭಾಷೆ ಕನ್ನಡವೇ ಆಗಿತ್ತು ಎನ್ನುವುದನ್ನು ನಿರೂಪಿಸಿದ್ದಾರೆ.

- ಡಾ. ಬಿ. ಆರ್. ಹಿರೇಮಠ ಅವರು ತಾವು ಸಂಶೋಧನೆ ಕೈಗೊಂಡು ಅಂತಿಮ ಫಲಿತಾಂಶ ಪಡೆದರೂ, ಇನ್ನು ಮುಂದೆ ಆಗಬೇಕಾದ ಕ್ಷೇತ್ರಗಳತ್ತ ಗಮನ ಸೆಳೆದಿದ್ದಾರೆ. ರಾಜವರ್ಗದವರ ಹಸ್ತಪ್ರತಿಗಳ ವಿಷಯ ನಾಡಿನ ಚರಿತ್ರೆ ರಚಿಸಲು ಇತಿಹಾಸಕಾರರಿಗೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ. ಚಾರಿತ್ರಿಕ ದಾಖಲೆಗಳು ಐತಿಹಾಸಿಕ ಘಟನೆಗಳು ಪ್ರಾದೇಶಿಕ ಅಂಶಗಳನ್ನು ಇತಿಹಾಸಕಾರರು ಕಟ್ಟಿಕೊಡುವಾಗ ಹಸ್ತಪ್ರತಿಗಳನ್ನು ಅವಶ್ಯವಾಗಿ ಗಮನಿಸಬೇಕೆಂದು ಸೂಚಿಸುತ್ತಾರೆ. ಕರ್ನಾಟಕ ಹಸ್ತಪ್ರತಿ ಲಿಪಿಕಾರರ ಚರಿತ್ರೆಯನ್ನು ರಚಿಸಬೇಕು. ಕರ್ನಾಟಕದ ಒಳ ಮತ್ತು ಹೊರ ಎಲ್ಲ ಹಸ್ತಪ್ರತಿ ಭಂಡಾರಗಳ ಸಮಗ್ರ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಸಂಗ್ರಹಿಸಿ ಪ್ರಕಟಿಸಬೇಕು. ಇದರಿಂದ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ, ಸಾಮಾಜಿಕ, ಚರಿತ್ರೆಯ ರಚನೆಗೆ ಹೆಚ್ಚಿನ ಮಾಹಿತಿ

ಲಭಿಸುತ್ತದೆ ಎಂದಿರುವುದು ಸಕಾಲಿಕವಾಗಿದೆ. ಸ್ವರ ವಚನ ಸಾಹಿತ್ಯದಲ್ಲಿ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಮಹತ್ವದ ಅಂಶಗಳಿವೆ. ಅವುಗಳನ್ನೆಲ್ಲ ಕ್ರೋಢೀಕರಿಸಬೇಕು. ಸ್ವರವಚನಕಾರರ ಸಂಗೀತಜ್ಞಾನ, ಸಂಗೀತದ ಪರಿಕರಗಳು, ಸಂಗೀತದ ಪ್ರಚಾರ ವಿವೇಚಿಸುವ ಕಾರ್ಯವಾಗಬೇಕಾಗಿದೆ ಎಂದು ಸೂಚಿಸಿದ್ದಾರೆ.

- ಉಪೇಕ್ಷಿತ ಕ್ಷೇತ್ರದ ಅಧ್ಯಯನ ಮಾಡುವುದು, ಸಿದ್ಧಮಾದರಿಗಳನ್ನು ಸಕಾರಣ ನೀಡಿ ನಿರಾಕರಿಸಿ ಪರ್ಯಾಯ ಮಾದರಿಗಳನ್ನು ಕಟ್ಟಿಕೊಟ್ಟಿರುವದು ವಿಶೇಷ. ಪ್ರಾಚೀನ ಕರ್ನಾಟಕ ವಾಣಿಜ್ಯೋದ್ಯಮ ಮಾದರಿಗಳನ್ನು ವಿವರಿಸಿದ್ದಾರೆ. ಮಧ್ಯಕಾಲೀನ ಶಾಸನಗಳು ಒಂದು ಜನಾಂಗದ ಚರಿತ್ರೆಯನ್ನು ಇಡಿಯಾಗಿ ಕಟ್ಟಿಕೊಡುವದಿಲ್ಲ. ಅದಕ್ಕೆ ಪೂರಕವಾಗಿ ಹಸ್ತಪ್ರತಿ, ಜನಪದ ಸಾಹಿತ್ಯಗಳನ್ನು ಬಳಸಿಕೊಂಡರೆ ಸೂಕ್ತವಾಗುತ್ತದೆ. ರೂಢಿಗತವಾದದ್ದನ್ನು, ಪ್ರಧಾನವಾಗಿರುವುದನ್ನು ಪ್ರಬುದ್ಧವೆಂದು ಭಾವಿಸಿರುವುದನ್ನು ನಿರಾಕರಿಸಿ ಅವುಗಳಿಗೆ ಸ್ಥಳೀಯ ಮಾದರಿಗಳನ್ನು ರೂಪಿಸುತ್ತಾರೆ. ತಾವು ಕಂಡುಕೊಂಡ ಅಂಶಗಳನ್ನು ಖಚಿತವಾಗಿ ಮಂಡಿಸುತ್ತಾರೆ. ಜೈನ - ಶೈವ ಮುಂತಾದ ಧಾರ್ಮಿಕ ಸಂಗತಿಗಳನ್ನು ಜಿಜ್ಞಾಸೆಗೊಳಪಡಿಸುವಾಗ ಸಂಘರ್ಷ ಮತ್ತು ಸಮನ್ವಯಗಳನ್ನು ವಿವರಿಸಿ ಜಾತ್ಯಾತೀತ, ಮತಾತೀತ ನಿಲುವನ್ನು ಅನುಸರಿಸಿದ್ದಾರೆ. ವ್ಯಕ್ತಿಪ್ರಜ್ಞೆ ಮೀರಿ ಸಾಂಸ್ಕೃತಿಕ ಸಂಗತಿಗಳಿಗೆ ಒತ್ತು ನೀಡಿದ್ದಾರೆ.

- ಅಂತರ್ - ಶಿಸ್ತೀಯ ಮತ್ತು ಬಹುಶಿಸ್ತೀಯ ಹಾಗೂ ಸಾಂಸ್ಕೃತಿಕ ಅಧ್ಯಯನ ಮುಂತಾದ ಪರಿಕಲ್ಪನೆಗಳು ರೂಪುಗೊಳ್ಳದ ಕಾಲದಲ್ಲಿ ಡಾ. ಬಿ. ಆರ್.ಹಿರೇಮಠರು ಇವೆಲ್ಲ ಅಂಶಗಳನ್ನು ತಮ್ಮ ಸಂಶೋಧನಾ ಶಿಸ್ತಿಗೆ ಅಳವಡಿಸಿಕೊಂಡಿರುವುದು ಗಮನಾರ್ಹವೆನಿಸುತ್ತದೆ. ಒಬ್ಬ ವ್ಯಕ್ತಿ ಭೌತಿಕವಾಗಿ ಇಲ್ಲವಾದಾಗಲೂ ಅವರ ಸಾಹಿತ್ಯ ಇದ್ದೇ ಇರುತ್ತದೆ. ಜಾಗತೀಕರಣದ ಭರಾಟೆಯಲ್ಲಿ ಮರೆಯಾಗಬಹುದಾಗಿದ್ದ ಡಾ. ಬಿ. ಆರ್. ಹಿರೇಮಠರ ಸಾಧನೆಯನ್ನು ನಾಡಿಗೆ ಪರಿಚಯಿಸುವುದಾಗಿದೆ.



# ಅನುಬಂಧಗಳು

**ಭಾಗ-೧ :**

೧. ಪ್ರಕಟಿತ ಸಾಹಿತ್ಯ

೨. ಅಪ್ರಕಟಿತ ಸಾಹಿತ್ಯ

೩. ಬದುಕಿನ ಪ್ರಮುಖ ಹೆಜ್ಜೆಗಳು

೪. ಭಾಗವಹಿಸಿದ ವಿದ್ವತ್ ಗೋಷ್ಠಿಗಳು

೫. ಹಸ್ತಾಕ್ಷರ ಮಾದರಿ

೬. ವಂಶಾವಳಿ

೭. ಡಾ. ಬಿ.ಆರ್. ಅವರ ಕುರಿತಾಗಿರುವ ಸಾಹಿತ್ಯ

**ಭಾಗ-೨:**

೧. ಪರಾಮರ್ಶನ ಗ್ರಂಥಗಳು

೨. ಪತ್ರಿಕೆಗಳು

೩. ಭಾವಚಿತ್ರಗಳು

# ಅನುಬಂಧಗಳು

## ಭಾಗ - ೧

### ೧. ಪ್ರಕಟಿತ ಸಾಹಿತ್ಯ :


೧. ಸಂ. ಡಾ. ಬಿ.ಆರ್. ಹಿರೇಮಠ : ೧೯೮೨, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. (ಪಿಎಚ್.ಡಿ. ಗ್ರಂಥ) ೧೯೮೨

೨. ಸಂ. ಡಾ. ಬಿ. ಆರ್. ಹಿರೇಮಠ : ಸಾಹಿತ್ಯ ಪರಿಶೋಧನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೪

೩. ಸಂ. ಡಾ. ಬಿ.ಎಸ್. ಹಿರೇಮಠ : ಸಂಶೋಧನ ಪಥ, ಚೇತಕ ಪ್ರಕಾಶನ, ಧಾರವಾಡ ೧೯೯೪

೪. ಸಂ. ಡಾ. ಬಿ. ಆರ್. ಹಿರೇಮಠ : ವೀರಶೈವ ಸಂಪದ, ಶ್ರೀ ಚೆನ್ನಬಸವೇಶ್ವರ ಸಂಸ್ಥಾನ, ಹಿರೇಮಠ ಹಾರಕೂಡ ಬಸವಕಲ್ಯಾಣ ತಾಲೂಕ, ಜಿಲ್ಲೆ :ಬೀದರ ೧೯೯೮

೫. ಸಂ. ಡಾ. ಬಿ.ಆರ್. ಹಿರೇಮಠ : ವೀರಶೈವ ಸಂಶೋಧನೆಗಳು ಅರುಣೋದಯ ಪ್ರಕಾಶನ, ಧಾರವಾಡ ೧೯೯೨

೬. ಸಂ. ಡಾ. ಬಿ.ಆರ್. ಹಿರೇಮಠ : ವ್ಯಾಸಂಗ ತರಂಗ ೨೦೦೪

೭. ಸಂ. ಡಾ. ಬಿ.ಆರ್. ಹಿರೇಮಠ : ಇಮ್ಮಡಿ ಮುರುಘಾ ಗುರುಸಿದ್ಧ ಶಿವಯೋಗಿಗಳ ಐದು ಕೃತಿಗಳು, ಮಲೆನಾಡ ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ಮುರುಘರಾಜೇಂದ್ರ ಸಂಸ್ಥಾನ ಮಠ ಆನಂದಪುರಂ, ಶಿವಮೊಗ್ಗ. ೧೯೮೮

೮. ಸಂ. ಬಿ. ಆರ್. ಹಿರೇಮಠ : ಚಿಕ್ಕ ಭೂಪಾಲ ಸಾಂಗತ್ಯ, ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಮುರುಘಾಮಠ, ಧಾರವಾಡ. ೧೯೭೭

೯. ಸಂ. ಡಾ. ಬಿ.ಆರ್. ಹಿರೇಮಠ : ಅದ್ವೈತಾನಂದ ವಚನಗಳು ವೀರಶೈವ ತತ್ವಚಿಂತನೆ, ಮುರುಘಾಮಠ, ಧಾರವಾಡ ೧೯೮೩

೧೦. ಸಂ. ಡಾ. ಬಿ.ಆರ್. ಹಿರೇಮಠ : ಕಟ್ಟಿಗೆ ಹಳ್ಳಿ ಸಿದ್ಧಲಿಂಗ ಸ್ವಾಮಿಯ ಸಂಪಾದನಾ ಸಾರಾಮೃತ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ. ೧೯೮೮

೧೧. ಸಂ. ಡಾ. ಬಿ.ಆರ್. ಹಿರೇಮಠ : ಹರಿಹರನ ಭಕ್ತಿ ತರಂಗಿಣಿ, ಅನುರಾಧಾ ಪ್ರಕಾಶನ, ಧಾರವಾಡ ೧೯೮೮

೧೨. ಡಾ. ಬಿ.ಆರ್. ಹಿರೇಮಠ : ವಚನ ಸಂಕಲನ ಸಂಪುಟ -೧ ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ೧೯೯೦

೧೩. ಡಾ. ಬಿ.ಆರ್. ಹಿರೇಮಠ : ವಚನ ಸಂಕಲನ ಸಂಪುಟ -೪ ೧೯೯೨

೧೪. ಸಂ. ಡಾ. ಬಿ. ಆರ್. ಹಿರೇಮಠ: ವೀರಗಲ್ಲುಗಳು ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗದ ಉಪನ್ಯಾಸ ಗ್ರಂಥಮಾಲೆ ಧಾರವಾಡ ೧೯೭೬

೧೫. ಡಾ. ಬಿ. ಆರ್. ಹಿರೇಮಠ : ಸುಖ ಸಂಪಾದನೆಯ ವಚನಗಳು - ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ

೧೬. ಡಾ. ಬಿ.ಆರ್. ಹಿರೇಮಠ : ಮಡಿವಾಳ ಮಾಚಿದೇವನ ವಚನಗಳು, ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ,ಮೂರುಸಾವಿರಮಠ, ಹುಬ್ಬಳ್ಳಿ.

೧೭. ಸಂ. ಡಾ. ಬಿ.ಆರ್. ಹಿರೇಮಠ : ಸೋದೆ ಸದಾಶಿವರಾಯನ ಕೃತಿಗಳು ಗದಗ ೧೯೯೫

೧೮. ಸಂ. ಡಾ. ಬಿ.ಆರ್. ಹಿರೇಮಠ : ಸಂಕೀರ್ಣ ವಚನ ಸಂಪುಟ -೩ ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೩

೧೯. ಡಾ. ಬಿ.ಆರ್. ಹಿರೇಮಠ : ಸಂಕೀರ್ಣ ವಚನ ಸಂಪುಟ -೪ ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೩

೨೦. ಡಾ. ಬಿ.ಆರ್. ಹಿರೇಮಠ : ಸಿದ್ಧನಂಜೇಶಕೃತ ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ ಸ್ತೋತ್ರ , ಡಂಬಳ ಗದಗ ೧೯೯೩

೨೧. ಪ್ರ.ಸಂ. ಡಾ. ಬಿ.ಆರ್.ಹಿರೇಮಠ : ಕೊಲ್ಹಾಪುರ ಲಕ್ಷ್ಮೀಸೇವ ಭಟ್ಟಾರಕ ಜೈನ ಬಸದಿ ಹಸ್ತಪ್ರತಿ ಸೂಚಿ ೧೯೮೮

೨೨. ಪ್ರ. ಸಂ. ಎಂ.ಎಂ. ಕಲಬುರ್ಗಿ ಸಂ. ಬಿ. ಆರ್. ಹಿರೇಮಠ : ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ -೧ ಪ್ರಸಾರಾಂಗ : ಕ.ವಿ.ವಿ. ಧಾರವಾಡ. ೧೯೯೨

೨೩. ಡಾ. ಬಿ.ಆರ್. ಹಿರೇಮಠ : ಹೊಸಗನ್ನಡ ಸಾಹಿತ್ಯ ರೂಪಗಳು, ಪ್ರಸಾರಾಂಗ ಕ.ವಿ.ವಿ. ಧಾರವಾಡ

೨೪. ಸಂ. ಡಾ. ಬಿ.ಆರ್. ಹಿರೇಮಠ : ಬಸವಣ್ಣನವರ ವಚನಗಳ ಸಮಾಲೋಕನ , ಮನೋಹರ ಗ್ರಂಥಮಾಲೆ, ಧಾರವಾಡ ೨೦೦೨

೨೫. ಸಂ. ಡಾ. ಬಿ. ಆರ್. ಹಿರೇಮಠ, ಡಾ. ಜಿ. ಎಂ. ಹೆಗಡೆ, ಡಾ. ಎ.ಡಿ ವಸ್ತ್ರದ : ನಿಜದ ನೆಲೆ ೨೦೦೩

೨೬. ಪ್ರ.ಸಂ. ಡಾ. ಬಿ. ಆರ್. ಹಿರೇಮಠ : ಸಾರಂಗ ಪ್ರಭೆ, ಚೆನ್ನವೀರ ಸ್ವಾಮೀಜಿ ಪ್ರತಿಷ್ಠಾನ, ಸಾರಂಗಮಠ, ಸಿಂದಗಿ. ೨೦೦೨

೨೭. ಸಂ. ಡಾ. ಬಿ.ಆರ್. ಹಿರೇಮಠ :ಕನ್ನಡ ಪ್ರಪಂಚ, ಮನೋಹರ ಗ್ರಂಥ ಮಾಲೆ, ಧಾರವಾಡ ೨೦೦೨

೨೮. ಸಂ. ಡಾ. ಬಿ. ಆರ್. ಹಿರೇಮಠ : ಕನ್ನಡ ಹಸ್ತಪ್ರತಿ ಲಿಪಿಕಾರರು ಪ್ರಶಸ್ತಿಗಳು ೧೯೮೮

೨೯. ಡಾ. ಬಿ. ಆರ್. ಹಿರೇಮಠ, ಡಾ. ಹನುಮಾಕ್ಷಿ ಗೋಗಿ : ಮುದನೂರು ಯಡ್ರಾಮಿ ಶಾಸನಗಳು ೧೯೯೪

೩೦. ಡಾ. ಬಿ.ಆರ್. ಹಿರೇಮಠ, ಪ್ರೊ. ಬಿ.ವ್ಹಿ ಗುಂಜೆಟ್ಟಿ : ಡಾ. ಆರ್.ಸಿ. ಹಿರೇಮಠ ಪ್ರತಿಷ್ಠಾನ, ಧಾರವಾಡ ೧೯೯೯

೩೧. ಡಾ. ಎಂ. ಎಂ. ಕಲಬುರ್ಗಿ: ವಚನಸಾಹಿತ್ಯ ಪ್ರಕಟಣೆ ಇತಿಹಾಸ, ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.

**೨. ಅಪ್ರಕಟಿತ ಸಾಹಿತ್ಯ :**

**ಕಾವ್ಯ (ಕವನಗಳು ೧೯೭೨ ರಿಂದ ೭೯)**

೧. ಸೂರ್ಯೋದಯ

೨. ಕವಿ

೩. ನಮ್ಮ ಸರ್ಕಾರ

೪. ಅಸ್ಪೃಶ್ಯತೆ (ಕ್ಲಿಷ್ಟತೆ)

೫. ಭಯ

೬. ಹೀಗೂ ಇದ್ದಾರೆ

೭. ಕರಕಿ

೮. ಭಾಳಜ್ಯಾಕಿರಬೇಕು

೯. ಅಕ್ಕನಾಗಮ್ಮ

೧೦. ನೆನಹು

೧೧. ಕಂಡದ್ದು

೧೨. ನೀ ಇಲ್ಲದೆ

೧೩. ಕರ್ತವ್ಯ

೧೪. ಸಾರ್ಥಕತೆ

೧೫. ಬಂಜೆ

**ಹನಿಗವನಗಳು**

೧೬. ಸ್ಥಿತಿ

೧೭. ಗತಿ

೧೮. ಅಭಿವ್ಯಕ್ತಿ

**ಸಂಪಾದನಾ ಕವನಗಳು :**

೧. ಶಿವಕೊಟ್ಟ ಕಾಲಕ್ಕೆ ಉಣಲಿಲ್ಲ

೨. ನೇಮಿನಾಥನ ಕೋಲುಪದ

೩. ಶಿವದಯಾಮೂರ್ತಿ

**ಕಥೆ :**

೧. ಯಜ್ಞಪಶು

**ನಾಟಕಗಳು (ರೇಡಿಯೊ):**

೧. ಶಿಲೆಯಲ್ಲಿ ಸಾಹಿತ್ಯ

೨. ವಚನಸಾಹಿತ್ಯ

೩. ದಾಸ ಸಾಹಿತ್ಯ

**ಶಾಸನಗಳು :**

೧. ಶಾಸನಗಳಲ್ಲಿ ನೇಕಾರರು

೨. ಮುತ್ತಿಗೆ ಶಾಸನ

೩. ಮುತ್ತಿಗೆ ಹೊಸ ಶಾಸನ

೪. ಅಣ್ಣಿಗೇರಿ ಶಾಸನ

೫. ಹೇರೂರು ಹಾಗೂ ಆಲದ ಕಟ್ಟೆ ಶಾಸನ

೬. ಆಭರಣಗಳು

## ೩. ಬದುಕಿನ ಪ್ರಮುಖ ಹೆಜ್ಜೆಗಳು

ಜನನ : ೧೦.೦೪.೧೯೪೯

ಜನ್ಮ ಸ್ಥಳ : ಯಡಹಳ್ಳಿ

ಶಿಕ್ಷಣ ೧. ಎಸ್.ಎಸ್.ಸಿ : ೧೯೬೭ : ಗಲಗಲಿ

೨. ಪಿ.ಯು.ಸಿ. : ೧೯೬೭ : ಮುಧೋಳ

೩. ಪದವಿ : ೧೯೭೧ : ಬಾಗಲಕೋಟೆ

೪. ಎಂ.ಎ. : ೧೯೭೩ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫. ಪಿಎಚ್.ಡಿ. : ೧೯೮೨ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ವಿವಾಹ : ೧೯೭೭ : ವಿಜಾಪುರದಲ್ಲಿ

ಹೆಂಡತಿ : ಶ್ರೀಮತಿ ಉಮಾದೇವಿ

ಮಕ್ಕಳು : ಶಿವಯೋಗಿ (ದೀಪು) ೧೯೭೮

ಮೃತ್ಯುಂಜಯ (ಮುತ್ತು) ೧೯೮೦

ವೃತ್ತಿ - ಸಹಾಯಕ -ಸಂಶೋಧಕ (ಕ.ವಿ.ವಿ.ಕ.ಅ.ಪೀ) ೧೯೭೫

ಅಧ್ಯಾಪಕ - (ಕ.ವಿ.ವಿ.ಕ.ಅ.ಪೀ) ೧೯೭೬

ಪ್ರಾಧ್ಯಾಪಕ - (ಕ.ವಿ.ವಿ.ಕ.ಅ.ಪೀ) ೧೯೯೪

**ಆಡಳಿತ :**

೧. ನಿರ್ದೇಶಕರು ಸ್ನಾತಕೋತ್ತರ ಕೇಂದ್ರ ಬೆಳಗಾವಿ : ೧೯೯೬-೯೭

೨. ಮುಖ್ಯಸ್ಥರು, ಕ.ಅ.ಪೀ. ಕ.ವಿ.ವಿ. ಧಾರವಾಡ

ಅವಧಿ ೧ ೧೯೯೭ ರಿಂದ ೧೯೯೯ ರ ವರೆಗೆ

ಅವಧಿ ೨ ೨೦೦೭ ರಿಂದ ೨೦೦೮ ರವರೆಗೆ

೩. ಅಧ್ಯಕ್ಷರು ಕನ್ನಡ ಅಭ್ಯಾಸ ಮಂಡಳಿ ಕ.ವಿ.ವಿ. ಧಾರವಾಡ : ೨೦೦೦-೨೦೦೨

೪. ಮುದ್ರಣಾಲಯ ಕ.ವಿ.ವಿ. ಧಾರವಾಡ : ೨೦೦೨ ರಿಂದ ೨೦೦೪

೫. ಡೀನ್ ಕಲಾನನಿಕಾಯ ಕ.ವಿ.ವಿ. ಧಾರವಾಡ :

ಅವಧಿ ೧ ೨೦೦೪ರಿಂದ ೨೦೦೬ : ಅವಧಿ ೨ ೨೦೦೬

೬. ಸಂಯೋಜಕರು - ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯ

ಕ.ವಿ.ವಿ. ಧಾರವಾಡ : ೨೦೦೫

೭. ಸಂಯೋಜಕರು - ಕನ್ನಡ ವಿಭಾಗದ ದೂರಶಿಕ್ಷಣ

ಕ.ವಿ.ವಿ. ಧಾರವಾಡ : ೨೦೦೩-೨೦೦೪ ಮತ್ತು ೨೦೦೭-೨೦೦೮

೮. ನಿರ್ದೇಶಕರು -ಪಠ್ಯಪುಸ್ತಕ ಮಂಡಳಿ ಪ್ರಸಾರಾಂಗ ಕ.ವಿ.ವಿ. ಧಾರವಾಡ ೨೦೦೭-೨೦೦೮

೯. ಅಧ್ಯಕ್ಷರು -ಪಠ್ಯಪುಸ್ತರ ಮಂಡಳಿ ಪ್ರಸಾರಾಂಗ ಕ.ವಿ.ವಿ. ಧಾರವಾಡ ೨೦೦೭-೨೦೧೦

೧೦. ವಿಶೇಷಾಧಿಕಾರಿಗಳು - ಪರೀಕ್ಷಾ ವಿಭಾಗ ಕ.ವಿ.ವಿ. ಧಾರವಾಡ ೨೦೦೪

೧೧. ಅಧ್ಯಕ್ಷ - ಸ್ನಾತಕೋತ್ತರ ವಿದ್ಯಾರ್ಥಿ ಕೂಟ ಕ.ವಿ.ವಿ. ಧಾರವಾಡ

೧೨. ಕಾರ್ಯದರ್ಶಿ - ಸ್ನಾತಕೋತ್ತರ ಶಿಕ್ಷಕರ ಸಂಘ ಕ.ವಿ.ವಿ. ಧಾರವಾಡ

೧೩. ಸದಸ್ಯ - ಕ.ವಿ.ವಿ. ವಿದ್ಯಾ ಪರಿಷತ್ತು ಧಾರವಾಡ

**ಸದಸ್ಯತ್ವ :**

೧. ಗೌರವ ಕಾರ್ಯದರ್ಶಿ - ಧಾರವಾಡ ಜಿಲ್ಲಾ ಕ.ಸಾ.ಪ.

೨. ಕಾರ್ಯಕಾರಿ ಸಮಿತಿ ಕೇಂದ್ರ - ಕನ್ನಡ ಸಾಹಿತ್ಯ ಪರಿಷತ್ತು

೩. ಸದಸ್ಯ - ಕನ್ನಡ ಇಂಗ್ಲೀಷ್ ನಿಘಂಟು ಪರಿಷ್ಕರಣ ಸಮಿತಿ

೪. ಸದಸ್ಯ - ಗ್ರಂಥ ಪ್ರಕಟಣಾ ಸಮಿತಿ ಕ.ಸಾ.ಪ.

೫. ಕಾರ್ಯದರ್ಶಿ - ಅಖಿಲ ಕರ್ನಾಟಕದ ಜಾನಪದ ಸಮ್ಮೇಳನ ೧೯೮೦ ರಿಂದ ೧೯೯೪

೬. ಅಧ್ಯಕ್ಷರು - ೨-೩ ಸಂಸ್ಕೃತ ಸಮ್ಮೇಳನ ೧೯೯೮-೧೯೯೯

೭. ಕೋಶಾಧಿಕಾರಿ - ಅಂತರರಾಷ್ಟ್ರೀ ಕಿಟೆಲ್ ಸಮ್ಮೇಳನ ೧೯೯೪

೮. ಸಂಘಟನಾ ಕಾರ್ಯದರ್ಶಿ - ಅಖಿಲಭಾರತ ಕ.ಸಾ. ಸಮ್ಮೇಳನ ಹುಬ್ಬಳ್ಳಿ.

**ಗೌರವ ಪ್ರಶಸ್ತಿಗಳು :**

೧. ಸರ್ವಾಧ್ಯಕ್ಷತೆ - ಮುಧೋಳ ತಾಲೂಕಾ ಪ್ರಥಮ ಕ.ಸಾ. ಸಮ್ಮೇಳನ ೧೯೯೮

೨. ಸರ್ವಾಧ್ಯಕ್ಷತೆ - ಬಾಗಲಕೋಟ ಜಿಲ್ಲಾ ಪ್ರಥಮ ಶರಣ ಸಾಹಿತ್ಯ ಸಮ್ಮೇಳನ ಬೀಳಗಿ ೨೦೦೦

೩. ದತ್ತಿ ಪ್ರಶಸ್ತಿ ಶಿವರಾತ್ರೀಶ್ವರ ಧಾರ್ಮಿಕ ದತ್ತಿ ಪ್ರಶಸ್ತಿ ಮೈಸೂರು ೧೯೯೭

ಮರಣ - ೧೨.೦೮.೨೦೦೭

## ೪. ಭಾಗವಹಿಸಿದ ವಿದ್ವತ್ ಗೋಷ್ಠಿಗಳು

### (ಸಮ್ಮೇಳನ/ವಿಚಾರ ಸಂಕಿರಣ/ಕಮ್ಮಟ)

| ಕ್ರ. | ಗೋಷ್ಠಿ | ದಿನ | ವರ್ಷ |
|---|---|---|---|
| ೧. | ಹರಿಹರ /ವಿಚಾರ ಸಂಕಿರಣ, ಹೊಸಪೇಟೆ | ೩ ದಿನ | ೧೯೭೯ |
| ೨. | ಜಾನಪದ ಸಮ್ಮೇಳನ, ಗದಗ | ೩ ದಿನ | ೧೯೮೦ |
| ೩. | ಕಳೆದ ದಶಕದ ಕನ್ನಡ ಸಾಹಿತ್ಯ, ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೮೧ |
| ೪. | 'ಹಸ್ತ ಪ್ರತಿಶಾಸ್ತ್ರ'- ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೮೧ |
| ೫. | ಜಾನಪದ ಸಮ್ಮೇಳನ, ಬೆಳಗಾವಿ | ೩ ದಿನ | ೧೯೮೧ |
| ೬. | ಕುವೆಂಪು ಕವಿ ಕಾವ್ಯ ವಿಚಾರ ಸಂಕಿರಣ, ಧಾರವಾಡ | ೩ ದಿನ | ೧೯೮೨ |
| ೭. | ಜಾನಪದ ಬಯಲಾಟ : ಕಮ್ಮಟ, ಧಾರವಾಡ | ೭ ದಿನ | ೧೯೮೨ |
| ೮. | ಸಂಶೋಧನ ಸಾಹಿತ್ಯ - ವಿಚಾರ ಸಂಕಿರಣ, ಧಾರವಾಡ | ೮ ದಿನ | ೧೯೮೨ |
| ೯. | ಜಾನಪದ ಸಮ್ಮೇಳನ (ಹಬ್ಬ ಹುಣ್ಣಿಮೆ), ಲಕ್ಷ್ಮೇಶ್ವರ | ೩ ದಿನ | ೧೯೮೨ |
| ೧೦. | 'ನಯಸೇನ' : ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೮೩ |
| ೧೧. | 'ಗೋವಿಂದ ಪೈ ' ವಿಚಾರ ಸಂಕಿರಣ, ಉಜ್ಜಯಿನಿ | ೪ ದಿನ | ೧೯೮೩ |
| ೧೨. | 'ಸಂಶೋಧನ ಸಾಹಿತ್ಯ'ವಿಚಾರ ಸಂಕಿರಣ, ಉಜ್ಜಯನಿ | ೩ ದಿನ | ೧೯೮೩ |
| ೧೩. | 'ನಾಗಚಂದ್ರ' ವಿಚಾರ ಸಂಕಿರಣ, ವಿಜಾಪುರ | ೨ ದಿನ | ೧೯೮೩ |
| ೧೪. | 'ಐತಿಹಾಸಿಕ ವಿಷಯ' ವಿಚಾರ ಸಂಕಿರಣ, ಉಜ್ಜಯನಿ | ೧ದಿನ | ೧೯೮೪ |
| ೧೫. | '೧೯೮೩ ರ ಕನ್ನಡ ಸಾಹಿತ್ಯ' ಕಮ್ಮಟ, ದಾಂಡೇಲಿ | ೨ ದಿನ | ೧೯೮೪ |
| ೧೬. | ಸಂಶೋಧನ ಸಾಹಿತ್ಯ -ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೮೫ |
| ೧೭. | ಐತಿಹಾಸಿಕ ಸಮ್ಮೇಳನ, ಧಾರವಾಡ | ೨ ದಿನ | ೧೯೮೫ |
| ೧೮. | ಐತಿಹಾಸಿಕ/ರಾಷ್ಟ್ರೀಯ/ವಿಚಾರ ಸಂಕಿರಣ, ಧಾರವಾಡ | 3ದಿನ | ೧೯೮೫ |
| ೨೦. | ಸಂಶೋಧನ ಸಾಹಿತ್ಯ ವಿಚಾರ ಸಂಕಿರಣ, ಧಾರವಾಡ | ೩ ದಿನ | ೧೯೮೫ |
| ೨೧. | ಕನ್ನಡ ಸಾಹಿತ್ಯ ವಿಚಾರ ಸಂಕಿರಣ, ಸವಣೂರು | ೧ ದಿನ | ೧೯೮೬ |
| ೨೨. | ಬಾದಾಮಿ ಚಾಲುಕ್ಯರು -ವಿಚಾರ ಸಂಕಿರಣ ಬಾದಾಮಿ | ೧ ದಿನ | ೧೯೮೬ |
| ೨೩. | ೧೯೮೫ ರ ಕನ್ನಡ ಸಾಹಿತ್ಯ ವಿಚಾರ ಸಂಕಿರಣ, ಸಂಕೇಶ್ವರ | ೨ ದಿನ | ೧೯೮೬ |
| ೨೪. | ಸಂಶೋಧನ ಸಾಹಿತ್ಯ ಕಮ್ಮಟ, ಮಂಗಳೂರು | ೩ ದಿನ | ೧೯೮೭ |
| ೨೫. | ಐತಿಹಾಸಿಕ ಸಾಂಸ್ಕೃತಿಕ ವಿಚಾರ ಸಂಕಿರಣ, ದಾವಣಗೆರೆ | ೩ ದಿನ | ೧೯೮೮ |
| ೨೬. | ಐತಿಹಾಸಿಕ ಸಾಂಸ್ಕೃತಿಕ ವಿಚಾರ ಸಂಕಿರಣ, ಗದಗ | ೨ ದಿನ | ೧೯೮೯ |

| | | |
|---|---|---|
| ೨೭. ಐತಿಹಾಸಿಕ ಸಾಂಸ್ಕೃತಿಕ ವಿಚಾರ ಸಂಕಿರಣ, ದಾವಣಗೆರೆ | ೨ ದಿನ | ೧೯೯೦ |
| ೨೮. ವಚನ ಸಾಹಿತ್ಯ ವಿಚಾರ ಸಂಕಿರಣ, ಗದಗ | ೧ ದಿನ | ೧೯೯೦ |
| ೨೯. ತೋಂಟದ ಸಿದ್ಧಲಿಂಗ ಸಾಹಿತ್ಯ-ವಿಚಾರ ಸಂಕಿರಣ, ಎಡೆಯೂರು | ೧ ದಿನ | ೧೯೯೦ |
| ೩೦. ಸ್ವಾದಿ ಅರಸುಮನೆತನ -ವಿಚಾರ ಸಂಕಿರಣ, ಧಾರವಾಡ | ೩ ದಿನ | ೧೯೯೧ |
| ೩೧. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ , ಮೈಸೂರು | ೩ ದಿನ | ೧೯೯೦ |
| ೩೨. ಜಾನಪದ ಸಮ್ಮೇಳನ, ಆದಿಚುಂಚನಗಿರಿ | ೨ ದಿನ | ೧೯೯೧ |
| ೩೩. ಬಸವೋತ್ತರ ಯುಗದ ವಚನ ಸಾಹಿತ್ಯ-ವಿಚಾರ ಸಂಕಿರಣ, ಸಂಕೇಶ್ವರ | ೧ ದಿನ | ೧೯೯೧ |
| ೩೪. ಕೆಳದಿ ಅರಸು ಮನೆತನ - ವಿಚಾರ ಸಂಕಿರಣ, ಶಿವಮೊಗ್ಗ | ೩ ದಿನ | ೧೯೯೧ |
| ೩೫. ಬಸವೋತ್ತರ ಯುಗದ ಸಮಾಲೋಚನೆ ವಿಚಾರ ಸಂಕಿರಣ, ಕೆಂಭಾವಿ | ೨ದಿನ | ೧೯೯೨ |
| ೩೬. ಆದಿ ಕದಂಬರ ಶಾಸನ ಸಂಸ್ಕೃತಿ - ವಿಚಾರ ಸಂಕಿರಣ, ಧಾರವಾಡ | ೨ದಿನ | ೧೯೯೨ |
| ೩೭. ಸರ್ವಜ್ಞ ಸಾಹಿತ್ಯೋತ್ಸವ - ವಿಚಾರ ಸಂಕಿರಣ, ಹುಬ್ಬಳ್ಳಿ | ೨ ದಿನ | ೧೯೯೨ |
| ೩೮. ಎಸ್.ಎಸ್. ಬಸವನಾಳ - ಒಂದು ಅಧ್ಯಯನ ವಿಚಾರ ಸಂಕಿರಣ, ಮುಂಡರಗಿ | ೩ ದಿನ | ೧೯೯೨ |
| ೩೯. ಹಾಗಲವಾಡಿ ಅರಸು ಮನೆತನ - ವಿಚಾರ ಸಂಕಿರಣ, ತುಮಕೂರು | ೨ ದಿನ | ೧೯೯೨ |
| ೪೦. ವಿಜಾಪೂರ ಜಿಲ್ಲಾ ಸಾಹಿತ್ಯ ಸಮ್ಮೇಳನ, ಇಂಡಿ | ೨ ದಿನ | ೧೯೯೨ |
| ೪೧. ಕರ್ನಾಟಕ ಮಹಾರಾಷ್ಟ್ರ ಬಾಂಧವ್ಯ - ವಿಚಾರ ಸಂಕಿರಣ, ಬೆಳಗಾವಿ | ೧ ದಿನ | ೧೯೯೩ |
| ೪೨. ಬಸವನಾಳರ ಜೀವನ ಹಾಗೂ ಸಾಧನೆ - ವಿಚಾರ ಸಂಕಿರಣ, ಬೆಳಗಾವಿ | ೨ ದಿನ | ೧೯೯೩ |
| ೪೩. ಶಿ.ಶಿ. ಬಸವನಾಳರ ವಿಚಾರ ಸಂಕಿರಣ, ಹುಬ್ಬಳ್ಳಿ | ೨ ದಿನ | ೧೯೯೩ |
| ೪೪. ಕರ್ನಾಟಕ ವಾಸ್ತವ ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೯೩ |
| ೪೫. ಎಫ್. ಕಿಟೆಲ್ ಅಂತರಾಷ್ಟ್ರೀಯ ಸಮ್ಮೇಳನ, ಧಾರವಾಡ | ೨ ದಿನ | ೧೯೯೪ |
| ೪೬. ಬಾದಾಮಿ ಚಾಲುಕ್ಯರ ಇತಿಹಾಸ ಮತ್ತು ಸಂಸ್ಕೃತಿ ವಿಚಾರ ಸಂಕಿರಣ, ಧಾರವಾಡ | ೨ ದಿನ | ೧೯೯೪ |
| ೪೭. ವಚನ ಸಾಹಿತ್ಯ ದ್ವಿತೀಯ ಘಟ್ಟ ವಿಚಾರ ಸಂಕಿರಣ, ಬೆಂಗಳೂರು | ೧ ದಿನ | ೧೯೯೪ |

| | | | |
|---|---|---|---|
| ೪೮. | ಮಹಾನಾಡ ಪ್ರಭುಗಳು : ವಿಚಾರ ಸಂಕಿರಣ, ಬನಹಟ್ಟಿ | ೨ ದಿನ | ೧೯೯೪ |
| ೪೯. | ಕಾಡಸಿದ್ಧೇಶ್ವರ : ಒಂದು ಅಧ್ಯಯನ - ವಿಚಾರ ಸಂಕಿರಣ, ಬನಹಟ್ಟಿ | ೨ ದಿನ | ೧೯೯೪ |
| ೫೦. | ಶಿವಶರಣ ಇತಿವೃತ್ತ : ಇತ್ತೀಚಿನ ಶೋಧಗಳು, ವಿಚಾರ ಸಂಕಿರಣ, ಕೊಪ್ಪಳ | ೨ ದಿನ | ೧೯೯೪ |
| ೫೧. | ೨೨ನೆಯ ಅ.ಕ. ಜಾನಪದ ಸಮ್ಮೇಳನ, ಧಾರವಾಡ | ೨ ದಿನ | ೧೯೯೪ |
| ೫೨. | Brain storming Session on Students Performance in National Education test -NET, Dharwad | ೨ ದಿನ | ೧೯೯೫ |
| ೫೩. | ಸ್ವರ ವಚನ ಸಾಹಿತ್ಯ ವಿಚಾರ ಸಂಕಿರಣ, ಮೈಸೂರು | ೨ ದಿನ | ೧೯೯೫ |
| ೫೪. | ವೀರಶೈವ ಸಾಹಿತ್ಯ ವಿಚಾರ ಸಂಕಿರಣ, ಬೆಂಗಳೂರು | ೨ ದಿನ | ೧೯೯೫ |
| ೫೫. | ನಾಡೋಜ ಪಂಪ ವಿಚಾರ ಸಂಕಿರಣ, ಲಕ್ಷ್ಮೇಶ್ವರ | ೧ ದಿನ | ೧೯೯೫ |
| ೫೬. | ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಸಾಹಿತ್ಯ ವಿಚಾರ ಸಂಕಿರಣ, ಗುಲ್ಬರ್ಗ | ೩ ದಿನ | ೧೯೯೫ |
| ೫೭. | ಕೆ.ಜಿ. ಕುಂದಣಗಾರ, ವಿಚಾರ ಸಂಕಿರಣ, ಧಾರವಾಡ | ೧ ದಿನ | ೧೯೯೫ |
| ೫೮. | ಕುಂದಣಗಾರ ಶತಮಾನೋತ್ಸವ : ವಿಚಾರ ಸಂಕಿರಣ, ಗೋಕಾಕ | ೧ ದಿನ | ೧೯೯೫ |
| ೫೯. | ಅ.ಭಾ. ಶಿವಾನುಭವ ಶಿಬಿರ, ಧಾರವಾಡ | ೧ ದಿನ | ೧೯೯೫ |
| ೬೦. | ಕನ್ನಡ ಪುನಶ್ಚೇತನ ಶಿಬಿರ, ಶಿವಮೊಗ್ಗ | ೧ ದಿನ | ೧೯೯೫ |
| ೬೧. | The preparation of aspectiwise item Models for Mastery testing in Kannada literature and involved in the development of Model tools in Kannada A workshop : Dharwad | | |
| ೬೨. | ಹಾವೇರಿ ಜಿಲ್ಲಾ ಸಾಹಿತ್ಯ ಸಮ್ಮೇಳನ, ರಾಣೆಬೆನ್ನೂರು | ೧ ದಿನ | ೧೯೯೬ |
| ೬೩. | ರನ್ನ ವಿಚಾರ ಸಂಕಿರಣ, ಮುಧೋಳ | ೧ ದಿನ | ೧೯೯೬ |
| ೬೪. | ಅ.ಕ. ಜಾನಪದ ಸಮ್ಮೇಳನ, ರಾಣೆಬೆನ್ನೂರು | ೧ ದಿನ | ೧೯೯೬ |
| ೬೫. | ಶಿ.ಚ. ನಂದಿಮಠ : ಬದುರು ಬರಹ, ವಿಚಾರ ಸಂಕಿರಣ, ಬಾಗಲಕೋಟ | ೧ ದಿನ | ೧೯೯೭ |
| ೬೬. | ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕನಕಪುರ | ೪ ದಿನ | ೧೯೯೯ |

| | | | |
|---|---|---|---|
| ೬೭. | ಅಖಿಲ ಕರ್ನಾಟಕ ೨೫ನೆಯ ಜಾನಪದ ಸಮ್ಮೇಳನ,ಧಾರವಾಡ | ೩ ದಿನ | ೧೯೯೯ |
| ೬೮. | ಬಾಗಲಕೋಟ ಜಿಲ್ಲಾ ಶರಣಸಾಹಿತ್ಯ ಸಮ್ಮೇಳನ, ಬೀಳಗಿ | ೧ ದಿನ | ೨೦೦೦ |
| ೬೯. | ೫ನೆಯ ಸಂಸ್ಕೃತ ಸಮ್ಮೇಳನ, ಧಾರವಾಡ | ೨ ದಿನ | ೨೦೦೦ |
| ೭೦. | ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟ | ೨ ದಿನ | ೨೦೦೦ |
| ೭೧. | ಹಾವೇರಿ ತಾಲೂಕು ೨ನೆಯ ಸಾಹಿತ್ಯ ಸಮ್ಮೇಳನ, ಜಮಖಂಡಿ ದೇವಗಿರಿ | ೨ ದಿನ | ೨೦೦೦ |
| ೭೨. | ಭಾವಸಾಮರಸ್ಯ ಶಾಂತಿಧರ್ಮ ಸಮ್ಮೇಳನ, ಜಮಖಂಡಿ | ೨ ದಿನ | ೨೦೦೦ |
| ೭೩. | ವೀರಶೈವಾಮೃತ ಪುರಾಣ :ವಿಚಾರ ಸಂಕಿರಣ, ನಿಡಸೋಸಿ | ೧ ದಿನ | ೨೦೦೧ |
| ೭೪. | ಪಟ್ಟದಕಲ್ಲು ರಾಷ್ಟ್ರೀಯ :ವಿಚಾರ ಸಂಕಿರಣ, ಬದಾಮಿ | ೧ ದಿನ | ೨೦೦೧ |
| ೭೫. | ಮೂಜಗಂ ಸಮಗ್ರ ಸಾಹಿತ್ಯ :ವಿಚಾರ ಸಂಕಿರಣ, ಹುಬ್ಬಳ್ಳಿ | ೧ ದಿನ | ೨೦೦೧ |
| ೭೬. | ಶೈವಾಗಮಗಳಲ್ಲಿ ವೀರಶೈವ ಧರ್ಮ :ರಾಷ್ಟ್ರೀಯ ಸಂಕಿರಣ, ಧಾರವಾಡ | ೧ ದಿನ | ೨೦೦೧ |
| ೭೭. | ಉನ್ನತ ಶಿಕ್ಷಣದಲ್ಲಿ ಪುನಃಶ್ಚೇತನ ಸಮಾವೇಶ, ಬೆಳಗಾವಿ | ೧ ದಿನ | ೨೦೦೧ |
| ೭೮. | ಕನ್ನಡ ಹೊಸ ಪಠ್ಯ ಪುಸ್ತಕಗಳ ಮೌಲ್ಯಮಾಪನ ಕಾರ್ಯಾಗಾರ, ಗದಗ, ರಾಯಚೂರು | ೨ ದಿನ | ೨೦೦೧ |
| ೭೯. | ವೀರಶೈವ ಸಂಸ್ಕೃತಿ ಸಮ್ಮೇಳನ,ಬೆಂಗಳೂರು | ೨ ದಿನ | ೨೦೦೧ |
| ೮೦. | ಬಯಲಾಟ ಮೇಳ :ಕಮ್ಮಟ, ಹಾವೇರಿ | ೨ ದಿನ | ೨೦೦೧ |
| ೮೧. | ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ :ವಿಚಾರ ಸಂಕಿರಣ, ಬೆಂಗಳೂರು | ೨ ದಿನ | ೨೦೦೧ |
| ೮೨. | ಬಾಗಲಕೋಟ ಜಿಲ್ಲೆಯ ಜನಪದ ಕಲಾವಿದರ ಸಮಾವೇಶ, ಹುಲ್ಯಾಳ | ೨ ದಿನ | ೨೦೦೧ |
| ೮೩. | ರಾಯಬಾಗ ತಾಲೂಕು ೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ,ಹಾರೂಗೇರಿ | ೧ ದಿನ | ೨೦೦೧ |
| ೮೪. | ಕಿಟೆಲ್ ಸಮಕಾಲೀನ ಸಂಶೋಧಕರು :ವಿಚಾರ ಸಂಕಿರಣ, ಧಾರವಾಡ | ೧ ದಿನ | ೨೦೦೨ |
| ೮೫. | ಸಮಾಜೋ ಧಾರ್ಮಿಕ ಚಳುವಳಿ ಮತ್ತು ಭಾರತೀಯ ಸಾಹಿತ್ಯ ರಾಷ್ಟ್ರೀಯ :ವಿಚಾರ ಸಂಕಿರಣ, ಧಾರವಾಡ | ೧ ದಿನ | ೨೦೦೨ |
| ೮೬. | ಕಲ್ಯಾಣ ನಾಡಿನ ಶರಣ ಸಮ್ಮೇಳನ, ಚಿಕ್ಕಮಗಳೂರು | ೧ ದಿನ | ೨೦೦೨ |

# ೬. ವಂಶಾವಳಿ




ತಾಯಿಯ ತಂದೆ ಶ್ರೀ ವೇದಮೂರ್ತಿ ರುದ್ರಯ್ಯ ಹಿರೇಮಠ + ಶ್ರೀಮತಿ ಮುರಗೆವ್ವ



## ೭. ಡಾ. ಬಿ.ಆರ್. ಅವರ ಕುರಿತಾಗಿರುವ ಸಾಹಿತ್ಯ

**ಕವನಗಳು :**

೧. ಬಿ.ಆರ್. ಅಂದರೆ ಅಗಷ್ಟ ೨೦೦೭ ಡಾ. ಅಶೋಕ ನರೋಡೆ ಸ್ವಪ್ನಲೋಕ ಸಂ. ೭ ಸಂಚಿಕೆ ೪, ಸ್ನೇಹ ಪ್ರಿಂಟರ್ಸ್, ಬೆಂಗಳೂರು

೨. ಬಿ.ಆರ್. ನೆನಪು ಡಾ. ವ್ಹಿ.ಎಸ್. ಮಾಳಿ

**ಲೇಖನಗಳು :**

೧. ಅಗಲಿದ ಚೇತನ : ಸಂ. ಲಿಂಗಾಯತ ಪತ್ರಿಕೆ ಸಂಪುಟ ೨ ಸೆಪ್ಟೆಂಬರ ೨೦೦೭ ಮಾಸಿಕ ಸಂಚಿಕೆ ೬.

೨. ಮಾನವೀಯ ಸಾಕಾಮೂರ್ತಿ ಡಾ. ಅಶೋಕ ನರೋಡೆ, (ವಚನ ಸಾಹಿತ್ಯ ಹೊಸ ಸಮಾಜದ ಪರಿಕಲ್ಪನೆ) ಕನ್ನಡ ಸಾಹಿತ್ಯ ಪರಿಷತ್ತು, ಜಿಲ್ಲಾ ಘಟಕ, ಬಾಗಲಕೋಟ ೨೦೧೦

೩. ಅಪರೂಪದ ಸಂಶೋಧಕ ಡಾ. ಬಿ.ಆರ್. ಹಿರೇಮಠ : ಡಾ. ಡಿ.ಎಸ್. ದೊಡಮನಿ (ಶರಣ ಚೇತನ ಮಾಸಪತ್ರಿಕೆ ಸಂಪುಟ ೬ ಸಂಚಿಕೆ ೫ ಸಪ್ಟೆಂಬರ ೨೦೦೭)

೪. ಸದ್ಧರ್ಮವಾಹಿನಿ (ಸಂ. ೨ ಸಂ.೨ ಜನೇವರಿ ೨೦೦೮) ಪ್ರಕಟವಾದ ಲೇಖನಗಳು

   ೧. ಭಾವಪೂರ್ಣ ಶ್ರದ್ಧಾಂಜಲಿ - ಸಂಪಾದಕ ಮಂಡಳಿ ಸದ್ಧರ್ಮವಾಹಿನಿ

   ೨. ಅಪರೂಪದ ವ್ಯಕ್ತಿತ್ವದ ಡಾ. ಬಿ.ಆರ್. ಹಿರೇಮಠ : ಡಾ. ಬಿ.ವ್ಹಿ ಮಲ್ಲಾಪುರ

   ೩. ಕಣ್ಮರೆಯಾದ ವಿದ್ಯಾವಿನಯ ಸಂಪನ್ನ ಡಾ. ಬಿ.ಆರ್. ಹಿರೇಮಠ, ಪ್ರೊ. ಎನ್. ಬಸವರಾಧ್ಯ

   ೪. ಗೆಳೆಯ ಡಾ. ಬಿ.ಆರ್. ಹಿರೇಮಠ : ಡಾ. ಎ. ಮುರಿಗೆಪ್ಪ

   ೫. ಅಮರತೇಜಃಪುಂಜ ಡಾ. ಬಿ.ಆರ್. ಹಿರೇಮಠ :ಪ್ರೊ. ಬಿ.ವಿ. ಗುಂಜೆಟ್ಟಿ

   ೬. ಮಾನವೀಯತೆಯ ಆಗರ ಡಾ. ಬಿ.ಆರ್. ಹಿರೇಮಠ : ಡಾ. ಬಸವರಾಜಕಲ್ಗುಡಿ

   ೭. ಡಾ. ಬಿ.ಆರ್. ಹಿರೇಮಠ ಒಂದು ನೆನಪು : ಡಾ. ಬಸವರಾಜ ನಾಯ್ಕರ

   ೮. ಸ್ನೇಹಜೀವಿ ಡಾ. ಬಿ.ಆರ್.ಹಿರೇಮಠ : ಡಾ. ಬಿ.ವ್ಹಿ. ಯಕ್ಕುಂಡಿಮಠ

   ೯. ಸಂಶೋಧನ ಕ್ಷೇತ್ರದಲ್ಲಿ ಸಾರಸ್ವತ ದಾಸೋಹ ನಡೆಸಿದ ಸಾಹಿತಿ ಡಾ. ಬಿ.ಆರ್. ಹಿರೇಮಠ ಡಾ. ಎಂ.ಜಿ. ನಾಗರಾಜ

   ೧೦. ಸ್ನೇಹಜೀವಿ ಸಂಶೋಧಕ ಡಾ. ಬಿ.ಆರ್. ಹಿರೇಮಠ : ಡಾ. ಜಿ.ಎಂ. ಹೆಗಡೆ

   ೧೧. ಡಾ. ಬಿ.ಆರ್. ಹಿರೇಮಠ ಒಂದು ನೆನಪು : ಡಾ. ಶಾಂತಾ ಇಮ್ರಾಪುರ

   ೧೨. ಡಾ. ಬಿ.ಆರ್. ಹಿರೇಮಠ ಒಂದು ನೆನಪು : ಡಾ. ಚೆನ್ನಕ್ಕ ಪಾವಟೆ

   ೧೩. ಗೆಳೆಯ ಡಾ. ಬಿ.ಆರ್. ಹಿರೇಮಠ ಕೆಲವು ನೆನಪು : ಡಾ. ಶಿವಾನಂದ ಗಾಳಿ

   ೧೪. ಡಾ. ಬಿ.ಆರ್. ಹಿರೇಮಠ ನಾನು ಕಂಡಂತೆ : ಡಾ. ಎಸ್.ಬಿ. ನಾಯಕ

ಭಾಗ - ೨ :

## ೧. ಪರಾಮರ್ಶನ ಗ್ರಂಥಗಳು :

೧. ಆಧುನಿಕ ಸಾಹಿತ್ಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಅಂಬೇಡ್ಕರರ ಪ್ರಭಾವ : ಶ್ರೀಮತಿ ಎ.ಕೆ. ಕಾಂಬಳೆ ೨೦೦೦

೨. ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ ಡಾ. ಜೆ.ಎಂ. ನಾಗಯ್ಯ ಇವರ ಪಿಎಚ್.ಡಿ ಪ್ರಬಂಧ ವೀರಶೈವ ಅಧ್ಯಯನ ಅಕಾಡೆಮಿ ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ

೩. ಏಕಲವ್ಯ ಉಪಖ್ಯಾನ : ಒಂದು ತೌಲನಿಕ ಅಧ್ಯಯನ : ಶ್ರೀಮತಿ ಶಕುಂತಲಾ ಸಿಂಧುರ (ಎಂ.ಫಿಲ್ ಪ್ರಬಂಧ) ೧೯೯೩

೪. ಏಕಲವ್ಯ ಪಾತ್ರ : ಒಂದು ಅಧ್ಯಯನ - ಶ್ರೀ ಅಶೋಕ ನರೋಡೆ ಶ್ರೀ ಸಿದ್ಧೇಶ್ವರ ಪ್ರಕಾಶನ ೨೦೦೧

೫. ಕನ್ನಡ ಸಂಶೋಧನೆ ಮತ್ತು ಎಂ. ಚಿದಾನಂದ ಮೂರ್ತಿ : ಡಾ. ಎಸ್. ಎಸ್. ಅಂಗಡಿ, ಪ್ರ. ಸಪ್ನ ಬುಕ್ ಹೌಸ ೨೦೦೩

೬. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ : ಡಾ. ಎಂ.ಎಂ. ಕಲಬುರ್ಗಿ ಸಮಾಜ ಪುಸ್ತಕಾಲಯ, ಧಾರವಾಡ ೧೯೮೮

೭. ಕನ್ನಡ ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು : ಸಂ. ಡಾ. ರಂಗರಾಜ ವನದುರ್ಗ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು, ೨೦೦೬

೮. ಕನ್ನಡ ಸಾಹಿತ್ಯದಲ್ಲಿ ಕರ್ಣ : ಡಾ. ವಿ.ಎಸ್.ಮಾಳಿ, ಸಿರಿಗನ್ನಡ ಪ್ರಕಾಶನ ಹಾರೂಗೇರಿ ೧೯೯೯

೯. ಕನ್ನಡದಲ್ಲಿ ಯುದ್ಧೋತ್ತರ ಭಾರತ ಕಥೆ : ಶ್ರೀಮತಿ ಪಿ.ಎ. ಹೊಸಟ್ಟಿ ೨೦೦೮

೧೦. ಕರ್ನಾಟಕದಲ್ಲಿ ಸತಿ ಪದ್ಧತಿ : ಡಾ. ಬಿ.ಎಸ್.ಶೇಠೆ , ವೀರಶೈವ ಅಧ್ಯಯನ ಅಕಾಡಮಿ ಶ್ರೀ ನಾಗನೂರು, ರುದ್ರಾಕ್ಷಿಮಠ ಬೆಳಗಾವಿ. ೧೯೯೧

೧೧. ಕರ್ನಾಟಕ ಜಾನಪದ ಚಿತ್ರಕಲೆಗಳು (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) : ಶ್ರೀ ಎಸ್.ಸಿ. ಪಾಟೀಲ ೧೯೯೧

೧೨. ಚಾಯಣ ಭಾರತ ಒಂದು ತೌಲನಿಕ ಅಧ್ಯಯನ :ಶ್ರೀಮತಿ ಕಲ್ಲಮ್ಮಾ ಸರೋಜನವರ (ಎಂ.ಫಿಲ್. ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೩. ಜಿ. ಬ್ರಹ್ಮಪ್ಪನವರ ಬದುಕು ಬರಹ : ಡಾ. ಶ್ರೀಮತಿ ಕೆ.ಟಿ. ಅಕ್ಕೋಳೆ ಇವರ ಪಿಎಚ್.ಡಿ. ಪ್ರಬಂಧ ೨೦೦೭.

೧೪. ತಿಂಥಿಣಿ ಮೌನೇಶ್ವರ : ಒಂದು ಅಧ್ಯಯನ - ಶ್ರೀ ಎಂ.ಎಂ. ಪಡಶೆಟ್ಟಿ ೧೯೯೦

೧೫. ಡಾ. ಪಾಟೀಲ ಪುಟ್ಟಪ್ಪನವರ ಬದುಕು ಬರಹ ಹಾಗೂ ಸಾಧನೆ : ಡಾ. ಶಿವಾನಂದ ಬ. ಕಲ್ಲೂರ ಇವರ ಪಿಎಚ್.ಡಿ ಪ್ರಬಂಧ, ಶಾಂತಾ ಪ್ರಕಾಶನ, ಧಾರವಾಡ ೨೦೦೨

೧೬. ಡಾ. ಆರ್.ಸಿ. ಹಿರೇಮಠ ಅವರ ಜೀವನ ಹಾಗೂ ಸಾಧನೆ : ಡಾ. ಶಶಿಕಲಾ ಎಸ್. ದಂಡಗಿಮಠ ಅವರು ಪಿಎಚ್.ಡಿ ಪ್ರಬಂಧ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

೧೭. ಡಾ. ಶಿ.ಶಿ. ಬಸವನಾಳರ ಜೀವನ ಮತ್ತು ಸಾಧನೆ : ಡಾ. ಮಹೇಶ ಚಿಂತಾಮಣಿ ಇವರ ಪಿಎಚ್.ಡಿ ಪ್ರಬಂಧ, ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ, ಬೆಳಗಾವಿ ೧೯೯೭

೧೮. ಡಾ. ಆರ್.ಸಿ. ಹಿರೇಮಠ ವಚನ ಸಾಹಿತ್ಯ ಸಂಪಾದನೆ : ಡಾ. ವಿಜಯಕುಮಾರ ಕಟಗಿಹಳ್ಳಿಮಠ (ಎಂ.ಫಿಲ್.ಪ್ರಬಂಧ) ಪುಣ್ಯ ಪ್ರಕಾಶನ ಬೆಂಗಳೂರು ೨೦೦೮

೧೯. ಡಾ. ಬಿ.ಆರ್. ಹಿರೇಮಠರ ಶಾಸನ ಅಧ್ಯಯನ : ಸಂ. ಡಾ. ಮಲ್ಲಿಕಾರ್ಜುನ ಕೆ. ಡಾ. ವ್ಹಿ.ಎಸ್. ಮಾಳಿ, ಡಾ. ಬಿ.ಆರ್.ಬಿರಾದಾರ, ಡಾ. ಅಶೋಕ ನರೋಡೆ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೨

೨೦. ಧರ್ಮ ಮತ್ತು ಸಾಹಿತ್ಯ : ಡಾ. ಅಶೋಕ ನರೋಡೆ, ಜಾಗೃತಿ ಪ್ರಿಂಟರ್ಸ್ ಬೆಂಗಳೂರು ೨೦೧೦

೨೧. ಪಟ್ಟಮಹಾದೇವಿ ಶಾಂತಲಾದೇವಿ ಕಾದಂಬರಿ ಒಂದು ಅಧ್ಯಯನ : ಶ್ರೀಮತಿ ಮಹಾನಂದಾ ಪಾಟೀಲ (ಎಂ.ಫಿಲ್ ಪ್ರಬಂಧ)

೨೨. ಪ್ರಾಚೀನ ಕನ್ನಡ ಕಾವ್ಯ ಸಂಕಲನಗಳು : ಒಂದು ಅಧ್ಯಯನ : ಡಾ. ವಾಯ್.ಎಂ. ಯಾಕೊಳ್ಳಿ, ೨೦೦೩

೨೩. ಪ್ರಾಚೀನ ಕನ್ನಡ ಭಗವದ್ಗೀತಾ ಸಾಹಿತ್ಯ : ಶ್ರೀ ಎಸ್. ದಿಕ್ಷೀತ ೨೦೦೦

೨೪. ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ : ಡಾ. ಎಂ.ಬಿ. ನೇಗಿನಹಾಳ ಪ್ರಸಾರಾಂಗ ಕ.ವಿ.ವಿ. ಧಾರವಾಡ ೧೦೮೨

೨೫. ಬಸವೇಶ್ವರ ವಿದ್ಯಾವರ್ಧಕ ಸಂಘ : ಒಂದು ಅಧ್ಯಯನ ಶ್ರೀಮತಿ ಯಮುನಾಬಾಯಿ ಹಿರಗಣ್ಣವರ (ಎಂ.ಫಿಲ್ ಪ್ರಬಂಧ)

೨೬. ಬಾದಾಮಿ ತಾಲೂಕಿನ ವೀರಶೈವ ಮಠಗಳು : ವಿ.ಬಿ. ಮುತ್ತಿನಮಠ (ಎಂ.ಫಿಲ್. ಪ್ರಬಂಧ)

೨೭. ಮಹಾಮಾರ್ಗ : ಡಾ. ಎಂ.ಎಂ. ಕಲಬುರ್ಗಿ ಅಭಿನಂದನ ಗ್ರಂಥ, ಸಂ. ಸದಾನಂದ ಕನವಳ್ಳಿ, ವೀರಣ್ಣ ರಾಜೂರ ವೀರಶೈವ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ, ವೀರಶೈವ ಅಧ್ಯಯನ ಅಕಾಡೆಮಿ ಶ್ರೀ ನಾಗನೂರ, ರುದ್ರಾಕ್ಷಿಮಠ ಬೆಳಗಾವಿ.೧೯೯೮

೨೮. ಮಿರ್ಜಿ ಅಣ್ಣಾರಾಯರು ಬದುಕು ಬರಹ : ಡಾ. ಶಿವಾನಂದ ಗಾಳಿ ಇವರ ಪಿಎಚ್.ಡಿ ಪ್ರಬಂಧ

೨೯. ಮುಂಡರಗಿ ಶ್ರೀ ಜಗದ್ಗುರು ಅನ್ನದಾನಿ ಸ್ವಾಮಿಗಳ ಸಮಗ್ರ ಸಾಹಿತ್ಯ : ಶ್ರೀಮತಿ ವ್ಹಿ.ಜಿ.ಹಿರೇಮಠ ೨೦೦೮

೩೦. ಮೊಗ್ಗೆಯ ಮಾಯಿದೇವ ಒಂದು ಅಧ್ಯಯನ : ಶ್ರೀ ಡಿ.ವ್ಹಿ ಪುರಾಣಿಕಮಠ ೧೯೯೨

೩೧. ವಚನ ಸಾಹಿತ್ಯದ ಪ್ರಕಟಣೆ ಮತ್ತು ಪರಂಪರೆ : ಡಾ. ಬಿ.ಎಸ್. ಬಿರಾದಾರ ೨೦೦೬

೩೨. ವಿಜಾಪುರ ತಾಲೂಕಿನ ಶಾಸನಗಳು : ಒಂದು ಅಧ್ಯಯನ ಶ್ರೀ ಎ.ಬಿ. ಕಲಘುಟಗಿ (ಎಂ.ಫಿಲ್ ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೩. ವೃತ್ತ ಪತ್ರಿಕೆ : ವರದಿ ಲೇಖನ - ಡಾ. ದೇವೇಂದ್ರಕುಮಾರ ಹಕಾರಿ, ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗ, ೧೯೮೫

೩೪. ಶಾಸನ ಮತ್ತು ಗದ್ಯ : ಹು. ಕಾ. ಜಯದೇವ ಸಂಪುಟ - ೨ ಸಾಮಾನ್ಯನಿಗಾಗಿ ಸಾಹಿತ್ಯ ಚರಿತ್ರೆ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು. ೧೯೩೫

೩೫. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ :ಡಾ. ಚನ್ನಕ್ಕ ಎಲಿಗಾರ ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೦

೩೬. ಶಿಕಾರಿಪುರ ತಾಲೂಕಿನ ಜಾತ್ರೆಗಳು ಒಂದು ಅಧ್ಯಯನ : ಶ್ರೀ ಎಸ್.ಡಿ. ಬಂದಮ್ಮನವರ ೨೦೦೮

೩೭. ಸಿರುಮನ ಸಂಗತಿಗಳು ಒಂದು ಅಧ್ಯಯನ : ಶ್ರೀಮತಿ ಎಸ್. ಎಸ್. ಹೊಸಳ್ಳೇರ ೧೯೯೭

೩೮. ಶ್ರವಣಬೆಳ್ಗೊಳ ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ, ಮಹತ್ವ :ಡಾ. ಬಿ.ವ್ಹಿ. ಶಿರೂರ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೬

೩೯. ಸುಜನಾವರ ಯುಗಸಂಧ್ಯಾ ಮಹಾಕಾವ್ಯ: ಒಂದು ಅಧ್ಯಯನ - ಶ್ರೀ ಎಂ. ರಾಮಕೃಷ್ಣ (ಎಂ.ಫಿಲ್ ಪ್ರಬಂಧ)

೪೦. ಸೋದೆ ಅರಸು ಮನೆತನ : ಒಂದು ಅಧ್ಯಯನ - ಶ್ರೀ ಎಂ.ಜಿ.ವಾರಿ ೧೯೯೬

P.T.O.

೪೧. ಹಚ್ಚೆ : ಒಂದು ಅಧ್ಯಯನ (ಉತ್ತರ ಕರ್ನಾಟಕ ಅನುಲಕ್ಷಿಸಿ) ಶ್ರೀ ಎಚ್. ಬಿ. ಹೊಸಮನಿ ೨೦೦೮

೪೨. ಹಸ್ತಪ್ರತಿ ಮತ್ತು ಗ್ರಂಥ ಸಂಪಾದನ ಶಾಸ್ತ್ರ : ಎಂ.ಎಂ. ಕಲಬುರ್ಗಿ ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೩. ಹಾನಗಲ್ಲ ಕುಮಾರಸ್ವಾಮಿಗಳು ಒಂದು ಅಧ್ಯಯನ : ಶ್ರೀ ಜಿ.ಕೆ. ಹಿರೇಮಠ ೨೦೦೮

## ೨. ಪತ್ರಿಕೆಗಳು :

೧. ಕರ್ನಾಟಕ ಭಾರತಿ

೨. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

೩. ಪರಂಜ್ಯೋತಿ

೪. ಬಸವ ಜರ್ನಲ್

೫. ಬಸವಪಥ

೬. ಸನ್ಮತಿ

೭. ಸದ್ಧರ್ಮ ವಾಹಿನಿ

೮. ಸ್ವಪ್ನಲೋಕ

೯. ಸಾಧನೆ

೧೦. ಸುಕುಮಾರ

೧೧. ವಿದ್ಯಾರ್ಥಿ ಭಾರತಿ

೧೨. ಹೇಮಕೂಟ





ಡಾ. ಬಿ.ಆರ್. ಹಿರೇಮಠ  ಹಾಗೂ ಶ್ರೀಮತಿ ಉಮಾದೇವಿ ಹಿರೇಮಠ ದಂಪತಿಗಳು



ಡಾ. ಬಿ.ಆರ್. ಹಿರೇಮಠ  ಅವರ ಸಹೋದರ ಶಿವಪೂಜಯ್ಯ ಹಿರೇಮಠರ ಮದುವೆ
ಸಮಾರಂಭದ ದೃಶ್ಯ. ಅವರ ತಾಯಿ ಅನ್ನಪೂರ್ಣ ಹಿರೇಮಠ ಅವರನ್ನು ನೋಡಬಹುದು.



ಡಾ. ಬಿ.ಆರ್. ಹಿರೇಮಠ ಅವರ ಮಕ್ಕಳು ಶ್ರೀ ಶಿವಯೋಗಿ ಮತ್ತು ಶ್ರೀ ಮೃತ್ಯುಂಜಯ



ಬೀಳಗಿಯಲ್ಲಿ ಜರುಗಿದ ಪ್ರಪ್ರಥಮ ಶರಣ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾದ
ಡಾ. ಬಿ.ಆರ್. ಹಿರೇಮಠರು ಮೆರವಣಿಗೆಯಲ್ಲಿರುವ ದೃಶ್ಯ




ಪ್ರಥಮ ಶರಣ ಸಮ್ಮೇಳನವನ್ನುದ್ದೇಶಿಸಿ ಭಾಷಣ ಮಾಡುತ್ತಿರುವ
ಡಾ. ಬಿ.ಆರ್. ಹಿರೇಮಠ ದೃಶ್ಯ




ಮುಧೋಳ ತಾಲೂಕಾ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ
ಸರ್ವಾಧ್ಯಕ್ಷರಾದ ಡಾ.ಬಿ.ಆರ್. ಹಿರೇಮಠ




ಸುವರ್ಣ ಕರ್ನಾಟಕ ರಾಜ್ಯೋತ್ಸವ ಗ್ರಂಥ ಬಿಡುಗಡೆ ಸಮಾರಂಭದಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಚ್.ಡಿ. ಕುಮಾರಸ್ವಾಮಿ, ನಾಡೋಜ ಡಾ. ಪಾಟೀಲ ಪುಟ್ಟಪ್ಪ ಅವರೊಂದಿಗೆ ಡಾ. ಬಿ.ಆರ್. ಹಿರೇಮಠ




ಅಧ್ಯಕ್ಷರಾಗಿ ತೃತೀಯ ಸಂಸ್ಕೃತಿ ಸಮ್ಮೇಳನ ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ




ಹಾಸ್ಯ ಸಾಹಿತ್ಯ : ವಿಚಾರ ಸಂಕಿರಣದ ಕವಿಗೋಷ್ಠಿಯಲ್ಲಿ ಪಾಲ್ಗೊಂಡ ಡಾ. ಬಿ.ಆರ್. ಹಿರೇಮಠ
ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ




ಕರ್ನಾಟಕ ವಿಶ್ವವಿದ್ಯಾಲಯ ಬೆಳಗಾವಿ ಆವರಣ ಸ್ನಾತಕೋತ್ತರ ವಿದ್ಯಾರ್ಥಿ ಒಕ್ಕೂಟದ ಸಮಾರಂಭ




ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದಲ್ಲಿ ಜರುಗಿದ ಸಾಹಿತ್ಯ : ವಿಮರ್ಶೆ ಕಮ್ಮಟ



ಶ್ರವಣಬೆಳಗೊಳದ ಸ್ವಸ್ತಿ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರು
ಡಾ. ಬಿ. ಆರ್. ಹಿರೇಮಠ ಅವರನ್ನು ಸನ್ಮಾನಿಸುತ್ತಿರುವ ದೃಶ್ಯ

